ಕೃಷ್ಣ ಯಜುರ್ವೇದ ಕನ್ನಡ ಪ್ರಕಾಶನ

ಸಂಪುಟ - ೨

# ತೈತ್ತಿರೀಯ ಸಂಹಿತಾ

[ಪ್ರಥಮಕಾಂಡ; ೧-೨ ಪ್ರಪಾಠಕಗಳು]

ಪ್ರಧಾನ ಸಂಪಾದಕ

ವಿದ್ವಾನ್ ಪಿ. ಎಸ್. ರಾಮೇಶ್ವರಾವಧಾನೀ

ಸಹಾಯಕ ಸಂಪಾದಕ

ವಿದ್ವಾನ್ ಸೋ. ತಿ. ನಾಗರಾಜ

ಪ್ರಕಾಶನ

ಜ್ಯೋತಿ ಸಾಂಸ್ಕೃತಿಕ ಪ್ರತಿಷ್ಠಾನ

ಬೆಂಗಳೂರು

**KRISHNA YAJURVEDA KANNADA PRAKASHNA** - VOLUME - 2,
CHIEF EDITOR : VIDWAN **P.S. RAMESHWARAVADHANI**
PUBLISHED BY **JYOTHI SAMSKRITIKA PRATISHTHANA (REGD.)** 31, PAMPA MAHAKAVI ROAD, BANGALORE - 560 004.
PHONE: 26677852.

**THIRD EDITION - 2008**



ತೃತೀಯ ಮುದ್ರಣ - 2008

ಬೆಲೆ : ರೂ. **200/-**

ಮುದ್ರಕರು :
**ಪರಿಮಳ ಮುದ್ರಣಾಲಯ**
ಬ್ಯಾಟರಾಯನಪುರ, ಮೈಸೂರ್ ರಸ್ತೆ,
ಶ್ರೀ ಗಾಳಿ ಆಂಜನೇಯಸ್ವಾಮಿ ದೇವಸ್ಥಾನದ ಹತ್ತಿರ,
ಬೆಂಗಳೂರು-560 026. ದೂರವಾಣಿ : 26758058

# ಪರಿವಿಡಿ

❁ ❁ ❁

# ಕೃಷ್ಣ ಯಜುರ್ವೇದ ಕನ್ನಡ ಪ್ರಕಾಶನ

## ಪ್ರಕಾಶನ ಸಮಿತಿ

ಶ್ರೀಯುತರಾದ

| | |
|---|---|
| ಬಿ.ಎನ್.ವಿ. ಸುಬ್ರಹ್ಮಣ್ಯಂ | ಅಧ್ಯಕ್ಷರು |
| ಶ್ರೀಮತಿ ಬಿ.ವಿ. ಸೀತಾ | ಸದಸ್ಯರು |
| ಸೋ. ತಿ. ನಾಗರಾಜ | ಸಂಪಾದಕರು |
| ಎಂ. ನರಸಿಂಹನ್ | ಸದಸ್ಯರು |
| ಬಿ.ಕೆ. ರಮೇಶ್ | ಸದಸ್ಯರು |
| ಬಿ.ಕೆ. ಸತ್ಯನಾರಾಯಣ | ಸದಸ್ಯರು |



ಪ್ರಥಮ ಸಂಪುಟಕ್ಕೆ ನೀಡಿದ

# ಆಶೀರ್ವಚನ

## ಶ್ರೀ ಗುರುಭ್ಯೋ ನಮಃ

ಚತುರ್ವೇದಭಾಷ್ಯಕಾರರಾದ ಶ್ರೀ ಸಾಯಣಾಚಾರ್ಯರು ಕೃಷ್ಣಯಜುರ್ವೇದ ಭಾಷ್ಯಭೂಮಿಕೆಯಲ್ಲಿ "ನನು ಕೋಽಯಂ ವೇದೋ ನಾಮ?" ಎಂದು ಪ್ರಶ್ನೆ ಮಾಡಿ ಅದಕ್ಕೆ "ಇಷ್ಟಪ್ರಾಪ್ತ್ಯನಿಷ್ಟಪರಿಹಾರಯೋಃ ಅಲೌಕಿಕಮುಪಾಯಂ ಯೋ ಗ್ರಂಥೋ ವೇದಯತಿ ಸ ವೇದಃ" ಎಂದು ಸಮಾಧಾನವನ್ನು ತಿಳಿಸಿದರು. ಇಷ್ಟಪ್ರಾಪ್ತಿ ಮತ್ತು ಅನಿಷ್ಟಪರಿಹಾರಗಳ ಅಲೌಕಿಕೋಪಾಯ ತಿಳಿಸುವ ಗ್ರಂಥವೇ ವೇದ. ಅಲೌಕಿಕೋ-ಪಾಯವು ಧರ್ಮವು. ನಮ್ಮ ಶ್ರೇಯಃಪ್ರೇಯಸ್ಸುಗಳಿಗೂ ದುಃಖಪರಿಹಾರಕ್ಕೂ ಸಾಧಕವಾದ ಧರ್ಮವನ್ನು ವೇದಗಳಿಂದಲೇ ತಿಳಿಯಬೇಕು.

ನಾವು ವೇದಾಧ್ಯಯನವನ್ನು ಮಾಡುತ್ತೇವೆ. ಅರ್ಥಜ್ಞಾನವಿಲ್ಲದೆ ಮಾಡಿದ ಅಧ್ಯಯನವು ವಿಶಿಷ್ಟವಾದ ಫಲವನ್ನು ಕೊಡಲು ಅಸಮರ್ಥ. ಅರ್ಥಜ್ಞಾನಕ್ಕಾಗಿ ಭಾಷ್ಯಗಳನ್ನು ಪರಿಶೀಲಿಸಬೇಕು. ಈ ಪರಿಶೀಲನೆಗೆ ಸಂಸ್ಕೃತಭಾಷಾಪಾಂಡಿತ್ಯ ಮೀಮಾಂಸಾಪರಿಚಯ ಎರಡೂ ಬೇಕು. ಇವೆರಡನ್ನೂ ಸಾಧಿಸುವುದಕ್ಕೆ ನಾಲ್ಕಾರು ವರುಷಗಳ ಸತತ ಪ್ರಯತ್ನ ಆವಶ್ಯಕ. ಸರ್ವರಿಂದಲೂ ಸುಲಭವಾಗಿ ಸಾಧಿಸಲಶಕ್ಯ.

ನಮ್ಮ ಶಿಷ್ಯರಾದ ಶ್ರೀ ಬಿ.ಎನ್.ವಿ. ಸುಬ್ರಹ್ಮಣ್ಯಂ ಅವರು "ಜ್ಯೋತಿ ಸಾಂಸ್ಕೃತಿಕ ಪ್ರತಿಷ್ಠಾನ"ವೆಂಬ ಸಂಸ್ಥೆಯನ್ನು ಸ್ಥಾಪಿಸಿ ತನ್ಮೂಲಕ ವೇದಮಂತ್ರಗಳ ತಾತ್ಪರ್ಯವನ್ನು ಎಲ್ಲರೂ ಸುಲಭವಾಗಿ ಅರಿಯಲು ಅನುಕೂಲವಾಗಲೆಂಬ ಉದ್ದೇಶದಿಂದ ಯಜುರ್ವೇದ ಕನ್ನಡಪ್ರಕಾಶನವನ್ನು ಆರಂಭಿಸಿದ್ದಾರೆ. ಈ ಕಾರ್ಯವು ಬೃಹತ್ತರವಾದುದು. ಶ್ರೀಸುಬ್ರಹ್ಮಣ್ಯಂ ಅವರು ಪರಹಿತಮತಿಯಿಂದ ಆರಂಭಿಸಿರುವ ಈ ಪ್ರಕಾಶನಕಾರ್ಯವು ಸುಲಭವಾಗಿ ಮುಂದುವರಿಯಲಿ. ಆಸ್ತಿಕಜನಸ್ತೋಮದ ಸಹಾಯ ಸಹಕಾರಗಳು ನಿರಂತರವಾಗಿ ಪ್ರವಹಿಸಲಿ. ಪ್ರಕಾಶನಗ್ರಂಥಗಳು ಆಸ್ತಿಕರ ಹೃದಯಗಳಲ್ಲಿ ಪ್ರಕಾಶವನ್ನು ಬೀರಲಿ. ತಮೋಗ್ರಂಥಿಗಳು ನಿರ್ಮೂಲಗೊಳ್ಳಲಿ ಮತ್ತು ಪ್ರಕಾಶಕರು ಭವಭಯ ಪ್ರಶಮನಕರನಾದ ಪರಮೇಶ್ವರನ ಕೃಪೆಯಿಂದ ಮಂಗಲಪರಂಪರೆಗಳನ್ನು ಅನುಭವಿಸಲೆಂದು ಹಾರೈಸುತ್ತೇವೆ.

ಪ್ರಭವ ಫಾಲ್ಗುಣ ಶುಕ್ಲದಶಮೀ
27-2-88
ಶೃಂಗಗಿರಿ.

ಇತಿ ನಾರಾಯಣ ಸ್ಮರಣಂ
ವಿದ್ಯಾತೀರ್ಥಃ



श्री श्री जगद्गुरु शङ्कराचार्य महासंस्थानम् शारदापीठम्, शृङ्गेरी

कृष्णयजुर्वेदस्य सभाष्यस्य कर्णाटकभाषानुवादः तृतीयभागरूपेण लोकानां पुरतः उपतिष्ठतीति नितरां प्रमोदस्थानम् । अस्मिंश्च भागे संहितायाः प्रथमकाण्डस्य प्रथमद्वितीयप्रश्नौ सभाष्यानुवादौ निवेशितौ विद्येते ।

अत्र च प्रथमप्रश्ने दर्शपूर्णमासगता आध्वर्यवमन्त्राः प्रायशः परिदृश्यन्ते । अन्तिमानुवाके परं द्वितीयकाण्डोक्त काम्येष्टीनां याज्यापुरोनुवाक्याः पठिता विद्यन्ते । अस्मिन् प्रश्ने उक्तानां मन्त्राणां विनियोगाः तत्तद्विध्यर्थवादप्रतिपादनपुरस्सरं तैत्तिरीयब्राह्मणस्य तृतीयाष्टके द्वितीयतृतीयप्रपाठकयोः निरूपिताः। वस्तुतस्तु अस्य प्रश्नस्य व्याख्यानरूपमेव तत्प्रपाठकद्वयम्। अत एव भगवान् भाष्यकारः अनेन प्रश्नेन सहैव तावपि प्रपाठकौ व्याचचक्षे । इत्थमेव द्वितीय प्रश्नः सोमयागगतमन्त्राणां प्रतिपादकः । तद्व्याख्यानरूपं ब्राह्मणं तु संहितायामेव षष्ठकाण्डे परिदृश्यते । अत एव तदुभयमपि सहैव व्याचख्यौ भाष्यकारः । अयमेव कृष्णयजुर्वेदगतो विशेषः यत् संहितायामपि ब्राह्मणभागः ब्राह्मणग्रन्थेऽपि मन्त्रभागः परिदृश्येते । क्वचिदेकस्मिन्नेव प्रश्ने कस्मिंश्चिदनुवाके मन्त्राः तदुत्तरस्मिन्ननुवाके तदीयं ब्राह्मणं दृश्यते । ब्राह्मणग्रन्थस्य तृतीयाष्टके पञ्चमप्रपाठके दार्शपौर्णमासिक हौत्रमन्त्राः पठिताः । तद्व्याख्यानरूपं ब्राह्मणं तु संहितायां द्वितीयकाण्डे पञ्चमप्रपाठके पठितम् । ईदृशं वैचित्र्यं पुरस्कृत्यैव अस्य यजुर्वेदस्य कृष्णयजुर्वेद इति नामापि सार्थक्यं भजत इति संगिरन्ते विपश्चितः । सोयं वेदः भाष्यकारेण सायणाचार्येण सुस्पष्टं व्याख्यातः । भाष्यस्यास्य वैशिष्ट्यं तु सर्वातिशायि विद्योतते । तथा हि अर्थवादेषु क्वचित्परिदृश्यमानान् विरोधान् भाष्यकारः सुष्ठु परिहरति। तद्यथा 'तस्य पर्णमच्छिद्यत।तत्पर्णोऽभवत्।' इति वाक्ये दृश्येते। भूमौ पतितं पर्णं पलाशवृक्षरूपेण आविर्बभूवेति तदर्थः। पर्णस्य वृक्षरूपता कथं सम्पद्यत इति लौकिकानां शंकां भाष्यकार इत्थमपनुदति - तथा च भाष्यम् - 'न चात्र पर्णस्य कथं वृक्षत्वं सम्पन्नमिति विस्मयितव्यम् । विधातुरीश्वरस्याचिन्त्यशक्तित्वात् । अन्यथा बीजाद् वृक्ष इत्यत्रापि क्व बीजं क्व वृक्ष इत्यपि विस्मयः केन वार्येत । सर्वत्र पर्णेभ्यो वृक्ष इत्ययमतिप्रसंगोऽपि ईश्वरसंकल्पाभावेन परिहर्तव्यः। स च संकल्पः कार्यैकसमधिगम्यः । तस्मात् वेदार्थे कुतर्केर्न चोदनीयम्' इति ।

क्वचिद्भाष्यकारः स्वव्याख्यायां मन्दगतीनां शंकां प्रदेशान्तरपठित ब्राह्मणं प्रमाणीकृत्य परिहरति । तथा हि 'सोमेन त्वाऽऽतनच्मि' इति कश्चन मन्त्रोऽस्ति । तत्र सोमशब्दस्य दधीत्यर्थःभाष्यकृता उक्तः।तत्र शंकामुद्भाव्य भाष्यकार इत्थं



## श्री श्री जगद्गुरु शङ्कराचार्य महासंस्थानम् शारदापीठम्, शृङ्गेरी

समादधौ। तथा च भाष्यम् - 'नन्वत्र सोमशब्देन मुख्यं सोमं परित्यज्य कुतो दध्युपलक्ष्यते । ब्राह्मणान्तरबलादिति ब्रूमः। तत्र ह्यातञ्चनद्रव्यविशेषैर्देवताविशेषाणां प्रीतिं ब्रुवती श्रुतिर्दध्न इन्द्रप्रियत्वं दर्शयति । 'यत्पूतीकैर्वा --- दध्नाऽऽतनक्ति सेन्द्रत्वाय इति '। इति

क्वचिच्छाखान्तरीय वाक्योदाहरणपुरस्सरं शंका परिहारमाचष्टे भाष्यकारः- तथा हि 'सोमः खलु वै सांनाय्यम्। य एवं विद्वान् सांनाय्यं पिबति। अपुनर्भक्ष्योऽस्य सोमपीथो भवति।' इति श्रुतम्। सांनाय्ये सोम भावनया पीते सोम एव पीतो भवति इति तदभिप्रायः। कथमिदमिति प्रश्ने भाष्यकार आह 'अस्ति ह्यननुष्ठातुमशक्तस्य सर्वत्र भावनया तत्पूर्तिः। अत एव बृहदारण्यके सृष्टिप्रकरणे ब्रह्मचारिणो गार्हस्थ्यधर्मं वाञ्छतस्तदसम्भवे सत्युपासनया तत्पूर्तिराम्नायते-एकाकी कामयते-आत्मना हि कर्म करोति ' इति। अतः सोमभावनया वैकल्यपरिहारो युज्यते इति। सन्तीदृशानि बहूनि स्थलानि दिङ्मात्रमिह प्रदर्शितम् । तत्र तत्र मीमांसां व्याकरणं च विवेचयदिदं भाष्यं सर्वेषां अतितरां उपादेयमास्ते ।

कृष्णयजुर्वेदस्य भट्टभास्करभाष्यमपि सायणभाष्यापेक्षया लघुकायं वर्तते यद्युता विशेषा अपि प्रकृते अनुवादग्रन्थे निवेशिताः। अत्र मन्त्राः पदपाठः तदर्थः तेषां विनियोगः विशेषविषयाः इत्येवं अध्येतॄणां सौकर्यं मनसिकृत्य क्रमः आदृतः। सोऽयं क्रमः नितरां समीचीनोऽस्ति । अनुवादग्रन्थोऽयं वेदार्थजिज्ञासून् भृशमुपकरिष्यतीति सुदृढो विस्रम्भो नः । अनुवादकाः प्रकाशकाश्च आस्तिकानां विशिष्टप्रशंसापात्राणीत्यत्र न कस्यापि संशयः ।

श्रीशारदाशशिकलावतंसयोरसीमया कृपया अयमनुवादग्रन्थो विशिष्टं प्रचारं लभतां अनुवादकाः प्रकाशकाश्च श्रेयःपरम्पराभिस्समभिवर्धन्तां इत्याशास्महे ।

शृङ्गगिरिः

श्रीमुख कार्तिक अमावास्या इन्दुवासरः

13 - 12 - 1993

इति नारायणस्मरणम्

भारतीतीर्थः

# ಮುನ್ನುಡಿ

ಭಾಷ್ಯವಿವರಣೆಯಿಂದೊಡಗೂಡಿದ ಕೃಷ್ಣಯಜುರ್ವೇದದ ಕನ್ನಡಭಾಷೆಯ ಅನುವಾದಗ್ರಂಥದ ಮೂರನೆಯ ಭಾಗವು ಮಹಾಜನರಿಗೆ ಒದಗುತ್ತಿರುವುದು ತುಂಬ ಸಂತಸವನ್ನೀಯುತ್ತಿದೆ. ಈ ಭಾಗದಲ್ಲಿ ಸಂಹಿತಾಗ್ರಂಥದ ಮೊದಲನೆಯ ಕಾಂಡದ ಒಂದು ಮತ್ತು ಎರಡನೆಯ ಪ್ರಶ್ನೆಗಳು ಒಡಗೂಡಿವೆ.

ಇವುಗಳಲ್ಲಿ ಒಂದನೆಯ ಪ್ರಶ್ನೆಯಲ್ಲಿ ದರ್ಶ-ಪೂರ್ಣಮಾಸಗಳಿಗೆ ಸಂಬಂಧಿಸಿದ ಆಧ್ವರ್ಯವಮಂತ್ರಗಳೇ ಹೆಚ್ಚಾಗಿ ಕಾಣಸಿಗುತ್ತವೆ. ಕಡೆಯ ಅನುವಾಕದಲ್ಲಿ ಮಾತ್ರ ಎರಡನೆಯ ಕಾಂಡದಲ್ಲಿ ಹೇಳಲ್ಪಟ್ಟ ಕಾಮ್ಯೇಷ್ಟಿಗಳ ಯಾಜ್ಯಾ-ಪುರೋನುವಾಕ್ಯಗಳು ಹೇಳಲ್ಪಟ್ಟಿವೆ. ಈ ಪ್ರಶ್ನೆಯಲ್ಲಿ ಹೇಳಲ್ಪಟ್ಟ ಮಂತ್ರಗಳ ವಿನಿಯೋಗಗಳು ಆಯಾ ವಿಧಿ-ಅರ್ಥವಾದಗಳೊಡನೆ ತೈತ್ತಿರೀಯಬ್ರಾಹ್ಮಣದ ಮೂರನೆಯ ಅಷ್ಟಕದ ಎರಡು ಮತ್ತು ಮೂರನೆಯ ಪ್ರಪಾಠಕಗಳಲ್ಲಿ ನಿರೂಪಿತವಾಗಿವೆ. ಆ ಎರಡೂ ಪ್ರಪಾಠಕಗಳು ಈ ಪ್ರಶ್ನೆಯ ವ್ಯಾಖ್ಯಾನರೂಪವಾಗಿಯೇ ಇವೆಯೆಂದರೆ ತಪ್ಪಲ್ಲ. ಆದುದರಿಂದಲೇ ಮಹಾಮಹಿಮರಾದ ಭಾಷ್ಯಕಾರರು ಆ ಎರಡು ಪ್ರಪಾಠಕಗಳನ್ನೂ ಈ ಪ್ರಶ್ನೆಯೊಡನೆಯೇ ವ್ಯಾಖ್ಯಾನಿಸಿರುತ್ತಾರೆ. ಹಾಗೆಯೇ ಎರಡನೆಯ ಪ್ರಶ್ನೆಯು ಸೋಮಯಾಗದ ಮಂತ್ರಗಳ ಪ್ರತಿಪಾದಕವಾಗಿದೆ. ಅವುಗಳ ವ್ಯಾಖ್ಯಾನರೂಪವಾದ ಬ್ರಾಹ್ಮಣಭಾಗವು ಸಂಹಿತೆಯಲ್ಲಿಯೇ ಆರನೆಯ ಕಾಂಡದಲ್ಲಿದೆ. ಆದ್ದರಿಂದಲೇ ಆ ಮಂತ್ರ-ಬ್ರಾಹ್ಮಣಗಳೆರಡನ್ನೂ ಭಾಷ್ಯಕಾರರು ಒಟ್ಟಿಗೇ ವ್ಯಾಖ್ಯಾನ ಮಾಡಿರುತ್ತಾರೆ. ಸಂಹಿತೆಯಲ್ಲಿಯೇ ಬ್ರಾಹ್ಮಣಭಾಗ, ಬ್ರಾಹ್ಮಣಗ್ರಂಥದಲ್ಲಿ ಮಂತ್ರಭಾಗ- ಹೀಗಿರುವುದೇ ಕೃಷ್ಣಯಜುರ್ವೇದದಲ್ಲಿರುವ ವಿಶೇಷ. ಕೆಲವೆಡೆ ಒಂದೇ ಪ್ರಶ್ನೆಯಲ್ಲಿಯೇ ಅನುವಾಕವೊಂದರಲ್ಲಿ ಮಂತ್ರಗಳೂ, ಮುಂದಿನ ಅನುವಾಕದಲ್ಲಿ ಅವುಗಳಿಗೆ ಸಂಬಂಧಿಸಿದ ಬ್ರಾಹ್ಮಣವೂ ಕಾಣಸಿಗುತ್ತದೆ. ಬ್ರಾಹ್ಮಣಗ್ರಂಥದ ಮೂರನೆಯ ಅಷ್ಟಕದ ಐದನೆಯ ಪ್ರಪಾಠಕದಲ್ಲಿ ದರ್ಶ-ಪೂರ್ಣಮಾಸಕ್ಕೆ ಸಂಬಂಧಿಸಿದ ಹೌತ್ರಮಂತ್ರಗಳಿವೆ. ಅವುಗಳ ವ್ಯಾಖ್ಯಾನರೂಪವಾದ ಬ್ರಾಹ್ಮಣವು ಸಂಹಿತೆಯ ಎರಡನೆಯ ಕಾಂಡದ ಐದನೆಯ ಪ್ರಪಾಠಕದಲ್ಲಿ ಪಠಿತವಾಗಿದೆ. ಈ ರೀತಿಯ ವೈಚಿತ್ರ್ಯವನ್ನನುಸರಿಸಿಯೇ ಈ ಯಜುರ್ವೇದಕ್ಕೆ "ಕೃಷ್ಣಯಜುರ್ವೇದ"ಎಂಬ ಹೆಸರು ಒಪ್ಪುತ್ತದೆಯೆಂದು ಬಲ್ಲವರ ನುಡಿ.

ಈ ವೇದವನ್ನು ಭಾಷ್ಯಕಾರರಾದ ಸಾಯಣಾಚಾರ್ಯರು ತುಂಬ ಸ್ಪಷ್ಟವಾಗಿ ವ್ಯಾಖ್ಯಾನಿಸಿರುತ್ತಾರೆ. ಈ ಭಾಷ್ಯದ ವೈಶಿಷ್ಟ್ಯವು ಎಲ್ಲಕ್ಕೂ ಮಿಗಿಲೆನಿಸಿದ್ದಾಗಿದೆ. ಅರ್ಥವಾದಗಳಲ್ಲಿ ಕೆಲವೆಡೆ ಕಾಣಬರುವ ವಿರೋಧಗಳನ್ನು ಭಾಷ್ಯಕಾರರು ತುಂಬ ಚೆನ್ನಾಗಿ ಪರಿಹಾರ ಮಾಡಿರುವುದು ಇದಕ್ಕೊಂದು ನಿದರ್ಶನ. ಅದು ಹೀಗಿದೆ :

'ತಸ್ಯ ಪರ್ಣಮಚ್ಛಿದ್ಯತ । ತತ್ಪರ್ಣೋಽಭವತ್।'

ಎಂಬ ಎರಡು ವಾಕ್ಯಗಳು ಇವೆ. ಭೂಮಿಯಲ್ಲಿ ಬಿದ್ದ ಎಲೆಯು ಮುತ್ತುಗದ ಮರವಾಯಿತೆಂದು ಅದರ ಅರ್ಥ. ಎಲೆಯೊಂದು ಮರವಾಗುವುದು ಹೇಗೆ? ಎಂಬ ಲೌಕಿಕರ ಸಂಶಯವನ್ನು ಭಾಷ್ಯಕಾರರು ಹೀಗೆ ದೂರಮಾಡುತ್ತಾರೆ. ಅಲ್ಲಿಯ ಭಾಷ್ಯವು ಹೀಗಿದೆ :

'ನ ಚಾತ್ರ ಪರ್ಣಸ್ಯ ಕಥಂ ವೃಕ್ಷತ್ವಂ ಸಂಪನ್ನಮಿತಿ ವಿಸ್ಮೇತವ್ಯಮ್। ವಿಧಾತುರೀಶ್ವರಸ್ಯಾಚಿಂತ್ಯಶಕ್ತಿತ್ವಾತ್। ಅನ್ಯಥಾ ಬೀಜಾತ್ ವೃಕ್ಷ ಇತ್ಯತ್ರಾಪಿ ಕ್ವ ಬೀಜಮ್, ಕ್ವ ವೃಕ್ಷ ಇತ್ಯಪಿ ವಿಸ್ಮಯಃ ಕೇನ ವಾರ್ಯೇತ । ಸರ್ವತ್ರ ಪರ್ಣೇಭ್ಯೋ ವೃಕ್ಷ ಇತ್ಯಯಮತಿಪ್ರಸಂಗೋಽಪಿ ಈಶ್ವರಸಂಕಲ್ಪಾಭಾವೇನ ಪರಿಹರ್ತವ್ಯಃ। ಸ ಚ ಸಂಕಲ್ಪಃ ಕಾರ್ಯೈಕಸಮಧಿಗಮ್ಯಃ । ತಸ್ಮಾತ್ ವೇದಾರ್ಥೇ ಕುತರ್ಕೈರ್ನ ಚೋದನೀಯಮ್ ।' (ಎಲೆಯೊಂದು ಹೇಗೆ ಮರವಾಯಿತೆಂಬುದು ಸೋಜಿಗವೇನಲ್ಲ. ಸೃಷ್ಟಿಕರ್ತನಾದ ಈಶ್ವರನ ಶಕ್ತಿಯು ಅಚಿಂತ್ಯವಾದುದು. ಇಲ್ಲವಾದರೆ ಬೀಜದಿಂದಲೇ ಮರವು ಉಂಟಾಗುವುದರಿಂದ ಬೀಜವೆಲ್ಲಿ?! ಮರವೆಲ್ಲಿ?! ಎಂಬ ಅಚ್ಚರಿಯು ಉಂಟಾಗದೇ ಇರದೇ? ಹಾಗಾದರೆ ಎಲ್ಲಾ ಎಲೆಗಳಿಂದಲೂ ಮರಗಳೇ ಹುಟ್ಟಲಿ ಎಂಬ ಅತಿಪ್ರಸಂಗವು ಬರದಿರದು. ಆದರೆ ಆ ರೀತಿಯ ಈಶ್ವರಸಂಕಲ್ಪವಿಲ್ಲದಿರುವುದರಿಂದ ಹಾಗಾಗಿಲ್ಲ. ಕಾರ್ಯವನ್ನು ನೋಡಿಯೇ ಈಶ್ವರಸಂಕಲ್ಪವನ್ನು ತಿಳಿಯಬೇಕು. ಆದ್ದರಿಂದ ವೇದಾರ್ಥದ ವಿಷಯದಲ್ಲಿ ಕುತರ್ಕಗಳಿಂದ ಆಕ್ಷೇಪಿಸಬಾರದು.)

ಕೆಲವೆಡೆ ಭಾಷ್ಯಕಾರರು ತಮ್ಮ ವ್ಯಾಖ್ಯಾನದಲ್ಲಿ ಮಂದಮತಿಗಳಿಗೆ ಉಂಟಾಗುವ ಸಂಶಯವನ್ನು ಬೇರೊಂದೆಡೆ ಹೇಳಿರುವ ಬ್ರಾಹ್ಮಣವನ್ನು ಪ್ರಮಾಣವನ್ನಾಗಿ ನೀಡಿ ದೂರಮಾಡುತ್ತಾರೆ.

'ಸೋಮೇನ ತ್ವಾಽತನಚ್ಮಿ'

ಎಂಬುದು ಒಂದು ಮಂತ್ರ. ಅಲ್ಲಿ ಸೋಮಶಬ್ದಕ್ಕೆ ಮೊಸರು ಎಂದರ್ಥವೆಂದು ಭಾಷ್ಯಕಾರರು ಹೇಳಿರುತ್ತಾರೆ. ಅಲ್ಲಿ ಸಂಶಯವನ್ನು ಎತ್ತಿ ಸಮಾಧಾನವನ್ನು ಹೇಳುತ್ತಾರೆ. ಅಲ್ಲಿಯ ಭಾಷ್ಯವು ಹೀಗಿದೆ; 'ನನ್ವತ್ರ ಸೋಮಶಬ್ದೇನ ಮುಖ್ಯಂ ಸೋಮಂ ಪರಿತ್ಯಜ್ಯ ಕುತೋ ದಧ್ಯುಪಲಕ್ಷ್ಯತೇ? ಬ್ರಾಹ್ಮಣಾಂತರಬಲಾದಿತಿ ಬ್ರೂಮಃ ತತ್ರ ಹ್ಯಾತಂಚನದ್ರವ್ಯ-ವಿಶೇಷೈರ್ದೇವತಾವಿಶೇಷಾಣಾಂ ಪ್ರೀತಿಂ ಬ್ರುವತೀ ಶ್ರುತಿರ್ದಧ್ನ ಇಂದ್ರಪ್ರಿಯತ್ವಂ ದರ್ಶಯತಿ।

'ಯತ್ಪೂತೀಕೈರ್ವಾ......ದಧ್ನಾತನಕ್ತಿ ಸೇಂದ್ರತ್ವಾಯ।'

(ಇಲ್ಲಿ ಸೋಮಶಬ್ದವು ಮುಖ್ಯವಾದ ಸೋಮಲತೆ ಎಂಬುದನ್ನು ಬಿಟ್ಟು ಮೊಸರು ಎಂಬ ಅರ್ಥವನ್ನು ಏತಕ್ಕೆ ಬೋಧಿಸುತ್ತಿದೆ? ಬ್ರಾಹ್ಮಣವಾಕ್ಯದ ಸಾಮರ್ಥ್ಯದಿಂದ ಎನ್ನಬೇಕು. ಹೆಪ್ಪು ಹಾಕುವ ಬೇರೆ ಬೇರೆ ವಸ್ತುಗಳಿಂದ ಬೇರೆ ಬೇರೆ ದೇವತೆಗಳಿಗೆ ತೃಪ್ತಿಯಾಗುವುದೆಂದು ವೇದವು ತಿಳಿಸಿ, ಮೊಸರು ಇಂದ್ರನಿಗೆ ಪ್ರಿಯವೆಂದು ತಿಳಿಸುತ್ತಾ ಇದೆ. ಆ ವೇದವಾಕ್ಯವು ಹೀಗಿದೆ :

'ಯತ್ಪೂತೀಕೈರ್ವಾ....ಸೇಂದ್ರತ್ವಾಯ।')

ಕೆಲವೆಡೆ ಬೇರೆ ಶಾಖೆಯ ವಾಕ್ಯಗಳನ್ನು ಉದಾಹರಿಸಿ ಭಾಷ್ಯಕಾರರು ಸಂದೇಹವನ್ನು ಪರಿಹರಿಸಿರುವುದೂ ಉಂಟು.

"ಸೋಮಃ ಖಲು ವೈ ಸಾನ್ನಾಯ್ಯಮ್ । ಯ ಏವಂ ವಿದ್ವಾನ್

ಸಾನ್ನಾಯ್ಯಂ ಪಿಬತಿ । ಅಪುನರ್ಭಕ್ಷ್ಯೋಽಸ್ಯ ಸೋಮಪೀಥೋ ಭವತಿ ।

ಎಂಬ ಮಂತ್ರವಿದೆ. ಸಾನ್ನಾಯ್ಯವನ್ನು ಸೋಮರಸವೆಂಬ ಭಾವನೆಯಿಂದ ಪ್ರಾಶನ ಮಾಡಿದರೆ ಸೋಮರಸವನ್ನು ಪ್ರಾಶನ ಮಾಡಿದಂತಾಗುವುದೆಂದು ಅದರ ಅಭಿಪ್ರಾಯ. ಇದು ಹೇಗೆ? ಎಂಬ ವಿಚಾರ ಬಂದಾಗ ಭಾಷ್ಯಕಾರರು 'ಅನುಷ್ಠಿಸಲು ಅಶಕ್ಯವಾದದ್ದರ ಬಗ್ಗೆ ಭಾವನೆಯೇ ಅನುಷ್ಠಾನವನ್ನು ಪೂರ್ಣಗೊಳಿಸುವುದು. ಇದನ್ನು ಕುರಿತು

ಬೃಹದಾರಣ್ಯಕದ ಸೃಷ್ಟಿಪ್ರಕರಣದಲ್ಲಿ 'ಗೃಹಸ್ಥಾಶ್ರಮದಿಂದ ಉಂಟಾಗುವ ಧರ್ಮವನ್ನು ಬಯಸುವ ಬ್ರಹ್ಮಚಾರಿಯಾದವನಿಗೆ ಉಪಾಸನೆಯಿಂದ ಆ ಧರ್ಮವು ಲಭಿಸುತ್ತದೆ'. ಎಂಬ ಅರ್ಥವನ್ನು ಕೊಡುವ 'ಏಕಾಕೀ ಕಾಮಯತೇ...... ಆತ್ಮನಾ ಹಿ ಕರ್ಮ ಕರೋತಿ' ಎಂದು ಹೇಳಿದೆ ಎಂಬುದಾಗಿ ತಿಳಿಸಿ ಸೋಮಭಾವನೆಯಿಂದ ನ್ಯೂನತೆಯು ದೂರಾಗುವುದೆಂಬುದು ಯುಕ್ತ'ಎಂದಿದ್ದಾರೆ.

ಈ ರೀತಿಯ ಅನೇಕ ಸಂದರ್ಭಗಳು ಇವೆ. ನಿದರ್ಶನಕ್ಕಾಗಿ ಒಂದೆರಡನ್ನು ಇಲ್ಲಿ ಹೇಳಿದೆಯಷ್ಟೆ. ಅಲ್ಲಲ್ಲಿ ಮೀಮಾಂಸಾಶಾಸ್ತ್ರವನ್ನೂ, ವ್ಯಾಕರಣಶಾಸ್ತ್ರವನ್ನೂ ವಿವೇಚಿಸುವ ಈ ಭಾಷ್ಯವು ಎಲ್ಲರಿಗೂ ತುಂಬ ಗ್ರಾಹ್ಯವೆನಿಸಿದೆ.

ಕೃಷ್ಣಯಜುರ್ವೇದಕ್ಕಿರುವ ಭಟ್ಟಭಾಸ್ಕರಭಾಷ್ಯವು ಸಾಯಣಭಾಷ್ಯಕ್ಕಿಂತಲೂ ಚಿಕ್ಕದಾದುದು. ಅದರ ವಿಶೇಷಗಳೂ ಈ ಅನುವಾದಗ್ರಂಥದಲ್ಲಿ ತಿಳಿಸಲ್ಪಟ್ಟಿವೆ. ಈ ಅನುವಾದಗ್ರಂಥದಲ್ಲಿ ಮಂತ್ರಗಳು, ಪದಪಾಠ, ಪದಗಳ ಅರ್ಥ, ಮಂತ್ರಗಳ ವಿನಿಯೋಗ, ವಿಶೇಷ ವಿಷಯಗಳು-ಈ ರೀತಿಯಾಗಿ ಅಭ್ಯಸಿಸುವವರ ಸೌಕರ್ಯವನ್ನು ಮನಸ್ಸಿನಲ್ಲಿಟ್ಟುಕೊಂಡು ಕ್ರಮವನ್ನು ಅಳವಡಿಸಲಾಗಿದೆ. ಈ ಕ್ರಮವು ತುಂಬ ಚೆನ್ನಾಗಿದ್ದು, ಈ ಗ್ರಂಥವು ವೇದಾರ್ಥವನ್ನು ತಿಳಿಯಬಯಸುವವರಿಗೆ ತುಂಬ ಉಪಕಾರಿಯಾಗಿದೆಯೆಂದು ನಮ್ಮ ದೃಢವಾದ ನಂಬಿಕೆ. ಅನುವಾದಕರೂ ಮತ್ತು ಪ್ರಕಾಶಕರೂ ಆಸ್ತಿಕರ ವಿಶಿಷ್ಟಪ್ರಶಂಸೆಗೆ ಪಾತ್ರರೆಂಬುವುದರಲ್ಲಿ ಸಂಶಯವಿಲ್ಲ.

ಶ್ರೀ ಶಾರದಾ ಚಂದ್ರಮೌಳೀಶ್ವರರ ತುಂಬುದಯೆಯಿಂದ ಈ ಅನುವಾದ ಗ್ರಂಥವು ವಿಶೇಷವಾದ ಪ್ರಚಾರವನ್ನು ಪಡೆಯಲೆಂದೂ, ಅನುವಾದಕರು ಮತ್ತು ಪ್ರಕಾಶಕರು ಶ್ರೇಯಃಪರಂಪರೆಯೊಡನೆ ವರ್ಧಿಸಲೆಂದೂ ಹಾರೈಸುತ್ತೇವೆ.

ಇತಿ,
ನಾರಾಯಣಸ್ಮರಣಂ,

ಭಾರತೀತೀರ್ಥಃ

ಶೃಂಗಗಿರಿ
ಶ್ರೀಮುಖ ಕಾರ್ತಿಕ ಅಮಾವಾಸ್ಯಾ
ಸೋಮವಾರ
ದಿನಾಂಕ 13-12-1993

---

# ಪ್ರತಿಷ್ಠಾನದ ಅಧ್ಯಕ್ಷರ ನುಡಿ

**ಯೋಽಂತಃ ಪ್ರವಿಶ್ಯ ಮಮ ವಾಚಮಿಮಾಂ ಪ್ರಸುಪ್ತಾಂ**
**ಸಂಜೀವಯತ್ಯಖಿಲಶಕ್ತಿಧರಃ ಸ್ವಧಾಮ್ನಾ।**

**ಅನ್ಯಾಂಶ್ಚ ಹಸ್ತಚರಣಶ್ರವಣತ್ವಗಾದೀನ್**
**ಪ್ರಾಣಾನ್ನಮೋ ಭಗವತೇ ಪುರುಷಾಯ ತುಭ್ಯಮ್॥**

ಎಲ್ಲಾ ಶಕ್ತಿಗಳ ಗಣಿಯಂತಿರುವ ಯಾವನು ಅಂತಃಕರಣದಲ್ಲಿದ್ದುಕೊಂಡು ತನ್ನ ಶಕ್ತಿಯಿಂದ ಅಡಗಿರುವ ನನ್ನ ಮಾತನ್ನೂ, ಅಂಗಗಳಾದ ಕೈ-ಕಾಲು ಮೊದಲಾದವುಗಳನ್ನೂ, ಪ್ರಾಣವನ್ನೂ ಚೈತನ್ಯದಿಂದ ತುಂಬುತ್ತಿರುವನೋ ಅಂತಹ ಭಗವಂತನಿಗೆ ನಮಸ್ಕಾರಗಳು.

ಜ್ಯೋತಿ ಸಾಂಸ್ಕೃತಿಕ ಪ್ರತಿಷ್ಠಾನದ ಪ್ರಧಾನಕಾರ್ಯವನ್ನಾಗಿ ಈ ಕೃಷ್ಣಯಜುರ್ವೇದ ಕನ್ನಡಪ್ರಕಾಶನವನ್ನು ಕೈಗೆತ್ತಿಕೊಂಡಿರುವುದು ನಮ್ಮ ಒಂದು ಸುಕೃತವಿಶೇಷವೇ ಸರಿ. ವೈಯಕ್ತಿಕವಾಗಿ ನನ್ನ ಜೀವನದಲ್ಲಿ ಸಂಭವಿಸಿದ ಘಟನೆಯಿಂದ ಒಂದು ರೀತಿಯ ಸಾತ್ವಿಕಸ್ಫೂರ್ತಿಯು ಒದಗಿ, ಈ ಮಹಾಕಾರ್ಯಕ್ಕೆ ನನ್ನನ್ನೇ ತೊಡಗಿಸಿಕೊಳ್ಳುವಂತೆ ಮಾಡಿತು. ಈ ರೀತಿಯ ವೈಶಿಷ್ಟ್ಯಪೂರ್ಣವಾದ ಮಂತ್ರಾನುವಾದವನ್ನು ಪ್ರಕಾಶನಗೊಳಿಸುವ ಕಾರ್ಯವು ಗುರುತರವಾದುದಾದರೂ ಭಗವಂತನ ಕೃಪೆಯಿಂದಲೂ, ಶೃಂಗೇರಿಯ ಶ್ರೀ ಶಾರದಾಪೀಠಾಧೀಶ್ವರರ ಅಸದೃಶವಾದ ಆಶೀರ್ವಾದದೊಡನೆಯೂ ಈ ಮಹಾಕಾರ್ಯಕ್ಕೆ ಕೈ ಹಾಕಿದ್ದಾಗಿದೆ. ಮಹಾಸ್ವಾಮಿಗಳವರ ದಿವ್ಯಚರಣಾರವಿಂದಗಳಲ್ಲಿ ಭಕ್ತಿಪೂರ್ವಕವಾದ ಪ್ರಣಾಮವನ್ನು ಈ ಸಂದರ್ಭದಲ್ಲಿ ಸಲ್ಲಿಸುತ್ತೇವೆ. ಇಂತಹ ಪವಿತ್ರಕಾರ್ಯಕ್ಕೆ ನಾಡಿನ ಕನ್ನಡಿಗರ ಬೆಂಬಲ-ಪ್ರೋತ್ಸಾಹಗಳನ್ನು ಕೋರುತ್ತೇವೆ.

ಈ ಪ್ರಕಾಶನದ ಗ್ರಂಥಮಾಲೆಯಲ್ಲಿ ಪರಿಚಯಾತ್ಮಕವಾದ ಮೊದಲನೆಯ ಸಂಪುಟದ ಒಂದನೆಯ ಭಾಗವನ್ನು 1988ರಲ್ಲಿಯೂ, ಎರಡು ಮತ್ತು ಮೂರನೆಯ ಭಾಗಗಳನ್ನು 1990ರಲ್ಲಿಯೂ ಹೊರತರಲಾಗಿದೆ. ಕೃಷ್ಣಯಜುರ್ವೇದದ ಮಂತ್ರಾರ್ಥವನ್ನು ತಿಳಿಯಲು ಆಗತ್ಯವಾದ ಮನೋಭೂಮಿಕೆಯನ್ನು ವಾಚಕರಲ್ಲಿ ನಿರ್ಮಿಸುವುದೇ ಅದರ ಉದ್ದೇಶವಾಗಿತ್ತು. ಅಂತೆಯೇ ಮೊದಲನೆಯ ಸಂಪುಟಕ್ಕೆ

ನಾಡಿನಲ್ಲಿ ದೊರೆತ ಸ್ವಾಗತ ನಮಗೆ ತುಂಬ ಉತ್ತೇಜನವನ್ನು ನೀಡಿದೆ. ಮೊದಲ ಸಂಪುಟದ ಒಂದು ಸಹಸ್ರ ಪ್ರತಿಗಳನ್ನು ಕರ್ನಾಟಕಸರ್ಕಾರವು ಗ್ರಂಥಾಲಯಗಳಿಗೆ ಪಡೆದು ಆರ್ಥಿಕಪ್ರೋತ್ಸಾಹವನ್ನು ನೀಡಿದೆ. ಅಂದಿನ ಕನ್ನಡ-ಸಂಸ್ಕೃತಿ / ಇಲಾಖೆಯ ಮಂತ್ರಿಗಳಾಗಿದ್ದ ಸನಾತನಧರ್ಮಾಭಿಮಾನಿಗಳಾದ ಶ್ರೀ ಎಸ್. ರಮೇಶ್‌ರವರಿಗೂ, ಅವರ ಆಪ್ತ ಕಾರ್ಯದರ್ಶಿಗಳಾದ ಶ್ರೀ ಪ್ರಸನ್ನ ಅವರಿಗೂ, ಇಲಾಖೆಗೂ, ಕನ್ನಡ-ಸಂಸ್ಕೃತಿ ಇಲಾಖೆಯ ನಿರ್ದೇಶಕರಾಗಿದ್ದ, ಅಭಿಜ್ಞರಾದ ಡಾ|| ಪಿ. ಎಸ್. ರಾಮಾನುಜಂ ಅವರಿಗೂ ಪ್ರತಿಷ್ಠಾನದ ತುಂಬುಹೃದಯದ ಕೃತಜ್ಞತೆಗಳನ್ನು ಈ ಸಂದರ್ಭದಲ್ಲಿ ವ್ಯಕ್ತಪಡಿಸುತ್ತೇವೆ. ಮೊದಲ ಸಂಪುಟದ ಗ್ರಂಥದ ಬಗ್ಗೆ ಅತ್ಯುತ್ತಮ ವಿಮರ್ಶೆಗಳನ್ನು ದೈನಿಕ ಮತ್ತು ಸಾಪ್ತಾಹಿಕ ಪತ್ರಿಕೆಗಳಲ್ಲಿ ನೀಡಿ ಗ್ರಂಥದ ಬಗ್ಗೆ ಸದ್ಭಾವನೆಯನ್ನು ನಿರ್ಮಿಸಿದ ನಾಡಿನ ಶ್ರೇಷ್ಠವಿಮರ್ಶಕರಾದ ವಿದ್ಯಾವಾಚಸ್ಪತಿ ಶ್ರೀ ಬನ್ನಂಜೆ ಗೋವಿಂದಾಚಾರ್ಯ ಅವರಿಗೂ, ಶ್ರೀ ಮಲ್ಲೇಪುರಂ ಜಿ. ವೆಂಕಟೇಶ್ ಅವರಿಗೂ ನಮ್ಮ ಕೃತಜ್ಞತೆಗಳು ಸಲ್ಲುತ್ತವೆ. ಪ್ರಕಾಶನಕಾರ್ಯದ ಬಗ್ಗೆ ಪ್ರಚಾರವನ್ನು ನೀಡಿ ಪ್ರೋತ್ಸಾಹಿಸಿದ ಪತ್ರಿಕೆಗಳಿಗೂ, ಈ ಕಾರ್ಯವನ್ನು ಹರಸಿದ ಮಠ-ಮಂದಿರ ಗಳಿಗೂ, ಸಾರ್ವಜನಿಕರಿಗೂ ನಮ್ಮ ಕೃತಜ್ಞತೆಗಳು.

ಈ ಸಂಪುಟದೊಡನೆ ಕೃಷ್ಣಯಜುರ್ವೇದದ ಮಂತ್ರಗಳ ಅನುವಾದವು ಆರಂಭ ಗೊಂಡಿದ್ದು ಇದನ್ನು ನಾಡಿನ ಆಸ್ತಿಕ ಮಹಾಜನರು ಆದರದಿಂದ ಬರಮಾಡಿಕೊಳ್ಳು ತ್ತಾರೆಂದು ನಂಬಿರುತ್ತೇವೆ. ಮಹಾಜನರ ಉದಾರ ನೆರವಿನಿಂದ ಮುಂದಿನ ಸಂಪುಟಗಳನ್ನು ಶೀಘ್ರವಾಗಿಯೇ ಪ್ರಕಟಿಸುವುದಾಗಿ ಹೇಳಬಯಸುವೆವು.

ಯಾವುದೇ ವಾಣಿಜ್ಯದೃಷ್ಟಿಯಿಲ್ಲದೆ ಕೇವಲ ವೇದಮಾತೆಯ ಸೇವೆಯೆಂದು ಆರಂಭಿಸಿರುವ ಈ ಕಾರ್ಯಕ್ಕೆ ಎಲ್ಲರ ಬೆಂಬಲ-ಪ್ರೋತ್ಸಾಹ-ಸಹಕಾರಗಳನ್ನು ಕೋರಿ, ಗ್ರಂಥಪ್ರಕಾಶನದಲ್ಲಿ ನೆರವಾದ ಮತ್ತು ಹೆಚ್ಚಿನ ಜವಾಬ್ದಾರಿಯನ್ನು ನಿರ್ವಹಿಸಿದ ಪ್ರಧಾನ ಸಂಪಾದಕರಾದ ವಿದ್ವಾನ್ ರಾಮೇಶ್ವರಾವಧಾನಿಗಳವರಿಗೂ, ಸಹಾಯಕಸಂಪಾದಕರಾದ ವಿದ್ವಾನ್ ಸೋ.ತಿ. ನಾಗರಾಜ ಅವರಿಗೂ, ಪ್ರತಿಷ್ಠಾನಸಮಿತಿಯ ಎಲ್ಲ ಸದಸ್ಯರಿಗೂ ಕೃತಜ್ಞತೆಗಳನ್ನು ಸಲ್ಲಿಸಿ, ಗ್ರಂಥವನ್ನು ಅಂದವಾಗಿ ಮುದ್ರಿಸಿದ ಪರಿಮಳ ಮುದ್ರಣಾಲಯ ದವರಿಗೆ ಧನ್ಯವಾದಗಳನ್ನು ಅರ್ಪಿಸಿ, ಶ್ರೀ ಶಾರದಾ-ಚಂದ್ರಮೌಳೀಶ್ವರ-ರತ್ನಗರ್ಭ ಗಣಪತಿಯ ಸನ್ನಿಧಿಯಲ್ಲಿಯೂ ಪೂಜ್ಯ ಗುರುವರ್ಯರ ಸನ್ನಿಧಿಯಲ್ಲಿಯೂ ಅನಂತ ಪ್ರಣಾಮಗಳನ್ನು ಸಲ್ಲಿಸುವೆವು.

ಬಿ. ಎನ್. ವಿ. ಸುಬ್ರಹ್ಮಣ್ಯಂ
ಅಧ್ಯಕ್ಷರು
ಜ್ಯೋತಿ ಸಾಂಸ್ಕೃತಿಕ ಪ್ರತಿಷ್ಠಾನ

ಬೆಂಗಳೂರು -4
01-04-1994

# ಸಂಪಾದಕರ ನುಡಿ

ಶ್ರೀಃ

|| ಓಮ್ ನಮೋ ಭಗವತೇ ವೇದಪುರುಷಾಯ ||

|| ಶಾರದಾಗುರುಗಣಪತಿಭ್ಯೋ ನಮಃ ||

ಯಜುರ್ವೇದಃ ಪಿಂಗಲಾಕ್ಷಃ ಕೃಶಮಧ್ಯೋ ಬೃಹದ್ಗಲಃ ।
ಬೃಹತ್ಕಪೋಲಃ ಕೃಷ್ಣಾಂಘ್ರಿಃ ತಾಮ್ರಃ ಕಾಶ್ಯಪಗೋತ್ರಕಃ ॥

ಮೇಧಾಂ ಬೌಧಾಯನೋ ಮೇ ವಿತರತು ಸಹಿತಃ ಷಷ್ಟಿಸಾಹಸ್ರಶಿಷ್ಯೈಃ
ಯಸ್ಯಾಪಸ್ತಂಬ ಏಕಾಧಿಕಶತಯಜುಷಾಂ ಪಾರಗೋ ಮುಖ್ಯಶಿಷ್ಯಃ ।
ಸೂತ್ರಂ ಪ್ರಾಯುಂಕ್ತ ನೈಕಕ್ರಮವಿಧಿನಿಪುಣಾಧ್ವರ್ಯುನಾನಾಪ್ರಯೋಗ -
ವ್ಯಕ್ತಿ ಜ್ಞಾನೋಪಯುಕ್ತ - ಸ್ಫುಟ - ಮೃದು - ಗಹನ - ಪ್ರೌಢಸಂದರ್ಭಗರ್ಭಮ್ ॥

ಓಮ್ ನಮೋ ಭಗವತೇ ಆಪಸ್ತಂಬಾಯ

ಪರಮಾತ್ಮನಿಗೆ ವಂದಿಸಿ, ಜಗದ್ಗುರುಗಳಿಗೆ ನಮಿಸಿ, ಕೃಷ್ಣಯಜುರ್ವೇದ ಭಾಷ್ಯಾನುವಾದದ ಮೊದಲನೆಯ ಪುಸ್ತಕವನ್ನು ವೇದಾಭಿಮಾನಿಗಳಿಗೆ ಸಮರ್ಪಿಸುತ್ತಿದ್ದೇವೆ. ಕಾಲವಿಲಂಬವನ್ನು ಸಹೃದಯರು ಮನ್ನಿಸುವರೆಂದು ನಂಬಿದ್ದೇವೆ.

ಈ ಭಾಗದಲ್ಲಿ ಯಜುಸ್ಸಂಹಿತೆಯ ಮೊದಲನೆಯ ಕಾಂಡದ ಎರಡು ಪ್ರಶ್ನೆಗಳನ್ನು ಅನುವಾದ ಮಾಡಲಾಗಿದೆ. ಮೊದಲನೆಯ ಪ್ರಶ್ನದಲ್ಲಿ ಇಷ್ಟಿಗಳಿಗೆ ಪ್ರಕೃತಿಯಾದ ದರ್ಶ-ಪೂರ್ಣಮಾಸೇಷ್ಟಿಯ ಮಂತ್ರಗಳೂ, ಕೊನೆಯ ಅನುವಾಕದಲ್ಲಿ ಐಂದ್ರಾಗ್ನಾದಿ ಕಾಮ್ಯೇಷ್ಟಿಗಳ ಯಾಜ್ಯಾ-ಪುರೋನುವಾಕ್ಯೆಗಳೂ ಇವೆ. ಎರಡನೆಯ ಪ್ರಶ್ನದಲ್ಲಿ ಜ್ಯೋತಿಷ್ಟೋಮ ಸೋಮಯಾಗಕ್ಕೆ ಸಂಬಂಧಿಸಿದ ಮಂತ್ರಗಳಿವೆ. ಕೊನೆಯ ಅನುವಾಕದಲ್ಲಿ ರಾಕ್ಷೋಘ್ನೇಷ್ಟಿಯ ಮಂತ್ರಗಳಿವೆ.

ಇಷ್ಟಿಗಳಿಗೆ ಸಂಬಂಧಪಟ್ಟ ಮಂತ್ರಗಳು ಬ್ರಾಹ್ಮಣದ ಮೂರನೆಯ ಅಷ್ಟಕದಲ್ಲಿ ಬರುತ್ತವೆ. ಇಷ್ಟಿಮಂತ್ರಗಳ ಬ್ರಾಹ್ಮಣಭಾಗವು ಬ್ರಾಹ್ಮಣದ ಮೂರನೆಯ ಅಷ್ಟಕದಲ್ಲಿಯೂ, ಎರಡನೆಯ ಕಾಂಡದಲ್ಲಿಯೂ ಬರುತ್ತದೆ. ಇಲ್ಲಿ ಬರುವ ಸೋಮಮಂತ್ರಗಳ ಬ್ರಾಹ್ಮಣಭಾಗವು ಸಂಹಿತೆಯ ಆರನೆಯ ಕಾಂಡದಲ್ಲಿ ಬರುತ್ತದೆ. ಆ ಭಾಗಗಳ ವಿವರಣೆಯನ್ನು ಆ ಭಾಗಗಳ ಅನುವಾದದಲ್ಲಿ ಕೊಡಲಾಗುವುದು.

ಅನುವಾದದಲ್ಲಿ ಈ ಕ್ರಮವನ್ನು ಅನುಸರಿಸಿರುತ್ತೇವೆ. ಮೇಲೆ ಮಂತ್ರ, ಕೆಳಗೆ ಪದ, ಅದರ ಕೆಳಗೆ ವಿನಿಯೋಗ, ಅರ್ಥ ಮತ್ತು ತಾತ್ಪರ್ಯಗಳನ್ನು ಕೊಡಲಾಗಿದೆ. ವಿವರಣೆಯಲ್ಲಿ ಸಾಯಣಭಾಷ್ಯವನ್ನು ಅನುಸರಿಸಲಾಗಿದೆ. ಕೆಲವು ಕಡೆಗಳಲ್ಲಿ ಭಟ್ಟಭಾಸ್ಕರಭಾಷ್ಯವನ್ನೂ ಕೊಡಲಾಗಿದೆ. ಪ್ರತಿಯೊಂದು ಅನುವಾಕದ ಕೊನೆಯಲ್ಲಿ ವಿನಿಯೋಗಸಂಗ್ರಹ, ಮೀಮಾಂಸಾವಿಷಯಗಳು ಮತ್ತು ಛಂದೋವಿಷಯಗಳನ್ನು ಕೊಟ್ಟಿರುತ್ತೇವೆ. ಗ್ರಂಥವಿಸ್ತರಭಯದಿಂದ ಕೆಲವು ವಿಷಯಗಳನ್ನು ವಿವರಿಸಲು ಸಾಧ್ಯವಾಗಲಿಲ್ಲ. ಈ ಕ್ರಮವು ಅರ್ಥವನ್ನು ತಿಳಿಯಲು ನೆರವಾಗುವುದೆಂದು ಭಾವಿಸಿರುತ್ತೇವೆ. ಸಹೃದಯರು ಕೊಡುವ ಸಲಹೆಗಳನ್ನು ಅಂಗೀಕರಿಸಲು ಸದಾ ಸಿದ್ಧರಾಗಿರುತ್ತೇವೆ.

ವೇದಾಪೌರುಷೇಯತ್ವ, ಪ್ರಾಮಾಣ್ಯ ಮೊದಲಾದ ವಿಷಯಗಳನ್ನು ಅನುವಾದದಲ್ಲಿ ವಿವರಿಸಲಾಗಿದೆ. ಅವುಗಳನ್ನು ಇಲ್ಲಿ ಮತ್ತೊಮ್ಮೆ ಹೇಳಬೇಕಾಗಿಲ್ಲ.

**'ಮಂತ್ರೋ ಹೀನಃ ಸ್ವರತೋ ವರ್ಣತೋ ವಾ ಮಿಥ್ಯಾಪ್ರಯುಕ್ತೋ ನ ತಮರ್ಥಮಾಹ।**
**ಸ ವಾಗ್ವಜ್ರೋ ಯಜಮಾನಂ ಹಿನಸ್ತಿ ಯಥೇಂದ್ರಶತ್ರುಃ ಸ್ವರತೋಽಪರಾಧಾತ್ ॥'**

**'ಸ್ಥಾಣುರಯಂ ಭಾರಹಾರಃ ಕಿಲಾಭೂದಧೀತ್ಯ ವೇದಂ ನ ವಿಜಾನಾತಿ ಯೋಽರ್ಥಮ್।**
**ಯೋಽರ್ಥಜ್ಞ ಇತ್ಸಕಲಂ ಭದ್ರಮಶ್ನುತೇ ಸ ನಾಕಮೇತಿ ಜ್ಞಾನವಿಧೂತಪಾಪ್ಮಾ॥'**

**'ಯದೇವ ವಿದ್ಯಯಾ ಕರೋತಿ ತದೇವ ವೀರ್ಯವತ್ತರಂ ಭವತಿ'**

ಮೊದಲಾದ ವಚನಗಳಿಂದ ಮಂತ್ರಗಳನ್ನು ಸ್ವರಸಹಿತವಾಗಿ, ವರ್ಣಲೋಪವಿಲ್ಲದೆ ಹೇಳಬೇಕೆಂದೂ, ಅರ್ಥವನ್ನು ತಿಳಿದು ಕರ್ಮಗಳನ್ನು ಆಚರಿಸಬೇಕೆಂದೂ, ಹಾಗೆ ಆಚರಿಸಿದ ಕರ್ಮಗಳು ಅತಿಶಯಶ್ರೇಯಸ್ಕರಗಳೆಂದೂ ತಿಳಿಯುತ್ತದೆ. ಆ ದಿಕ್ಕಿನಲ್ಲಿ ಆಸ್ತಿಕರಿಗೆ ಈ

ಗ್ರಂಥದಿಂದ ಪ್ರಯೋಜನವಾದರೆ ನಮ್ಮ ಪ್ರಯತ್ನವು ಸಫಲವಾಯಿತೆಂದು ತಿಳಿಯುತ್ತೇವೆ.

'ವೇದಾ ಏವ ಧನಂ ಹಿ ನಃ ।
'ವೇದವೇ ನಮ್ಮ ಧನ' —ರಾಮಾಯಣ

'ಋಚಃ ಸಾಮಾನಿ ಯಜೂಂಷಿ। ಸಾ ಹಿ ಶ್ರೀರಮೃತಾ ಸತಾಮ್' ।
ಋಗ್ವೇದಾದಿ ವೇದಗಳೇ ಸತ್ಪುರುಷರ ಸಂಪತ್ತು. —ಶ್ರುತಿ

'ವೇದೋಽಖಿಲೋ ಧರ್ಮಮೂಲಮ್'
'ಎಲ್ಲಾ ವೇದವೂ ಧರ್ಮಕ್ಕೆ ಮೂಲವಾಗಿದೆ.' —ಸ್ಮೃತಿ

ಹೀಗೆ ಹಲವು ಬಗೆಗಳಲ್ಲಿ ಹೊಗಳಲ್ಪಡುತ್ತಿರುವ, ಅಭ್ಯುದಯ - ನಿಶ್ಶ್ರೇಯಸ ಕಾರಣವಾದ, ಭಾರತದೇಶದ ನಿಧಿಯಾದ ವೇದಸಂಪತ್ತನ್ನು ಉಳಿಸಿ ಬೆಳೆಸುವುದು ಭಾರತೀಯರಾದ ನಮ್ಮೆಲ್ಲರ ಕರ್ತವ್ಯವಾಗಿದೆ. ಈ ಕರ್ತವ್ಯನಿರ್ವಹಣೆಯಲ್ಲಿ ಶಕ್ತಿಯನ್ನು ಕೊಡಲೆಂದು ಪರಮಾತ್ಮನನ್ನು ಪ್ರಾರ್ಥಿಸುತ್ತೇವೆ. ಜಗದ್ಗುರುಗಳ ಆಶೀರ್ವಾದವು ನಮ್ಮ ಮೇಲೆ ಯಾವಾಗಲೂ ಇರಲಿ. ವೇದಾಭಿಮಾನಿಗಳು ಸದಾ ನಮಗೆ ಬೆಂಬಲವನ್ನು ನೀಡಲಿ. ಈ ಮಹಾಕಾರ್ಯದಲ್ಲಿ ತೊಡಗಿರುವ ಜ್ಯೋತಿಪ್ರಕಾಶನಸಂಸ್ಥೆಯ ಶ್ರೀ ಬಿ. ಎನ್. ವಿ. ಸುಬ್ರಹ್ಮಣ್ಯಂ ಅವರಿಗೆ ಪರಮಾತ್ಮನು ಸರ್ವಮಂಗಳಗಳನ್ನೂ ಕರುಣಿಸಲಿ.

ಇಂತು ವಿಜ್ಞಾಪಿಸುವ,

ರಾಮೇಶ್ವರಾವಧಾನೀ
ಪ್ರಧಾನ ಸಂಪಾದಕ

# ನಿವೇದನೆ

ಒಂದು ವಿಶಿಷ್ಟವಾದ ಸನ್ನಿವೇಶದಲ್ಲಿ ನಾವು ಕೃಷ್ಣಯಜುರ್ವೇದದ ಕನ್ನಡ ಪ್ರಕಾಶನದ ಕಾರ್ಯಕ್ಕೆ ಕೈ ಹಾಕಿದ್ದೇವೆ.

ಇಂದು ನಮ್ಮ ಸಮಾಜದ ರೀತಿ, ನೀತಿ, ಆಚಾರ ಮತ್ತು ವಿಚಾರಗಳನ್ನು ಗಮನಿಸಿದಾಗ ಒಂದು ಅಂಶವು ಎದ್ದುಕಾಣುತ್ತದೆ. ಪರಂಪರಾಗತವಾಗಿ ಬಂದ ನಡವಳಿಕೆಯನ್ನೂ, ಚಿಂತನೆಯನ್ನೂ ಕೈ ಬಿಡಲಾಗದ ಅತ್ಯಂತನವೀನವಾದ ಪಾಶ್ಚಾತ್ಯ ನಡವಳಿಕೆ ಮತ್ತು ಚಿಂತನೆಯೊಡನೆಯೂ ಪೂರ್ಣ ಬೆರೆಯಲಾಗದ ಮಧ್ಯಮಸ್ಥಿತಿ ಅದು. ಸಮಾಜದ ಚಿತ್ತವನ್ನು ಹೀಗೆ ಹಿಂದಕ್ಕೂ ಮುಂದಕ್ಕೂ ಎಳೆಯುತ್ತಾ ಎರಡು ಶಕ್ತಿಗಳೂ ಸ್ಪರ್ಧಿಸುವಂತೆ ಕಾಣುತ್ತಿವೆ. ಆದರೆ ಭಾವನಾತ್ಮಕ ಸಂದರ್ಭಗಳಲ್ಲಿ ನಮ್ಮ ಸಮಾಜದ ಚಿಂತನೆಯು ಪರಂಪರೆಯನ್ನೇ ಬಹುತೇಕ ಅವಲಂಬಿಸುತ್ತದೆ. ಹೊರದೃಷ್ಟಿಯಿಂದ ಸಮಾಜದಲ್ಲಿ ನಮ್ಮತನದ ಕೊರತೆ ಕಾಣುವುದಾದರೂ ಚಿರಂತನವಾದ ನಂಬಿಕೆ ಮತ್ತು ನಡವಳಿಕೆಯ ವಿಚಾರಗಳು ಅಂತರಗಂಗೆಯಂತೆ ಪ್ರವಹಿಸುತ್ತಲೇ ಇವೆ. ಈ ರೀತಿಯ ಅಂತಃಪ್ರವಾಹದ ಸೆಲೆಯು ಋಷಿಗಳು ಕಂಡುಕೊಂಡ ಆರ್ಷಸಾಹಿತ್ಯವಾದ ವೇದಗಳೇ.

ವ್ಯಕ್ತಿಜೀವನದಲ್ಲಿ ಮಾತ್ರವಲ್ಲದೆ ರಾಷ್ಟ್ರಜೀವನ ಮತ್ತು ರಾಷ್ಟ್ರೀಯಚಿಂತನವು ವೇದದ ಪ್ರಭಾವಕ್ಕೆ ಹೊರತಲ್ಲ. ಭಾರತ ಎಂದೊಡನೆ ಪ್ರಪಂಚದ ಜನಮಾನಸದಲ್ಲಿ ಮೂಡುವುದು ವೇದೋಪನಿಷತ್ತಿನ ಸಂದೇಶದ ಚಿತ್ರಗಳೇ. ಪ್ರಪಂಚದ ಉಳಿದ ಜನಾಂಗದವರು ಬದುಕು, ಜೀವನದ ಗುರಿ ಇವುಗಳ ಬಗ್ಗೆ ತಳೆದಿರುವ ಅಭಿಪ್ರಾಯಗಳಿಗಿಂತ ತೀರ ಭಿನ್ನವಾದ ಅಭಿಪ್ರಾಯಗಳು ನಮ್ಮವು. ಆ ಅಭಿಪ್ರಾಯಕ್ಕೆ ವೇದವೇ ಮೂಲ. ಅಂತೆಯೇ ನಮ್ಮತ್ತ ಪಾಶ್ಚಾತ್ಯರ ದೃಷ್ಟಿ. ಜೀವನದ ಬಗ್ಗೆ ಇರುವ ನಮ್ಮ ದೃಷ್ಟಿಕೋನವು ನೆಮ್ಮದಿ ತಂದೀತೆಂದು ಅವರ ಹಂಬಲ. ಇಂದಿಗೂ ಅನೇಕ ಸಾಧುಗಳು ವಿದೇಶಗಳಲ್ಲಿ ಗೌರವಕ್ಕೆ ಪಾತ್ರರಾಗುವ ಹಿನ್ನೆಲೆಯೂ ಇದೇ ಆಗಿದೆ. ಇಂತಹ ರಾಷ್ಟ್ರೀಯಸಂಪತ್ತು ನಮ್ಮ ಪೂರ್ವಜರಿಂದ ನಮಗೆ ಒದಗಿ ಬಂದಿದೆ. ವೇದವು ಅನೇಕ ಸಾವಿರ ವರ್ಷಗಳ ಕಾಲದಿಂದ ನಾವು ನಡೆಸಿಕೊಂಡು ಬರುತ್ತಿರುವ ಜೀವನನೌಕೆಯನ್ನು ಸರಿಯಾದ ದಿಕ್ಕಿಗೆ ಒಯ್ಯಬಲ್ಲ ಚುಕ್ಕಾಣಿ.

ಇಂತಹ ವೇದಗಳ ಬಗ್ಗೆ ನಾವೆಲ್ಲರೂ ತಿಳಿಯಲೇಬೇಕು. ಕಾಲದ ಪರಿಮಿತಿ, ಜೀವನಸಂದರ್ಭಗಳ ಬದಲಾವಣೆ ಇವುಗಳ ದೆಸೆಯಿಂದ ಸಂಸ್ಕೃತಭಾಷೆಯನ್ನು ಅರಿತು

ವೇದಗಳ ವ್ಯಾಸಂಗ ಮಾಡುವುದು ಕೊಂಚ ಕಷ್ಟಸಾಧ್ಯವೇ. ಅಲ್ಲದೆ ನಮ್ಮವರೇ ಆದ ಕೆಲವರು ವೇದಗಳು ವಿಚ್ಛಿದ್ರಕಾರಕಗಳೆಂಬ ಮುದ್ರೆಯನ್ನೊತ್ತಿದ್ದಾರೆ. ಒಂದೆಡೆ ಗಾಢನಂಬಿಕೆಗೂ ಮತ್ತೊಂದೆಡೆ ಅಪವಾದಕ್ಕೂ ಗುರಿಯಾಗಿರುವ ವೇದಗಳಲ್ಲಿರುವ ಸತ್ಯಾಂಶವನ್ನು ಹೊರತರುವುದು ಪ್ರಸಕ್ತವೇ ಹೌದು. ತಾಯ್ನುಡಿಯಲ್ಲಿ ವೇದವನ್ನು ಕನ್ನಡಿಗರಿಗೆ ನೀಡಬೇಕೆಂಬ ಹಂಬಲಕ್ಕೆ ಇದೇ ಪ್ರೇರಕ. ಹೀಗೆ ವೇದದ ಬಗೆಗಿನ ಭಕ್ತಿಮಿಶ್ರಿತ ಅಮೂರ್ತಭಾವನೆಗೆ ಆಕಾರವನ್ನು ಕೊಡಲು, ಭೌತಿಕ ಆಕರ್ಷಣೆಗೂ ಶಾಶ್ವತವಾದ ಸುಖಸಮೃದ್ಧಿಗಳಿಗೂ ನಡುವೆ ಇರುವ ಅಂತರದ ವಿವೇಕವನ್ನು ಮನಗಾಣಿಸಲು ಈ ಯತ್ನವನ್ನು ಕೈಗೊಳ್ಳಲಾಗಿದೆ.

ಒಂದಾನೊಂದು ಕಾಲದಲ್ಲಿ ಜಗಜ್ಜೀವನದ ಸಾರ್ವಭೌಮಸ್ಥಾನವನ್ನು ಅಲಂಕರಿಸಿದ ನಮ್ಮ ಸಮಾಜಜೀವನವನ್ನು ಹಸನುಗೊಳಿಸಲು ಈ ಪ್ರಕಾಶನವು ನೆರವಾಗುವುದಾದರೆ ನಮ್ಮ ಯತ್ನವು ಸಾರ್ಥಕ. ಈ ಬಗ್ಗೆ ಸಹೃದಯರಾದ ವಾಚಕರ ಹೃದಯವೇ ನಮಗೆ ರನ್ನಗನ್ನಡಿ.

ಈ ಗ್ರಂಥವನ್ನು ಮತ್ತಷ್ಟು ಉಪಯುಕ್ತಗೊಳಿಸುವತ್ತ ಸಹೃದಯರಾದ ವಾಚಕರ ಸಲಹೆ ಸೂಚನೆಗಳಿಗೆ ಸದಾ ಸ್ವಾಗತ.

ಪ್ರಕಾಶಕರು

# ಗ್ರಂಥದ ಅಧ್ಯಯನಕ್ಕೆ ಮುನ್ನ.....

¤ ವೇದಾಧ್ಯಯನಪರಂಪರೆಯಲ್ಲಿ 'ಹನಸ್ಸು' ಎಂದು ಹೇಳಲ್ಪಡುವ ಕಡೆ ಸಂಧಿಯನ್ನು ಮಾಡಿಯೇ ಅದರ ಸ್ವರದೊಡನೆ ನಿರ್ದೇಶಿಸಲಾಗಿದೆ. ಅಧ್ಯಯನಸೌಕರ್ಯಕ್ಕಾಗಿ ಕಂಸದಲ್ಲಿ ಪದವಿಭಾಗವನ್ನೂ ನೀಡಿದೆ.

¤ ಪದಪಾಠದಲ್ಲಿ ಮಂತ್ರಗಳು ಪ್ರಾರಂಭವಾಗುವ ಕಡೆ ಮೊದಲ ಪದವನ್ನು ಕೊಂಚ ಸ್ಥೂಲ ಅಕ್ಷರಗಳಿಂದ ಮುದ್ರಿಸಿದೆ.

¤ ಋಷಿಗಳ ಕಲ್ಪಸೂತ್ರಗಳನ್ನು ಅನುಸರಿಸಿ ಮಂತ್ರವಿಭಾಗದಲ್ಲಿ ಮತಭೇದ ವಿದ್ದರೆ ನಕ್ಷತ್ರಚಿಹ್ನೆಯಿಂದ ತೋರಿಸಲಾಗಿದೆ.

¤ ಪದಶಃ ಅರ್ಥವನ್ನು ತಿಳಿಸುವಾಗ ಮಂತ್ರವು ಪ್ರಾರಂಭವಾಗುವ ಕಡೆ ❋ ಚಿಹ್ನೆಯನ್ನು ನೀಡಿದೆ.

¤ ಮಂತ್ರ, ಪದಪಾಠ ಮತ್ತು ಪದಶಃ ಅರ್ಥ ಈ ಮೂರನ್ನೂ ಆಯಾ ಪುಟದಲ್ಲಿಯೇ ಸಮನ್ವಯವಾಗಿರುವಂತೆ ಯತ್ನಿಸಲಾಗಿದೆ.

¤ ಮಂತ್ರಗಳ ವಿನಿಯೋಗ ಮತ್ತು ತಾತ್ಪರ್ಯ ಇವುಗಳು ಬೇರೆ ಪುಟದಲ್ಲಿದ್ದಾಗ ಹೊಂದಿಸಿಕೊಂಡು ಅಧ್ಯಯನ ಮಾಡಲು ಕೋರಿದೆ.

¤ ಕೇವಲ ಮಂತ್ರಭಾಗದ ಅಧ್ಯಯನಸೌಕರ್ಯಕ್ಕಾಗಿ ಎರಡು ಪ್ರಪಾಠಕಗಳನ್ನೂ ಪ್ರತ್ಯೇಕವಾಗಿ ಮುದ್ರಿಸಲಾಗಿದೆ.

---

## ಸಂಕೇತಾಕ್ಷರಗಳ ವಿವರಣೆ

| | |
|---|---|
| ತೈ. ಸಂ. | ತೈತ್ತಿರೀಯ ಸಂಹಿತೆ |
| ತೈ.ಬ್ರಾ. | ತೈತ್ತಿರೀಯ ಬ್ರಾಹ್ಮಣ |
| ತೈ. ಆ. | ತೈತ್ತಿರೀಯ ಆರಣ್ಯಕ |
| ಆಪಶ್ರೌ.ಸೂ. | ಆಪಸ್ತಂಬ ಶ್ರೌತಸೂತ್ರ |
| ಬೌ. ಶ್ರೌ.ಸೂ. | ಬೌಧಾಯನ ಶ್ರೌತಸೂತ್ರ |
| ಜೈ. ಸೂ. | ಜೈಮಿನಿಸೂತ್ರ |
| ಬ್ರ. ಸೂ. | ಬ್ರಹ್ಮಸೂತ್ರ |
| ಪಾ. ಸೂ. | ಪಾಣಿನಿಸೂತ್ರ |
| ವೈ. | ವೈಶ್ವದೇವಕಾಂಡ |
| ಸೌ. | ಸೌಮ್ಯಕಾಂಡ |

(ಪ್ರಥಮಪ್ರಶ್ನೆಯ ಮೊದಲ ೧೩ ಅನುವಾಕಗಳು ಪ್ರಾಜಾಪತ್ಯಕಾಂಡಕ್ಕೆ ಸೇರಿವೆ.)

| | |
|---|---|
| ಶ. ಬ್ರಾ. | ಶತಪಥ ಬ್ರಾಹ್ಮಣ |
| ತಾಂ. ಬ್ರಾ. | ತಾಂಡ್ಯಬ್ರಾಹ್ಮಣ |
| ಕೃ. ಯ. ವೇದ | ಕೃಷ್ಣಯಜುರ್ವೇದ |
| ಮೈ. ಸಂ. | ಮೈತ್ರಾಯಣೀಯಸಂಹಿತೆ |

# ಪ್ರಾರ್ಥನೆ

**ನಮಸ್ತೇ ಗಾರ್ಹಪತ್ಯಾಯ ನಮಸ್ತೇ ದಕ್ಷಿಣಾಗ್ನಯೇ ।**
**ನಮ ಆಹವನೀಯಾಯ ಮಹಾವೇದ್ಯೈ ನಮೋ ನಮಃ ॥**

(ಹೇ! ಅಗ್ನಿದೇವನೇ!) ಗಾರ್ಹಪತ್ಯಸ್ವರೂಪನಾದ ನಿನಗೆ ಪ್ರಣಾಮಗಳು. ದಕ್ಷಿಣಾಗ್ನಿರೂಪನಾದ ನಿನಗೆ ನಮನಗಳು. ಆಹವನೀಯನೂ ಆದ ನಿನಗೆ ನಮಸ್ಕಾರಗಳು. [ಸೋಮಯಾಗದ] ಮಹಾವೇದಿಗೂ ಮತ್ತೆ ಮತ್ತೆ ಪ್ರಣಾಮಗಳು.

**ಕಾಂಡದ್ವಯೋಪಪಾದ್ಯಾಯ ಕರ್ಮ-ಬ್ರಹ್ಮಸ್ವರೂಪಿಣೇ ।**
**ಸ್ವರ್ಗಾಪವರ್ಗರೂಪಾಯ ಯಜ್ಞೇಶಾಯ ನಮೋ ನಮಃ ॥**

[ವೇದದ ಪೂರ್ವ-ಉತ್ತರ] ಎರಡು ಕಾಂಡಗಳಿಂದಲೂ ಪ್ರತಿಪಾದಿಸಲ್ಪಡುವ ಕರ್ಮ-ಬ್ರಹ್ಮಸ್ವರೂಪನೂ [ಅನುಷ್ಠಾನ-ಅರಿವುಗಳಿಂದ] ಸ್ವರ್ಗ-ಮೋಕ್ಷರೂಪನೂ ಆಗಿರುವ ಯಜ್ಞೇಶ್ವರನಿಗೆ ಮತ್ತೆ ಮತ್ತೆ ನಮನಗಳು.

* * * *

**ಅಮೀ ವೇದಿಂ ಪರಿತಃ ಕ್ಲೃಪ್ತಧಿಷ್ಣ್ಯಾಃ**
**ಸಮಿದ್ವಂತಃ ಪ್ರಾಂತಸಂಸ್ತೀರ್ಣದರ್ಭಾಃ ।**

**ಅಪಘ್ನಂತೋ ದುರಿತಂ ಹವ್ಯಗಂಧೈ**
**ರ್ವೈತಾನಾಸ್ತ್ವಾಂ (ವೋ) ವಹ್ನಯಃ ಪಾವಯಂತು ॥**

ವೇದಿಯ ಸುತ್ತಲೂ ನೆಲಸಿರುವ, ಸಮಿಧೆಗಳಿಂದೊಡಗೂಡಿದ, ಅಂಚಿನಲ್ಲಿ ಹರಡಿದ ದರ್ಭೆಗಳುಳ್ಳ, ಹವಿಸ್ಸಿನ ಸುಗಂಧದಿಂದ ದುರಿತವನ್ನು ದೂರಮಾಡುವ ಈ ವೈತಾನಾಗ್ನಿ [ಗಾರ್ಹಪತ್ಯ, ದಕ್ಷಿಣಾಗ್ನಿ ಮತ್ತು ಆಹವನೀಯಗಳು] ಗಳು ನಿನ್ನನ್ನು [ನಿಮ್ಮನ್ನು] ಪವಿತ್ರಗೊಳಿಸಲಿ.

**—ಕಾಳಿದಾಸ**

**ಅಭಿಜ್ಞಾನ ಶಾಕುಂತಲ 4-8**

ಶ್ರೀ ವೇದಪರಬ್ರಹ್ಮಣೇ ನಮಃ

ಶ್ರೀ ಶಾರದಾಗುರುಗಣಪತಿಭ್ಯೋ ನಮಃ

# ತೈತ್ತಿರೀಯ ಸಂಹಿತಾ

## ಪ್ರಥಮಕಾಂಡಃ ಪ್ರಥಮಪ್ರಶ್ನಃ

ಶ್ರೀ ಗುರುಭ್ಯೋ ನಮಃ ಹರಿಃ ಓಂ

ಇಷೇ ತ್ವೋರ್ಜೇ ತ್ವಾ ವಾಯವಃ ಸ್ಥೋಪಾಯವಃ ಸ್ಥ ದೇವೋ ವಃ
ಸವಿತಾ ಪ್ರಾರ್ಪಯತು ಶ್ರೇಷ್ಠತಮಾಯ ಕರ್ಮಣ ಆಪ್ಯಾಯಧ್ವಮಘ್ನಿಯಾ
ದೇವಭಾಗಮೂರ್ಜಸ್ವತೀಃ ಪಯಸ್ವತೀಃ ಪ್ರಜಾವತೀರನಮೀವಾ ಅಯ
ಕ್ಷ್ಮಾ ಮಾ ವಃ ಸ್ತೇನ ಈಶತ ಮಾಘಶಗ್ಂಸೋ ರುದ್ರಸ್ಯ ಹೇತಿಃ
ಪರಿ ವೋ ವೃಣಕ್ತು ಧ್ರುವಾ ಅಸ್ಮಿನ್ಗೋಪತೌ ಸ್ಯಾತ ಬಹ್ವೀರ್ಯಜ
ಮಾನಸ್ಯ ಪಶೂನ್ಪಾಹಿ ॥ 1 ॥

ಇಷೇ ತ್ರಿಚತ್ವಾರಿಗ್ಂಶತ್ ॥ ೧ ॥

ಯಜ್ಞಸ್ಯ ಘೋಷದಸಿ ಪ್ರತ್ಯುಷ್ಟಗ್ಂ ರಕ್ಷಃ ಪ್ರತ್ಯುಷ್ಟಾ ಆರಾತಯಃ

ಪ್ರೇಯಮಗಾದ್ಧಿಷಣಾ ಬರ್ಹಿರಚ್ಛ ಮನುನಾ ಕೃತಾ ಸ್ವಧಯಾ ವಿತಷ್ಟಾ

ತ ಆವಹಂತಿ ಕವಯಃ ಪುರಸ್ತಾದ್ದೇವೇಭ್ಯೋ ಜುಷ್ಟಮಿಹ ಬರ್ಹಿರಾಸದೇ

ದೇವಾನಾಂ ಪರಿಷೂತಮಸಿ ವರ್ಷವೃದ್ಧಮಸಿ ದೇವಬರ್ಹಿರ್ಮಾ ತ್ವಾನ್ವ

ಙ್ಮಾ ತಿರ್ಯಕ್ಪರ್ವ ತೇ ರಾಧ್ಯಾಸಮಾಚ್ಛೇತ್ತಾ ತೇ ಮಾರಿಷಂ ದೇವಬರ್ಹಿ

ಶ್ಶತವಲ್ಶಂ ವಿರೋಹ ಸಹಸ್ರವಲ್ಶಾ [ಶಾಃ (2) ] ವಿ ವಯಗ್ಂ

ರುಹೇಮ ಪೃಥಿವ್ಯಾಃ ಸಂಪೃಚಃ ಪಾಹಿ ಸುಸಂಭೃತಾ ತ್ವಾ ಸಂಭರಾಮ್ಯದಿತ್ಯೈ

ರಾಸ್ನಾಸೀಂದ್ರಾಣ್ಯೈ ಸಂನಹನಂ ಪೂಷಾ ತೇ ಗ್ರಂಥಿಂ ಗ್ರಥ್ನಾತು ಸ ತೇ

ಮಾಸ್ಥಾದಿಂದ್ರಸ್ಯ ತ್ವಾ ಬಾಹುಭ್ಯಾಮುದ್ಯಚ್ಛೇ ಬೃಹಸ್ಪತೇರ್ಮೂರ್ಧ್ನಾ

ಹರಾಮ್ಯುರ್ವಂತರಿಕ್ಷಮನ್ವಿಹಿ ದೇವಂಗಮಮಸಿ ॥ 3 ॥

ಸಹಸ್ರವಲ್ಶಾ ಅಷ್ಟಾತ್ರಿಗ್ಂಶಚ್ಚ ॥ ೨ ॥

ಶುಂಧಧ್ವಂ ದೈವ್ಯಾಯ ಕರ್ಮಣೇ ದೇವಯಜ್ಯಾಯೈ ಮಾತರಿಶ್ವನೋ

ಘರ್ಮೋಽಸಿ ದ್ಯೌರಸಿ ಪೃಥಿವ್ಯಸಿ ವಿಶ್ವಧಾಯಾ ಅಸಿ ಪರಮೇಣ ಧಾಮ್ನಾ

ದೃಗ್ಂಹಸ್ವ ಮಾ ಹ್ವಾರ್ವಸೂನಾಂ ಪವಿತ್ರಮಸಿ ಶತಧಾರಂ ವಸೂನಾಂ

ಪವಿತ್ರಮಸಿ ಸಹಸ್ರಧಾರಗ್ಂ ಹುತಃ ಸ್ತೋಕೋ ಹುತೋ ದ್ರಪ್ಸೋಽಗ್ನ

ಯೇ ಬೃಹತೇ ನಾಕಾಯ ಸ್ವಾಹಾ ದ್ಯಾವಾಪೃಥಿವೀಭ್ಯಾಗ್ಂ ಸಾ ವಿಶ್ವಾಯುಃ

ಸಾ ವಿಶ್ವವ್ಯಚಾಃ ಸಾ ವಿಶ್ವಕರ್ಮಾ ಸಂಪೃಚ್ಯಧ್ವಮೃತಾವರೀರೂರ್ಮಿಣೀ

ರ್ಮಧುಮತ್ತಮಾ ಮಂದ್ರಾ ಧನಸ್ಯ ಸಾತಯೇ ಸೋಮೇನ ತ್ವಾತನ

ಚ್ಮೀಂದ್ರಾಯ ದಧಿ ವಿಷ್ಣೋ ಹವ್ಯಗ್ಂ ರಕ್ಷಸ್ವ ॥ 4 ॥

ಸೋಮೇನಾಷ್ಟೌ ಚ ॥ ೩ ॥

ಕರ್ಮಣೇ ವಾಂ ದೇವೇಭ್ಯಃ ಶಕೇಯಂ ವೇಷಾಯ ತ್ವಾ ಪ್ರತ್ಯುಷ್ಟಗ್ಂ

ರಕ್ಷಃ ಪ್ರತ್ಯುಷ್ಟಾ ಅರಾತಯೋ ಧೂರಸಿ ಧೂರ್ವ ಧೂರ್ವಂತಂ ಧೂರ್ವ

ತಂ ಯೋಽಸ್ಮಾನ್ಧೂರ್ವತಿ ತಂ ಧೂರ್ವ ಯಂ ವಯಂ ಧೂರ್ವಾಮಸ್ತ್ವಂ

ದೇವಾನಾಮಸಿ ಸಸ್ನಿತಮಂ ಪಪ್ರಿತಮಂ ಜುಷ್ಟತಮಂ ವಹ್ನಿತಮಂ ದೇವ

ಹೂತಮಮಹ್ರುತಮಸಿ ಹವಿರ್ಧಾನಂ ದೃಗ್ಂಹಸ್ವ ಮಾಹ್ವಾರ್ಮಿತ್ರಸ್ಯ

ತ್ವಾ ಚಕ್ಷುಷಾ ಪ್ರೇಕ್ಷೇ ಮಾ ಭೇರ್ಮಾ ಸಂವಿಕ್ಥಾ ಮಾ ತ್ವಾ [ತ್ವಾ (5)

ಹಿಗ್ಂಸಿಷಮುರು] ಹಿಗ್ಂಸಿಷಮುರು ವಾತಾಯ ದೇವಸ್ಯ ತ್ವಾ ಸವಿತುಃ

ಪ್ರಸವೇಶ್ವಿನೋರ್ಬಾಹುಭ್ಯಾಂ ಪೂಷ್ಣೋ ಹಸ್ತಾಭ್ಯಾಮಗ್ನಯೇ ಜುಷ್ಟಂ

ನಿರ್ವಪಾಮ್ಯಗ್ನೀಷೋಮಾಭ್ಯಾಮಿದಂ ದೇವಾನಾಮಿದಮು ನಃ ಸಹ ಸ್ಫಾತ್ಯೈ

ತ್ವಾ ನಾರಾತ್ಯೈ ಸುವರಭಿ ವಿಖ್ಯೇಷಂ ವೈಶ್ವಾನರಂ ಜ್ಯೋತಿರ್ದೃಗ್ಂಹಂತಾಂ

ದುರ್ಯಾ ದ್ಯಾವಾಪೃಥಿವ್ಯೋರುರ್ವಂತರಿಕ್ಷಮನ್ವಿಹ್ಯದಿತ್ಯಾಸ್ತ್ವೋಪಸ್ಥೇ

ಸಾದಯಾಮ್ಯಗ್ನೇ ಹವ್ಯಗ್ಂ ರಕ್ಷಸ್ವ ॥ 6 ॥

ಮಾ ತ್ವಾ ಷಟ್‌ಚತ್ವಾರಿಗ್ಂಶಚ್ಚ ॥ ೪ ॥

ದೇವೋ ವಃ ಸವಿತೋತ್ಪುನಾತ್ವಚ್ಛಿದ್ರೇಣ ಪವಿತ್ರೇಣ ವಸೋಃ ಸೂರ್ಯಸ್ಯ

ರಶ್ಮಿಭಿರಾಪೋ ದೇವೀರಗ್ರೇಪುವೋ ಅಗ್ರೇಗುವೋಽಗ್ರ ಇಮಂ ಯಜ್ಞಂ

ನಯತಾಗ್ರೇ ಯಜ್ಞಪತಿಂ ಧತ್ತ ಯುಷ್ಮಾನಿಂದ್ರೋಽವೃಣೀತ ವೃತ್ರ

ತೂರ್ಯೇ ಯೂಯಮಿಂದ್ರಮವೃಣೀಧ್ವಂ ವೃತ್ರತೂರ್ಯೇ ಪ್ರೋಕ್ಷಿತಾಃ

ಸ್ಥಾಗ್ನಯೇ ವೋ ಜುಷ್ಟಂ ಪ್ರೋಕ್ಷಾಮ್ಯಗ್ನೀಷೋಮಾಭ್ಯಾಗ್ಂ ಶುಂಧಧ್ವಂ

ದೈವ್ಯಾಯ ಕರ್ಮಣೇ ದೇವಯಜ್ಯಾಯಾ ಅವಧೂತಗ್ಂ ರಕ್ಷೋಽವಧೂತಾ

ಅರಾತಯೋಽದಿತ್ಯಾಸ್ತ್ವಗಸಿ ಪ್ರತಿ ತ್ವಾ [ಪ್ರತಿ ತ್ವಾ (7) ಪೃಥಿವೀ] ಪೃಥಿವೀ

ವೇತ್ತ್ವಧಿಷವಣಮಸಿ ವಾನಸ್ಪತ್ಯಂ ಪ್ರತಿ ತ್ವಾದಿತ್ಯಾಸ್ತ್ವಗ್ವೇತ್ತ್ವಗ್ನೇಸ್ತ

ನೂರಸಿ ವಾಚೋ ವಿಸರ್ಜನಂ ದೇವವೀತಯೇ ತ್ವಾ ಗೃಹ್ಣಾಮ್ಯದ್ರಿರಸಿ

ವಾನಸ್ಪತ್ಯಃ ಸ ಇದಂ ದೇವೇಭ್ಯೋ ಹವ್ಯಗ್ಂ ಸುಶಮಿ ಶಮಿಷ್ವೇಷಮಾವ

ದೋರ್ಜಮಾವದ ದ್ಯುಮದ್ವದತ ವಯಗ್ಂ ಸಂಘಾತಂ ಜೇಷ್ಮ ವರ್ಷ

ವೃದ್ಧಮಸಿ ಪ್ರತಿ ತ್ವಾ ವರ್ಷವೃದ್ಧಂ ವೇತ್ತು ಪರಾಪೂತಗ್ಂ ರಕ್ಷಃ

ಪರಾಪೂತಾ ಅರಾತಯೋ ರಕ್ಷಸಾಂ ಭಾಗೋಽಸಿ ವಾಯುರ್ವೋ ವಿ

ವಿನಕ್ತು ದೇವೋ ವಃ ಸವಿತಾ ಹಿರಣ್ಯಪಾಣಿಃ ಪ್ರತಿಗೃಹ್ಣಾತು ॥ 8 ॥

ತ್ವಾ ಭಾಗ ಏಕಾದಶ ಚ ॥ ೫ ॥

ಅವಧೂತಗ್ಂ ರಕ್ಷೋಽವಧೂತಾ ಅರಾತಯೋಽದಿತ್ಯಾಸ್ತ್ವಗಸಿ ಪ್ರತಿ

ತ್ವಾ ಪೃಥಿವೀ ವೇತ್ತು ದಿವಃ ಸ್ಕಂಭನಿರಸಿ ಪ್ರತಿ ತ್ವಾದಿತ್ಯಾಸ್ತ್ವಗ್ವೇತ್ತು

ಧಿಷಣಾಸಿ ಪರ್ವತ್ಯಾ ಪ್ರತಿ ತ್ವಾ ದಿವಃ ಸ್ಕಂಭನಿರ್ವೇತ್ತು ಧಿಷಣಾಸಿ

ಪಾರ್ವತೇಯೀ ಪ್ರತಿ ತ್ವಾ ಪರ್ವತಿರ್ವೇತ್ತು ದೇವಸ್ಯ ತ್ವಾ ಸವಿತುಃ

ಪ್ರಸವೇಽಶ್ವಿನೋರ್ಬಾಹುಭ್ಯಾಂ ಪೂಷ್ಣೋ ಹಸ್ತಾಭ್ಯಾಮಧಿವಪಾಮಿ

ಧಾನ್ಯಮಸಿ ಧಿನುಹಿ ದೇವಾನ್ಪ್ರಾಣಾಯ ತ್ವಾಪಾನಾಯ ತ್ವಾ ವ್ಯಾನಾಯ

ತ್ವಾ ದೀರ್ಘಾಮನು ಪ್ರಸಿತಿಮಾಯುಷೇ ಧಾಂ ದೇವೋ ವಃ ಸವಿತಾ

ಹಿರಣ್ಯಪಾಣಿಃ ಪ್ರತಿಗೃಹ್ಣಾತು ॥ 9 ॥

ಪ್ರಾಣಾಯ ತ್ವಾ ಪಂಚದಶ ಚ ॥ ೬ ॥

ಧೃಷ್ಟಿರಸಿ ಬ್ರಹ್ಮ ಯಚ್ಛಾಪಾಗ್ನೇಽಗ್ನಿಮಾಮಾದಂ ಜಹಿ ನಿಷ್ಕ್ರವ್ಯಾದಗ್ಂ

ಸೇಧಾಽಽದೇವಯಜಂ ವಹ ನಿರ್ದಗ್ಧಗ್ಂ ರಕ್ಷೋ ನಿರ್ದಗ್ಧಾ ಅರಾತಯೋ

ಧ್ರುವಮಸಿ ಪೃಥಿವೀಂ ದೃಗ್ಂಹಾಯುರ್ದೃಗ್ಂಹ ಪ್ರಜಾಂ ದೃಗ್ಂಹ ಸಜಾತಾನಸ್ಮೈ ಯಜಮಾನಾಯ ಪರ್ಯೂಹ ಧರ್ತ್ರಮಸ್ಯಂತರಿಕ್ಷಂ ದೃಗ್ಂಹ ಪ್ರಾಣಂ ದೃಗ್ಂಹಾಪಾನಂ ದೃಗ್ಂಹ ಸಜಾತಾನಸ್ಮೈ ಯಜಮಾನಾಯ ಪರ್ಯೂಹ ಧರುಣಮಸಿ ದಿವಂ ದೃಗ್ಂಹ ಚಕ್ಷು [ಚಕ್ಷುಃ (10) ದೃಗ್ಂಹ] ದೃಗ್ಂಹ ಶ್ರೋತ್ರಂ ದೃಗ್ಂಹ ಸಜಾತಾನಸ್ಮೈ ಯಜಮಾನಾಯ ಪರ್ಯೂಹ ಧರ್ಮಾಸಿ ದಿಶೋ ದೃಗ್ಂಹ ಯೋನಿಂ ದೃಗ್ಂಹ ಪ್ರಜಾಂ ದೃಗ್ಂಹ ಸಜಾತಾನಸ್ಮೈ ಯಜಮಾನಾಯ ಪರ್ಯೂಹ ಚಿತಃ ಸ್ಥ ಪ್ರಜಾಮಸ್ಮೈ ರಯಿಮಸ್ಮೈ ಸಜಾತಾನಸ್ಮೈ ಯಜಮಾನಾಯ ಪರ್ಯೂಹ ಭೃಗೂಣಾಮಂಗಿರಸಾಂ ತಪಸಾ ತಪ್ಯಧ್ವಂ ಯಾನಿ ಘರ್ಮೇ ಕಪಾಲಾನ್ಯುಪಚಿನ್ವಂತಿ ವೇಧಸಃ । ಪೂಷ್ಣಸ್ತಾನ್ಯಪಿ ವ್ರತ ಇಂದ್ರವಾಯೂ ವಿಮುಂಚತಾಮ್ ॥ 11 ॥

ಚಕ್ಷುರಷ್ಟಾಚತ್ವಾರಿಗ್ಂಶಚ್ಚ ॥ ೭ ॥

ಸಂವಪಾಮಿ ಸಮಾಪೋ ಅದ್ಭಿರಗ್ಮತ ಸಮೋಷಧಯೋ ರಸೇನ ಸಗ್ಂ

ರೇವತೀರ್ಜಗತೀಭಿರ್ಮಧುಮತೀರ್ಮಧುಮತೀಭಿಃ ಸೃಜ್ಯಧ್ವಮದ್ಭ್ಯಃ

ಪರಿ ಪ್ರಜಾತಾಃ ಸ್ಥ ಸಮದ್ಭಿಃ ಪೃಚ್ಯಧ್ವಂ ಜನಯತ್ಯೈ ತ್ವಾ ಸಂಯೌಮ್ಯಗ್ನ

ಯೇತ್ವಾಗ್ನೀಷೋಮಾಭ್ಯಾಂ ಮಖಸ್ಯ ಶಿರೋಽಸಿ ಘರ್ಮೋಽಸಿ ವಿಶ್ವಾಯು

ರುರು ಪ್ರಥಸ್ವೋರು ತೇ ಯಜ್ಞಪತಿಃ ಪ್ರಥತಾಂ ತ್ವಚಂ ಗೃಹ್ಣೀಷ್ವಾಂತರಿ

ತಗ್ಂ ರಕ್ಷೋಽಂತರಿತಾ ಅರಾತಯೋ ದೇವಸ್ತ್ವಾ ಸವಿತಾ ಶ್ರಪಯತು

ವರ್ಷಿಷ್ಠೇ ಅಧಿ ನಾಕೇಽಗ್ನಿಸ್ತೇ ತನುವಂ ಮಾತಿಧಾಗಗ್ನೇ ಹವ್ಯಗ್ಂ

ರಕ್ಷಸ್ವ ಸಂ ಬ್ರಹ್ಮಣಾ ಪೃಚ್ಯಸ್ವೈಕತಾಯ ಸ್ವಾಹಾ ದ್ವಿತಾಯ ಸ್ವಾಹಾ

ತ್ರಿತಾಯ ಸ್ವಾಹಾ ॥ 12 ॥

ಸವಿತಾ ದ್ವಾವಿಗ್ಂಶತಿಶ್ಚ ॥ ೮ ॥

ಆದದ ಇಂದ್ರಸ್ಯ ಬಾಹುರಸಿ ದಕ್ಷಿಣಃ ಸಹಸ್ರಭೃಷ್ಟಿಃ ಶತತೇಜಾ ವಾಯು

ರಸಿ ತಿಗ್ಮತೇಜಾಃ ಪೃಥಿವಿ ದೇವಯಜನ್ಯೋಷಧ್ಯಾಸ್ತೇ ಮೂಲಂ ಮಾ

ಹಿಗ್ಂಸಿಷಮಪಹತೋಽರರುಃ ಪೃಥಿವ್ಯೈ ವ್ರಜಂ ಗಚ್ಛ ಗೋಸ್ಥಾನಂ

ವರ್ಷತು ತೇ ದ್ಯೌರ್ಬಧಾನ ದೇವ ಸವಿತಃ ಪರಮಸ್ಯಾಂ ಪರಾವತಿ ಶತೇನ

ಪಾಶೈರ್ಯೋಽಸ್ಮಾನ್ದ್ವೇಷ್ಟಿ ಯಂ ಚ ವಯಂ ದ್ವಿಷ್ಮಸ್ತಮತೋ ಮಾ ಮೌ

ಗಪಹತೋಽರರುಃ ಪೃಥಿವ್ಯೈ ದೇವಯಜನ್ಯೈ ವ್ರಜಂ [(13) ಗಚ್ಛ] ಗಚ್ಛ

ಗೋಸ್ಥಾನಂ ವರ್ಷತು ತೇ ದ್ಯೌರ್ಬಧಾನ ದೇವ ಸವಿತಃ ಪರಮಸ್ಯಾಂ

ಪರಾವತಿ ಶತೇನ ಪಾಶೈರ್ಯೋಽಸ್ಮಾನ್ದ್ವೇಷ್ಟಿ ಯಂ ಚ ವಯಂ ದ್ವಿಷ್ಮಸ್ತ

ಮತೋ ಮಾ ಮೌಗಪಹತೋಽರರುಃ ಪೃಥಿವ್ಯಾ ಅದೇವಯಜನೋ

ವ್ರಜಂ ಗಚ್ಛ ಗೋಸ್ಥಾನಂ ವರ್ಷತು ತೇ ದ್ಯೌರ್ಬಧಾನ ದೇವ ಸವಿತಃ

ಪರಮಸ್ಯಾಂ ಪರಾವತಿ ಶತೇನ ಪಾಶೈರ್ಯೋಽಸ್ಮಾನ್ದ್ವೇಷ್ಟಿ ಯಂ ಚ

ವಯಂ ದ್ವಿಷ್ಮಸ್ತಮತೋಮಾ(14)[ಮೌಗರರುಸ್ತೇ] ಮೌಗರರುಸ್ತೇ ದಿವಂ

ಮಾಸ್ಕಾನ್ ವಸವಸ್ತ್ವಾ ಪರಿಗೃಹ್ಣಂತು ಗಾಯತ್ರೇಣ ಛಂದಸಾ ರುದ್ರಾಸ್ತ್ವಾ

ಪರಿಗೃಹ್ಣಂತು ತ್ರೈಷ್ಟುಭೇನ ಛಂದಸಾದಿತ್ಯಾಸ್ತ್ವಾ ಪರಿಗೃಹ್ಣಂತು ಜಾಗ

ತೇನ ಛಂದಸಾ ದೇವಸ್ಯ ಸವಿತುಃ ಸವೇ ಕರ್ಮ ಕೃಣ್ವಂತಿ ವೇಧಸ

ಋತಮಸ್ಯೃತಸದನಮಸ್ಯೃತಶ್ರೀರಸಿ ಧಾ ಅಸಿ ಸ್ವಧಾ ಅಸ್ಯುರ್ವೀ ಚಾಸಿ

ವಸ್ವೀ ಚಾಸಿ ಪುರಾ ಕ್ರೂರಸ್ಯ ವಿಸೃಪೋ ವಿರಪ್ಶಿನ್ನುದಾದಾಯ ಪೃಥಿವೀಂ

ಜೀರದಾನುರ್ಯಾಮೈರಯಂಚಂದ್ರಮಸಿ ಸ್ವಧಾಭಿಸ್ತಾಂ ಧೀರಾಸೋ

ಅನುದೃಶ್ಯ ಯಜಂತೇ ॥ 15 ॥

ದೇವಯಜನ್ಯೈ ವ್ರಜಂ ತ್ವಮತೋ ಮಾ ವಿರಪ್ಶಿನ್ನೇಕಾದಶ ಚ ॥ ೯ ॥

ಪ್ರತ್ಯುಷ್ಟಗ್ಂ ರಕ್ಷಃ ಪ್ರತ್ಯುಷ್ಟಾ ಅರಾತಯೋಽಗ್ನೇರ್ವರ್ಸ್ತೇಜಿಷ್ಠೇನ

ತೇಜಸಾ ನಿಷ್ಟಪಾಮಿ ಗೋಷ್ಠಂ ಮಾ ನಿರ್ಮೃಕ್ಷಂ ವಾಜಿನಂ ತ್ವಾ ಸಪತ್ನ

ಸಾಹಗ್ಂ ಸಂಮಾರ್ಜ್ಮಿ ವಾಚಂ ಪ್ರಾಣಂ ಚಕ್ಷುಃ ಶ್ರೋತ್ರಂ ಪ್ರಜಾಂ

ಯೋನಿಂ ಮಾ ನಿರ್ಮೃಕ್ಷಂ ವಾಜಿನೀಂ ತ್ವಾ ಸಪತ್ನಸಾಹೀಗ್ಂ ಸಂಮ್ರಾ
ಜ್ಞ್ಯೈಶಾಸಾನಾ ಸೌಮನಸಂ ಪ್ರಜಾಗ್ಂ ಸೌಭಾಗ್ಯಂ ತನೂಮ್। ಅಗ್ನೇ
ರನುವ್ರತಾ ಭೂತ್ವಾ ಸಂನಹ್ಯೇ ಸುಕೃತಾಯ ಕಮ್ ॥ ಸುಪ್ರಜಸಸ್ತ್ವಾ
ವಯಗ್ಂ ಸುಪತ್ನೀರುಪ[(16)ಸೇದಿಮ] ಸೇದಿಮ। ಅಗ್ನೇ ಸಪತ್ನದಂಭ
ನಮದಬ್ಧಾಸೋ ಅದಾಭ್ಯಮ್। ಇಮಂ ವಿಷ್ಯಾಮಿ ವರುಣಸ್ಯ ಪಾಶಂ
ಯಮಬಧ್ನೀತ ಸವಿತಾ ಸುಕೇತಃ। ಧಾತುಶ್ಚ ಯೋನೌ ಸುಕೃತಸ್ಯ ಲೋಕೇ
ಸ್ಯೋನಂ ಮೇ ಸಹ ಪತ್ಯಾ ಕರೋಮಿ ॥ ಸಮಾಯುಷಾ ಸಂ ಪ್ರಜಯಾ
ಸಮಗ್ನೇ ವರ್ಚಸಾ ಪುನಃ। ಸಂ ಪತ್ನೀ ಪತ್ಯಾಹಂ ಗಚ್ಛೇ ಸಮಾತ್ಮಾ
ತನುವಾ ಮಮ ॥ ಮಹೀನಾಂ ಪಯೋಽಸ್ಯೋಷಧೀನಾಗ್ಂ ರಸಸ್ತಸ್ಯ
ತೇಽಕ್ಷೀಯಮಾಣಸ್ಯ ನಿ [ನಿಃ (17)ವಪಾಮಿ]ರ್ವಪಾಮಿ ಮಹೀನಾಂ ಪ
ಯೋಽಸ್ಯೋಷಧೀನಾಗ್ಂ ರಸೋಽದಬ್ಧೇನ ತ್ವಾ ಚಕ್ಷುಷಾವೇಕ್ಷೇ ಸುಪ್ರಜಾ
ಸ್ತ್ವಾಯ ತೇಜೋಽಸಿ ತೇಜೋಽನು ಪ್ರೇಹ್ಯಗ್ನಿಸ್ತೇ ತೇಜೋ ಮಾವಿನ್ಯೈದ

ಗ್ನೇರ್ಜಿಹ್ವಾಸಿ ಸುಭೂರ್ದೇವಾನಾಂ ಧಾಮ್ನೇಧಾಮ್ನೇ ದೇವೇಭ್ಯೋ
ಯಜುಷೇಯಜುಷೇ ಭವ ಶುಕ್ರಮಸಿ ಜ್ಯೋತಿರಸಿ ತೇಜೋಽಸಿ ದೇವೋ
ವಃ ಸವಿತೋತ್ಪುನಾತ್ವಚ್ಛಿದ್ರೇಣ ಪವಿತ್ರೇಣ ವಸೋಃ ಸೂರ್ಯಸ್ಯ ರಶ್ಮಿಭಿಃ
ಶುಕ್ರಂ ತ್ವಾ ಶುಕ್ರಾಯಾಂ ಧಾಮ್ನೇಧಾಮ್ನೇ ದೇವೇಭ್ಯೋ ಯಜುಷೇ
ಯಜುಷೇ ಗೃಹ್ಣಾಮಿ ಜ್ಯೋತಿಸ್ತ್ವಾ ಜ್ಯೋತಿಷ್ಯರ್ಚಿಸ್ತ್ವಾರ್ಚಿಷಿ ಧಾಮ್ನೇ-
ಧಾಮ್ನೇ ದೇವೇಭ್ಯೋ ಯಜುಷೇಯಜುಷೇ ಗೃಹ್ಣಾಮಿ || 18 ||

ಉಪ ನೀ ರಶ್ಮಿಭಿಃ ಶುಕ್ರಗ್ಂ ಷೋಡಶ ಚ || ೧೦ ||

ಕೃಷ್ಣೋಽಸ್ಯಾಖರೇಷ್ಠೋಽಗ್ನಯೇ ತ್ವಾ ಸ್ವಾಹಾ ವೇದಿರಸಿ ಬರ್ಹಿಷೇ ತ್ವಾ
ಸ್ವಾಹಾ ಬರ್ಹಿರಸಿ ಸ್ರುಗ್ಭ್ಯಸ್ತ್ವಾ ಸ್ವಾಹಾ ದಿವೇ ತ್ವಾಂತರಿಕ್ಷಾಯ ತ್ವಾ
ಪೃಥಿವ್ಯೈ ತ್ವಾ ಸ್ವಧಾ ಪಿತೃಭ್ಯ ಊರ್ಗ್ಭವ ಬರ್ಹಿಷದ್ಭ್ಯ ಊರ್ಜಾ
ಪೃಥಿವೀಂ ಗಚ್ಛತ ವಿಷ್ಣೋಃ ಸ್ತೂಪೋಽಸ್ಯೂರ್ಣಾಮ್ರದಸಂ ತ್ವಾ ಸ್ತೃಣಾಮಿ

ಸ್ವಾಸಸ್ಥಂ ದೇವೇಭ್ಯೋ ಗಂಧರ್ವೋಽಸಿ ವಿಶ್ವಾವಸುರ್ವಿಶ್ವಸ್ಮಾದೀಷ
ತೋ ಯಜಮಾನಸ್ಯ ಪರಿಧಿರಿಡ ಈಡಿತ ಇಂದ್ರಸ್ಯ ಬಾಹುರಸಿ [(19) ಬಾಹು
ರಸಿ] ದಕ್ಷಿಣೋ ಯಜಮಾನಸ್ಯ ಪರಿಧಿರಿಡ ಈಡಿತೋ ಮಿತ್ರಾವರುಣೌ
ತ್ವೋತ್ತರತಃ ಪರಿಧತ್ತಾಂ ಧ್ರುವೇಣ ಧರ್ಮಣಾ ಯಜಮಾನಸ್ಯ ಪರಿಧಿರಿಡ
ಈಡಿತಃ ಸೂರ್ಯಸ್ತ್ವಾ ಪುರಸ್ತಾತ್ಪಾತು ಕಸ್ಯಾಶ್ಚಿದಭಿಶಸ್ತ್ಯಾ ವೀತಿಹೋತ್ರಂ
ತ್ವಾ ಕವೇ ದ್ಯುಮಂತಗ್ಂ ಸಮಿಧೀಮಹ್ಯಗ್ನೇ ಬೃಹಂತಮಧ್ವರೇ ವಿಶೋ
ಯಂತ್ರೇ ಸ್ಥೋ ವಸೂನಾಗ್ಂ ರುದ್ರಾಣಾಮಾದಿತ್ಯಾನಾಗ್ಂ ಸದಸಿ ಸೀದ
ಜುಹೂರುಪಭೃದ್ಧ್ರುವಾಸಿ ಘೃತಾಚೀ ನಾಮ್ನಾ ಪ್ರಿಯೇಣ ನಾಮ್ನಾ
ಪ್ರಿಯೇ ಸದಸಿ ಸೀದ್ಯೈತಾ ಅಸದನ್ಸುಕೃತಸ್ಯ ಲೋಕೇ ತಾ ವಿಷ್ಣೋ ಪಾಹಿ
ಪಾಹಿ ಯಜ್ಞಂ ಪಾಹಿ ಯಜ್ಞಪತಿಂ ಪಾಹಿ ಮಾಂ ಯಜ್ಞನಿಯಮ್ ॥ 20 ॥

ಬಾಹುರಸಿ ಪ್ರಿಯೇ ಸದಸಿ ಪಂಚದಶ ಚ ॥ ೧೧ ॥

ಭುವನಮಸಿ ವಿಪ್ರಥಸ್ವಾಗ್ನೇ ಯಷ್ಟರಿದಂ ನಮಃ । ಜುಹ್ವೇಹ್ಯಗ್ನಿಸ್ತ್ವಾ
ಹ್ವಯತಿ ದೇವಯಜ್ಯಾಯಾ ಉಪಭೃದೇಹಿ ದೇವಸ್ತ್ವಾ ಸವಿತಾ ಹ್ವಯತಿ
ದೇವಯಜ್ಯಾಯಾ ಅಗ್ನಾವಿಷ್ಣೂ ಮಾ ವಾಮವಕ್ರಮಿಷಂ ವಿಜಿಹಾಥಾಂ
ಮಾ ಮಾ ಸಂತಾಪ್ತಂ ಲೋಕಂ ಮೇ ಲೋಕಕೃತೌ ಕೃಣುತಂ ವಿಷ್ಣೋಃ
ಸ್ಥಾನಮಸೀತ ಇಂದ್ರೋ ಅಕೃಣೋದ್ವೀರ್ಯಾಣಿ ಸಮಾರಭ್ಯೋರ್ಧ್ವೋ
ಅಧ್ವರೋ ದಿವಿಸ್ಪೃಶಮಹ್ರುತೋ ಯಜ್ಞೋ ಯಜ್ಞಪತೇರಿಂದ್ರಾವಾನ್ಸ್ವಾ
ಹಾ ಬೃಹದ್ಭಾಃ ಪಾಹಿ ಮಾಗ್ನೇ ದುಶ್ಚರಿತಾದಾಮಾ ಸುಚರಿತೇ ಭಜ
ಮಖಸ್ಯ ಶಿರೋಽಸಿ ಸಂ ಜ್ಯೋತಿಷಾ ಜ್ಯೋತಿರಜ್ಯಾಮ್ ॥ 21 ॥

ಅಹ್ರುತ ಏಕವಿಗ್ಂಶತಿಶ್ಚ ॥ ೧೨ ॥

ವಾಜಸ್ಯ ಮಾ ಪ್ರಸವೇನೋದ್ಗ್ರಾಭೇಣೋದಗ್ರಭೀತ್ । ಅಥಾ ಸಪ
ತ್ನಾಗ್ಂ ಇಂದ್ರೋ ಮೇ ನಿಗ್ರಾಭೇಣಾಧರಾಗ್ಂ ಅಕಃ ಉದ್ಗ್ರಾಭಂ ಚ
ನಿಗ್ರಾಭಂ ಚ ಬ್ರಹ್ಮ ದೇವಾ ಅವೀವೃಧನ್ನ್ । ಅಥಾ ಸಪತ್ನಾನಿಂದ್ರಾಗ್ನೀ

ಮೇ ವಿಷೂಚೀನಾನ್ವ್ಯಸ್ಯತಾಮ್ ॥ ವಸುಭ್ಯಸ್ತ್ವಾ ರುದ್ರೇಭ್ಯಸ್ತ್ವಾದಿತ್ಯೇ

ಭ್ಯಸ್ತ್ವಾಕ್ತಗ್ಂ ರಿಹಾಣಾ ವಿಯಂತು ವಯಃ । ಪ್ರಜಾಂ ಯೋನಿಂ ಮಾ

ನಿರ್ಮೃಕ್ಷಮಾಪ್ಯಾಯಂತಾಮಾಪ ಓಷಧಯೋ ಮರುತಾಂ ಪೃಷತಯಃ ಸ್ಥ

ದಿವಂ [ದಿವಮ್ (22) ಗಚ್ಛ] ಗಚ್ಛ ತತೋ ನೋ ವೃಷ್ಟಿಮೇರಯ ।

ಆಯುಷ್ಪಾ ಅಗ್ನೇಽಸ್ಯಾಯುರ್ಮೇ ಪಾಹಿ ಚಕ್ಷುಷ್ಪಾ ಅಗ್ನೇಽಸಿ ಚಕ್ಷುರ್ಮೇ

ಪಾಹಿ ಧ್ರುವಾಸಿ ಯಂ ಪರಿಧಿಂ ಪರ್ಯಧತ್ಥಾ ಅಗ್ನೇ ದೇವ ಪಣಿಭಿರ್ವೀ

ಯಮಾಣಃ । ತಂ ತ ಏತಮನು ಜೋಷಂ ಭರಾಮಿ ನೇದೇಷತ್ವದಪಚೇ

ತಯಾತೈ ಯಜ್ಞಸ್ಯ ಪಾಥ ಉಪಸಮಿತಗ್ಂ ಸಗ್ಂಸ್ರಾವಭಾಗಾಃ ಸ್ಥೇಷಾ

ಬೃಹಂತಃ ಪ್ರಸ್ತರೇಷ್ಠಾ ಬರ್ಹಿಷದಶ್ಚ (23) ದೇವಾ ಇಮಾಂ ವಾಚಮಭಿ

ವಿಶ್ವೇ ಗೃಣಂತ ಆಸದ್ಯಾಸ್ಮಿನ್ಬರ್ಹಿಷಿ ಮಾದಯಧ್ವಮಗ್ನೇರ್ವಾಮಪನ್ನ

ಗೃಹಸ್ಯ ಸದಸಿ ಸಾದಯಾಮಿ ಸುಮ್ನಾಯ ಸುಮ್ನಿನೀ ಸುಮ್ನೇ ಮಾ ಧತ್ತಂ

ಧುರಿ ಧುರ್ಯೌ ಪಾತಮಗ್ನೇಽದಬ್ಧಾಯೋಽಶೀತತನೋ ಪಾಹಿ ಮಾದ್ಯ

ದಿವಃ ಪಾಹಿ ಪ್ರಸಿತ್ಯೈ ಪಾಹಿ ದುರಿಷ್ಟ್ಯೈ ಪಾಹಿ ದುರದ್ಮನ್ಯೈ ಪಾಹಿ

ದುಶ್ಚರಿತಾದವಿಷಂ ನಃ ಪಿತುಂ ಕೃಣು ಸುಷದಾ ಯೋನಿಗ್ಂ ಸ್ವಾಹಾ

ದೇವಾ ಗಾತುವಿದೋ ಗಾತುಂ ವಿತ್ತ್ವಾ ಗಾತುಮಿತ ಮನಸಸ್ಪತ ಇಮಂ

ನೋ ದೇವ ದೇವೇಷು ಯಜ್ಞಗ್ಂ ಸ್ವಾಹಾ ವಾಚಿ ಸ್ವಾಹಾ ವಾತೇ ಧಾಃ

|| 24 ||

ದಿವಂ ಚ ವಿತ್ತ್ವಾ ಗಾತುಂ ತ್ರಯೋದಶ ಚ || ೧೩ ||

ಉಭಾ ವಾಮಿಂದ್ರಾಗ್ನೀ ಆಹುವಧ್ಯಾ ಉಭಾ ರಾಧಸಸ್ಸಹ ಮಾದಯಧ್ಯೈ|

ಉಭಾ ದಾತಾರಾವಿಷಾಗ್ಂ ರಯೀಣಾಮುಭಾ ವಾಜಸ್ಯ ಸಾತಯೇ ಹುವೇ

ವಾಮ್ || ಅಶ್ರವಗ್ಂ ಹಿ ಭೂರಿದಾವತ್ತರಾ ವಾಂ ವಿಜಾಮಾತುರುತ

ವಾ ಘಾ ಸ್ಯಾಲಾತ್ | ಅಥಾ ಸೋಮಸ್ಯ ಪ್ರಯತೀ ಯುವಭ್ಯಾಮಿಂದ್ರಾಗ್ನೀ

ಸ್ತೋಮಂ ಜನಯಾಮಿ ನವ್ಯಮ್ || ಇಂದ್ರಾಗ್ನೀ ನವತಿಂ ಪುರೋ ದಾಸ

ಪತ್ನೀರಧೂನುತಮ್ | ಸಾಕಮೇಕೇನ ಕರ್ಮಣಾ || ಶುಚಿಂ ನು ಸ್ತೋಮಂ

ನವಜಾತಮದ್ಯೇಂದ್ರಾಗ್ನೀ ವೃತ್ರಹಣಾ ಜುಷೇಥಾಮ್ [25] । ಉಭಾ ಹಿ ವಾಗ್ಂ ಸುಹವಾ ಜೋಹವೀಮಿ ತಾ ವಾಜಗ್ಂ ಸದ್ಯ ಉಶತೇ ಧೇಷ್ಠಾ॥ ವಯಮು ತ್ವಾ ಪಥಸ್ಪತೇ ರಥಂ ನ ವಾಜಸಾತಯೇ । ಧಿಯೇ ಪೂಷನ್ನಯುಜ್ಮಹಿ ॥ ಪಥಸ್ಪಥಃ ಪರಿಪತಿಂ ವಚಸ್ಯಾ ಕಾಮೇನ ಕೃತೋ ಅಭ್ಯಾನಡರ್ಕಮ್ । ಸ ನೋ ರಾಸಚ್ಛುರುಧಶ್ಚಂದ್ರಾಗ್ರಾ ಧಿಯಂಧಿಯಗ್ಂ ಸೀಷಧಾತಿ ಪ್ರಪೂಷಾ ॥ ಕ್ಷೇತ್ರಸ್ಯ ಪತಿನಾ ವಯಗ್ಂ ಹಿತೇನೇವ ಜಯಾಮಸಿ। ಗಾಮಶ್ವಂ ಪೋಷಯಿತ್ನ್ವಾ ಸ ನೋ[ನಃ(26)ಮೃಡಾತೀ] ಮೃಡಾತೀದೃಶೇ॥ ಕ್ಷೇತ್ರಸ್ಯ ಪತೇ ಮಧುಮಂತಮೂರ್ಮಿಂ ಧೇನುರಿವ ಪಯೋ ಅಸ್ಮಾಸು ಧುಕ್ಷ್ವ । ಮಧುಶ್ಚುತಂ ಘೃತಮಿವ ಸುಪೂತಮೃತಸ್ಯ ನಃ ಪತಯೋ ಮೃಡಯಂತು॥ ಅಗ್ನೇ ನಯ ಸುಪಥಾ ರಾಯೇ ಅಸ್ಮಾನ್, ವಿಶ್ವಾನಿ ದೇವ ವಯುನಾನಿ ವಿದ್ವಾನ್ । ಯುಯೋಧ್ಯಸ್ಮಜ್ಜುಹುರಾಣಮೇನೋ ಭೂಯಿಷ್ಠಾಂ ತೇ ನಮಉಕ್ತಿಂ ವಿಧೇಮ ॥ ಆ ದೇವಾನಾಮಪಿ ಪಂಥಾಮ

ಗನ್ಮ ಯಚ್ಛಕ್ಕವಾಮ ತದನು ಪ್ರವೋಢುಮ್ । ಅಗ್ನಿರ್ವಿದ್ವಾನ್ತ್ಸ
ಯಜಾತ್ [ಯಜಾತ್(27)ಸೇದು]ಸೇದು ಹೋತಾ ಸೋ ಅಧ್ವರಾನ್ತ್ಸ
ಋತೂನ್ಕಲ್ಪಯಾತಿ॥ ಯದ್ವಾಹಿಷ್ಠಂ ತದಗ್ನಯೇ ಬೃಹದರ್ಚ ವಿಭಾವಸೋ।
ಮಹಿಷೀವ ತ್ವದ್ರಯಿಸ್ತ್ವದ್ವಾಜಾ ಉದೀರತೇ ॥ ಅಗ್ನೇ ತ್ವಂ ಪಾರಯಾ
ನವ್ಯೋ ಅಸ್ಮಾನ್ಥ್ಸ್ವಸ್ತಿಭಿರತಿ ದುರ್ಗಾಣಿ ವಿಶ್ವಾ । ಪೂಶ್ಚ ಪೃಥ್ವೀ
ಬಹುಲಾ ನ ಉರ್ವೀ ಭವಾ ತೋಕಾಯ ತನಯಾಯ ಶಂ ಯೋಃ॥
ತ್ವಮಗ್ನೇ ವ್ರತಪಾ ಅಸಿ ದೇವ ಆ ಮರ್ತ್ಯೇಷ್ವಾ। ತ್ವಂ ಯಜ್ಞೇಷ್ವೀಡ್ಯಃ॥
ಯದ್ವೋ ವಯಂ ಪ್ರಮಿನಾಮ ವ್ರತಾನಿ ವಿದುಷಾಂ ದೇವಾ ಅವಿದುಷ್ಟ
ರಾಸಃ। ಅಗ್ನಿಷ್ಟದ್ವಿಶ್ವಮಾಪೃಣಾತಿ ವಿದ್ವಾನ್, ಯೇಭಿರ್ದೇವಾಗ್ಂ ಋತು-
ಭಿಃ ಕಲ್ಪಯಾತಿ ॥ 28 ॥

ಜುಷೇಥಾಮಾ ಸ ನೋ ಯಜಾದಾ ತ್ರಯೋವಿಗ್ಂಶತಿಶ್ಚ ॥ ೧೪ ॥

ಇಷೇ ತ್ವಾ ಯಜ್ಞಸ್ಯ ಶುಂಧಧ್ವಂ ಕರ್ಮಣೇ ವಾಂ ದೇವೋಽವ

ಧೂತಂ ಧೃಷ್ಟಿಃ ಸಂವಪಾಮ್ಯಾದದೇ ಪ್ರತ್ಯುಷ್ಟಂ ಕೃಷ್ಣೋಽಸಿ

ಭುವನಮಸಿ ವಾಜಸ್ಯೋಽಭಾ ವಾಂ ಚತುರ್ದಶ ॥ ೧೪ ॥

ಇಷೇ ದೃಗ್ಂಹ ಭುವನಮಷ್ಟಾವಿಗ್ಂಶತಿಃ ॥ ೨೮ ॥

॥ ಇಷೇ ತ್ವಾ ಕಲ್ಪಯಾತಿ ॥

ಹರಿಃ ಓಂ। ಶ್ರೀಕೃಷ್ಣಾರ್ಪಣಮಸ್ತು.

ಇತಿ ಪ್ರಥಮಕಾಂಡೇ ಪ್ರಥಮಃ ಪ್ರಶ್ನಃ

ಶ್ರೀ ವೇದಪರಬ್ರಹ್ಮಣೇ ನಮಃ
ಶ್ರೀ ಶಾರದಾಗುರುಗಣಪತಿಭ್ಯೋ ನಮಃ

# ತೈತ್ತಿರೀಯ ಸಂಹಿತಾ

## ಪ್ರಥಮಕಾಂಡಃ ಪ್ರಥಮಃ ಪ್ರಶ್ನಃ

ಶ್ರೀ ಗುರುಭ್ಯೋ ನಮಃ ಹರಿಃ ಓಂ

**ಇಷೇ ತ್ವೋರ್ಜೇ ತ್ವಾ**

---

**ಪದಪಾಠಃ**

॥ ಪ್ರಾ ॥ ಇಷೇ । ತ್ವಾ । ಊರ್ಜೇ । ತ್ವಾ ।

ದೇವಂ ಗಣಪತಿಂ ನೌಮಿ ಬ್ರಹ್ಮಣಾಂ ಬ್ರಹ್ಮಣಸ್ಪತಿಮ್ ।
ಅವಿತ್ರೀಂ ಶಾರದಾಂ ಧೀನಾಮಂಬಾಂ ವಂದೇ ಸರಸ್ವತೀಮ್ ॥ ೧ ॥

---

| ಮಂತ್ರ | ವಿನಿಯೋಗ |
|---|---|
| ಇಷೇ ತ್ವೋರ್ಜೇ ತ್ವಾ । | ೧) ದರ್ಶಯಾಗದ ವತ್ಸಾಪಾಕರಣ(ಕರುಗಳನ್ನು ಬೇರ್ಪಡಿಸುವುದು)ಕ್ಕಾಗಿ ಬೇಕಾದ ಪಲಾಶಶಾಖೆಯನ್ನು (ಮುತ್ತುಗದ ಕೊಂಬೆ) ಕತ್ತರಿಸುವುದಕ್ಕಾಗಿ.<br>೨) ಆಪಸ್ತಂಬ ಮಹರ್ಷಿಗಳು ಮೇಲಿನ ವಿನಿಯೋಗದೊಡನೆ ಎರಡು ಮಂತ್ರಗಳೆಂಬ ಇನ್ನೊಂದು ಪಕ್ಷವನ್ನಿಟ್ಟುಕೊಂಡು ೧) ಇಷೇ ತ್ವಾ । ೨) ಊರ್ಜೇ ತ್ವಾ । ಎಂಬಲ್ಲಿ ಎರಡನೆಯ ಮಂತ್ರಕ್ಕೆ ಕೊಂಬೆಯನ್ನು ನೇರ ಮಾಡುವುದಕ್ಕಾಗಿ ಅಥವಾ ಶುದ್ಧಿಗೊಳಿಸುವುದಕ್ಕಾಗಿ ವಿನಿಯೋಗವೆಂದೂ ಹೇಳಿರುತ್ತಾರೆ. |

---

**ಪದಶಃ ಅರ್ಥ:**

(ಎಲೈ! ಪಲಾಶಶಾಖೆಯೇ!) ಇಷೇ = (ದೇವತೆಗಳ) ಅನ್ನಕ್ಕಾಗಿ; ತ್ವಾ = ನಿನ್ನನ್ನು (ಆಚ್ಛಿನದ್ಮಿ = ಕತ್ತರಿಸುತ್ತೇನೆ.) ಊರ್ಜೇ = ದೇವ ಬಲಪ್ರದವಾದ ರಸಕ್ಕಾಗಿ;

---

**ತಾತ್ಪರ್ಯ:** ಎಲೈ! ಪಲಾಶಶಾಖೆಯೇ! ದರ್ಶಯಾಗದಲ್ಲಿ ಇಂದ್ರದೇವತೆಗೆ ಹವಿಸ್ಸಾದ ಮೊಸರನ್ನು–ತಾಯಿಹಸುಗಳಿಂದ ಕರುಗಳನ್ನು ಬೇರ್ಪಡಿಸುವುದರ ಮೂಲಕ-

# ವಾಯವಃ ಸ್ಥೋಪಾಯವಃ ಸ್ಥ

---

ವಾಯವಃ । ಸ್ಥ । ಉಪಾಯವ ಇತ್ಯುಪ–ಆಯವಃ । ಸ್ಥ ।

ನೃಹರಿಂ ಹರಿಮುಖ್ಯಾಶ್ಚ ದೇವತಾಃ ಶ್ರುತಿಸಂಸ್ತುತಾಃ ।
ಪ್ರಜಾಪತ್ಯಾದಿಕಾಂಡರ್ಷೀನ್ ಛಂದಾಂಸಿ ಚ ನಮಾಮ್ಯಹಮ್ ॥ ೧ ॥

ಜಗದ್ಗುರೂನ್ಗುರೂನ್ವಿದ್ಯಾಗುರೂನ್ ಭಾಷ್ಯಕೃತೋಽಖಿಲಾನ್ ।
ಪ್ರಣಮ್ಯ ತತ್ಕೃಪಾಲಂಬೋ ವೇದಾರ್ಥಂ ವಚ್ಮಿ ಭಾಷಯಾ ॥ ೩ ॥

ಸಾಯಣಾಚಾರ್ಯಭಾಷ್ಯಾನುಸಾರಿಣೀಂ ಮತ್ಕೃತಿಂ ಬುಧಾಃ ।
ಸಂತಃ ಸಹೃದಯಾಃ ಪ್ರೀತ್ಯಾ ಸ್ವೀಕುರ್ವಂತ್ವಿತಿ ಚಾರ್ಥಯೇ ॥ ೪ ॥

---



| ಮಂತ್ರ | ವಿನಿಯೋಗ |
|---|---|
| ವಾಯವಃ ..... ಸ್ಥ । | ಕರುಗಳನ್ನು ತಾಯಿಹಸುಗಳಿಂದ ಬೇರ್ಪಡಿಸಿ ಮೇಯಲು ಕಳುಹಿಸುವುದಕ್ಕಾಗಿ. |

---

ತ್ವಾ = ನಿನ್ನನ್ನು (ಆಚ್ಛಿನದ್ಮಿ = ಕತ್ತರಿಸುತ್ತೇನೆ) (ಸಂನಮಯಾಮಿ = ನೇರ ಮಾಡುತ್ತೇನೆ; ಅನುಮಾರ್ಜ್ಮಿ = ಶುದ್ಧಿಗೊಳಿಸುತ್ತೇನೆ) ∴ (ಎಲೈ! ಕರುಗಳೇ! ನೀವು) ವಾಯವಃ ಸ್ಥ = (ತಾಯಿಹಸುಗಳ ಬಳಿಯಿಂದ ಸ್ವೇಚ್ಛೆಯಿಂದ ಮೇಯಲು ಹುಲ್ಲುಗಾವಲಿಗೆ) ಹೋಗುವವರಾಗಿರಿ. (ಅಥವಾ ನೀವು ವಾಯುದೇವತಾ ಸಂಬಂಧಿಗಳೇ ಆಗಿದ್ದೀರಿ). ಉಪಾಯವಃ ಸ್ಥ = (ನೀವು ಹುಲ್ಲನ್ನು ಮೇದು) ಯಜಮಾನನ ಮನೆಯ ಬಳಿಗೆ ಹಿಂದಿರುಗಿ ಬನ್ನಿರಿ.

---

ಪಡೆಯುವುದಕ್ಕಾಗಿ, ದೇವಬಲಪ್ರದವಾದ ಮೊಸರನ್ನು ಪಡೆಯುವುದಕ್ಕಾಗಿಯೂ ನಿನ್ನನ್ನು ಕತ್ತರಿಸುತ್ತೇನೆ. ನನ್ನ ಸ್ವಾರ್ಥಕ್ಕಾಗಿ ಅಲ್ಲ. (ಯಾವುದನ್ನೂ ವ್ಯರ್ಥವಾಗಿ ಹಿಂಸಿಸಬಾರದೆಂದು ಭಾವಾರ್ಥ).

ಎಲೈ! ಕರುಗಳೇ! ನೀವು ವಾಯುಗಳಾಗಿರಿ ಎಂದರೆ ಮಾತೃಸಮೀಪದಿಂದ ಮೇಯಲು ದೂರ ಹೋಗುವವರಾಗಿರಿ. ಅಥವಾ ಅಂತರಿಕ್ಷವು ನಿಮ್ಮ ದೇವತೆ. ಆ ಅಂತರಿಕ್ಷಕ್ಕೆ ವಾಯುವು ಅಧ್ಯಕ್ಷನು. ಆ ವಾಯುವು ನಿಮ್ಮನ್ನು ರಕ್ಷಿಸಲಿ. ಬಳಿಕ ನೀವು ಚೆನ್ನಾಗಿ ಹುಲ್ಲನ್ನು ಮೇದು ಸಂಜೆಗೆ ಯಜಮಾನನ ಮನೆಗೆ ಹಿಂದಿರುಗಿ ಬನ್ನಿರಿ.

# ದೇವೋ ವಃ ಸವಿತಾ ಪ್ರಾರ್ಪಯತು ಶ್ರೇಷ್ಠತಮಾಯ ಕರ್ಮಣ ಆಪ್ಯಾಯಧ್ವಮಘ್ನಿಯಾ ದೇವಭಾಗಮೂರ್ಜಸ್ವತೀಃ

---

ದೇವಃ । ವಃ। ಸವಿತಾ। ಪ್ರೇತಿ । ಅರ್ಪಯತು । ಶ್ರೇಷ್ಠತಮಾಯೇತಿ ಶ್ರೇಷ್ಠ-ತಮಾಯ। ಕರ್ಮಣೇ । ಐತಿ । ಪ್ಯಾಯಧ್ವಮ್ । ಅಘ್ನಿಯಾಃ । ದೇವಭಾಗಮಿತಿ ದೇವ-ಭಾಗಮ್। ಊರ್ಜಸ್ವತೀಃ ।

---

| ಮಂತ್ರ | ವಿನಿಯೋಗ |
|---|---|
| ದೇವಃ... ವೃಣಕ್ತು । | ಗೋವುಗಳನ್ನು ಮೇಯಲು ಕಳಿಸಲು (ಬೌಧಾಯನ) |
| ೧) ದೇವಃ.... ಕರ್ಮಣೇ । | ಗೋವುಗಳನ್ನು ಮೇಯಲು ಕಳುಹಿಸುವುದಕ್ಕಾಗಿ. (ಆಪಸ್ತಂಬ) |

---

∴ (ಎಲೈ! ಗೋವುಗಳೇ! ಸವಿತಾ ದೇವಃ = ಸರ್ವಪ್ರೇರಕನಾದ ಅಂತರ್ಯಾಮಿಯಾದ ಪರಮೇಶ್ವರನು; (ಸವಿತೃದೇವನು) ವಃ= ನಿಮ್ಮನ್ನು; ಶ್ರೇಷ್ಠತಮಾಯ ಕರ್ಮಣೇ = ಅತ್ಯಂತ ಶ್ರೇಷ್ಠಕರ್ಮವಾದ ಯಾಗಕ್ಕಾಗಿ (ಯಾಗಕ್ಕೆ ಬೇಕಾದ ಮೊಸರು, ಹಾಲು, ತುಪ್ಪ ಮೊದಲಾದ ಹವಿಸ್ಸನ್ನು ಒದಗಿಸುವುದಕ್ಕಾಗಿ) ಪ್ರಾರ್ಪಯತು = ಪ್ರೇರಿಸಲಿ. (ಹುಲ್ಲು ಮೇಯಲು ಪ್ರೇರಿಸಲಿ). (ಹೇ) ಅಘ್ನಿಯಾಃ = (ಎಲೈ!) ಕೊಲ್ಲಬಾರದ ಅಥವಾ ಹಿಂಸಿಸಬಾರದ ಗೋವುಗಳೇ! (ನೀವು); ದೇವಭಾಗಮ್ = (ಇಂದ್ರನೇ ಮೊದಲಾದ) ದೇವತೆಗಳ ಭಾಗವನ್ನು (ಮೊಸರು, ಹಾಲು, ತುಪ್ಪ ಮೊದಲಾದವನ್ನು); ಆ ಪ್ಯಾಯಧ್ವಂ = (ಹೆಚ್ಚಾಗಿ ಹುಲ್ಲನ್ನು ತಿಂದು) ವೃದ್ಧಿಗೊಳಿಸಿರಿ; ಊರ್ಜಸ್ವತೀಃ = ಹೆಚ್ಚಾಗಿ ಬಲವುಳ್ಳ ಅಥವಾ ರಸಭರಿತರಾಗಿರುವ (ಪುಷ್ಟರಾಗಿರುವ);

---

ಎಲೈ! ಗೋವುಗಳೇ! ಸರ್ವಪ್ರೇರಕನೂ ಅಂತರ್ಯಾಮಿಯೂ ಆದ ಪರಮೇಶ್ವರನು ನಿಮ್ಮನ್ನು ಮೇಯುವಂತೆ ಪ್ರೇರಿಸಲಿ. ನೀವು ಚೆನ್ನಾಗಿ ಹುಲ್ಲನ್ನು ಮೇದು ಹೆಚ್ಚಾಗಿ ಹಾಲನ್ನು ಕೊಟ್ಟು, ಅದರಿಂದ ಅತ್ಯಂತ ಶ್ರೇಷ್ಠವಾದ ಯಜ್ಞವು ನೆರವೇರುವಂತೆ ಮಾಡಿರಿ. ದೇವತೆಗಳಿಗೆ ಕೊಡಬೇಕಾದ ಹಾಲು, ಮೊಸರು, ತುಪ್ಪ ಮೊದಲಾದ ಹವಿಸ್ಸುಗಳು ನಿಮ್ಮಿಂದಲೇ ಲಭಿಸಬೇಕಲ್ಲವೇ?

ಗೋವುಗಳೇ! ನೀವು ಹಿಂಸೆಗೆ ಅರ್ಹರಲ್ಲದವರು. ಆದುದರಿಂದ ನಿಮಗೆ 'ಅಘ್ನಿಯಾಃ' ಎಂದು ಹೆಸರು. ನೀವು ಮೊದಲು ಕರುಗಳಿಗೂ ಮನುಷ್ಯರಿಗೂ ಹಾಲನ್ನು

# ಪಯಸ್ವತೀಃ ಪ್ರಜಾವತೀರನಮೀವಾ ಅಯಕ್ಷ್ಮಾ ಮಾ ವಃ ಸ್ತೇನ ಈಶತ ಮಾಽಘಶಗ್‍ಂಸೋ ರುದ್ರಸ್ಯ ಹೇತಿಃ ಪರಿ ವೋ ವೃಣಕ್ತು

ಪಯಸ್ವತೀಃ । ಪ್ರಜಾವತೀರಿತಿ ಪ್ರಜಾ-ವತೀಃ । ಅನಮೀವಾಃ । ಅಯಕ್ಷ್ಮಾಃ । ಮಾ। ವಃ । ಸ್ತೇನಃ । ಈಶತ । ಮಾ । ಅಘಶಗ್‍ಂಸ ಇತ್ಯಘ-ಶಗ್‍ಂಸಃ । ರುದ್ರಸ್ಯ । ಹೇತಿಃ । ಪರೀತಿ । ವಃ । ವೃಣಕ್ತು ।

| ಮಂತ್ರ | ವಿನಿಯೋಗ |
|---|---|
| ೨) ಆಪ್ಯಾಯಧ್ವಂ.... ಅಘಶಗ್‍ಂಸಃ । | ಮೇಯಲು ಹೊರಟ ಹಸುಗಳಲ್ಲಿ ಒಂದನ್ನು ಪಲಾಶಶಾಖೆಯಿಂದ ಅಥವಾ ದರ್ಭೆಗಳಿಂದ ಸ್ಪರ್ಶಿಸುವುದಕ್ಕಾಗಿ. |
| ೩) ರುದ್ರಸ್ಯ... ವೃಣಕ್ತು । | ಮೇಯಲು ಹೊರಟ ಗೋವುಗಳ ಅನುಮಂತ್ರಣಕ್ಕಾಗಿ. [ಕರ್ಮವು ಮುಗಿದ ನಂತರ ಮಾಡುವ ಮಂತ್ರೋಚ್ಚಾರಣೆ]. |

ಪಯಸ್ವತೀಃ = ಹೆಚ್ಚಾಗಿ ಹಾಲುಳ್ಳ; ಪ್ರಜಾವತೀಃ = ಕರುಗಳುಳ್ಳ; ಅನಮೀವಾಃ = ಕ್ರಿಮಿದೋಷವಿಲ್ಲದ ಅಥವಾ ಉದರವ್ಯಾಧಿಯಿಲ್ಲದ; ಅಯಕ್ಷ್ಮಾಃ = ಬೇರೆಯ ರೋಗಗಳೂ ಇಲ್ಲದ; ವಃ = ನಿಮ್ಮನ್ನು; ಸ್ತೇನಃ = ಕಳ್ಳನು; ಮಾ ಈಶತ = ವಶಪಡಿಸಿಕೊಳ್ಳಲು ಸಮರ್ಥನಾಗದಿರಲಿ; ಅಘಶಗ್‍ಂಸಃ = ತಿನ್ನಲು ಇಚ್ಛಿಸುವ ಹುಲಿಯೇ ಮೊದಲಾದ ಪ್ರಾಣಿಯೂ; ಮಾ (ಈಶತ) = (ನಿಮ್ಮನ್ನು) ವಶಪಡಿಸಿಕೊಳ್ಳದಿರಲಿ. (ಎಲೈ! ಗೋವುಗಳೇ!) ರುದ್ರಸ್ಯ = ರುದ್ರದೇವನ; ಹೇತಿಃ = ಆಯುಧವೂ; ವಃ = ನಿಮ್ಮನ್ನು; ಪರಿವೃಣಕ್ತು = ಎಲ್ಲೆಲ್ಲಿಯೂ ತ್ಯಜಿಸಲಿ (ಹಿಂಸಿಸದಿರಲಿ);

ಕೊಟ್ಟು ಪುಷ್ಟಿಗೊಳಿಸಿದಿರಿ. ಈಗ ಚೆನ್ನಾಗಿ ಮೇದು ಇಂದ್ರನೇ ಮೊದಲಾದ ದೇವತೆಗಳಿಗೆ ಬೇಕಾದ ಮೊಸರು ಮೊದಲಾದವನ್ನು ಹೆಚ್ಚಾಗಿ ಕೊಡಿರಿ. ಬಲವುಳ್ಳ, ಪುಷ್ಟವಾಗಿರುವ, ಹೆಚ್ಚು ಹಾಲನ್ನು ಕೊಡುವ, ಹಲವು ಕರುಗಳುಳ್ಳ ರೋಗಗಳಿಲ್ಲದ ನಿಮ್ಮನ್ನು ಕಳ್ಳನು ಕದಿಯದಿರಲಿ. ಹುಲಿಯೇ ಮೊದಲಾದ ಕ್ರೂರಪ್ರಾಣಿಗಳು ಹಿಂಸಿಸದಿರಲಿ.

## ಧ್ರುವಾ ಅಸ್ಮಿನ್ಗೋಪತೌ ಸ್ಯಾತ ಬಹ್ವೀರ್ಯಜಮಾನಸ್ಯ ಪಶೂನ್ಪಾಹಿ ॥ ೧-1 ॥

[ಇಷೇ ತ್ರಿಚತ್ವಾರಿಗ್ಂಶತ್ ।]

---

ಧ್ರುವಾಃ । ಅಸ್ಮಿನ್ । ಗೋಪತಾವಿತಿ ಗೋ-ಪತೌ । ಸ್ಯಾತ । ಬಹ್ವೀಃ । ಯಜಮಾನಸ್ಯ। ಪಶೂನ್ । ಪಾಹಿ ॥ ೧ ॥

---

| ಮಂತ್ರ | ವಿನಿಯೋಗ |
|---|---|
| ಧ್ರುವಾ... ಬಹ್ವೀಃ । | ಅಧ್ವರ್ಯುವು ಯಜಮಾನನನ್ನು ನೋಡಲು ಎಂಬುದಾಗಿ ಬೌಧಾಯನರೂ, ಅಧ್ವರ್ಯುವು ಯಜಮಾನನ ಮನೆಗೆ ಹಿಂದಿರುಗಲು ಎಂದು ಆಪಸ್ತಂಬರೂ ಹೇಳುತ್ತಾರೆ. |
| ಯಜಮಾನಸ್ಯ.....ಪಾಹಿ । | ಪಲಾಶಶಾಖೆಯನ್ನು ಮೇಲಿಡುವುದಕ್ಕಾಗಿ. |

---

ಅಸ್ಮಿನ್ ಗೋಪತೌ = ಗೋಸ್ವಾಮಿಯಾದ್ಧ ಈ ಯಜಮಾನನಲ್ಲಿ; ಧ್ರುವಾಃ= ಸ್ಥಿರವಾಗಿಯೂ; ಬಹ್ವೀಃ = ಸಂತತಿಪರಂಪರೆಯಿಂದ ಅಧಿಕಸಂಖ್ಯೆಯುಳ್ಳವ ರಾಗಿಯೂ; ಸ್ಯಾತ = ಆಗಿರಿ. ∴ (ಎಲೈ! ಶಾಖೆಯೇ!) ಯಜಮಾನಸ್ಯ = ಯಾಗ ಮಾಡುವ ಈ ಯಜಮಾನನ; ಪಶೂನ್ = ಗೋವುಗಳನ್ನು; ಪಾಹಿ = ರಕ್ಷಿಸು.

---

ಎಲೈ! ಗೋವುಗಳೇ! ರುದ್ರದೇವನ ಕೋಪಕ್ಕೆ ಗುರಿಯಾಗದಿರಿ. ಆ ದೇವನ ಆಯುಧಗಳೂ ನಿಮ್ಮನ್ನು ಹಿಂಸಿಸದೆ ಬಿಟ್ಟು ಬಿಡಲಿ.

ಎಲೈ! ಗೋವುಗಳೇ! ನೀವು ಯಾವ ಕಾರಣದಿಂದಲೂ ವಿಯೋಗ ಹೊಂದದೆ ಈ ಯಜಮಾನನಲ್ಲಿ ಶಾಶ್ವತವಾಗಿ ನೆಲೆಸಿರಿ. ಕರುಗಳಿಂದ ತುಂಬಿದ ನಿಮ್ಮ ಸಂತತಿಯು ವೃದ್ಧಿಯಾಗಿ ಯಜಮಾನನ ಮನೆಯು ಹಸುಗಳಿಂದ ತುಂಬಿರಲಿ.

ಎಲೈ! ಪಲಾಶಶಾಖೆಯೇ! ನೀನು ಯಜಮಾನನ ಗೋವುಗಳನ್ನು ರಕ್ಷಿಸು. [ಈ ಮಂತ್ರವನ್ನು ಹೇಳುವುದರಿಂದ ಗೋವುಗಳ ರಕ್ಷಣೆಯಾಗುತ್ತದೆ.]

* * * * *

## ವಿನಿಯೋಗ ಸಂಗ್ರಹ

ಸಾಯಣಭಾಷ್ಯದಲ್ಲಿ ಪ್ರತಿಯೊಂದು ಅನುವಾಕವು ಮುಗಿದ ನಂತರ ಆಯಾ ಅನುವಾಕದಲ್ಲಿ ಬಂದಿರುವ ಮಂತ್ರಗಳ ಪ್ರತೀಕ(ಪ್ರಾರಂಭದ ಪದಗಳು)ದೊಡನೆ ಅವುಗಳ ವಿನಿಯೋಗವನ್ನು ಶ್ಲೋಕರೂಪದಲ್ಲಿ ಸಂಗ್ರಹಿಸಿ ನೀಡಲಾಗಿದೆ. ಪಾಠಕರ ಸೌಕರ್ಯಕ್ಕಾಗಿ ಆ ಶ್ಲೋಕಗಳನ್ನು ನೀಡಲಾಗುವುದು.

ಇಷೇ[1] ಶಾಖಾಂ ಛಿನತ್ತ್ಯೂರ್ಜೇ[2] ಮಾರ್ಷ್ಟಿ[3] ವಾಯೇತಿ ವತ್ಸಕಾನ್ ।
ಅಪಾಕೃತ್ಯಾಥ ದೇವೋ[4]ಗಾಃ ಪ್ರಸ್ಥಾಪ್ಯಾಪ್ಯೇ[5]ತಿ ಗಾಂ ಸ್ಪೃಶೇತ್ ॥
ರುದ್ರಸ್ಯೇ[6]ತ್ಯಭಿಮಂತ್ರ್ಯೈತಾಃ ಧ್ರುವೇ[7]ತಿ ಗೃಹಮಾವ್ರಜೇತ್ ।
ಯಜೇತಿ[8] ಶಾಖೋಪಗೂಹ ಇತ್ಯಷ್ಟಾವನುವಾಕಗಾಃ ॥

ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ—ಆಪಸ್ತಂಬ ಮತ —8
ಬೌಧಾಯನ ಮತ—5

## ಅನುವಾಕದ ವಿಶೇಷ ವಿಷಯಗಳು

ತೈತ್ತಿರೀಯಶಾಖೆಗೆ ಇನ್ನೊಬ್ಬ ಪ್ರಸಿದ್ಧರಾದ ಭಾಷ್ಯಕಾರರು ಭಟ್ಟಭಾಸ್ಕರ ಮಿಶ್ರರು. ಸಾಯಣಭಾಷ್ಯದಂತೆಯೇ ಅನೇಕ ವಿಶೇಷವಿಷಯಗಳು ಅದರಲ್ಲಿವೆ. ಅವುಗಳಲ್ಲಿ ಕೆಲವನ್ನು ಸಂಗ್ರಹಿಸಿ ನೀಡಲಾಗುವುದು.

### ಅ) ಭ.ಭಾ.ಭಾಷ್ಯ

೧. ತಮ್ಮ ಭಾಷ್ಯದಲ್ಲಿ ವ್ಯಾಖ್ಯಾನ ಮಾಡುವಾಗ ಮಂತ್ರಗಳ ವಿನಿಯೋಗ, ಆಗಮವಿಧಿ, ಛಂದಸ್ಸು, ಋಷಿ, ದೇವತೆ, ಕಾಂಡರ್ಷಿಗಳು, ನಿಗಮ, ನಿರುಕ್ತ, ಇತಿಹಾಸಾಖ್ಯಾಯಿಕಾ, ಬ್ರಾಹ್ಮಣ, ವಾಕ್ಯಾರ್ಥ, ಸ್ವರ, ರೂಪ, ವೃತ್ತಿ, ಮನನ ಮತ್ತು ನ್ಯಾಯಗಳೆಂಬ ಹದಿನಾರು ವಿಷಯಗಳನ್ನು ಅಳವಡಿಸಿರುವುದರಿಂದ ತಮ್ಮ ಭಾಷ್ಯಕ್ಕೆ 'ಸರ್ವಪಥೀನ' ಎಂದು ಮಿಶ್ರರು ಹೆಸರಿಸಿದ್ದಾರೆ.

೨. ವಾಯವಃ ಸ್ಥ । ಉಪಾಯವಃ ಸ್ಥ । ಇವು ಎರಡು ಮಂತ್ರಗಳೆಂಬ ಒಂದು ಮತವನ್ನು ಹೇಳಿದ್ದಾರೆ.

೩. ದೇವೋ ವಃ ಸವಿತಾ, ಆಪ್ಯಾಯಧ್ವಂ, ರುದ್ರಸ್ಯ ಹೇತಿಃ ಎಂದು ಮೂರು ಋಕ್ಕುಗಳೆಂದು ವಿಂಗಡಿಸಿ ಬೌಧಾಯನಮತದಂತೆ ಮೂರಕ್ಕೂ ಗೋಪ್ರಸ್ಥಾನ ದಲ್ಲಿಯೇ ವಿನಿಯೋಗವನ್ನು ಹೇಳಿರುತ್ತಾರೆ. ಆಪಸ್ತಂಬರ ಮತದಂತೆ ಮೂರು ಮಂತ್ರಗಳಾದರೂ ವಿನಿಯೋಗಗಳು ಬೇರೆ ಬೇರೆ. ಬೌಧಾಯನರ ಮತದಂತೆ ಒಂದೇ ಮಂತ್ರ.

## ಆ) ಛಂದಸ್ಸು

ಆಯಾ ಅನುವಾಕದಲ್ಲಿ ಬರುವ ಮಂತ್ರಗಳ ಛಂದಸ್ಸಿನ ಹೆಸರುಗಳನ್ನು ನೀಡಲಾಗುವುದು. ಕೆಲವೆಡೆ ಎರಡು ಭಾಷ್ಯಗಳಲ್ಲಿಯೂ ಇದು ನಿರ್ದಿಷ್ಟವಾಗಿದೆ.

| | ಮಂತ್ರ | ಅಕ್ಷರ ಸಂಖ್ಯೆ | ಛಂದಸ್ಸಿನ ಹೆಸರು |
|---|---|---|---|
| ೧) | ದೇವೋ ವಃ-ಕರ್ಮಣೇ । | ೧೮ | ದ್ವಿಪದಾ ವಿರಾಡ್ ಗಾಯತ್ರೀ |
| ೨) | ಆ ಪ್ಯಾಯಧ್ವಂ—ಶಗ್‍ಂಸಃ | ೧೧+೮+೧೧+೧೧=೪೧ [ಭವ=೧೧ ವಸು=೮ ರುದ್ರ =೧೧ ಈಶ = ೧೧] | ಮಧ್ಯೇಜ್ಯೋತಿಸ್ತ್ರಿಷ್ಟುಪ್ |
| ೩) | ರುದ್ರಸ್ಯ-ವೃಣಕ್ತು । | ೧೧ | ಏಕಪದಾ ತ್ರಿಷ್ಟುಪ್ |
| ೪) | ಧ್ರುವಾ-ಬಹ್ವೀಃ । | ೧೧ | ಏಕಪದಾ ತ್ರಿಷ್ಟುಪ್ |
| ೫) | ಯಜಮಾನಸ್ಯ-ಪಾಹಿ । | ೯ | ಏಕಪದಾ ಭುರಿಜ್ ಗಾಯತ್ರೀ |

ಏಕಪದಾ ಗಾಯತ್ರೀ ಛಂದಸ್ಸಿಗೆ ಒಂದು ಅಕ್ಷರವು ಹೆಚ್ಚು. ಆದುದರಿಂದ 'ಏಕಪದಾ ಭುರಿಜ್ ಗಾಯತ್ರೀ'. ಛಂದಸ್ಸಿಗೆ ಬೇಕಾಗುವ ಅಕ್ಷರಗಳಿಗೆ ಒಂದು ಕಡಿಮೆಯಾದರೆ 'ನಿಚೃತ್'. ಒಂದು ಹೆಚ್ಚಾದರೆ 'ಭುರಿಜ್' ಎನ್ನಿಸುವುದು.

೪. ಭಟ್ಟಭಾಸ್ಕರರು ಪ್ರಾಜಾಪತ್ಯ ಮುಂತಾದ ಕಾಂಡವಿಭಾಗವನ್ನೂ, ಪ್ರಜಾಪತಿ, ಸೋಮ, ಅಗ್ನಿ, ವಿಶ್ವೇದೇವರು, ಸ್ವಯಂಭೂ, ಅರುಣ, ಸಾಂಹಿತಿಗಳಾದ ಉಪನಿಷದರು, ಯಾಜ್ಞಿಕಿಗಳಾದ ಉಪನಿಷದರು ಮತ್ತು ವಾರುಣಿಗಳಾದ ಉಪನಿಷದರೆಂಬ ಕಾಂಡರ್ಷಿಗಳನ್ನೂ ತಿಳಿಸಿರುತ್ತಾರೆ.

೫. ಒಂದೇ ಮಹಾದೇವತೆಯು ಅಗ್ನಿ, ವಾಯು, ಸೂರ್ಯ ಎಂದು ವಿಭಾಗಿಸಲ್ಪಟ್ಟು, ಈ ದೇವತೆಗಳಿಗೆ ಕ್ರಮವಾಗಿ ಪೃಥಿವೀ, ಅಂತರಿಕ್ಷ ಮತ್ತು ದ್ಯುಲೋಕಗಳು ಸ್ಥಾನಗಳು. ಈ ದೇವತೆಗಳ ವಿಭೂತಿಗಳೇ ಇತರ ದೇವತೆಗಳು ಎಂಬ ನಿರುಕ್ತದ ಅಭಿಪ್ರಾಯವನ್ನೂ ತಿಳಿಸಿರುತ್ತಾರೆ.

೬. ಕಾಂಡಪಾಠ-ಸಾರಸ್ವತಪಾಠಗಳ ವಿಷಯವನ್ನೂ ತಿಳಿಸಿರುತ್ತಾರೆ.

೭. ಮೊದಲನೆಯ ಅನುವಾಕದ ಭಾಷ್ಯದ ಪೀಠಿಕೆಯ ಉಪಸಂಹಾರದಲ್ಲಿ ಮಿಶ್ರರು—

'ವಿನಿಯೋಗಸ್ಯ ಮಂತ್ರಾಣಾಂ ಭೇದಸ್ಯರ್ಗ್ಯಜುಷಸ್ಯ ಚ ।
ಪದಾರ್ಥಸ್ವರರೂಪಾಣಾಮಭಿವ್ಯಕ್ತ್ಯೈ ಚ ಯತ್ಯತೇ ॥

'ಮಂತ್ರಗಳ ವಿನಿಯೋಗವನ್ನೂ, ಋಕ್-ಯಜುಸ್ಸುಗಳ ಪ್ರತ್ಯೇಕತೆಯನ್ನೂ, ಪದಗಳ ಅರ್ಥ, ಪದಗಳ ಸ್ವರ ಮತ್ತು ಪದಗಳ ರೂಪವನ್ನೂ ಬಿಡಿಸಿ ತೋರಿಸಲು ಯತ್ನಿಸುವೆನು' ಎಂದು ಹೇಳಿರುತ್ತಾರೆ.

---

# ಸಾಯಣಭಾಷ್ಯ

ಮೊದಲನೆಯ ಅನುವಾಕದ ಭಾಷ್ಯದ ಪ್ರಾರಂಭದಲ್ಲಿ ಸಾಯಣಾಚಾರ್ಯರು ವಿಸ್ತಾರವಾಗಿ ವಿಷಯವನ್ನು ನಿರೂಪಿಸಿರುತ್ತಾರೆ. ಅದರಲ್ಲಿಯ ವಿಶೇಷವಿಷಯಗಳನ್ನು ಸಂಕ್ಷಿಪ್ತವಾಗಿ ತಿಳಿಸಲಾಗುವುದು.

## ೧. ವೇದವೆಂದರೇನು? ವೇದದ ಅರ್ಥಲೇಖನವು ಯುಕ್ತವೇ?

ಸಾಯಣರು 'ನನು ಕೋಽಯಂ ವೇದೋ ನಾಮ?' ಎಂದು ಪ್ರಶ್ನೆಯೊಡನೆ ತಮ್ಮ ಪೀಠಿಕೆಯನ್ನು ಪ್ರಾರಂಭಿಸಿ;

ಪ್ರತ್ಯಕ್ಷೇಣಾನುಮಿತ್ಯಾ ವಾ ಯಸ್ತೂಪಾಯೋ ನ ಬುಧ್ಯತೇ ।
ಏನಂ ವಿದಂತಿ ವೇದೇನ ತಸ್ಮಾದ್ವೇದಸ್ಯ ವೇದತಾ ॥

ಎಂದು ಹೇಳಿರುತ್ತಾರೆ. ಇಷ್ಟಪ್ರಾಪ್ತಿ, ಅನಿಷ್ಟಪರಿಹಾರಗಳಿಗೆ ಅಲೌಕಿಕ ಉಪಾಯವನ್ನು ತಿಳಿಸುವುದೇ ವೇದವಾಗಿದೆ. ಮಾನವನು ಅಪೇಕ್ಷಿಸುವ ನಾಲ್ಕು ಪುರುಷಾರ್ಥಗಳಾದ ಧರ್ಮ-ಅರ್ಥ-ಕಾಮ-ಮೋಕ್ಷಗಳಲ್ಲಿ ಅರ್ಥ-ಕಾಮಗಳನ್ನು ಪಡೆಯುವ ಉಪಾಯಗಳನ್ನು ಪ್ರತ್ಯಕ್ಷವೇ ಮುಂತಾದ ಪ್ರಮಾಣಗಳಿಂದ ತಿಳಿಯಬಹುದು. ಆದರೆ ಧರ್ಮ-ಮೋಕ್ಷಗಳನ್ನು ಪಡೆಯುವ ಉಪಾಯವನ್ನು ವೇದದಿಂದಲೇ ತಿಳಿಯಬೇಕಾಗಿದೆ. ಅಲ್ಲದೆ ಅರ್ಥ-ಕಾಮಗಳನ್ನು ಪಡೆಯುವ ಅಲೌಕಿಕ ಉಪಾಯಗಳನ್ನೂ ವೇದದಿಂದ ತಿಳಿಯಬಹುದಾಗಿದೆ. ಹೀಗೆ ತಿಳಿಸಿಕೊಡುವುದರಿಂದ 'ವೇದ' ಎನಿಸಿದೆ. 'ವೇದಯತಿ ಇತಿ ವೇದಃ'*

ಹೀಗೆ ವೇದದ ಲಕ್ಷಣವನ್ನು ತಿಳಿಸಿದ ನಂತರ ಸಾಯಣಾಚಾರ್ಯರು ವೇದಕ್ಕೆ ತಾವು ಭಾಷ್ಯ ಬರೆಯುತ್ತಿರುವುದು ಯುಕ್ತವಾಗಿದೆಯೆಂದು ತಿಳಿಸಿರುತ್ತಾರೆ. ಏಕೆಂದರೆ

---

* ಮೊದಲನೆಯ ಸಂಪುಟದಲ್ಲಿ ಈ ವಿಷಯವನ್ನು ವಿಸ್ತಾರವಾಗಿ ತಿಳಿಸಲಾಗಿದೆ.

ಯಾವುದೇ ಗ್ರಂಥಕ್ಕೆ ಲಕ್ಷಣ, ಅನುಬಂಧಚತುಷ್ಟಯ ಮತ್ತು ಪ್ರಾಮಾಣ್ಯವಿದ್ದರೆ ಅದನ್ನು ವ್ಯಾಖ್ಯಾನಿಸುವುದು ಉಚಿತವೆನಿಸುವುದು. ವೇದದ ಲಕ್ಷಣವನ್ನು 'ಅಲೌಕಿಕಮುಪಾಯಂ ವೇದಯತಿ ಇತಿ ವೇದಃ' ಎಂಬುದಾಗಿ ತಿಳಿಸಿದ್ದಾಯಿತು. ಅನುಬಂಧಚತುಷ್ಟಯವೆಂದರೆ ಗ್ರಂಥದ ವಿಷಯ, ಗ್ರಂಥದಿಂದ ಆಗುವ ಪ್ರಯೋಜನ, ಗ್ರಂಥಕ್ಕೂ ಅದನ್ನು ಅಧ್ಯಯನ ಮಾಡುವವನಿಗೂ ಇರುವ ಸಂಬಂಧ ಮತ್ತು ಗ್ರಂಥಕ್ಕೆ ಯಾರು ಅಧಿಕಾರಿ? ಎಂಬುದು. ವೇದಕ್ಕೆ ಈ ನಾಲ್ಕೂ ಅಂಶಗಳು ಇವೆ. ಮಾನವನ ಅಭ್ಯುದಯ ನಿಃಶ್ರೇಯಸಗಳಿಗೆ ಸಾಧನವಾದ ಉಪಾಯವೇ ವೇದದ 'ವಿಷಯ'. ಆ ಉಪಾಯವನ್ನು ಅರಿಯುವುದೇ ವೇದದಿಂದ ಆಗುವ 'ಪ್ರಯೋಜನ'. ವೇದಕ್ಕೂ ಅಧ್ಯಯನ ಮಾಡುವವನಿಗೂ ಉಪಕಾರ್ಯೋಪಕಾರಕ 'ಸಂಬಂಧ'. ವೇದವು ಈ ಉಪಾಯವನ್ನು ತಿಳಿಸುವುದರಿಂದ ಉಪಕಾರಕ. ಉಪಕಾರವನ್ನು ಹೊಂದುವುದರಿಂದ ಅಧ್ಯಯನ ಮಾಡುವವನು ಉಪಕಾರ್ಯನೆನಿಸುವನು. ವೇದಕ್ಕೆ ಉಪನೀತನಾದವನು 'ಅಧಿಕಾರಿ'ಯಾಗುತ್ತಾನೆ. ವೇದಾಧ್ಯಯನ ಮಾಡಿದವನು ವೇದಾರ್ಥಜ್ಞಾನಕ್ಕೂ ಅಧಿಕಾರಿಯಾಗುವನು. ಈ ರೀತಿ ವೇದಕ್ಕೆ ಅನುಬಂಧಚತುಷ್ಟಯವಿದೆ.

ವೇದಕ್ಕೆ ಈ ರೀತಿ ಲಕ್ಷಣ, ಅನುಬಂಧಚತುಷ್ಟಯ ಮಾತ್ರವಲ್ಲದೆ ಪ್ರಾಮಾಣ್ಯವೂ ಉಂಟು. ವೇದವು ಅಪೌರುಷೇಯವಾದುದು. ಆದುದರಿಂದ ಪುರುಷನಿಗೆ ಸಂಭವಿಸುವ ಭ್ರಮೆ, ಪ್ರಮಾದ ಮುಂತಾದವುಗಳ ಸಂಬಂಧವು ವೇದಕ್ಕೆ ಇಲ್ಲ. ಜ್ಞಾನಕ್ಕೆ ಸ್ವತಃ ಪ್ರಾಮಾಣ್ಯವಿರುವುದರಿಂದಲೂ, ಅಪ್ರಾಮಾಣ್ಯಕ್ಕೆ ಕಾರಣವಿಲ್ಲ ದಿರುವುದರಿಂದಲೂ ವೇದವು ಧರ್ಮವೇ ಮೊದಲಾದ ವಿಷಯದಲ್ಲಿ ಪ್ರಮಾಣವಾಗಿದೆ. ವೇದವು ಅಪೌರುಷೇಯವಲ್ಲದೆ ಅದು ಪರಮೇಶ್ವರನಿಂದ ನಿರ್ಮಿತವೆಂದು ವಿಚಾರ ಮಾಡಿದರೂ ಪರಮೇಶ್ವರನು ಸರ್ವಜ್ಞನಾದುದರಿಂದ್ದ ವೇದಕ್ಕೆ ಭ್ರಮೆ-ಪ್ರಮಾದ ಮುಂತಾದವುಗಳ ಸಂಬಂಧವಿರುವುದಿಲ್ಲ.

ಹೀಗೆ ವೇದವು ಲಕ್ಷಣ, ಅನುಬಂಧಚತುಷ್ಟಯ ಮತ್ತು ಪ್ರಾಮಾಣ್ಯವನ್ನು ಹೊಂದಿರುವುದರಿಂದ ಇಂತಹ ವೇದಕ್ಕೆ ಅರ್ಥವನ್ನು ವಿವರಿಸುವ ಭಾಷ್ಯಲೇಖನವು ಯುಕ್ತವಾಗಿಯೇ ಇದೆ. ಆದುದರಿಂದ ತಾವು ಭಾಷ್ಯವನ್ನು ರಚಿಸುತ್ತಿರುವುದಾಗಿ ಸಾಯಣಾಚಾರ್ಯರು ತಿಳಿಸಿರುತ್ತಾರೆ.

ವೇದಕ್ಕೆ ಹೀಗೆ ವ್ಯಾಖ್ಯಾನವನ್ನು ಬರೆಯಬೇಕಾದುದು ಸರಿಯಾದದ್ದಾದರೂ 'ಸ್ವಾಧ್ಯಾಯೋಽಧ್ಯೇತವ್ಯಃ ।' ಎಂಬ ಶ್ರುತಿವಾಕ್ಯವು ವೇದವನ್ನು ಅಧ್ಯಯನ ಮಾಡಬೇಕೆಂದಷ್ಟೇ ತಿಳಿಸುವುದು. ಅಧ್ಯಯನವೆಂದರೆ ಪಾಠ ಮಾಡುವುದಷ್ಟೇ ಎಂದು (ಹೇಳುವುದು) ಅರ್ಥ. ಆದುದರಿಂದ ಅರ್ಥವನ್ನು ಅರಿಯಬೇಕೆಂಬುದು ವೇದದಲ್ಲಿಯೇ

ಹೇಳಲ್ಪಟ್ಟಿಲ್ಲವಾದುದರಿಂದ ಅರ್ಥವನ್ನು ಅರಿಯುವ ಸಲುವಾಗಿ ಈ ಭಾಷ್ಯರಚನೆಯು ಪ್ರಸಕ್ತವೇ ಅಲ್ಲವೆಂದು ಇನ್ನೊಂದು ಸಂದೇಹವನ್ನು ಸಾಯಣಾಚಾರ್ಯರು ತೋರಿಸಿದ್ದಾರೆ.

## ೨. ವೇದದ ಅರ್ಥಜ್ಞಾನವು ಆವಶ್ಯಕವೇ? ಅರ್ಥಜ್ಞಾನಕ್ಕೆ ಪ್ರತ್ಯೇಕ ಪ್ರಯೋಜನವಿದೆಯೇ?

ಹಿಂದಿನ ಸಂಶಯವನ್ನು ಪರಿಹರಿಸುತ್ತಾ ಸಾಯಣರು ವೇದದ ಅರ್ಥವನ್ನು ತಿಳಿಯುವುದು ಆವಶ್ಯಕವೆಂದು ಪ್ರತಿಪಾದಿಸಿದ್ದಾರೆ. 'ಸ್ವಾಧ್ಯಾಯೋಽಧ್ಯೇತವ್ಯಃ' ಎಂಬ ವಾಕ್ಯದಿಂದ ಶ್ರುತಿಯು ಅರ್ಥಜ್ಞಾನವನ್ನು ಪಡೆದುಕೊಳ್ಳುವವರೆಗಿನ ಅಧ್ಯಯನವನ್ನೇ ವಿಧಿಸುತ್ತಾ ಇದೆಯೆಂದು ಮೀಮಾಂಸಕರು ನಿರೂಪಿಸಿರುತ್ತಾರೆ. ಶ್ರುತಿವಾಕ್ಯವು ವೇದದ ಅಧ್ಯಯನವನ್ನು ಮಾಡಬೇಕೆಂದು ವಿಧಿಸುತ್ತದೆ. ವೇದವೆಂದರೆ ಶಬ್ದಸಮೂಹ. ಈ ಶಬ್ದಸಮೂಹವನ್ನು ತಿಳಿಯುವುದರಿಂದ ಪುಣ್ಯವು ಉಂಟಾಗುತ್ತದೆಯೆಂಬುದು ನಮಗೆ ಪ್ರತ್ಯಕ್ಷವಾಗಿ ತೋರದ (ಅದೃಷ್ಟ) ಫಲ. ವೇದದ ಅರ್ಥವನ್ನು ತಿಳಿಯುವುದೇ ಆ ಶಬ್ದಸಮೂಹವನ್ನು ಅರಿಯುವುದರ ದೃಷ್ಟಫಲ (ಕಾಣುವ ಫಲ). ಆ ಅರ್ಥಜ್ಞಾನಕ್ಕೆ ಏನಾದರೂ ಪ್ರಯೋಜನವಿರಲೇಬೇಕು. ಏಕೆಂದರೆ ಪ್ರಯೋಜನವಿಲ್ಲದಿದ್ದರೆ ಅಂತಹ ವಿಷಯದಲ್ಲಿ ಮಾನವನು ಪ್ರವರ್ತಿಸಲಾರ. ಈ ಸಂಗತಿಯನ್ನು ಗಮನಿಸಿದಾಗ ಮೇಲಿನ ಶ್ರುತಿವಾಕ್ಯದ 'ಅಧ್ಯೇತವ್ಯಃ' ಎಂಬ ಅಂಶವು ಪ್ರಯೋಜನವನ್ನು ಹೊಂದಿರುವ ಅರ್ಥಜ್ಞಾನದಿಂದೊಡಗೂಡಿದ ಅಧ್ಯಯನವನ್ನೇ ವಿಧಿಸುತ್ತದೆ ಎಂಬ ನಿಷ್ಕರ್ಷೆ ಮೀಮಾಂಸಕರದು. ಅಲ್ಲದೆ ನಿರುಕ್ತಕಾರರಾದ ಯಾಸ್ಕಾಚಾರ್ಯರು—

'ಯೋಽರ್ಥಜ್ಞ ಇತ್ಸಕಲಂ ಭದ್ರಮಶ್ನುತೇ ನಾಕಮೇತಿ ಜ್ಞಾನವಿಧೂತಪಾಪ್ಮಾ'

—ನಿರುಕ್ತ ೧-೧೮

ಎಂಬ ಮಾತು ವೇದದ ಅರ್ಥವನ್ನು ಬಲ್ಲವನು ಸಕಲಮಂಗಳವನ್ನು ಪಡೆದು ಜ್ಞಾನದಿಂದ ಪಾಪವನ್ನು ದೂರ ಮಾಡಿಕೊಂಡು ಸ್ವರ್ಗವನ್ನು ಪಡೆಯುವನು ಎಂದು ತಿಳಿಸುತ್ತಾರೆ. ಈ ಮಾತುಗಳನ್ನು ನೋಡಿದಾಗ ಅರ್ಥಜ್ಞಾನದ ಆವಶ್ಯಕತೆಯು ಇದ್ದೇ ಇದೆ ಎಂದು ತಿಳಿಯುವುದು.

'ಸ್ವಾಧ್ಯಾಯೋಽಧ್ಯೇತವ್ಯಃ' ಎಂಬ ವಿಧಿವಾಕ್ಯವು ಅರ್ಥಜ್ಞಾನಸಹಿತವಾದ ವೇದಾಧ್ಯಯನವನ್ನೇ ವಿಧಿಸುತ್ತದೆ ಎಂಬ ಅಭಿಪ್ರಾಯದ ಬಗ್ಗೆ ಮತ್ತೊಂದು ಆಕ್ಷೇಪವನ್ನು ಭಾಷ್ಯಕಾರರು ಎತ್ತಿರುತ್ತಾರೆ. 'ಬ್ರಾಹ್ಮಣೇನ ನಿಷ್ಕಾರಣೋ ಧರ್ಮಃ ಷಡಂಗೋ ವೇದೋಽಧ್ಯೇಯೋ ಜ್ಞೇಯಶ್ಚ' ಎಂಬ ಶ್ರುತಿವಚನವು 'ಅಧ್ಯೇಯಃ'

'ಜ್ಞೇಯಃ' ಎಂದು ಎರಡಾಗಿ ಹೇಳಿರುವುದರಿಂದ ಪಾಠ ಮಾಡುವುದಷ್ಟೇ (ಹೇಳುವುದು) 'ಅಧ್ಯೇಯಃ' ಎಂಬುದರ ಅರ್ಥವಲ್ಲವೇ? ಆದ್ದರಿಂದ 'ಸ್ವಾಧ್ಯಾಯೋऽಧ್ಯೇತವ್ಯಃ' ಎಂಬಲ್ಲಿಯೂ ಪಾಠ ಮಾತ್ರವೇ ಅರ್ಥವಾಗುವುದು.

'ಸ್ವಾಧ್ಯಾಯೋऽಧ್ಯೇತವ್ಯಃ' ಎಂಬಲ್ಲಿ ಅಧ್ಯಯನವೆಂದರೆ ಅರ್ಥಜ್ಞಾನದಿಂದ ಒಡಗೂಡಿದ ಅಧ್ಯಯನವೇ. 'ಬ್ರಾಹ್ಮಣೇನ ನಿಷ್ಕಾರಣಃ....' 'ಯೋऽಶ್ವಮೇಧೇನ ಯಜತೇ । ಯ ಉ ಚೈನಮೇವಂ ವೇದ' (ಯಾರು ಅಶ್ವಮೇಧಯಾಗವನ್ನು ಮಾಡುವರೋ, ಯಾರು ಅಶ್ವಮೇಧಯಾಗ ವನ್ನು ತಿಳಿಯುತ್ತಾರೆಯೋ ಅವರು ಬ್ರಹ್ಮಹತ್ಯೆಯಿಂದ ಉಂಟಾದ ಪಾಪವನ್ನು ಕಳೆದುಕೊಳ್ಳುತ್ತಾರೆ.) ಮುಂತಾದ ವಾಕ್ಯಗಳಿಂದಲೂ 'ಯಂ ಯಂ ಕ್ರತುಮಧೀತೇ ತೇನ ತೇನಾಸ್ಯೇಷ್ಟಂ ಭವತಿ' (ಯಾವ ಯಜ್ಞಭಾಗವನ್ನು ಅಧ್ಯಯನ ಮಾಡುತ್ತಾನೆಯೋ ಆ ಯಜ್ಞವನ್ನು ಅನುಷ್ಠಿಸಿದಂತೆಯೇ) ಎಂಬ ವಾಕ್ಯವಿರುವುದರಿಂದಲೂ—ಈ ಆಕ್ಷೇಪವನ್ನು ನಿವಾರಿಸಿ ಅಧ್ಯಯನಕ್ಕೂ ಮತ್ತು ಅರ್ಥಜ್ಞಾನಕ್ಕೂ ಬೇರೆ ಬೇರೆ ಫಲಗಳಿವೆ ಎಂದು ನಿರ್ಣಯಿಸಬೇಕಾಗುತ್ತದೆ.

ಹೀಗೆ ಅಧ್ಯಯನಕ್ಕೂ ಅರ್ಥಜ್ಞಾನಕ್ಕೂ ಬೇರೆ ಬೇರೆ ಫಲಗಳಿವೆ ಎಂಬುದು ಸಿದ್ಧವಾಗುವುದಾದರೆ, ಮತ್ತು ಯಜ್ಞವನ್ನು ಅನುಷ್ಠಿಸಿದ ಫಲವು ಆ ಯಜ್ಞದ ಭಾಗವನ್ನು ಅಧ್ಯಯನ ಮಾಡುವುದರಿಂದಲೇ ದೊರೆಯುವುದಾದರೆ, ಅಲ್ಪಶ್ರಮದಿಂದ ಸಾಧ್ಯವಾಗುವ ಯಜ್ಞಗಳ ಬಗೆಗಿನ ಅಧ್ಯಯನ ಮತ್ತು ಅವುಗಳ ಅರ್ಥವನ್ನು ತಿಳಿಯುವುದೇ ಯುಕ್ತವೆನಿಸಿ ಯಜ್ಞಗಳ ಅನುಷ್ಠಾನವೇ ವ್ಯರ್ಥವೆನಿಸುವುದಿಲ್ಲವೇ ಎಂಬ ಸಂಶಯವನ್ನು ಸಾಯಣರು ವ್ಯಕ್ತಪಡಿಸಿ ಹೀಗೆ ಸಮಾಧಾನವನ್ನು ಹೇಳಿರುತ್ತಾರೆ. ಅಶ್ವಮೇಧಯಾಗವನ್ನು ಅನುಷ್ಠಿಸುವುದರಿಂದ ಉಂಟಾಗುವ ಪಾಪನಿವೃತ್ತಿಗೂ ಅಶ್ವಮೇಧಯಾಗವನ್ನು ತಿಳಿಯುವುದರಿಂದ ಉಂಟಾಗುವ ಪಾಪನಿವೃತ್ತಿಗೂ ವ್ಯತ್ಯಾಸವಿದೆಯೆನ್ನುತ್ತಾರೆ.

ಹೇಗೆ ಅಗ್ನಿಹೋತ್ರ, ದರ್ಶ-ಪೂರ್ಣಮಾಸೇಷ್ಟಿ, ಅಗ್ನಿಷ್ಟೋಮಯಾಗ ಇವೆಲ್ಲವೂ ಸ್ವರ್ಗವನ್ನು ಪಡೆಯಲು ಕಾರಣವಾಗುವುವಾದರೂ ಆಯಾ ಕರ್ಮಗಳಿಂದ ಪಡೆಯುವ ಸ್ವರ್ಗದಲ್ಲಿ ತಾರತಮ್ಯವಿರುತ್ತದೆಯೋ, ಹಾಗೆಯೇ ಯಜ್ಞವನ್ನು ಅನುಷ್ಠಿಸುವುದರಿಂದ ಉಂಟಾಗುವ ಫಲಕ್ಕೂ, ಯಜ್ಞದ ಬಗ್ಗೆ ತಿಳಿಯುವುದರಿಂದ ಉಂಟಾಗುವ ಫಲಕ್ಕೂ ಭೇದವಿದೆ. ಆದುದರಿಂದ ಈ ಯಜ್ಞಾನುಷ್ಠಾನವೇ ವ್ಯರ್ಥವಲ್ಲ. ಫಲಭೇದವಿರುವುದರಿಂದ ಎರಡರಲ್ಲಿಯೂ ಪ್ರವೃತ್ತಿಯು ಉಂಟಾಗುವುದು.

ಹೀಗಾಗಿ ವೇದದ ಅಧ್ಯಯನಕ್ಕೂ, ಅರ್ಥಜ್ಞಾನಕ್ಕೂ ಪ್ರತ್ಯೇಕ ಫಲವುಂಟೆಂದು ಶ್ರೀ ಸಾಯಣಾಚಾರ್ಯರು ನಿರ್ಣಯಿಸಿದ್ದಾರೆ. ನಂತರ ಮುಂದುವರೆದು ವೇದದ

ವಿಷಯವಾದ ಇಷ್ಟಪ್ರಾಪ್ತಿ-ಅನಿಷ್ಟಪರಿಹಾರಗಳ ಉಪಾಯವನ್ನು ವಿಶದಪಡಿಸಿದ್ದಾರೆ. ಈ ಉಪಾಯಗಳು ಎರಡು ಕಾಂಡಗಳಲ್ಲಿ ಪ್ರತಿಪಾದಿಸಲ್ಪಟ್ಟಿವೆ.

### ೩. ಕರ್ಮಕಾಂಡ-ಜ್ಞಾನಕಾಂಡ

ವೇದದ ಕರ್ಮಕಾಂಡದಲ್ಲಿ ನಿತ್ಯ, ನೈಮಿತ್ತಿಕ, ಕಾಮ್ಯ ಮತ್ತು ನಿಷಿದ್ಧ ಎಂಬ ನಾಲ್ಕು ಬಗೆಯ ಕರ್ಮಗಳನ್ನು ಹೇಳಲಾಗಿದೆ.

1) ಬದುಕಿರುವವರೆಗೂ ಮಾಡಬೇಕೆಂದು ವೇದವು ವಿಧಿಸಿರುವ ಅಗ್ನಿಹೋತ್ರ ದರ್ಶ-ಪೂರ್ಣಮಾಸಾದಿ ನಿತ್ಯಕರ್ಮಗಳು.

2) ಮನೆಯು ಸುಟ್ಟು ಹೋದಾಗ (ಇನ್ನೊಮ್ಮೆ ಹಾಗಾಗದಿರಲೆಂದು) ಮಾಡಬೇಕೆಂದು ವಿಧಿಸಿರುವ 'ಕ್ಷಾಮವತೀಷ್ಟಿ' ಮುಂತಾದವು ನೈಮಿತ್ತಿಕ ಕರ್ಮಗಳು.

3) ಪಶುಗಳನ್ನು ಹೊಂದಬೇಕೆಂದು ಬಯಸುವವನು 'ಚಿತ್ರಾ' ಎಂಬ ಇಷ್ಟಿಯನ್ನು ಮಾಡಬೇಕೆಂದು ವಿಧಿಸಿರುವ 'ಚಿತ್ರೇಷ್ಟಿ' ಮುಂತಾದವುಗಳು ಕಾಮ್ಯಕರ್ಮಗಳು. 'ಚಿತ್ರಯಾ ಯಜೇತ ಪಶುಕಾಮಃ' ।

4) ಬಹಿಷ್ಠೆಯಾದ ಸ್ತ್ರೀಯೊಡನೆ ಮಾತನಾಡಬಾರದು ಎಂಬುದಾಗಿ ಹೇಳುವ 'ತಸ್ಮಾನ್ಮಲವದ್ವಾಸಸಾ ನ ಸಂವದೇತ' ಎಂಬ ವಚನಗಳಿಂದ ಹೇಳುವ ಕರ್ಮಗಳು ನಿಷಿದ್ಧಕರ್ಮಗಳು.

ಈ ಕರ್ಮಗಳ ಪೈಕಿ ನಿತ್ಯ-ನೈಮಿತ್ತಿಕಕರ್ಮಗಳಿಂದ ಪ್ರತ್ಯವಾಯವು ದೂರವಾಗುವುದು. ಅಲ್ಲದೆ ಚಿತ್ತನೈರ್ಮಲ್ಯವು ಉಂಟಾಗಿ ಬ್ರಹ್ಮಜ್ಞಾನವನ್ನು ಪಡೆಯಬೇಕೆಂಬ ಇಚ್ಛೆ (ವಿವಿದಿಷಾ)ಯು ಉಂಟಾಗುವುದರ ಮೂಲಕ ಮೋಕ್ಷಕ್ಕೆ ಮಾರ್ಗವಾಗುವುದು. ಅಲ್ಲದೆ ನಿತ್ಯ-ನೈಮಿತ್ತಿಕಕರ್ಮಗಳಿಗೆ ಸ್ವರ್ಗಾದಿಫಲವೂ ಇದೆ.

ಕಾಮ್ಯಕರ್ಮಗಳಿಗಂತೂ ಶ್ರುತಿಯಲ್ಲಿಯೇ ವಿಧಿವಾಕ್ಯದಲ್ಲಿಯೇ ಫಲದ ಉಲ್ಲೇಖವಿರುತ್ತದೆ.

ನಿಷಿದ್ಧಕರ್ಮಗಳನ್ನು ಬಿಡುವುದರಿಂದ ನರಕಪ್ರಾಪ್ತಿಯೆಂಬ ಅನಿಷ್ಟವು ದೂರವಾಗುತ್ತದೆ. ಹೀಗೆ ಕರ್ಮಕಾಂಡದಲ್ಲಿ ಇಷ್ಟಪ್ರಾಪ್ತಿ-ಅನಿಷ್ಟಪರಿಹಾರಗಳು ನಿರೂಪಿತವಾಗಿವೆ.

ವೇದದ ಎರಡನೆಯ ಕಾಂಡವಾದ ಜ್ಞಾನಕಾಂಡದಲ್ಲಿ ಮಾನವನ ಪರಮ ಪುರುಷಾರ್ಥವಾದ ಮೋಕ್ಷಕ್ಕೆ ಬೇಕಾದ ಆತ್ಮನ ಸ್ವರೂಪ, ಸಾಧನಮಾರ್ಗ ಮುಂತಾದವು ನಿರೂಪಿಸಲ್ಪಟ್ಟಿವೆ.

ಮುಕ್ತಿಯಲ್ಲಿ ಎರಡು ರೀತಿಯನ್ನು ನಿರೂಪಿಸುತ್ತಾರೆ:

**1) ಸದ್ಯೋಮುಕ್ತಿ** **2) ಕ್ರಮಮುಕ್ತಿ.**

ಸಾಧಕನ ತೀವ್ರವಾದ ಸಾಧನೆಯ ಫಲವಾಗಿ ಸ್ಥೂಲವಾದ ಭೌತಿಕದೇಹವು ಬಿದ್ದೊಡನೆಯೇ ಇಲ್ಲಿಯೇ ಮೋಕ್ಷಗೊಳ್ಳುವುದನ್ನು 'ಸದ್ಯೋಮುಕ್ತಿ' ಎನ್ನುತ್ತಾರೆ. ಸ್ಥೂಲವಾದ ಭೌತಿಕದೇಹವು ಕಳಚಿದ ನಂತರ ಸೂಕ್ಷ್ಮಶರೀರವು ಪುಣ್ಯಪ್ರಕರ್ಷದಿಂದ ಬ್ರಹ್ಮಲೋಕವನ್ನು ಸೇರಿ, ಅಲ್ಲಿ ಭೋಗವನ್ನು ಅನುಭವಿಸಿ, ನಂತರ ಜ್ಞಾನದಿಂದ ಬ್ರಹ್ಮಲೋಕವು ಕೊನೆಗೊಳ್ಳುವ ಸಮಯದಲ್ಲಿ ದೊರೆಯುವ ಮುಕ್ತಿಯು 'ಕ್ರಮಮುಕ್ತಿ' ಎನಿಸಿಕೊಳ್ಳುವುದು.



ಜ್ಞಾನಕಾಂಡದಲ್ಲಿ ಬ್ರಹ್ಮೋಪಾಸ್ತಿ (ಬ್ರಹ್ಮವಸ್ತುವಿನ ಮತ್ತು ಆದರ ಪ್ರತೀಕದ ಉಪಾಸನೆ)ಯೂ, ಬ್ರಹ್ಮೋಪದೇಶವೂ ಹೇಳಲ್ಪಟ್ಟಿದೆ. ಬ್ರಹ್ಮವಸ್ತುವಿನ ಉಪಾಸನೆಯು ಕ್ರಮಮುಕ್ತಿಯನ್ನು ಉಂಟುಮಾಡುವುದಾದರೆ, ಆದರ ಪ್ರತೀಕದ ಉಪಾಸನೆಯು ಸಾಂಸಾರಿಕ ಉತ್ತಮಫಲಗಳನ್ನು ನೀಡುವುದು. ಬ್ರಹ್ಮೋಪದೇಶವಾದರೋ ಸದ್ಯೋಮುಕ್ತಿಯನ್ನು ಪಡೆಯಲು ಮಾರ್ಗವಾಗಿದೆ.

ಈ ರೀತಿ ವೇದಕ್ಕೆ ಅಕ್ಷುಣ್ಣ ಪ್ರಾಮಾಣ್ಯ, ಅನುಬಂಧಚತುಷ್ಟಯ ಇರುವುದರಿಂದಲೂ, ವೇದದ ಅರ್ಥವನ್ನು ತಿಳಿಯುವುದರಿಂದ ಪಾಠವನ್ನು ಹೇಳುವುದಕ್ಕಿಂತಲೂ ಬೇರೆ ಪ್ರಯೋಜನವಿರುವುದರಿಂದಲೂ, ಇಷ್ಟಪ್ರಾಪ್ತಿ-ಅನಿಷ್ಟಪರಿಹಾರಗಳನ್ನು ತಿಳಿಯಲು ಅರ್ಥಜ್ಞಾನವು ಸಾಧನವಾಗುವುದರಿಂದಲೂ ವೇದಭಾಷ್ಯವನ್ನು ತಾವು ರಚಿಸುತ್ತಿರುವುದು ಯುಕ್ತವಾಗಿದೆಯೆಂದು ಶ್ರೀ ಸಾಯಣಾಚಾರ್ಯರು ಪ್ರತಿಪಾದಿಸಿದ್ದಾರೆ.

### ೪. ದರ್ಶ-ಪೂರ್ಣಮಾಸೇಷ್ಟಿಗಳನ್ನು ಮೊದಲು ಏಕೆ ನಿರೂಪಿಸಲಾಗಿದೆ?

ಈ ತೈತ್ತಿರೀಯಶಾಖೆಯಲ್ಲಿ ನಿರೂಪಿಸಬೇಕಾಗಿರುವ ಅನೇಕ ಯಾಗಗಳಿದ್ದರೂ ಶ್ರುತಿಯಲ್ಲಿ ದರ್ಶ-ಪೂರ್ಣಮಾಸಗಳನ್ನೇ ಮೊದಲು ಏಕೆ ಹೇಳಲಾಗಿದೆಯೆಂಬುದನ್ನು ಸಾಯಣರು ಚೆನ್ನಾಗಿ ತಿಳಿಸಿಕೊಟ್ಟಿರುತ್ತಾರೆ.

ದರ್ಶ-ಪೂರ್ಣಮಾಸೇಷ್ಟಿಗಳು ಪ್ರಕೃತಿಗಳಾದುದರಿಂದಲೂ, ಇವುಗಳಿಗೆ

ಮತ್ತೊಂದು ಕರ್ಮದ ಅಪೇಕ್ಷೆಯಿಲ್ಲದುದರಿಂದಲೂ ಪ್ರಾರಂಭದಲ್ಲಿ ಇವುಗಳನ್ನು ತಿಳಿಸಲಾಗಿದೆ.*

ಅಗ್ನಿಹೋತ್ರವು ಪ್ರಕೃತಿ. ದರ್ಶ-ಪೂರ್ಣಮಾಸಗಳೂ ಪ್ರಕೃತಿಗಳು. ಸೋಮ ಯಾಗವೂ ಪ್ರಕೃತಿಯೇ. ಹೀಗಿರುವಾಗ ದರ್ಶ-ಪೂರ್ಣಮಾಸಗಳಿಗೇಕೆ ಪ್ರಾಥಮ್ಯ? ಎಂದು ಶಂಕಿಸಿ, ಸೋಮಯಾಗದಲ್ಲಿ ಪ್ರಧಾನಯಾಗವು ಇತರ ಕರ್ಮಗಳನ್ನು ಅಪೇಕ್ಷಿಸುವುದಿಲ್ಲವಾದರೂ, ಸೋಮಯಾಗವನ್ನನುಷ್ಠಿಸುವ ಮೊದಲು ಮಾಡುವ ದೀಕ್ಷಣೀಯೇಷ್ಟಿ, ಪ್ರಾಯಣೀಯೇಷ್ಟಿ[೧] ಮುಂತಾದ ಇಷ್ಟಿಗಳಿಗೆ ದರ್ಶ-ಪೂರ್ಣಮಾಸದ ವಿಧಿಗಳ ಅಪೇಕ್ಷೆ ಇರುವುದರಿಂದ ಸೋಮಯಾಗವು ಅನ್ಯನಿರಪೇಕ್ಷವಲ್ಲ. ಹಾಗೆ ನೋಡಿದರೆ ಅಗ್ನಿಹೋತ್ರಕ್ಕೆ ಬೇರೆ ಯಾವುದರ ಅಪೇಕ್ಷೆಯೂ ಇಲ್ಲದೆ, ವೇದದಲ್ಲಿ ಅದರ ಸ್ವರೂಪವೂ, ಅಂಗಗಳೆಲ್ಲವೂ, ಸಂಪೂರ್ಣ ಉಪದೇಶಿಸಲ್ಪಟ್ಟಿರುವುದರಿಂದ ಅದು ಅನ್ಯನಿರಪೇಕ್ಷವೇ. ಅದನ್ನೇ ಪ್ರಾರಂಭದಲ್ಲಿ ಶ್ರುತಿಯಲ್ಲಿ ತಿಳಿಸಬೇಕಾಗಿತ್ತು. ಆದರೆ ಅಗ್ನಿಹೋತ್ರವನ್ನು ಅನುಷ್ಠಿಸಲು ಅಗ್ನಿಯು ಸಿದ್ಧವಾಗಿರಬೇಕಷ್ಟೆ. ಆಹವನೀಯ ಮುಂತಾದ ಈ ಅಗ್ನಿಗಳು ಸಿದ್ಧವಾಗಲು ಪವಮಾನೇಷ್ಟಿಯನ್ನು ಅನುಷ್ಠಿಸಬೇಕಾಗುತ್ತದೆ.[೨] ಪವಮಾನೇಷ್ಟಿಯು ದರ್ಶ-ಪೂರ್ಣಮಾಸೇಷ್ಟಿಗಳ ವಿಕೃತಿಯೇ. ಹೀಗೆ ಅಗ್ನಿಹೋತ್ರವೂ ಸಹ ದರ್ಶ-ಮಾಸೇಷ್ಟಿಗಳ ವಿಧಿಯನ್ನು ಅಪೇಕ್ಷಿಸುತ್ತದೆ. ಆದುದರಿಂದ ಅಗ್ನಿಹೋತ್ರವನ್ನು ಪ್ರಾರಂಭದಲ್ಲಿ ಶ್ರುತಿಯು ತಿಳಿಸುತ್ತಿಲ್ಲ. ದರ್ಶ-ಪೂರ್ಣಮಾಸಗಳನ್ನು ಅನುಷ್ಠಿಸಲು ಅಗ್ನಿಯ ಆಧಾನವು ಅವಶ್ಯಕವಾದುದರಿಂದ ಶ್ರುತಿಯು ಅಗ್ನ್ಯಾಧಾನವನ್ನೇ ಪ್ರಾರಂಭದಲ್ಲಿ ತಿಳಿಸುವುದು ಯುಕ್ತವಲ್ಲವೇ? ಎಂದು ಸಾಯಣರು ಶಂಕಿಸಿ, ಕೇವಲ ಆಧಾನ ಮಾಡುವುದರಿಂದ ಅಗ್ನಿಯು ಸಿದ್ಧಿಸದು. ಪವಮಾನೇಷ್ಟಿಯನ್ನು ಮಾಡುವುದು ಅವಶ್ಯಕವಿದೆ. ಆ ಪವಮಾನೇಷ್ಟಿಯು ಪ್ರಕೃತಿಯಾದ ದರ್ಶ-ಪೂರ್ಣಮಾಸೇಷ್ಟಿಗಳ ವಿಕೃತಿಯಾದುದರಿಂದ ಪ್ರಕೃತಿಯನ್ನು ನೇರವಾಗಿ ಅವಲಂಬಿಸುತ್ತದೆ. ದರ್ಶ-ಪೂರ್ಣಮಾಸಗಳಾದರೆ ಅಗ್ನಿಯ ಸಿದ್ಧಿಗಾಗಿ ಪವಮಾನೇಷ್ಟಿಗಳನ್ನು ಅಪೇಕ್ಷಿಸುವುದರಿಂದ ಅವು ಪವಮಾನೇಷ್ಟಿಗಳನ್ನು ನೇರವಾಗಿ ಅಪೇಕ್ಷಿಸುವುದಿಲ್ಲ. ಹೀಗಾಗಿ ದರ್ಶ-ಪೂರ್ಣಮಾಸಗಳಿಗೆ ಮತ್ತೊಂದು ಕರ್ಮದ ಅಪೇಕ್ಷೆ ನೇರವಾಗಿ ಇಲ್ಲದಿರುವುದರಿಂದ ಶ್ರುತಿಯು ಅವುಗಳನ್ನೇ ಪ್ರಾರಂಭದಲ್ಲಿ ತಿಳಿಸಿಕೊಡುತ್ತಿದೆ.

---

* ಪ್ರಕೃತಿ-ವಿಕೃತಿಯಾಗಗಳ ಬಗ್ಗೆ ಒಂದನೆಯ ಸಂಪುಟದ ಮೂರನೆಯ ಭಾಗದಲ್ಲಿ ವಿವರಿಸಲಾಗಿದೆ.

೧. ಸಂಪುಟ-೧ ಭಾಗ-೩ ಪುಟ-೧೮

೨. ಸಂಪುಟ-೧ ಭಾಗ-೩ ಪುಟ-೪೩

## ೫. ಇತರ ವಿಷಯಗಳು

'ಮಂತ್ರಬ್ರಾಹ್ಮಣಯೋರ್ವೇದನಾಮಧೇಯಮ್' ಎಂಬ ವಚನದಂತೆ ಮಂತ್ರ ಮತ್ತು ಬ್ರಾಹ್ಮಣಗಳು ಎರಡೂ ವೇದವೇ ಆದರೂ ಬ್ರಾಹ್ಮಣವು ಮಂತ್ರಗಳಿಗೆ ವ್ಯಾಖ್ಯಾನರೂಪದಲ್ಲಿರುವುದರಿಂದ ಮೊದಲು ದರ್ಶ-ಪೂರ್ಣಮಾಸೇಷ್ಟಿಗಳ ಮಂತ್ರ ಗಳನ್ನೇ ಶ್ರುತಿಯು ತಿಳಿಸಿಕೊಡುತ್ತಿದೆ.

ಆ ಮಂತ್ರಗಳೂ ಮೂರು ತೆರನಾಗಿವೆ. ಇಷ್ಟಿಯಲ್ಲಿ ಅಧ್ವರ್ಯುವು ಹೇಳಬೇಕಾಗಿರುವ ಆಧ್ವರ್ಯವಮಂತ್ರಗಳು, ಹೋತೃವು ಹೇಳಬೇಕಾಗಿರುವ ಹೌತ್ರ ಮಂತ್ರಗಳು ಮತ್ತು ಯಜಮಾನನು ಹೇಳಬೇಕಾಗಿರುವ ಯಾಜಮಾನಮಂತ್ರಗಳು. ಈ ಮಂತ್ರಗಳಲ್ಲಿಯೂ ಅಧ್ವರ್ಯುವಿನ ಮಂತ್ರಗಳು ಗೋಡೆಯಿದ್ದಂತೆ. ಯಾಜಮಾನ ಮತ್ತು ಹೌತ್ರಮಂತ್ರಗಳು ಚಿತ್ರಗಳಂತೆ. ಆದುದರಿಂದ ಆಧ್ವರ್ಯವಮಂತ್ರಗಳನ್ನು ಪ್ರಾರಂಭದಲ್ಲಿಯೇ ಹೇಳಲಾಗಿದೆ.

ಈ ಆಧ್ವರ್ಯವಮಂತ್ರಗಳು ಹದಿಮೂರು ಅನುವಾಕಗಳಲ್ಲಿ ಹೇಳಲ್ಪಟ್ಟಿವೆ.

| ಅನುವಾಕ | ಮಂತ್ರಗಳ ವಿನಿಯೋಗ |
|---|---|
| ೧ | ವತ್ಸಾಪಾಕರಣ(ಕರುಗಳನ್ನು ಬೇರ್ಪಡಿಸುವಿಕೆ)ಮಂತ್ರಗಳು |
| ೨ | ಬರ್ಹಿರಾಹರಣ (ದರ್ಭೆಯನ್ನು ತರುವುದು) |
| ೩ | ದೋಹನ (ಹಾಲನ್ನು ಕರೆಯುವುದು) |
| ೪ | ಹವಿರ್ನಿರ್ವಾಪ (ಧಾನ್ಯವನ್ನು ಯಜ್ಞಪಾತ್ರೆಗೆ ಬದಲಾಯಿಸಿ ಕೊಳ್ಳುವುದು) |
| ೫ | ಅವಘಾತ (ಕುಟ್ಟುವುದು) |
| ೬ | ತಂಡುಲಪೇಷಣ (ಅಕ್ಕಿಯನ್ನು ಕುಟ್ಟುವುದು) |
| ೭ | ಕಪಾಲೋಪಧಾನ (ಕಪಾಲಗಳನ್ನು ಇಡುವುದು) |
| ೮ | ಪುರೋಡಾಶನಿಷ್ಪಾದನ (ಪುರೋಡಾಶವನ್ನು ತಯಾರಿಸುವುದು) |
| ೯ | ವೇದಿಕರಣ (ವೇದಿಯನ್ನು ನಿರ್ಮಿಸುವುದು) |
| ೧೦ | ಆಜ್ಯಗ್ರಹಣ (ತುಪ್ಪವನ್ನು ತೆಗೆದುಕೊಳ್ಳುವುದು) |
| ೧೧ | ಇಧ್ಮಸಂನಹನ, ಬರ್ಹಿರಾಸ್ತರಣ (ದರ್ಭೆಯನ್ನು ಹರಡುವುದು) |
| ೧೨ | ಆಘಾರ (ಆಜ್ಯಧಾರೆಯ ಅರ್ಪಣ) |
| ೧೩ | ಸ್ರುಗ್ವ್ಯೂಹನ (ಸ್ರುಕ್‌ಗಳನ್ನು ಇಡುವುದು) |

ಹೀಗೆ ಸಾಯಣರು ಮೊದಲನೆಯ ಪ್ರಪಾಠಕದಲ್ಲಿರುವ ೧೩ ಅನುವಾಕಗಳ ಮಂತ್ರವಿನಿಯೋಗವನ್ನು ಸ್ಥೂಲವಾಗಿ ತಿಳಿಸಿ, ಬಳಿಕ ದರ್ಶ-ಪೂರ್ಣಮಾಸಯಾಗದ

ಮಂತ್ರಗಳಲ್ಲಿ ವತ್ಸಾಪಾಕರಣದ ಮಂತ್ರವನ್ನೇ ಪ್ರಾರಂಭದಲ್ಲಿ ಶ್ರುತಿಯು ಏಕೆ ತಿಳಿಸುತ್ತಿದೆಯೆಂಬುದನ್ನು ನಿರೂಪಿಸಿರುತ್ತಾರೆ. ನಂತರ ಮಂತ್ರಗಳ ವಿನಿಯೋಗವನ್ನು ತಿಳಿಸುವ ಬ್ರಾಹ್ಮಣವನ್ನು ಮಂತ್ರಗಳೊಡನೆಯೇ ವ್ಯಾಖ್ಯಾನ ಮಾಡುವುದಾಗಿ ಹೇಳಿರುತ್ತಾರೆ.

ಈ ಭಾಗವು ಪ್ರಾಜಾಪತ್ಯಕಾಂಡಕ್ಕೆ ಸೇರಿರುವುದರಿಂದ ಈ ಕಾಂಡಕ್ಕೆ ಪ್ರಜಾಪತಿಯೇ ಋಷಿ. ಮಂತ್ರಗಳ ಛಂದಸ್ಸನ್ನು ವೇದಾಂಗಛಂದಸ್ಸಿನಿಂದ ತಿಳಿಯಬೇಕು. ಮಂತ್ರಗಳಿಂದ ಪ್ರತಿಪಾದ್ಯವಾದುದೇ ದೇವತೆ.

ಎಲ್ಲ ಮಂತ್ರಗಳ ವಿನಿಯೋಗವೂ ಬ್ರಾಹ್ಮಣದಲ್ಲಿಯೇ ಇರುವುದಿಲ್ಲ. ಕಲ್ಪಸೂತ್ರಕಾರರು ವೇದದ ಇತರ ಶಾಖೆಗಳನ್ನು ಪರ್ಯಾಲೋಚಿಸಿ ವಿನಿಯೋಗವನ್ನು ಹೇಳಿರುತ್ತಾರೆ. ಆದುದರಿಂದ ಬೌಧಾಯನ, ಆಪಸ್ತಂಬ ಮೊದಲಾದವರ ಶ್ರೌತಸೂತ್ರವನ್ನು ಉದಾಹರಿಸಿ, ಬ್ರಾಹ್ಮಣವನ್ನು ಅನುಸರಿಸಿ ಮಂತ್ರಾರ್ಥವನ್ನು ತಿಳಿಯಪಡಿಸುವುದಾಗಿ ಸಾಯಣಾಚಾರ್ಯರು ಪೂರ್ವಪೀಠಿಕೆಯನ್ನು ರಚಿಸಿದ ನಂತರ ಮಂತ್ರವ್ಯಾಖ್ಯಾನವನ್ನು ಆರಂಭಿಸಿರುತ್ತಾರೆ.

ಮೊದಲನೆಯ ಅನುವಾಕದ ಭಾಷ್ಯವನ್ನು ಬರೆದ ನಂತರ ಶ್ರೀ ಸಾಯಣರು

'ಸೂತ್ರದ್ವಯಂ ಬ್ರಾಹ್ಮಣಂ ಚ ವಿಧೋರ್ಥಾರ್ಥಮುದಾಹೃತಮ್ ।
ಸಂದೇಹಸ್ಯಾಪನುತ್ತ್ಯರ್ಥಂ ಮೀಮಾಂಸಾತ್ರ ವರ್ಣ್ಯತೇ ॥

ಬೌಧಾಯನಮಹರ್ಷಿ ಮತ್ತು ಆಪಸ್ತಂಬಮಹರ್ಷಿಗಳ ಶ್ರೌತಸೂತ್ರವನ್ನು ಅನುಸರಿಸಿ ಪ್ರಥಮಾನುವಾಕದ ವಿವರಣೆಯನ್ನು ನೀಡಲಾಗಿದೆ, ಅಲ್ಲದೆ ಮಂತ್ರದ ಬ್ರಾಹ್ಮಣವನ್ನು ವಿವರಿಸಲಾಗಿದೆ. ಈಗ ಸಂಶಯಗಳ ನಿವಾರಣೆಗಾಗಿ ವೇದಾರ್ಥವಿಚಾರವಾದ ಮೀಮಾಂಸೆಯನ್ನು ತಿಳಿಸುವೆವು' ಎಂದು ತಿಳಿಸಿರುತ್ತಾರೆ.

ಸಾಯಣರು ತಿಳಿಸಿರುವ ಮೀಮಾಂಸಾವಿಷಯವನ್ನು ಸಂಕ್ಷೇಪವಾಗಿ ತಿಳಿಸಲಾಗುವುದು. ಭಾಷ್ಯದಲ್ಲಿ ವೇದಕ್ಕೆ ಎಲ್ಲೆಡೆಯೂ ಅನ್ವಯವಾಗುವಂತಹ ಸಾಮಾನ್ಯಮೀಮಾಂಸಾವಿಷಯಗಳನ್ನು ತಿಳಿಸಿ ನಂತರ ಈ ಅನುವಾಕಕ್ಕೆ ಮಾತ್ರ ಅನ್ವಯವಾಗುವ ವಿಶೇಷವಿಷಯಗಳ ಮೀಮಾಂಸೆಯನ್ನು ತಿಳಿಸಿರುತ್ತಾರೆ.

### ೧) ಮೀಮಾಂಸೆ ಏಕೆ?

ಲೋಕದಲ್ಲಿ ಸಂಶಯವು ತಲೆದೋರಿದಾಗ ವಿಚಾರವನ್ನು ಮಾಡಿ ಪರಿಹರಿಸಿಕೊಳ್ಳುವುದು ಪ್ರಸಿದ್ಧವಷ್ಟೆ. ವೇದದಲ್ಲಿಯೂ ಅಲ್ಲಲ್ಲಿ 'ಬ್ರಹ್ಮವಾದಿಗಳು ವಿಚಾರಮಾಡಿ ಸಂಶಯವನ್ನು ಹೋಗಲಾಡಿಸಿಕೊಂಡು ಒಂದು ನಿರ್ಣಯಕ್ಕೆ ಬಂದರು' ಎಂಬ

ಆಖ್ಯಾನಗಳು ಕಂಡುಬರುತ್ತವೆ. ಉದಾಹರಣೆಗಾಗಿ ನಿತ್ಯವೂ ಪ್ರಾತಃಕಾಲ ಮತ್ತು ಸಾಯಂಕಾಲದಲ್ಲಿ ಅಗ್ನಿಹೋತ್ರವನ್ನು ಅನುಷ್ಠಿಸಿದ ನಂತರ ಅಗ್ನಿಯನ್ನು ಪ್ರಾರ್ಥಿಸುವ (ಅಗ್ನ್ಯುಪಸ್ಥಾನ) ವಿಧಿಯಿದೆ. ಈ ಉಪಸ್ಥಾನವನ್ನು ದಿನವೂ ಮಾಡಬೇಕೆ? ಬೇಡವೇ? ಅಥವಾ ರಾತ್ರಿಯಲ್ಲಿ ಮಾಡಿದರೆ ಸಾಕೆ? ಹಗಲಿನಲ್ಲಿ ಬೇಡವೆ? ಎಂಬ ವಿಚಾರವು ಶ್ರುತಿಯಲ್ಲಿಯೇ ಇದೆ. (ತೈ.ಸಂ.1-5-9)

ಅಗ್ನ್ಯುಪಸ್ಥಾನವನ್ನು ಮಾಡಬಾರದು ಎಂಬುದಾಗಿ ಪೂರ್ವಪಕ್ಷವನ್ನು ಶ್ರುತಿಯೇ ತಿಳಿಸುತ್ತದೆ. ಲೋಕದಲ್ಲಿ ರಾಜನೇ ಮೊದಲಾದವರ ಬಳಿಗೆ ಹೋಗಿ ಅಲ್ಪ ಉಪಾಯನವನ್ನಿತ್ತು ನಿತ್ಯವೂ ಹಲವು ವಸ್ತುಗಳನ್ನು ಬೇಡಲು ಮೊದಲು ಮಾಡಿದರೆ ರಾಜನಿಗೆ ಕೋಪ ಬಂದು ತೊಂದರೆ ಮಾಡಬಹುದು ಮನುಷ್ಯನಾದ ರಾಜನೇ ಹೀಗಿರುವಾಗ ಸರ್ವಸಮರ್ಥರಾದ ದೇವತೆಗಳಿಗೆ ಅಲ್ಪ ಹವಿಸ್ಸನ್ನಿತ್ತು ಅನೇಕ ವಸ್ತುಗಳನ್ನು ಬೇಡುವುದು ಸರಿಯಲ್ಲ. ಅಗ್ನಿಹೋತ್ರದಲ್ಲಿ ಅಗ್ನಿಗೆ ಹವಿಸ್ಸನ್ನು ಕೊಟ್ಟು ಅಗ್ನ್ಯುಪಸ್ಥಾನವನ್ನು ಮಾಡುತ್ತಾ **'ಆಯುರ್ದಾ ಅಗ್ನೇಽಸ್ಯಾಯುರ್ಮೇ ದೇಹಿ'** (ನೀನು ಆಯುಸ್ಸನ್ನು ನೀಡುವವನಾದುದರಿಂದ ನನಗೆ ಆಯುಸ್ಸನ್ನು ನೀಡು) ಎಂಬುದಾಗಿ ಪ್ರಾರ್ಥಿಸುವುದು, ಇದರೊಡನೆ ವರ್ಚಸ್ಸು ಮುಂತಾದವುಗಳನ್ನು ಬೇಡುವುದು ಅಗ್ನಿಯ ಕೋಪಕ್ಕೆ ಕಾರಣವಾಗಿ ತೊಂದರೆಯುಂಟಾಗಬಹುದಾದುದರಿಂದ ಅಗ್ನಿಯ ಉಪಸ್ಥಾನವನ್ನು ಮಾಡಬಾರದು ಎಂದು ಪೂರ್ವಪಕ್ಷವಿಚಾರದ ಸಾರಾಂಶ.

ಅಗ್ನ್ಯುಪಸ್ಥಾನವನ್ನು ಮಾಡಬೇಕೆಂಬ ಸಿದ್ಧಾಂತಪಕ್ಷವನ್ನು ಶ್ರುತಿಯೇ ತಿಳಿಸುತ್ತದೆ. ಯಜಮಾನನು ಶುಭಫಲಗಳನ್ನು ಪಡೆಯುವುದಕ್ಕಾಗಿಯೇ ದೇವತೆಗಳನ್ನು ಉದ್ದೇಶಿಸಿ (ಅಗ್ನಿಹೋತ್ರಪ್ರಸಂಗದಲ್ಲಿ ಪ್ರಜಾಪತಿರೂಪನಾದ ಅಗ್ನಿಯನ್ನು ಉದ್ದೇಶಿಸಿ) ಯಜ್ಞವನ್ನು ಮಾಡುತ್ತಾನೆ. ಮಂತ್ರಪ್ರಭಾವದಿಂದ ಯಜಮಾನನು ನೀಡುವ ಆಹುತಿದ್ರವ್ಯವು ಅಪರಿಮಿತವಾಗಿ ಪರಿಣಮಿಸುತ್ತದೆ. **ಯಾವದೇಕಾ ದೇವತಾ ಕಾಮಯತೇ ಯಾವದೇಕಾ। ತಾವದಾಹುತಿಃ ಪ್ರಥತೇ । ನ ಹಿ ತದಸ್ತಿ । ಯತ್ತಾವದೇವ ಸ್ಯಾತ್ । ಯಾವಜ್ಜುಹೋತಿ।** (ತೈ.ಬ್ರಾ. 3-2-6) ಎಂಬ ಬ್ರಾಹ್ಮಣವಾಕ್ಯವು 'ಯಜಮಾನನು ನೀಡಿದ ಆಹುತಿಯಷ್ಟೇ ದೇವತೆಗೆ ಸಲ್ಲುವುದೆಂದಲ್ಲ. ದೇವತೆಗಳು ಬಯಸುವ ಪ್ರಮಾಣದಷ್ಟು ನೀಡಿದ ಆಹುತಿಯು ಹಿಗ್ಗುತ್ತದೆ' ಎಂದು ತಿಳಿಸುತ್ತದೆ. ಯಾಗವನ್ನು ಮಾಡುವುದು, ಫಲವನ್ನು ಬಯಸುವುದು, ದೇವತೆಗಳು ಫಲವನ್ನು ನೀಡುವುದು ಇವು ಚಕ್ರದಂತೆ ನಡೆಯುತ್ತಿರುವುದೆಂದು **'ದೇವಾನ್ ಭಾವಯತಾನೇನ'** ಎಂಬ ಶ್ಲೋಕದಿಂದ ಕೃಷ್ಣಪರಮಾತ್ಮನೇ ಹೇಳಿರುತ್ತಾನೆ. ಆದುದರಿಂದ ಅಗ್ನ್ಯುಪಸ್ಥಾನ ವನ್ನು ಮಾಡಿ ಫಲವನ್ನು ಬಯಸುವುದು ಉಚಿತವಾಗಿಯೇ ಇದೆ. ಹೀಗೆ ಅಗ್ನಿಹೋತ್ರ ವನ್ನು ಅನುಷ್ಠಿಸಿದ ನಂತರ ನಿತ್ಯವೂ

ಪ್ರಾತಃಕಾಲ ಮತ್ತು ಸಾಯಂಕಾಲದಲ್ಲಿ ಅಗ್ನಿಯ ಉಪಸ್ಥಾನವನ್ನು ಮಾಡಬೇಕು ಎಂದು ಸಿದ್ಧಾಂತ.

ಇದೇ ರೀತಿಯ ಅನೇಕ ವಿಚಾರಗಳು ಯಜುರ್ವೇದದಲ್ಲಿರುವಂತೆಯೇ ಉಳಿದ ವೇದಗಳಲ್ಲಿಯೂ ಕಂಡು ಬರುತ್ತವೆ. ಆದುದರಿಂದ ವೇದಾರ್ಥವನ್ನು ತಿಳಿಯುವ ಸಂದರ್ಭದಲ್ಲಿ ಸಂಶಯವು ಬಂದಲ್ಲಿ ಜೈಮಿನಿಮಹರ್ಷಿಗಳು ವಿಚಾರ ಮಾಡಿ ಸಿದ್ಧಾಂತವನ್ನು ಮಾಡಿದ್ದಾರೆ. ಹೀಗೆ ವೇದಾರ್ಥವನ್ನು ನಿಃಸಂದಿಗ್ಧವಾಗಿ ತಿಳಿಯಲು ಈ ಮೀಮಾಂಸೆಯು ಅತ್ಯವಶ್ಯಕ.

ಆಯಾ ಅನುವಾಕದಲ್ಲಿಯೂ ಸಾಯಣಾಚಾರ್ಯರು ಸಂಶಯಪರಿಹಾರಕ್ಕಾಗಿ ಮೀಮಾಂಸಾಶಾಸ್ತ್ರದ ಅಧಿಕರಣಗಳನ್ನು ಸಂಗ್ರಹಿಸಿ ಕೊಟ್ಟಿರುತ್ತಾರೆ. ವೇದದ ಅರ್ಥವನ್ನು ವಿಚಾರ ಮಾಡಿಯೇ ತಿಳಿಯಬೇಕೆಂಬುದು ವೇದವಿದರ ಮತ. ವೇದದ ಅರ್ಥವನ್ನು ವಿಚಾರ ಮಾಡಿ ತಿಳಿಯದಿದ್ದರೆ, ವೇದವನ್ನು ಅರ್ಥಮಾಡಲು ಹೊರಟವನ ಬುದ್ಧಿಯಲ್ಲಿ ಉಂಟಾಗುವ ಸಂಶಯಗಳಿಂದಲೂ, ಆಕ್ಷೇಪಗಳಿಂದಲೂ ವೇದಕ್ಕೆ ಅನಭಿಮತವಾದ ನಿರ್ಣಯವನ್ನೇ ಹೊಂದಿಯಾರು. ಆದುದರಿಂದ ವೇದಾರ್ಥವನ್ನು ಅರಿಯಲು ಮೀಮಾಂಸಾಶಾಸ್ತ್ರವು ಪ್ರವೃತ್ತವಾಗಿದೆ. ಇದನ್ನೇ

**ಧರ್ಮೇ ಪ್ರಮೀಯಮಾಣೇ ಹಿ ವೇದೇನ ಕರಣಾತ್ಮನಾ ।**
**ಇತಿಕರ್ತವ್ಯತಾಭಾಗಂ ಮೀಮಾಂಸಾ ಪೂರಯಿಷ್ಯತಿ ॥**

ಎಂದು ಸ್ಮೃತಿಯೂ ಹೇಳಿದೆ. ಯಾವುದೇ ಕಾರ್ಯವನ್ನು ಸಾಧಿಸಲು ಕರಣವು (ಮುಖ್ಯಸಾಧನ) ಅವಶ್ಯಕ. ಮಿಕ್ಕ ಉಪಕರಣಗಳೂ ಬೇಕು. ಧರ್ಮವನ್ನೂ, ಬ್ರಹ್ಮವನ್ನೂ ತಿಳಿಯಲು ವೇದವು ಕರಣ. ಮೀಮಾಂಸೆಗಳು(ಪೂರ್ವಮೀಮಾಂಸಾ, ಉತ್ತರಮೀಮಾಂಸಾ) ಸಹ ಸಾಧನಗಳು. ಅವು ಮಾಡುವ ಕಾರ್ಯವನ್ನು-ಇತಿಕರ್ತವ್ಯತೆ) ಅಂದರೆ ಧರ್ಮವನ್ನು ಅನುಷ್ಠಿಸುವ ಬಗೆ, ವೇದಾರ್ಥನಿರ್ಣಯ ನಿರೂಪಣ. ಬ್ರಹ್ಮಸ್ವರೂಪ, ಜೀವಸ್ವರೂಪ ಮುಂತಾದವುಗಳನ್ನು-ತಿಳಿಸಿಕೊಡುತ್ತವೆ.

ಮನುಸ್ಮೃತಿಯಲ್ಲಿಯೂ ಸಹ

**'ಆರ್ಷಂ ಧರ್ಮೋಪದೇಶಂ ಚ ವೇದಶಾಸ್ತ್ರಾವಿರೋಧಿನಾ ।**
**ಯಸ್ತರ್ಕೇಣಾನುಸಂಧತ್ತೇ ಸ ಧರ್ಮಂ ವೇದ ನೇತರಃ ॥**

ಬ್ರಹ್ಮಜ್ಞಾನವನ್ನೂ, ಧರ್ಮೋಪದೇಶವನ್ನೂ ವೇದ-ಶಾಸ್ತ್ರಗಳಿಗೆ ವಿರುದ್ಧವಲ್ಲದ ತರ್ಕದಿಂದ ಸಮರ್ಥಿಸುವವನೇ ಧರ್ಮ-ಬ್ರಹ್ಮಗಳನ್ನು ತಿಳಿಯಬಲ್ಲನು; ಬೇರೆಯವ ನಲ್ಲ ಎಂಬುದಾಗಿಯೂ,

**ಯಶ್ಚ ವ್ಯಾಕುರುತೇ ವಾಚಂ ಯಶ್ಚ ಮೀಮಾಂಸತೇಽಧ್ವರಮ್ ।**
**ತಾವುಭೌ ಪುಣ್ಯಕರ್ಮಾಣೌ ಪಙ್ಕ್ತಿಪಾವನಪಾವನೌ ॥**

ವ್ಯಾಕರಣವನ್ನು ಬಲ್ಲವನೂ, ಯಜ್ಞಗಳ ಬಗೆಗಿನ ಮೀಮಾಂಸೆಯನ್ನು ಮಾಡುವವನೂ ಪುಣ್ಯವಂತರು. ಪಂಕ್ತಿಪಾವನರನ್ನೂ ಪವಿತ್ರಗೊಳಿಸಬಲ್ಲವರು' ಎಂದು ಹೇಳಿದೆ.

ಹೀಗೆ ಸಾಯಣರು ಮೀಮಾಂಸೆಯ ಅವಶ್ಯಕತೆಯನ್ನು ವಿಸ್ತೃತವಾಗಿ ಪ್ರತಿಪಾದಿಸಿ ಮೊದಲು ಎಲ್ಲ ವೇದಗಳಿಗೂ ಸಾಮಾನ್ಯವಾದ ಮೀಮಾಂಸೆಯನ್ನು ನಿರೂಪಿಸಿರುತ್ತಾರೆ.

### ೨) ಧರ್ಮ-ಬ್ರಹ್ಮಗಳ ವಿಷಯದಲ್ಲಿ ವೇದವೇ ಪ್ರಮಾಣವೇ ?

ವೇದದಿಂದ ತಿಳಿಸಲ್ಪಟ್ಟ ವಿಧಿಗಳ ಅನುಷ್ಠಾನದಿಂದ ಉಂಟಾಗುವ ಧರ್ಮವು ಪ್ರತ್ಯಕ್ಷಪ್ರಮಾಣದಿಂದ ತಿಳಿಯಲ್ಪಡುವುದಿಲ್ಲ. ಏಕೆಂದರೆ ವೇದೋಕ್ತವಾದ ಕರ್ಮಗಳ ಅನುಷ್ಠಾನದಿಂದ ಧರ್ಮವು ಮುಂದೆ ಉಂಟಾಗುತ್ತದೆ. ಪ್ರತ್ಯಕ್ಷಪ್ರಮಾಣದಿಂದ ಇಂದ್ರಿಯಗಳು ಈಗ ಇರುವುದನ್ನು ಮಾತ್ರ ಗ್ರಹಿಸಬಲ್ಲವು. ಅನುಮಾನಪ್ರಮಾಣವೂ ಪ್ರತ್ಯಕ್ಷಮೂಲಕವೇ. ಆದುದರಿಂದ ಧರ್ಮದ ವಿಷಯದಲ್ಲಿ ಅನುಮಾನವೂ ಪ್ರಮಾಣ ವಲ್ಲ. ಹೀಗಾಗಿ ವೇದದ ವಿಧಿಯೇ ಧರ್ಮದ ವಿಷಯದಲ್ಲಿ ಪ್ರಮಾಣವೆನಿಸುತ್ತದೆ.

ಧರ್ಮವು ಕರ್ಮಗಳ ಅನುಷ್ಠಾನದಿಂದ ಮುಂದೆ ಉಂಟಾಗುವುದರಿಂದ ಅದು ಪ್ರತ್ಯಕ್ಷಪ್ರಮಾಣಕ್ಕೆ ದೊರೆಯದಿದ್ದರೂ, ಬ್ರಹ್ಮವಸ್ತುವು ಘಟಾದಿಗಳಂತೆ ಸಿದ್ಧವಾದ (ಇರುವ) ವಸ್ತುವಾದುದರಿಂದ ಅದು ಪ್ರತ್ಯಕ್ಷಪ್ರಮಾಣದಿಂದಲಾಗಲೀ, ಅನುಮಾನ ಪ್ರಮಾಣದಿಂದಾಗಲೀ ತಿಳಿಯಲ್ಪಡಬಹುದಲ್ಲವೇ? ಎಂಬ ಸಂಶಯವನ್ನು ಪರಿ ಹರಿಸಲು ಸಾಯಣಾಚಾರ್ಯರು ಬ್ರಹ್ಮವಸ್ತುವಿಗೆ ರೂಪ, ಲಿಂಗ ಮುಂತಾದವು ಇಲ್ಲದಿ ರುವುದರಿಂದ ಅದು ಪ್ರತ್ಯಕ್ಷವೇ ಮೊದಲಾದ ಪ್ರಮಾಣಗಳಿಗೆ ವಿಷಯವಾಗುವುದಿಲ್ಲ ಎಂದು ತಿಳಿಸಿ, **'ತಂ ತ್ವೌಪನಿಷದಂ ಪುರುಷಂ ಪೃಚ್ಛಾಮಿ'** ಎಂಬ ಯಾಜ್ಞವಲ್ಕ್ಯರ ಮಾತಿನಂತೆ (ಉಪನಿಷತ್ತುಗಳಲ್ಲಿಯೇ ತಿಳಿಯಲ್ಪಡಬೇಕಾದ ವಸ್ತುವಿನ ಬಗ್ಗೆ ನಿನ್ನನ್ನು ಕೇಳುತ್ತೇನೆ) ಬ್ರಹ್ಮವಸ್ತುವೂ ಸಹ ವೇದದಿಂದಲೇ ಪ್ರತಿಪಾದ್ಯವಾಗಿರುತ್ತದೆ ಎಂದು ತಿಳಿಸಿರುತ್ತಾರೆ.

### ೩) ಇನ್ನೊಂದರ ಅಪೇಕ್ಷೆಯಿಲ್ಲದ ಪ್ರಾಮಾಣ್ಯವು ವೇದಕ್ಕೆ ಇದೆಯೇ?

ಲೋಕದಲ್ಲಿ ಯಾವುದಾದರೂ ಶಬ್ದದ ಅರ್ಥವನ್ನು ತಿಳಿಯುವಾಗ ಶಬ್ದಕ್ಕೂ ಅರ್ಥಕ್ಕೂ ಇರುವ ಸಂಬಂಧವನ್ನು ತಿಳಿಯುವುದು ಅತಿ ಅವಶ್ಯಕ. ವೇದದಲ್ಲಿರುವ **'ಜ್ಯೋತಿಷ್ಟೋಮೇನ ಸ್ವರ್ಗಕಾಮೋ ಯಜೇತ'** ಎಂಬ ವಾಕ್ಯವು ಅನುಷ್ಠಿಸಬೇಕಾದ

ಕರ್ಮವನ್ನು ಬೋಧಿಸುತ್ತದೆಯಷ್ಟೆ. ಅನುಷ್ಠಿಸಬೇಕಾದ ಯಾಗವೇ ಧರ್ಮ ಎಂಬುದು ಸಿದ್ಧಾಂತ. ಲೋಕದಲ್ಲಿ ಶಬ್ದಗಳಿಗೂ ಅರ್ಥಕ್ಕೂ ಇರುವ ಸಂಬಂಧವು ವ್ಯವಹಾರ ದಿಂದಲೇ ತಿಳಿಯುತ್ತದೆ. ಜ್ಯೋತಿಷ್ಟೋಮಯಾಗವನ್ನು ವಿಧಿಸುವ ವಾಕ್ಯಕ್ಕೂ ಅದರಿಂದ ಪ್ರತಿಪಾದಿತವಾಗುವ ಧರ್ಮಕ್ಕೂ ಇರುವ ಸಂಬಂಧವು ಲೋಕವ್ಯವಹಾರದಿಂದ ತಿಳಿಯುವುದಿಲ್ಲ. ಹಾಗೆಯೇ ಬ್ರಹ್ಮವಸ್ತುವಿಗೆ ಹೇಳಿರುವ 'ಸತ್ಯಂ ಜ್ಞಾನಮನಂತಂ ಬ್ರಹ್ಮ' ಎಂಬ ವಾಕ್ಯಕ್ಕೂ ಬ್ರಹ್ಮವಸ್ತುವಿಗೂ ಸಂಬಂಧವು ಲೋಕವ್ಯವಹಾರದಿಂದ ತಿಳಿಯುವುದಿಲ್ಲ. ಆದುದರಿಂದ ವೇದದ ಆ ವಾಕ್ಯಗಳಿಗೂ ಧರ್ಮ-ಬ್ರಹ್ಮಗಳಿಗೂ ಸಂಬಂಧವನ್ನು ತಿಳಿಸಲು ಯತ್ನವು ಅವಶ್ಯಕ. ಹೀಗೆ ಯತ್ನಿಸುವುದು ಅವಶ್ಯಕವಾದುದ ರಿಂದ ವೇದದ ವಾಕ್ಯಗಳು ಸ್ವತಃ ಪ್ರಮಾಣವಾಗಲಾರವು. ಇನ್ನೊಂದರ ಅಪೇಕ್ಷೆಯಿಲ್ಲ ದಿರುವಿಕೆಯೇ ಪ್ರಾಮಾಣ್ಯದ ಲಕ್ಷಣ. ಆದುದರಿಂದ ವೇದವಾಕ್ಯಗಳು ಹೇಗೆ ಪ್ರಮಾಣ ವಾದಾವು?

ಲೋಕದಲ್ಲಿ ವ್ಯವಹಾರದಿಂದ ನಾವು ಪದ-ಪದಾರ್ಥಗಳ ಸಂಬಂಧವನ್ನು ತಿಳಿಯುತ್ತೇವೆಯೇ ಹೊರತು ವಾಕ್ಯ-ವಾಕ್ಯಾರ್ಥಗಳ ಸಂಬಂಧವನ್ನಲ್ಲ. ಪದದಿಂದ ಪದಾರ್ಥದ ಜ್ಞಾನವು ಬಂದ ನಂತರ ಆ ಪದಾರ್ಥಗಳ ಸಮೂಹವೇ ವಾಕ್ಯಾರ್ಥ ವೆನಿಸುತ್ತದೆ. ಆದುದರಿಂದ ವೇದದಲ್ಲಿಯೂ ಪದಗಳ ಅರ್ಥದ ಜ್ಞಾನವು ಉಂಟಾದ ನಂತರ ತಾನಾಗಿಯೇ ವಾಕ್ಯಾರ್ಥದ ಜ್ಞಾನವು ಉಂಟಾಗುತ್ತದೆ. ವಾಕ್ಯಕ್ಕೂ ವಾಕ್ಯಾರ್ಥಕ್ಕೂ ಸಂಬಂಧವನ್ನು ತಿಳಿಸಲು ಪುನಃ ಯತ್ನಿಸಬೇಕಾಗಿಲ್ಲ.

### ೩(ಅ) ವೇದದ ಪದ-ಪದಾರ್ಥಗಳು ಲೌಕಿಕಗಳೇ?

ಲೋಕದ ಪದಗಳಿಗೂ ವೈದಿಕಪದಗಳಿಗೂ ವ್ಯತ್ಯಾಸವಿದೆ. ಬ್ರಾಹ್ಮಣರು ಎಂಬ ಅರ್ಥವನ್ನು ತಿಳಿಸಲು ಲೋಕದಲ್ಲಿ 'ಬ್ರಾಹ್ಮಣಾಃ' ಎಂಬ ಪದವಿದೆ. ವೇದದಲ್ಲಿ ಯಾದರೋ 'ಬ್ರಾಹ್ಮಣಾಸಃ' ಎಂಬ ಪದ. ಹಾಗೆಯೇ ಲೋಕದ ಪದಾರ್ಥಗಳಿಗೂ ವೇದವು ತಿಳಿಸುವ ಪದಾರ್ಥಗಳಿಗೆ ಸಹ ವ್ಯತ್ಯಾಸವಿದೆ. ಲೋಕದಲ್ಲಿ ಹಸುಗಳು ಕೆಳಗೆ ಮುಖ ಮಾಡಿಕೊಂಡು ಸಂಚರಿಸುತ್ತವೆಯಷ್ಟೆ. ದೇವಲೋಕದ ಹಸುಗಳು **'ಉತ್ತಾನಾ ಹಿ ದೇವಗವಾ ವಹಂತಿ' (ಆಪಸ್ತಂಬಶ್ರೌತಸೂತ್ರ 11-7-6)** ಎಂಬ ಮಾತಿನಂತೆ ಮೇಲೆ ಮುಖ ಮಾಡಿಕೊಂಡು ಸಂಚರಿಸುತ್ತವೆ. ಹೀಗೆ ಲೋಕದಲ್ಲಿರುವ ಮತ್ತು ವೇದದಲ್ಲಿ ತಿಳಿಸುವ ಪದಾರ್ಥಗಳಿಗೂ ಸಹ ವ್ಯತ್ಯಾಸವಿದೆ. ಆದುದರಿಂದ ವೇದದಲ್ಲಿರುವ ಪದ-ಪದಾರ್ಥಗಳನ್ನು ಪ್ರತ್ಯೇಕವಾಗಿ ನಿರೂಪಿಸಬೇಕು.

ವರ್ಣಗಳನ್ನು ಬೇರೆ ಬೇರೆಯವರು ಉಚ್ಚಾರಣೆ ಮಾಡಿದಾಗಲೂ, ಅಥವಾ

ಒಬ್ಬರೇ ಹಲವು ಬಾರಿ ವರ್ಣವನ್ನು ಉಚ್ಚಾರಣೆ ಮಾಡಿದಾಗಲೂ ಮೊದಲು ಉಚ್ಚರಿಸಿದ ವರ್ಣವೇ ಎರಡನೆಯದು, ಮೂರನೆಯದು... ಎಂಬುದಾಗಿ ನಮಗೆ ತಿಳಿಯುತ್ತದೆ. ಈ ರೀತಿಯ ತಿಳುವಳಿಕೆಯನ್ನು 'ಪ್ರತ್ಯಭಿಜ್ಞಾನ' ಎನ್ನುತ್ತಾರೆ. ವರ್ಣನಿತ್ಯತ್ವವನ್ನು ಪ್ರತಿಪಾದಿಸುವಾಗ ಈ ರೀತಿ 'ಅದೇ ಇದು' ಎಂಬ ಅರಿವು ಉಂಟಾದುದರಿಂದಲೇ ವರ್ಣಗಳು ನಿತ್ಯ ಮತ್ತು ಒಂದು ಎಂದು ಪ್ರತಿಪಾದಿಸಿರುತ್ತಾರೆ. ಹಾಗೆಯೇ ವರ್ಣಗಳ ಸಮೂಹರೂಪವಾದ ಪದದಲ್ಲಿಯೂ ಸಹ ವೇದದ ಪದಗಳೇ ಲೋಕದ ಪದಗಳು ಎಂಬುದಾಗಿ'ಪ್ರತ್ಯಭಿಜ್ಞಾನ'ವಿರುವುದರಿಂದ ಲೌಕಿಕ ಮತ್ತು ವೈದಿಕಶಬ್ದಗಳು ಒಂದೇ ಆಗಿವೆ. ವೈದಿಕಶಬ್ದಗಳನ್ನು ಪ್ರತ್ಯೇಕವಾಗಿ ನಿರೂಪಿಸಬೇಕಾಗಿಲ್ಲ. ಕೆಲವೆಡೆ ಮಾತ್ರ ಇರುವ ಶಬ್ದದ ವ್ಯತ್ಯಾಸದಿಂದ ಈ ಪ್ರತ್ಯಭಿಜ್ಞಾನಕ್ಕೆ ಅಡ್ಡಿಯಿಲ್ಲ. ಪ್ರತ್ಯಭಿಜ್ಞಾನವು ದೃಢವಾದುದರಿಂದ ವೈದಿಕಶಬ್ದಗಳ ರೂಪವು ಬೇರೆಯಾದರೂ ಅಂತಹ ವಿಶಿಷ್ಟವಾದ ಶಬ್ದಗಳನ್ನು ತಿಳಿಸಲು ಯತ್ನವು ಇದ್ದೇ ಇರುತ್ತದೆ.

ಲೋಕದ ಪದಾರ್ಥಕ್ಕಿಂತಲೂ ವೈದಿಕಪದಾರ್ಥಗಳು ಬೇರೆ ಎಂಬುದೂ ಸಹ ಕೆಲವೆಡೆ ಮಾತ್ರ. ಆದುದರಿಂದ ವೈದಿಕಶಬ್ದಗಳನ್ನೂ ವೈದಿಕಪದಾರ್ಥಗಳನ್ನೂ ಪ್ರತ್ಯೇಕವಾಗಿ ವ್ಯುತ್ಪತ್ತಿಯೊಂದಿಗೆ ನಿರೂಪಿಸಬೇಕಾಗಿಲ್ಲ. ಅಂತೆಯೇ '**ಲೋಕಾವಗತಸಾಮರ್ಥ್ಯಃ ಶಬ್ದಃ ವೇದೇಽಪಿ ಬೋಧಕಃ** [ಲೋಕದಲ್ಲಿ ಅರ್ಥವನ್ನು ಬೋಧಿಸುವ ಸಾಮರ್ಥ್ಯವುಳ್ಳ ಶಬ್ದವು ವೇದದಲ್ಲಿಯೂ ಅರ್ಥವನ್ನು ತಿಳಿಸುತ್ತದೆ]' ಎಂದು ತಿಳಿಸಿರುತ್ತಾರೆ.

### ೪) 'ಕಾಠಕ' 'ಕೌಥುಮ' ಮುಂತಾದ ಹೆಸರುಗಳಿರುವುದರಿಂದ ವೇದವು ಪೌರುಷೇಯವಲ್ಲವೇ?

ಮಹಾಭಾರತವನ್ನು 'ವೈಯಾಸಿಕ' ಎಂದೂ, ರಾಮಾಯಣವನ್ನು 'ವಾಲ್ಮೀಕೀಯ' ಎಂದು ಹೆಸರಿಸುವುದರಿಂದ ವ್ಯಾಸ ಮತ್ತು ವಾಲ್ಮೀಕಿಗಳು ಆ ಗ್ರಂಥಗಳ ಕರ್ತೃಗಳು ಎಂದು ನಿರ್ಧಾರವಾಗುತ್ತದೆ. ಅಂತೆಯೇ ವೇದದಲ್ಲಿಯೂ 'ಕಠ' ಎಂಬ ಋಷಿಯ ಹೆಸರಿನಿಂದ ವೇದಶಾಖೆಯನ್ನು 'ಕಾಠಕ' ಎನ್ನುವುದರಿಂದ ವೇದವು ಪೌರುಷೇಯವಲ್ಲವೇ? ಹೀಗೆಯೇ ಕುಥುಮ-ಕೌಥುಮೀಯ, ತಿತ್ತಿರಿ-ತೈತ್ತಿರೀಯ ಮುಂತಾದ ಹೆಸರುಗಳೂ ಪ್ರಸಿದ್ಧವಿವೆ. ಆದುದರಿಂದ ವೇದವು ಪೌರುಷೇಯವಲ್ಲವೇ?

ಈ ಎಲ್ಲ ಹೆಸರುಗಳೂ ಆಯಾ ಋಷಿಗಳು ಆಯಾ ಶಾಖೆಗಳನ್ನು ಪ್ರವಚನ ಮಾಡುತ್ತಿದ್ದುದರಿಂದ ಬಂದಿವೆಯೇ ವಿನಹ ಅವರು ರಚಿಸಿದರೆಂದಲ್ಲ.

ವೇದವು ಅಪೌರುಷೇಯವಾದುದು. ಪರಮಾತ್ಮನನ್ನೇ ವೇದಕರ್ತೃವೆಂದರೂ ಅವನು ನಿರ್ದೋಷನಾದುದರಿಂದ ಅವನಲ್ಲಿ ಸಾಮಾನ್ಯಕರ್ತೃಗಳಲ್ಲಿರುವ ಭ್ರಮೆ-

ಪ್ರಮಾದ ಮುಂತಾದ ದೋಷಗಳಿರುವುದಿಲ್ಲ. ಆದುದರಿಂದ ಸ್ವತಃ ಪ್ರಾಮಾಣ್ಯವುಳ್ಳ ವೇದವು ಅಪೌರುಷೇಯವೆನಿಸುತ್ತದೆ.

### ೫) 'ಮಂತ್ರ' ಎಂದರೇನು?

ಅಪೌರುಷೇಯವಾದ ವೇದದಲ್ಲಿ ಎರಡು ಭಾಗಗಳಿವೆ. 'ಮಂತ್ರ' ಮತ್ತು 'ಬ್ರಾಹ್ಮಣ'. 'ಮಂತ್ರಬ್ರಾಹ್ಮಣಯೋರ್ವೇದನಾಮಧೇಯಮ್' ಎಂಬುದು ಆಪಸ್ತಂಬರ ವಚನ (ಆಪ. ಶ್ರೌ.ಸೂ. 24-1-31). ಅಲ್ಲದೆ ಶ್ರುತಿಯಲ್ಲಿಯೇ 'ಅಹೇ ಬುಧ್ನಿಯ ಮಂತ್ರಂ ಮೇ ಗೋಪಾಯ ।' ಎಂಬಲ್ಲಿ ಮಂತ್ರಶಬ್ದವಿದೆ. ಮಂತ್ರ ಎಂಬುದಕ್ಕೆ ಲಕ್ಷಣವೇನು? ಬ್ರಾಹ್ಮಣಗಳಿಂದ ವಿಧಿಸಲ್ಪಟ್ಟಿದ್ದನ್ನು ತಿಳಿಸುವುದೇ ಮಂತ್ರ ಎಂದು ಲಕ್ಷಣವನ್ನು ಹೇಳಿದರೆ 'ವಸಂತಾಯ ಕಪಿಂಜಲಾನಾಲಭೇತ' ಎಂಬ ವಾಕ್ಯವು ಮಂತ್ರವಾಗದೇ ಹೋದೀತು. ಏಕೆಂದರೆ ಈ ವಾಕ್ಯವೇ ಆಲಂಭನವನ್ನು ವಿಧಿಸುತ್ತಿರುವುದರಿಂದ ಮಂತ್ರದ ಲಕ್ಷಣವು ಇಲ್ಲಿ ಹೊಂದಿಕೊಳ್ಳಲಾರದು. 'ಮನನ ಮಾಡಲು ಕಾರಣವಾದುದೇ ಮಂತ್ರ' ಎಂದು ಹೇಳಿದರೆ ಬ್ರಾಹ್ಮಣಗಳೂ ಕೂಡ ಮನನಕ್ಕೆ ಕಾರಣಗಳಾಗುವುದರಿಂದ ಅವೂ ಕೂಡ ಮಂತ್ರಗಳೆನಿಸಿಕೊಂಡಾವು. ಆದುದರಿಂದ 'ಮಂತ್ರ' ಎಂಬುದಕ್ಕೆ ಖಚಿತವಾದ ಲಕ್ಷಣವೇನು?

ಯಾಜ್ಞಿಕರು (ಯಜ್ಞಗಳ ಬಗೆಗಿನ ವಿಧಿ-ವಿಧಾನಗಳನ್ನು ಬೋಧಿಸುವ ಆಪಸ್ತಂಬ, ಬೌಧಾಯನ ಮೊದಲಾದ ಮಹರ್ಷಿಗಳು) ಯಾವುದನ್ನು ಮಂತ್ರವೆಂದು ವ್ಯವಹರಿಸುತ್ತಾರೆಯೋ ಅದೇ ಮಂತ್ರ ಎಂಬುದು ಮಂತ್ರಕ್ಕೆ ಲಕ್ಷಣವೆನಿಸುತ್ತದೆ. ಅವು ಕೆಲವೆಡೆ ಸ್ತುತಿರೂಪವಾಗಿಯೂ, ಕೆಲವೆಡೆ ಆಮಂತ್ರಣರೂಪವಾಗಿಯೂ, ಕೆಲವೆಡೆ ಯಾಜ್ಞಿಕರು ಮಾಡಬೇಕಾದ ಕರ್ಮಗಳನ್ನು ಸೂಚಿಸುವ ರೂಪದಲ್ಲಿಯೂ, ಕೆಲವೆಡೆ ನೀನು ಎಂಬ ಅರ್ಥವನ್ನು ನೀಡುವ ಶಬ್ದದೊಡನೆಯೂ ಇರುತ್ತವೆ. ಆದುದರಿಂದ ಎಲ್ಲ ಮಂತ್ರಗಳಲ್ಲಿಯೂ ಇರುವ ಸಾಧಾರಣವಾದ ಅಂಶವನ್ನು ತಿಳಿಸುವ ಲಕ್ಷಣವನ್ನು ಮಂತ್ರಗಳಿಗೆ ಹೇಳಲು ಬರುವುದಿಲ್ಲ. ಸಮಾಖ್ಯಾನ ಅಂದರೆ ಯಾಜ್ಞಿಕರ ಹೇಳಿಕೆಯೇ ಮಂತ್ರದ ಲಕ್ಷಣ.

### ೬) ಋಕ್, ಯಜುಸ್ಸು ಮತ್ತು ಸಾಮಗಳ ಲಕ್ಷಣಗಳೇನು?

ಋಗ್ವೇದದ ಅಧ್ಯಯನಪರಂಪರೆಯಲ್ಲಿ ಯಜುಸ್ಸುಗಳು ಸೇರಿರುವುದರಿಂದಲೂ, ಸಾಮವೇದದಲ್ಲಿ ಯಜುಸ್ಸುಗಳು ಸೇರಿರುವುದರಿಂದಲೂ, ಯಜುರ್ವೇದದಲ್ಲಿ ಋಕ್‌ಗಳೂ, ಸಾಮಗಳೂ ಸೇರಿರುವುದರಿಂದಲೂ, ಋಕ್, ಸಾಮ ಮತ್ತು

ಯಜುಸ್ಸುಗಳಿಗೆ ಲಕ್ಷಣವನ್ನು ಹೇಳಿದರೆ ಸಂಕೀರ್ಣವಾಗುವುದರಿಂದ ಅವುಗಳಿಗೆ ನಿರ್ದಿಷ್ಟವಾದ ಲಕ್ಷಣವೇನು?

ಪಾದಗಳಿಂದಲೂ, ಅರ್ಧಋಕ್‌ಗಳಿಂದಲೂ ಕೂಡಿದ ವೃತ್ತಬದ್ಧವಾದ ಮಂತ್ರಗಳೇ ಋಕ್‌ಗಳು. ಗಾನರೂಪವಾದ ಮಂತ್ರಗಳೇ ಸಾಮಗಳು. ಪಾದ-ವೃತ್ತ-ಗಾನರಹಿತವಾಗಿದ್ದು ಪ್ರಶ್ಲಿಷ್ಟವಾಗಿ (ಒಟ್ಟುಗೂಡಿದಂತೆ) ಪಠಿತವಾದ ಮಂತ್ರಗಳೇ 'ಯಜುಸ್ಸು'ಗಳು. ಇದು ಋಕ್-ಸಾಮ-ಯಜುಸ್ಸುಗಳ ವ್ಯವಸ್ಥಿತವಾದ ಲಕ್ಷಣಗಳಾಗಿವೆ.

## ೭) ಮಂತ್ರೋಚ್ಚಾರಣೆಯ ಫಲವೇನು?

ಶ್ರುತಿಯಲ್ಲಿ 'ಉರು ಪ್ರಥಸ್ವ' ಎಂಬ ಮಂತ್ರವಿದೆ. ಈ ಮಂತ್ರವನ್ನು ಪುರೋಡಾಶವನ್ನು ಕಪಾಲಗಳ ಮೇಲೆ ಇಡುವ ಸಮಯದಲ್ಲಿ ಹೇಳಬೇಕು. 'ಎಲೈ ಪುರೋಡಾಶವೇ! ಉರು ಪ್ರಥಸ್ವ = (ನೀನು) ಚೆನ್ನಾಗಿ ಹರಡಿಕೋ' ಎಂದು ಆ ಮಂತ್ರದ ಅರ್ಥ. ಈ ಮಂತ್ರವನ್ನು ಉಚ್ಚಾರಣೆ ಮಾಡುವ ಫಲ ಅದೃಷ್ಟವೇ ಹೊರತು ಮಾಡಬೇಕಾದ ಕಾರ್ಯವೇನೆಂಬ ಅರ್ಥವನ್ನು ತಿಳಿಸುವುದು ಮಂತ್ರೋಚ್ಚಾರಣೆಯ ಫಲವಾಗಲಾರದು. ಏಕೆಂದರೆ ಈ ಮಂತ್ರದಿಂದ ತಿಳಿಯಬೇಕಾದ ಅರ್ಥವನ್ನು ಬ್ರಾಹ್ಮಣವಾಕ್ಯದಿಂದಲೇ ತಿಳಿಯಬಹುದಾಗಿದೆ. 'ಉರು ಪ್ರಥಸ್ವೇತಿ ಪುರೋಡಾಶಂ ಪ್ರಥಯತಿ' ಎಂಬುದೇ ಆ ವಾಕ್ಯ. ಆದ್ದರಿಂದ ಮಂತ್ರೋಚ್ಚಾರಣೆ ಮಾಡಿದುದರ ಫಲ ಅದೃಷ್ಟವೇ ಹೊರತು ದೃಷ್ಟಪ್ರಯೋಜನವಲ್ಲ ಎಂಬುದು ಪೂರ್ವಪಕ್ಷ.



ಸಿದ್ಧಾಂತವು ಹೀಗಿದೆ. ಅರ್ಥವನ್ನು ತಿಳಿದುಕೊಳ್ಳುವಿಕೆಯೆಂಬ ದೃಷ್ಟ ಪ್ರಯೋಜನವು ಸಂಭವಿಸುವಾಗ ಅದೃಷ್ಟಪ್ರಯೋಜನವನ್ನು ಕಲ್ಪಿಸುವುದು ಯುಕ್ತವಲ್ಲ. ಆದುದರಿಂದ ಅನುಷ್ಠಿಸಬೇಕಾದ ಕಾರ್ಯಗಳೆಂಬ ಅರ್ಥಗಳನ್ನು ತಿಳಿಸುವುದೇ ಮಂತ್ರೋಚ್ಚಾರಣೆಯ ಫಲವೆನಿಸುತ್ತದೆ. ಅನುಷ್ಠೇಯಾರ್ಥಪ್ರಕಾಶನವು ಬೇರೆಯ ರೀತಿಯಲ್ಲಿ ಆಗಬಹುದಾದರೂ ಸಹ ಮಂತ್ರಗಳಿಂದ ಉಂಟಾಗುವ ಅನುಸ್ಮರಣೆಯಿಂದಲೇ ಅದೃಷ್ಟಫಲವು ದೊರೆಯುವುದೆಂಬ ನಿಯಮವನ್ನು ಒಪ್ಪುವುದರಿಂದ ಮಂತ್ರೋಚ್ಚಾರಣೆಯಿಲ್ಲದೆ ಅದೃಷ್ಟವಿಲ್ಲದಿರುವುದರಿಂದ ಮಂತ್ರೋಚ್ಚಾರಣೆಯು ನಿಯತವಾಗಿರುತ್ತದೆ.

ಕೆಲವೆಡೆ ಮಂತ್ರಗಳು ಅನುಷ್ಠೇಯಾರ್ಥಪ್ರಕಾಶಕಗಳಾಗಿರುವುದಿಲ್ಲ. "ದಿವೋ ವಾ ವಿಷ್ಣೋ" ಎಂಬ ಮಂತ್ರವು ಮೇಥೀನಿಹನನ (ಮೇಟೀಮರವನ್ನು ಸ್ಥಾಪಿಸುವಿಕೆ)

ದಲ್ಲಿ ವಿನಿಯೋಗವಾಗಿದೆ. 'ದಿವೋ ವಾ... ಮೇಥೀಂ ನಿಹಂತಿ' (ತೈ. ಸಂ. 6-2-9) ಎಂಬ ವಾಕ್ಯದಿಂದ ಶ್ರುತಿಯೇ ವಿನಿಯೋಗವನ್ನು ಹೇಳಿದೆ. ಮಂತ್ರದಿಂದಲೇ ಅರ್ಥವನ್ನು ಸ್ಮರಿಸಿ ಅನುಷ್ಠಾನ ಮಾಡಬೇಕೆಂದಾದರೆ ಮೇಲಿನ ಮಂತ್ರದ ಅರ್ಥಕ್ಕೂ ವಿನಿಯೋಗಕ್ಕೂ ಸಂಬಂಧವಿಲ್ಲದುದರಿಂದ ಮಂತ್ರದಿಂದಲೇ ಅನುಷ್ಠೇಯಾರ್ಥದ ಅನುಸ್ಮರಣೆ ಮಾಡಬೇಕೆಂಬ ನಿಯಮಕ್ಕೆ ಭಂಗ ಬರುತ್ತದೆಯಲ್ಲವೇ?

ಮೇಲಿನ ಈ ಆಕ್ಷೇಪಕ್ಕೆ ಸಮಾಧಾನವು ಹೀಗಿದೆ. ಶ್ರುತಿಯಿಂದಲೇ ವಿನಿಯೋಗ ವನ್ನು ಹೇಳಿದೆಡೆ ಈ ನಿಯಮವು ಅನ್ವಯವಾಗುವುದಿಲ್ಲ. ಮಂತ್ರದಲ್ಲಿರುವ ಯಾವುದಾ ದರೂ ಲಿಂಗ (ಚಿಹ್ನೆ)ದಿಂದ ವಿನಿಯೋಗವನ್ನು ಹೇಳಿದೆಡೆಯಲ್ಲಿ ಮಾತ್ರ ಈ ನಿಯಮವು ಇರುತ್ತದೆ. 'ದಿವೋ ವಾ ವಿಷ್ಣೋ' ಎಂಬುದು ಶ್ರುತಿವಿನಿಯೋಗ. ಅಲ್ಲಿ ನಿಯಮವಿಲ್ಲ.

**೮) ಮಂತ್ರದಲ್ಲಿರುವ 'ಯಜತೇ' 'ದದಾತಿ' ಎಂಬುವು ವಿಧಾಯಕಗಳೇ?**

ಶ್ರುತಿಯಲ್ಲಿ 'ದೇವಾಗ್ಁಶ್ಚ ಯಾಭಿರ್ಯಜತೇ ದದಾತಿ ಚ । ಜ್ಯೋಗಿತ್ತಾಭಿಃ ಸಚತೇ ಗೋಪತಿಸ್ಸಹ ।' (ತೈ. ಬ್ರಾ. 2-4-6) 'ಯಜಮಾನನು ತಾನು ದಾನ ಮಾಡುವ ಮತ್ತು ದೇವತೆಗಳ ಯಾಗಕ್ಕಾಗಿ ಉಪಯೋಗಿಸುವ ಗೋವುಗಳೊಡನೆ ಪರಲೋಕ ಗಳಲ್ಲಿ ಚಿರಕಾಲ ಸುಖವಾಗಿ ವಾಸಿಸುತ್ತಾನೆ' ಎಂದು ಇದರ ಅರ್ಥ. ಬ್ರಾಹ್ಮಣ ವಾಕ್ಯಗಳಾದ 'ವಾಯುವ್ಯಗ್ಁ ಶ್ವೇತಮಾಲಭೇತ' ಮುಂತಾದುವುಗಳಲ್ಲಿರುವ 'ಆಲಭೇತ' ಮುಂತಾದ ಕ್ರಿಯಾಪದಗಳು ಯಾಗವನ್ನು ವಿಧಿಸುವಂತೆ ಈ ಮಂತ್ರದಲ್ಲಿರುವ 'ಯಜತೇ' 'ದದಾತಿ' ಮುಂತಾದವುಗಳಿಂದ ಯಾಗವು ವಿಧಿಸಲ್ಪಟ್ಟಂತೆಯೇ ಅಲ್ಲವೇ? ಎಂಬುದು ಪೂರ್ವಪಕ್ಷ.

ಇಲ್ಲಿಯ ಸಿದ್ಧಾಂತವು ಹೀಗಿದೆ. **'ಯತ್'** ಮೊದಲಾದ ಪದಗಳಿಂದ ಕೂಡಿದ ಆಖ್ಯಾತಗಳು (ಕ್ರಿಯಾಪದಗಳು) ವಿಧಾಯಕಗಳಲ್ಲ. ಆ ಪದಗಳು ಅನುವಾದಕಗಳು. ಇನ್ನೊಂದೆಡೆ ವಿಹಿತವಾದುದನ್ನು ಅನುವಾದ ಮಾಡುತ್ತವೆಯಷ್ಟೆ. ಆದುದರಿಂದ ಅವು ತಿಳಿದ ವಿಷಯವನ್ನೇ ತಿಳಿಸಿದಂತಾಯಿತು. ಅನವಗತ (ತಿಳಿಯದ) ವಿಷಯಗಳನ್ನು ತಿಳಿಸುವ ವಾಕ್ಯಗಳೇ ವಿಧಾಯಕಗಳೆನಿಸುತ್ತವೆ. ಈ ಕಾರಣದಿಂದ **'ದೇವಾಗ್ಁಶ್ಚ'** ಮುಂತಾದ ಮಂತ್ರಗಳಲ್ಲಿರುವ **'ಯಜತೇ' 'ದದಾತಿ'** ಮುಂತಾದ ಕ್ರಿಯಾಪದಗಳು ವಿಧಾಯಕಗಳಲ್ಲ.

ಹೀಗೆಯೇ ಮಂತ್ರಗಳಲ್ಲಿರುವ ಆಮಂತ್ರಣವಾಚಕಗಳು, ಕ್ರಿಯಾಪದದ ಉತ್ತಮ ಪುರುಷದ ಪ್ರಯೋಗ ಇವುಗಳೂ ಮಂತ್ರಗಳ ವಿಧಿಪ್ರತಿಬಂಧಕಗಳೆನ್ನಿಸಿಕೊಳ್ಳುತ್ತವೆ.

ಈ ಕ್ರಿಯಾಪದಗಳು ಅಭಿಧಾಯಕಗಳೆನಿಸಿಕೊಳ್ಳುತ್ತವೆ.

ಹೀಗೆ ಸಾಯಣಾಚಾರ್ಯರು ಸಾಮಾನ್ಯವಿಚಾರಗಳ ಮೀಮಾಂಸೆಯನ್ನು ವೇದಕ್ಕೆ ಎಲ್ಲೆಡೆಯೂ ಅನ್ವಯವಾಗುವಂತೆ ತಿಳಿಸಿರುತ್ತಾರೆ. ಈ ನಿರ್ಣಯಗಳನ್ನು ಹೀಗೆ ಸಂಗ್ರಹಿಸಬಹುದು.

೧. ವೇದಾರ್ಥದ ಮೀಮಾಂಸೆಯು ಅವಶ್ಯಕ.

೨. ಪೂರ್ವೋತ್ತರಕಾಂಡಗಳಿಂದ ತಿಳಿಸುವ ಧರ್ಮ-ಬ್ರಹ್ಮಗಳೆಂಬ ವಿಷಯವು ವೇದದ ಹೊರತು ಬೇರೆ ಪ್ರಮಾಣಗಳಿಂದ ತಿಳಿಯಲಾಗದು.

೩. ವೇದದ ವಾಕ್ಯಗಳಿಗೆ ಪ್ರತ್ಯೇಕ ಸಂಕೇತದ ಅಪೇಕ್ಷೆ ಇಲ್ಲ.

೪. ವೇದದಲ್ಲಿರುವ ಪದ-ಪದಾರ್ಥಗಳು ಲೌಕಿಕಗಳೇ.

೫. ವೇದದಲ್ಲಿರುವ ವಾಕ್ಯಗಳು ಪೌರುಷೇಯವಲ್ಲ.

೬. ಅಭಿಯುಕ್ತರ (ಯಾಜ್ಞಿಕರು) ಹೇಳಿಕೆಯೇ ಮಂತ್ರದ ಲಕ್ಷಣ.



೭. ಪಾದ-ವೃತ್ತ-ಗಾನರಹಿತವಾಗಿ ಒಟ್ಟುಗೂಡಿದಂತೆ (ಪ್ರಶ್ಲಿಷ್ಟ) ಪಠಿತವಾದ ಮಂತ್ರಗಳೇ ಯಜುಸ್ಸುಗಳು.

೮. ಅನುಷ್ಠಾನದ ಸಮಯದಲ್ಲಿ ಮಂತ್ರಗಳ ಅರ್ಥವನ್ನು ಸ್ಮರಿಸುವುದೇ ಮಂತ್ರೋಚ್ಚಾರಣೆಯ ಫಲ.

೯. ಮಂತ್ರಗಳಲ್ಲಿರುವ 'ಯಜತೇ' 'ದದಾತಿ' ಮುಂತಾದವುಗಳು ವಿಧಾಯಕಗಳಲ್ಲ.

ಹೀಗೆ ಸಾಮಾನ್ಯಮೀಮಾಂಸೆಯನ್ನು ನಿರೂಪಿಸಿದ ನಂತರ ಶ್ರೀ ಸಾಯಣಾಚಾರ್ಯರು ಈ ಪ್ರಥಮ ಅನುವಾಕಕ್ಕೆ ಅನ್ವಯವಾಗುವಂತಹ ಮೀಮಾಂಸೆಯ ವಿಷಯಗಳನ್ನು ತಿಳಿಸಿರುತ್ತಾರೆ.

* * *

## ೧. 'ಇಷೇ ತ್ವಾ' ಎಂಬುದು ಭಿನ್ನಮಂತ್ರವೇ?

'ಇಷೇ ತ್ವಾ' 'ಊರ್ಜೇ ತ್ವಾ' ಎಂಬಲ್ಲಿ ಕ್ರಿಯಾಪದವಿಲ್ಲದುದರಿಂದ ಹಿಂದೆ ತಿಳಿಸಿದ 'ಉರು ಪ್ರಥಸ್ವ' ಎಂಬ ಮಂತ್ರದಂತೆ ಅದೃಷ್ಟಕ್ಕಾಗಿ ಉಚ್ಚಾರಣೆಯನ್ನು ಮಾಡಬೇಕು. ಎರಡು ಮಂತ್ರಗಳಿಗೆ ಅದೃಷ್ಟ ಒಂದನ್ನು ಕಲ್ಪಿಸುವುದು ಯುಕ್ತವಾದುದರಿಂದ ಇವೆರಡೂ ಕೂಡಿ ಒಂದೇ ಮಂತ್ರವೆಂದು ತಿಳಿಯುವುದು ಯುಕ್ತ ಎಂಬುದು ಪೂರ್ವಪಕ್ಷ.

ಇಲ್ಲಿಯ ಸಿದ್ಧಾಂತವು ಹೀಗಿದೆ. ಶಾಖಾಂತರದಲ್ಲಿ ಈ ಮಂತ್ರಗಳಿಗೆ "ಇಷೇ ತ್ವೇತ್ಯಾಚ್ಛಿನತ್ತಿ" 'ಊರ್ಜೇ ತ್ವೇತ್ಯನುಮಾರ್ಷ್ಟಿ' ಎಂಬುದಾಗಿ ಎರಡು ವಿನಿಯೋಗ ಗಳನ್ನು ಹೇಳಿರುತ್ತಾರೆ. ಆದುದರಿಂದ 'ಆಚ್ಛಿನದ್ಮಿ' 'ಅನುಮಾರ್ಜ್ಮಿ' ಎಂಬುದಾಗಿ ಕ್ರಿಯಾಪದಗಳನ್ನು ಅಧ್ಯಾಹಾರ ಮಾಡಿಕೊಳ್ಳಬೇಕು. ಈ ರೀತಿ ಎರಡು ಅರ್ಥಗಳನ್ನು ವ್ಯಕ್ತಗೊಳಿಸುವುದರಿಂದ 'ಇಷೇ ತ್ವಾ' ಎಂಬುದು ಒಂದು ಮಂತ್ರ; 'ಊರ್ಜೇ ತ್ವಾ' ಎಂಬುದು ಮತ್ತೊಂದು ಮಂತ್ರ. ಆಪಸ್ತಂಬರು ಈ ಮಂತ್ರಗಳಿಗೆ ವಿನಿಯೋಗವನ್ನು ಹೇಳುವಾಗ ಒಂದು ಮಂತ್ರವೆಂಬ ಪಕ್ಷವನ್ನು ಹೇಳಿ, ವಿಕಲ್ಪವಾಗಿ ಎರಡು ಮಂತ್ರಗಳೆಂಬ ಪಕ್ಷವನ್ನು ಹೇಳಿರುತ್ತಾರೆ.

## ೨. ಬ್ರಾಹ್ಮಣವೆಂದರೇನು?

ಚಾತುರ್ಮಾಸ್ಯಪ್ರಕರಣದಲ್ಲಿ 'ಏತದ್ಬ್ರಾಹ್ಮಣಾನ್ಯೇವ ಪಂಚ ಹವೀಗ್‍ಂಷಿ' । ಎಂಬ ವಾಕ್ಯವಿದೆ. ಶುನಾಸೀರೀಯಪರ್ವದಲ್ಲಿ ವೈಶ್ವದೇವಪರ್ವದಂತೆಯೇ ಐದು ಹವಿಸ್ಸುಗಳಿರುತ್ತವೆ ಎಂದು ಆ ವಾಕ್ಯದ ಅರ್ಥ. ಆದರೆ ಬ್ರಾಹ್ಮಣಭಾಗದಿಂದ ಹವಿಸ್ಸು ಗಳನ್ನು ತಿಳಿಯಬಹುದಾದರೂ ಬ್ರಾಹ್ಮಣ ಎಂದರೇನು? ಎಂಬ ಲಕ್ಷಣವನ್ನು ತಿಳಿಸಿಲ್ಲ. ಅಲ್ಲದೆ ವೇದಭಾಗವು ಇಷ್ಟೇ ಎಂಬುದಾಗಿ ತಿಳಿಯದಿರುವುದರಿಂದ ಬ್ರಾಹ್ಮಣ ಎಂದ ರೇನು? ಎಂಬ ಲಕ್ಷಣವನ್ನು ಹೇಳಲು ಬರುವಂತಿಲ್ಲ ಎಂಬುದು ಇಲ್ಲಿಯ ಪೂರ್ವಪಕ್ಷ.

ಇಲ್ಲಿಯ ಸಿದ್ಧಾಂತವು ಹೀಗಿದೆ. ವೇದರಾಶಿಯನ್ನು ಮಂತ್ರ ಮತ್ತು ಬ್ರಾಹ್ಮಣ ಎಂದು ಎರಡು ವಿಭಾಗ ಮಾಡಿರುವುದರಿಂದ ಮಂತ್ರವನ್ನು ಬಿಟ್ಟು ಉಳಿದ ವೇದಭಾಗ ವನ್ನು, ಬ್ರಾಹ್ಮಣ ಎಂದು ಲಕ್ಷಣವನ್ನು ಹೇಳಬಹುದು. 'ಮಂತ್ರಬ್ರಾಹ್ಮಣಯೋ ರ್ವೇದನಾಮಧೇಯಮ್" ಎಂಬ ವಚನವಿದ್ದೇ ಇದೆ.

ಮಂತ್ರ-ಬ್ರಾಹ್ಮಣಗಳಲ್ಲದ ಇತಿಹಾಸ, ಪುರಾಣ, ಕಲ್ಪ, ಗಾಥಾ, ನಾರಾಶಂಸಿ ಮುಂತಾದವುಗಳೂ ವೇದದಲ್ಲಿ ಇರುವುದರಿಂದ ಮಂತ್ರವನ್ನು ಬಿಟ್ಟು ಉಳಿದುದು ಬ್ರಾಹ್ಮಣ ಎಂಬ ಲಕ್ಷಣವು ಸರಿಯಾದೀತೇ? ಬ್ರಹ್ಮಯಜ್ಞಪ್ರಕರಣದಲ್ಲಿ 'ಯದ್ಬ್ರಾಹ್ಮಣಾನೀತಿಹಾಸಾನ್ಪುರಾಣಾನಿ ಕಲ್ಪಾನ್ಗಾಥಾ ನಾರಾಶಗ್‍ಂಸೀಃ' ಎಂಬ ವಾಕ್ಯವಿದೆ. ಹೀಗಿದ್ದರೂ 'ದೇವಾಸುರಾಃ ಸಂಯತ್ತಾ ಆಸನ್' । ಮೊದಲಾದ ಇತಿಹಾಸಗಳೂ, ಇದಂ ವಾ ಅಗ್ರೇ ನೈವ ಕಿಂಚನಾಸೀತ್ । ಮೊದಲಾಗಿ ಸೃಷ್ಟ್ಯಾದಿ ಪ್ರತಿಪಾದಕಗಳಾದ ಪುರಾಣಗಳೂ, ಕಲ್ಪೋಽಥ ಊರ್ಧ್ವಮ್ । ಯದಿ ಬಲಿಗ್‍ಂ

ಹರೇತ್ । ಮೊದಲಾಗಿ ಪ್ರಯೋಗಪ್ರತಿಪಾದಕಗಳಾದ ಕಲ್ಪಗಳೂ, ಯಮಗಾಥಾಭಿಃ ಪರಿಗಾಯತಿ । ಮೊದಲಾದ ಗಾಥೆಗಳೂ ಮತ್ತು ಮನುಷ್ಯವೃತ್ತಾಂತಪ್ರತಿಪಾದಕಗಳಾದ ನಾರಾಶಂಸಿಗಳೂ ಸಹ ಬ್ರಾಹ್ಮಣಗಳೇ ಆಗಿವೆ. ಬ್ರಾಹ್ಮಣಗಳಿಗೇ ಈ ರೀತಿಯ ವಿಶೇಷವಾದ ಹೆಸರುಗಳಷ್ಟೇ. ಆದುದರಿಂದ ಮಂತ್ರಗಳನ್ನು ಬಿಟ್ಟು ಉಳಿದ ವೇದಭಾಗವನ್ನು 'ಬ್ರಾಹ್ಮಣ' ಎನ್ನಬಹುದು.

ಈ ಬ್ರಾಹ್ಮಣವು ಎರಡು ಬಗೆಯಾಗಿರುತ್ತದೆ. 1) ವಿಧಿರೂಪವಾದ ಬ್ರಾಹ್ಮಣ 2) ಅರ್ಥವಾದರೂಪವಾದ ಬ್ರಾಹ್ಮಣ. 'ಯತ್ಪರ್ಣಶಾಖಯಾ ವತ್ಸಾನಪಾಕರೋತಿ' [ಮುತ್ತುಗದ ರೆಂಬೆಯಿಂದ ಕರುಗಳನ್ನು ದೂರ ಮಾಡಬೇಕು.] ಮೊದಲಾದವುಗಳು ವಿಧಿರೂಪವಾದ ಬ್ರಾಹ್ಮಣಗಳು. 'ತೃತೀಯಸ್ಯಾಮಿತೋ ದಿವಿ ಸೋಮ ಆಸೀತ್।' [ಇಲ್ಲಿಂದ ಮೂರನೆಯ ಲೋಕದಲ್ಲಿ ಸೋಮವು ಇದ್ದಿತು.] ಮೊದಲಾದವುಗಳು ಅರ್ಥವಾದರೂಪವಾದ ಬ್ರಾಹ್ಮಣಗಳು.

೩. ವಿಧಿಯು ಪ್ರಮಾಣವು ಹೇಗೆ?

ಲೋಕದಲ್ಲಿ ಯಾವುದೇ ಪದದ ಅರ್ಥವನ್ನು ತಿಳಿಯುವ ಮೊದಲು ಆ ಪದಕ್ಕೂ ಪದಾರ್ಥಕ್ಕೂ ಇರುವ ಸಂಬಂಧವು ತಿಳಿದಿರಲೇಬೇಕು. ಇಲ್ಲವಾದರೆ ಯಾವುದೋ ಪದದಿಂದ ಯಾವುದೋ ಅರ್ಥವು ತೋರೀತು. ಈ ಸಂಬಂಧವನ್ನು 'ಶಕ್ತಿ' ಎನ್ನುತ್ತಾರೆ. ಈ ಶಕ್ತಿಜ್ಞಾನವು ನಮಗೆ ಬರುವುದು ವೃದ್ಧವ್ಯವಹಾರದಿಂದ. 'ಘಟಮಾನಯ' ಎಂಬ ವಾಕ್ಯವನ್ನು ಕೇಳಿದ ನಂತರ ಎರಡನೆಯವನು ಮಡಕೆಯನ್ನು ತಂದುದನ್ನು ಕಂಡು ಮೂರನೆಯವನಿಗೆ 'ಘಟ' ಎಂಬ ಪದದ ಶಕ್ತಿಯು ತಿಳಿಯುತ್ತದೆ. ಹೀಗಿರುವಾಗ, ವೇದದಲ್ಲಿರುವ ವಿಧಿವಾಕ್ಯಗಳು ಧರ್ಮವನ್ನು ಪ್ರತಿಪಾದಿಸುತ್ತವೆಯಷ್ಟೇ. ಧರ್ಮವೆಂದರೆ ಅನುಷ್ಠಾನದಿಂದ ಉಂಟಾಗುವ ಅಪೂರ್ವ ಅಥವಾ ಅಪೂರ್ವಕ್ಕೆ ಕಾರಣವಾದ ಯಾಗ. ಈ ಅಪೂರ್ವವು ಅಲೌಕಿಕವಾದುದರಿಂದ ವಿಧಿವಾಕ್ಯಗಳಿಗೆ ಅವುಗಳೊಡನೆ ವೃದ್ಧವ್ಯವಹಾರವಿಲ್ಲದ ಕಾರಣ, ವಿಧಿವಾಕ್ಯಗಳಿಗೂ ಅವುಗಳಿಂದ ಪ್ರತಿಪಾದ್ಯವಾದ ಅಪೂರ್ವಕ್ಕೂ ಇರುವ ಸಂಬಂಧ(ಶಕ್ತಿ)ವು ತಿಳಿಯದ ಕಾರಣ ಅರ್ಥಜ್ಞಾನವು ಉಂಟಾಗುವುದಿಲ್ಲ. ಅರ್ಥಜ್ಞಾನವನ್ನು ಉಂಟುಮಾಡದ ವಿಧಿಯು ಪ್ರಮಾಣ ಹೇಗಾದೀತು? ಇದು ಪೂರ್ವಪಕ್ಷ.

ಇಲ್ಲಿಯ ಸಿದ್ಧಾಂತವು ಹೀಗಿದೆ. 'ಯತ್ಪರ್ಣಶಾಖಯಾ ವತ್ಸಾನಪಾಕರೋತಿ' ಎಂಬ ಶ್ರುತಿವಾಕ್ಯದಲ್ಲಿ ಪರ್ಣ, ಶಾಖಾ ಈ ಶಬ್ದಗಳ ಅರ್ಥವು ಲೋಕದಿಂದಲೇ

ತಿಳಿದಿರುತ್ತದೆಯಷ್ಟೆ. 'ಅಪಾಕರೋತಿ' ಎಂಬುದರ ಅರ್ಥವೂ ತಿಳಿದಿರುತ್ತದೆ. ದೂರ ಮಾಡುತ್ತಾನೆ ಎಂದು ಅದರ ಅರ್ಥ. ಹಾಗೆ ದೂರ ಮಾಡುವುದರಿಂದ ಅಪೂರ್ವವು ಉಂಟಾಗುತ್ತದೆ ಎಂಬುದು ಮಾತ್ರ ಲೋಕದಿಂದ ತಿಳಿಯುವಂತಿಲ್ಲ. ಒಂದು ಪದದ ಅರ್ಥವು ತಿಳಿಯದಿದ್ದರೂ ಅದರ ಜೊತೆಗಿರುವ ಉಳಿದ ಪದಗಳ ಅರ್ಥವನ್ನು ತಿಳಿದವನು ಸಾಹಚರ್ಯದಿಂದ ತಿಳಿಯದಿರುವ ಪದದ ಅರ್ಥವನ್ನೂ ತಿಳಿಯುತ್ತಾನೆ. ಉದಾಹರಣೆಗೆ-ಪ್ರಭಿನ್ನಕಮಲೋದರೇ ಮಧುಕರೋ ಮಧೂನಿ ಪಿಬತಿ । (ಅರಳಿದ ತಾವರೆಯ ಮಧ್ಯದಲ್ಲಿ ದುಂಬಿಯು ರಸವನ್ನು ಕುಡಿಯುತ್ತದೆ) ಎಂಬ ವಾಕ್ಯದಲ್ಲಿ ಮಧುಕರ ಎಂಬ ಶಬ್ದದ ಅರ್ಥವನ್ನು ತಿಳಿಯದವನು ಉಳಿದ ಪದಗಳ ಅರ್ಥವನ್ನು ತಿಳಿದ ಬಳಿಕ ತಾವರೆಯ ರಸವನ್ನು ಹೀರುತ್ತಿರುವ ದುಂಬಿಯೇ 'ಮಧುಕರ' ಎಂಬ ಶಬ್ದದ ಅರ್ಥ ಎಂದು ತಿಳಿಯುವಂತೆ 'ಪರ್ಣ' 'ಶಾಖಾ' ಎಂಬ ಶಬ್ದಗಳು ಜೊತೆಯಲ್ಲಿರುವುದರಿಂದ ಪರ್ಣಶಾಖೆಯಿಂದ ವತ್ಸಾಪಕರಣವನ್ನು ಮಾಡಿದರೇ ಅಪೂರ್ವವು ಉಂಟಾಗುತ್ತದೆ ಎಂಬುದು ಅಪಾಕರೋತಿ ಎಂಬುದರ ಅರ್ಥ ಎಂದು ತಿಳಿಯುತ್ತಾನೆ. ಆದುದರಿಂದ ಅಪೂರ್ವಕ್ಕೂ ವಿಧಿವಾಕ್ಯಗಳಿಗೂ ಸಂಬಂಧವು ಇರುವುದರಿಂದಲೂ, ವಿಧಿಗೆ ಬೇರೆ ಮೂಲಪ್ರಮಾಣದ ಅಪೇಕ್ಷೆ ಇಲ್ಲದಿರುವುದರಿಂದ ವಿಧಿಯು ಸ್ವತಃ ಪ್ರಮಾಣವಾಗಿದೆ.



## ೪. 'ವತ್ಸಾನಪಾಕರೋತಿ' ಎಂಬುದು ಹೇಗೆ ವಿಧಿ?

'ಉಪವೀತಂ ದೇವಾನಾಮುಪವ್ಯಯತೇ' ಎಂಬ ಶ್ರುತಿವಾಕ್ಯದಂತೆ ದರ್ಶಪೂರ್ಣಮಾಸೇಷ್ಟಿಯಲ್ಲಿ ಹೋತೃವು ಸಾಮಿಧೇನೀಮಂತ್ರಗಳನ್ನು ಹೇಳುವಾಗ ಉಪವೀತಿಯಾಗಿರುತ್ತಾನೆ. ಈ ಮೇಲಿನ ವಾಕ್ಯವು ಯಜ್ಞೋಪವೀತಿಯಾಗಿರಬೇಕೆಂದು ವಿಧಿಸುವುದೇ? ಅಂದರೆ ಇದು ವಿಧಿವಾಕ್ಯವೇ? ಎಂಬ ಸಂಶಯವು ಬಂದಾಗ 'ನಿತ್ಯೋದಕೀ ನಿತ್ಯ ಯಜ್ಞೋಪವೀತೀ' ಎಂಬ ಸ್ಮೃತಿವಾಕ್ಯದಂತೆ ವಿಹಿತವಾದ ಯಜ್ಞೋಪವೀತಿಯಾಗಿರಬೇಕೆಂಬುದನ್ನು ಈ ವಾಕ್ಯವು ಅನುವಾದ ಮಾಡುತ್ತದೆ ಎಂದು ತಿಳಿಸಲಾಗಿದೆ. ಅಲ್ಲದೆ ವಿಧಿವಾಕ್ಯದಲ್ಲಿ ಇರಬೇಕಾದ ಲಿಙ್‌ಲಕಾರದ ರೂಪವಾಗಲೀ (ಯಜೇತ ಎಂಬಂತೆ). ಲೋಟ್‌ಲಕಾರದ ರೂಪವಾಗಲೀ (ಯಜತಾಂ ಎಂಬಂತೆ) 'ತವ್ಯ' ಪ್ರತ್ಯಯಾಂತರೂಪವಾಗಲೀ (ಯಷ್ಟವ್ಯಂ ಎಂಬಂತೆ) ಈ ವಾಕ್ಯದಲ್ಲಿ ಇಲ್ಲವಾದ ಕಾರಣ 'ಉಪವೀತಂ...' ಎಂಬ ವಾಕ್ಯವು ವಿಧಿವಾಕ್ಯವಲ್ಲವೆಂದು ತಿಳಿಸಲಾಗಿದೆ. ಅದರಂತೆಯೇ 'ವತ್ಸಾನಪಾಕರೋತಿ' ಎಂಬ ವಾಕ್ಯವೂ ವಿಧಿವಾಕ್ಯವಾಗಲಾರದು ಎಂಬುದು ಪೂರ್ವಪಕ್ಷ.

ಇಲ್ಲಿಯ ಸಿದ್ಧಾಂತವು ಹೀಗಿದೆ; 'ದೇವಾನಾಮುಪವ್ಯಯತೇ' ಎಂಬ ವಾಕ್ಯವು ವಿಧಿವಾಕ್ಯವೇ. 'ನಿತ್ಯೋದಕೀ....' ಎಂಬ ಸ್ಮೃತಿವಾಕ್ಯದಿಂದ ಯಜ್ಞೋಪವೀತಿಯಾಗಿರಬೇಕೆಂಬುದು ಪುರುಷಾರ್ಥವಾಗಿ ವಿಧಿಸಲ್ಪಟ್ಟಿದ್ದರೂ 'ಉಪವ್ಯವತೇ' ಎಂಬ ವಾಕ್ಯವು ದರ್ಶ-ಪೂರ್ಣಮಾಸವೆಂಬ ಕ್ರತುವಿಗಾಗಿ ಯಜ್ಞೋಪವೀತದ ಧರಿಸುವಿಕೆಯನ್ನು ವಿಧಿಸುತ್ತದೆಯಾದುದರಿಂದ ಅದು ವಿಧಿವಾಕ್ಯವೇ. 'ಉಪವ್ಯಯತೇ' ಎಂಬುದು ಲಟ್‌ಲಕಾರದ ರೂಪವಲ್ಲ. ಅದು ಲೇಟ್‌ಲಕಾರದ ರೂಪ. 'ಲಿಙರ್ಥೇ ಲೇಟ್' (ಪಾ.ಸೂ. 3-4-7) ಎಂಬ ವ್ಯಾಕರಣಸೂತ್ರವು ಲಿಙ್‌ಲಕಾರದ ಅರ್ಥದಲ್ಲಿ ಲೇಟ್ ಲಕಾರವನ್ನು ವಿಧಿಸುತ್ತದೆ. ಲಿಙ್‌ಲಕಾರಕ್ಕೆ ವಿಧಿಯು ಅರ್ಥವಾಗಿರುವುದರಿಂದ ಲೇಟ್‌ಲಕಾರವು ವಿಧಿಯೆಂಬ ಅರ್ಥವನ್ನೇ ಬೋಧಿಸುತ್ತದೆ. ಅಂತೆಯೇ 'ವತ್ಸಾನಪಾಕರೋತಿ' ಎಂಬ ಶ್ರುತಿವಾಕ್ಯದಲ್ಲಿಯೂ 'ಅಪಾಕರೋತಿ' ಎಂಬುದು ಲೇಟ್‌ಲಕಾರದ ರೂಪವಾದುದರಿಂದ ವತ್ಸಾನಪಾಕರೋತಿ ಎಂಬುದೂ ವಿಧಿವಾಕ್ಯವೇ.

### ೫. 'ಯತ್ಪರ್ಣಶಾಖಯಾ....' ಎಂಬುದು ಹೇಗೆ ವಿಧಿ ?

ಹಿಂದೆ 'ದೇವಾಗ್ಂಶ್ಚ ಯಾಭಿರ್ಯಜತೇ' ಎಂಬ ವಾಕ್ಯದಲ್ಲಿ 'ಯತ್' ಶಬ್ದವಿದ್ದುದರಿಂದ 'ಯತ್' ಎಂಬ ಪ್ರಾತಿಪದಿಕದೊಡನೆ ಸೇರಿರುವ ಆಖ್ಯಾತಗಳು ವಿಧಿವಾಕ್ಯಗಳಲ್ಲವೆಂದು ನಿರ್ಧರಿಸಲಾಗಿದೆ. ಅದರಂತೆಯೇ 'ಯತ್ಪರ್ಣಶಾಖಯಾ ವತ್ಸಾನಪಾಕರೋತಿ' ಎಂಬ ವಾಕ್ಯದಲ್ಲಿಯೂ 'ಯತ್' ಶಬ್ದವಿರುವುದರಿಂದ ಈ ವಾಕ್ಯವು ಹೇಗೆ ವಿಧಿವಾಕ್ಯ? ಎಂಬ ಸಂಶಯವು ಬಂದಾಗ 'ಉಪರಿಧಾರಣ' ನ್ಯಾಯದಂತೆ ಈ ವಾಕ್ಯವು ವಿಧಿಯೆನಿಸುತ್ತದೆ.

ಆ ನ್ಯಾಯದ ನಿರೂಪಣೆಯು ಹೀಗಿದೆ; ಪ್ರೇತಾಗ್ನಿಹೋತ್ರಪ್ರಕರಣದಲ್ಲಿ 'ಅಧಸ್ತಾತ್ ಸಮಿಧಂ ಧಾರಯನ್ನುದ್ರವೇತ್, ಉಪರಿಷ್ಟಾದ್ಧಿ ದೇವೇಭ್ಯೋ ಧಾರಯತಿ' ಎಂಬ ವಾಕ್ಯವಿದೆ. ಪ್ರೇತಾಗ್ನಿಹೋತ್ರದಲ್ಲಿ ಪೈತೃಕವಾದ ಹವಿಸ್ಸನ್ನು ಅರ್ಪಿಸಲು ಮಂತ್ರವನ್ನು ಹೇಳುವಾಗ ಹವಿಸ್ಸಿನ ಕೆಳಗಡೆ ಸಮಿತ್ತನ್ನು ಧರಿಸಿರಬೇಕು.ದೇವತೆಗಳಿಗೆ ಹವಿಸ್ಸನ್ನು ಅರ್ಪಿಸುವ ಸಂದರ್ಭದಲ್ಲಿ ಸಮಿತ್ತನ್ನು ಹವಿಸ್ಸಿನ ಮೇಲೆ ಹಿಡಿದಿರಬೇಕು. ಎಂದು ಆ ವಾಕ್ಯದ ಅರ್ಥ. ಈ ಎರಡು ವಾಕ್ಯಗಳಲ್ಲಿ ಎರಡನೆಯ ವಾಕ್ಯದಲ್ಲಿ 'ಹಿ' ಎಂಬ ಶಬ್ದವಿರುವುದರಿಂದ ಈ ವಾಕ್ಯವು ವಿಧಿವಾಕ್ಯವಲ್ಲ. ಅನುವಾದಕವಾಕ್ಯ. ಏಕೆಂದರೆ ಮೀಮಾಂಸಾಶಾಸ್ತ್ರದಲ್ಲಿ ಉಪರಿಧಾರಣನ್ಯಾಯವನ್ನು ತಿಳಿಸುವ ಪಾದದಲ್ಲಿಯೇ ಆ ನ್ಯಾಯವನ್ನು ನಿರೂಪಿಸುವ ಅಧಿಕರಣಕ್ಕಿಂತಲೂ ಹಿಂದಿನ ಅಧಿಕರಣದಲ್ಲಿ

'ಯಜ್ಞೋಪವೀತೀ ಹಿ...' ಎಂಬಲ್ಲಿ 'ಹಿ' ಶಬ್ದವಿರುವುದರಿಂದಲೂ, 'ಯೇ ಪುರೋದಂಚೋ ದರ್ಭಾಃ' ಎಂಬಲ್ಲಿ 'ಯತ್' ಶಬ್ದವಿರುವುದರಿಂದಲೂ ಆ ಎರಡೂ ವಾಕ್ಯಗಳೂ ಅನುವಾದಕಗಳೆಂದು ಸಿದ್ಧಾಂತವಾಗಿದೆ. ಅಂತೆಯೇ 'ಉಪರಿಷ್ಟಾದ್ಧಿ' ಎಂಬ ವಿಚಾರವು ಬಂದಾಗ ಹೀಗೆ ಸಿದ್ಧಾಂತ ಮಾಡಲಾಗಿದೆ.

ದೇವಕರ್ಮದಲ್ಲಿ ಸಮಿತ್ತನ್ನು ಮೇಲಿಟ್ಟುಕೊಂಡು ಹೋಮವನ್ನು ಮಾಡಬೇಕು ಎಂದು ಬೇರೆ ಎಲ್ಲಿಯೂ ವಿಧಿಯು ಇಲ್ಲದಿರುವುದರಿಂದ 'ಹಿ' ಎಂಬ ವಿಧಿಶಕ್ತಿಯನ್ನು ಪ್ರತಿಬಂಧಿಸುವ ಅವ್ಯಯವು ಇದ್ದರೂ ಅದರ ಅರ್ಥವನ್ನು ವಿವಕ್ಷೆ ಮಾಡದೆ 'ಉಪರಿಷ್ಟಾತ್....' ಎಂಬುದು ವಿಧಿವಾಕ್ಯವೇ ಎಂದು ನಿರ್ಧರಿಸಲಾಗಿದೆ. ಇದೇ ಉಪರಿಧಾರಣ ನ್ಯಾಯ. ಈ ಉಪರಿಧಾರಣನ್ಯಾಯದಂತೆಯೇ 'ಯತ್ಪರ್ಣಶಾಖಯಾ ವತ್ಸಾನಪಾಕರೋತಿ ಎಂಬ ವಾಕ್ಯವು ವಿಧಿವಾಕ್ಯವೆನ್ನಿಸುತ್ತದೆ'.

### ೬. ಕರುಗಳನ್ನು ದೂರ ಮಾಡಬೇಕೆನ್ನುವುದು ವಿಧಿಯಾಗಬೇಕೆ?

ದರ್ಶಯಾಗಕ್ಕೆ ಬೇಕಾದ ಮೊಸರನ್ನು ಪಡೆಯಲು ಯಾಗದ ಹಿಂದಿನ ದಿನ ಪ್ರಾತಃಕಾಲ ಗೋವುಗಳಿಂದ ಕರುಗಳನ್ನು ಪ್ರತ್ಯೇಕಿಸಬೇಕು. 'ಯತ್ಪರ್ಣಶಾಖಯಾ' ಎಂಬ ಶ್ರುತಿವಾಕ್ಯವು ಇದನ್ನೇ ತಿಳಿಸುತ್ತದೆಯಷ್ಟೆ. ಆದರೆ ಸಾಯಂಕಾಲ ಹಾಲನ್ನು ಕರೆಯುವವರು ಬೆಳಗಿನ ವೇಳೆ ಕರುಗಳನ್ನು ಪ್ರತ್ಯೇಕ ಮಾಡಿಯೇ ಮಾಡುತ್ತಾರೆ. ಕರುಗಳು ತಾಯಿ ಹಸುಗಳ ಜೊತೆಯಲ್ಲಿಯೇ ಇದ್ದರೆ ಹಾಲೆಲ್ಲಿಯದು? ಮೊಸರು ಎಲ್ಲಿಂದ? ಆದುದರಿಂದ ಕರುಗಳನ್ನು ಬೇರ್ಪಡಿಸಬೇಕೆಂಬುದು ಲೋಕದ ನಡವಳಿಕೆಯಿಂದಲೇ ತಿಳಿಯುವುದರಿಂದ, ಬೇರೆ ಯಾವುದರಿಂದಲೂ ತಿಳಿಯದ ವಿಷಯವನ್ನು ಬೋಧಿಸುವುದೇ ವಿಧಿಯೆನಿಸುವುದರಿಂದ ಕರುಗಳನ್ನು ದೂರಮಾಡುವುದು ವಿಧಿಯಾಗಬೇಕೇ? ಎಂಬ ಪೂರ್ವಪಕ್ಷವು ಬಂದಾಗ ಅವಹನನದಂತೆ (ಬತ್ತವನ್ನು ಕುಟ್ಟುವಿಕೆ) ಇದೂ ಸಹ ನಿಯಮಾಪೂರ್ವಕ್ಕೆ ಕಾರಣವಾಗುವುದರಿಂದ ಇದೂ ಒಂದು ವಿಧಿಯೇ.

ಅವಹನನದ ಪ್ರಸಂಗವು ಹೀಗಿದೆ; 'ಸಮಿಧೋ ಯಜತಿ' ಮೊದಲಾದ ಪ್ರಯಾಜಾದಿವಿಧಾಯಕವಾಕ್ಯಗಳು ಹೇಗೆ ಅದೃಷ್ಟಾರ್ಥಗಳೋ ಅಂದರೆ ಪ್ರಯಾಜವನ್ನು* ಅನುಷ್ಠಾನ ಮಾಡಿದರೆ ಹೇಗೆ ಅಪೂರ್ವವು ಉಂಟಾಗುವುದೋ ಹಾಗೆಯೇ 'ವ್ರೀಹೀನವಹಂತಿ' ಎಂಬ ವಾಕ್ಯವೂ ಅದೃಷ್ಟಾರ್ಥವೇ. ಏಕೆಂದರೆ 'ಬತ್ತದಿಂದ

---

* ಸಂಪುಟ-೧ ಭಾಗ-೩ ಪುಟ-೭೫

ಅಕ್ಕಿಯನ್ನು ಸಂಪಾದಿಸುವುದಕ್ಕಾಗಿ ಕುಟ್ಟದೇ (ಅವಹನನ) ಬೇರೆ ಉಪಾಯಗಳಿಂದ ಹೊಟ್ಟನ್ನು ತೆಗೆದು ಅಕ್ಕಿಯನ್ನು ಮಾಡಿಕೊಳ್ಳುವುದಾದರೆ 'ಅವಹಂತಿ' ಎಂಬ ವಿಧಿಯು ವ್ಯರ್ಥವಾಗುತ್ತದೆ. ಆದುದರಿಂದ 'ವ್ರೀಹೀನವಹಂತಿ' ಎಂಬ ವಿಧಿಯೂ ಅದೃಷ್ಟಾರ್ಥವೇ'.

ಆದರೆ ದೃಷ್ಟಪ್ರಯೋಜನವಿರುವಾಗ ಅದೃಷ್ಟಪ್ರಯೋಜನವನ್ನು ಹೇಳುವುದು ಸರಿಯಲ್ಲ. 'ಸಮಿಧೋ ಯಜತಿ' ಮೊದಲಾದವು ಪ್ರಧಾನಕರ್ಮ ವಿಧಾಯಕಗಳು. 'ವ್ರೀಹೀನ್ ಅವಹಂತಿ', 'ಆಹವನೀಯಮಾದಧಾತಿ' (ಆಹವನೀಯಾಗ್ನಿಯನ್ನು ಆಧಾನ ಮಾಡುತ್ತಾನೆ) ಮೊದಲಾದವುಗಳು ಗುಣಕರ್ಮವಿಧಿಗಳು. ಆದುದರಿಂದ ಆವು ಅದೃಷ್ಟಾರ್ಥಗಳಲ್ಲ. ಈ ಕರ್ಮಗಳಿಂದ ಉಂಟಾಗುವ ಫಲವನ್ನು ನಾವು ಕಾಣಬಹುದು. ಆದರೆ ಬೇರೆ ಬೇರೆ ರೀತಿಯಿಂದ ಬತ್ತದಿಂದ ಅಕ್ಕಿಯನ್ನು ಮಾಡಿಕೊಳ್ಳಬಹುದಾದರೂ ಅವಹನನದಿಂದ ಅಕ್ಕಿಯನ್ನು ಮಾಡಿಕೊಂಡು ಅಂತಹ ಅಕ್ಕಿಯಿಂದ ಯಾಗವನ್ನು ನಡೆಸಿದಾಗ ಮಾತ್ರ ಒಂದು ಅಪೂರ್ವವು ಉಂಟಾಗುತ್ತದೆ ಎಂದು ನಿಯಮಾಪೂರ್ವಕ್ಕೆ ಅವಹನನವು ಕಾರಣವಾಗುತ್ತದೆ ಎಂದು ನಿರ್ಧರಿಸಲಾಗಿದೆ.



ಈ ಅವಹನನದಂತೆಯೇ ವತ್ಸಾಪಾಕರಣವು ಬೇರೆ ರೀತಿಯಿಂದ ಆಗಬಹುದಾದರೂ ಮಂತ್ರಪೂರ್ವಕವಾಗಿ ಮಾಡಿದ ವತ್ಸಾಪಾಕರಣದಿಂದ ಅಪೂರ್ವವು (ನಿಯಮಾಪೂರ್ವ) ಉಂಟಾಗುತ್ತದೆ. ಆದುದರಿಂದ ಇಂತಹ ನಿಯಮಾಪೂರ್ವಕ್ಕೆ ಕಾರಣವಾದ ವತ್ಸಾಪಾಕರಣವು ವಿಧಿಯೇ ಆಗಬೇಕು.

**೭. 'ಪ್ರಾಚೀಮಾಹರೇತ್' ಎಂಬುದರ ಅಭಿಪ್ರಾಯವೇನು?**

ಶ್ರುತಿಯಲ್ಲಿ 'ಯತ್ಪ್ರಾಚೀಮಾಹರೇತ್' ಎಂಬ ವಾಕ್ಯವಿದೆ. 'ಪ್ರಾಚೀ' ಎಂಬ ಶಬ್ದಕ್ಕೆ ಪೂರ್ವದಿಕ್ಕು ಎಂದರ್ಥ. ಶಬ್ದದ ಮುಖ್ಯಾರ್ಥವನ್ನು ಗಮನಿಸುವುದಾದರೆ ಪೂರ್ವದಿಕ್ಕನ್ನು ತರಬೇಕು ಎಂದರ್ಥವಾಗುತ್ತದೆ. ದಿಕ್ಕು ಎಂಬುದು ಮುಖ್ಯಾರ್ಥವಾದರೂ ದಿಕ್ಕನ್ನು ತರಲು ಸಾಧ್ಯವಿಲ್ಲವಾದುದರಿಂದ 'ಪ್ರಾಚೀ' ಎಂಬ ಶಬ್ದಕ್ಕೆ ಪೂರ್ವದಿಕ್ಕಿನಲ್ಲಿರುವ ಶಾಖೆ ಎಂಬುದಾಗಿ ಅರ್ಥವನ್ನು ತಿಳಿಯಬೇಕು.

**೮. ಶಾಖೆಯನ್ನು ಕತ್ತರಿಸುವುದರ ಮುಖ್ಯ ಪ್ರಯೋಜನ ಯಾವುದು?**

**'ಮೂಲತಃ ಶಾಖಾಂ ಪರಿವಾಸ್ಯ ಉಪವೇಷಂ ಕರೋತಿ (ಆಪ. ಶ್ರೌ.ಸೂ. 4-2-4-6)** ಎಂಬ ವಚನದಂತೆ ಮುತ್ತುಗದ ಮರದಲ್ಲಿ ಶಾಖೆಯನ್ನು ಕತ್ತರಿಸಿದ ಮೇಲೆ ಆ

ಶಾಖೆಯ ಮೂಲವನ್ನು ಕತ್ತರಿಸಿ 'ಉಪವೇಷ'*ವನ್ನು ಮಾಡಬೇಕು. ಅದನ್ನು ಕಪಾಲೋಪಧಾನದಲ್ಲಿ ವಿನಿಯೋಗಿಸಲಾಗುವುದು. ಶಾಖೆಯನ್ನು ವತ್ಸಾಪಾಕರಣದಲ್ಲಿ ವಿನಿಯೋಗಿಸುತ್ತಾರೆ. ಆದುದರಿಂದ ಕಪಾಲೋಪಧಾನವೂ, ವತ್ಸಾಪಾಕರಣವೂ ಎರಡೂ ಶಾಖೆಯನ್ನು ಕತ್ತರಿಸಲು ಪ್ರಯೋಜಕಗಳು ಎಂದು ಪೂರ್ವಪಕ್ಷ.

ಆದರೆ ಶಾಖೆಯನ್ನು ವತ್ಸಾಪಾಕರಣಕ್ಕೆ ತಕ್ಕಂತೆ ಮಾಡಲು ಮೂಲಚ್ಛೇದವನ್ನು ಹೇಳಲಾಗಿದೆ. ಮೊದಲ ಛೇದನದಿಂದಲೇ ಶಾಖೆಯು ಸರಿಯಾದುದಾದರೆ ಶಾಖೆಯನ್ನು ಮತ್ತೆ ಕತ್ತರಿಸಬೇಕಾಗಿಲ್ಲ. ಕಪಾಲೋಪಧಾನವನ್ನು ಯಾವುದಾದರೂ ಕಾಷ್ಠದಿಂದ ಮಾಡಬಹುದು. ಆದುದರಿಂದ ವತ್ಸಾಪಾಕರಣವೇ ಶಾಖಾಚ್ಛೇದನಕ್ಕೆ ಪ್ರಯೋಜಕವೇ ಹೊರತು ಕಪಾಲೋಪಧಾನವಲ್ಲ.

ಹೀಗೆ ಸಾಯಣಾಚಾರ್ಯರು ವಿಧಿವಾಕ್ಯಗಳಿಗೆ ಸಂಬಂಧಿಸಿದ ಮೀಮಾಂಸಾ ವಿಷಯಗಳನ್ನು ತಿಳಿಸಿ, ನಂತರ ಅರ್ಥವಾದಕ್ಕೆ ಸಂಬಂಧಿಸಿದ ವಿಚಾರಗಳನ್ನು ನಿರೂಪಿಸಿದ್ದಾರೆ.

## ೯. ಅರ್ಥವಾದಗಳು ಧರ್ಮದಲ್ಲಿ ಹೇಗೆ ಪ್ರಮಾಣವಾಗಬಲ್ಲವು?

ಕಾಮ್ಯಪಶುಬಂಧಗಳನ್ನು ತಿಳಿಸುವ ಸಂದರ್ಭದಲ್ಲಿ ಶ್ರುತಿಯಲ್ಲಿ 'ವಾಯವ್ಯಗ್ಂ ಶ್ವೇತಮಾಲಭೇತ ಭೂತಿಕಾಮಃ (ತೈ.ಸಂ. 2-1-1) ಎಂಬ ವಾಕ್ಯವಿದೆ. ಸಂಪತ್ತನ್ನು ಬಯಸುವವನು ವಾಯುದೇವತೆಯನ್ನುದ್ದೇಶಿಸಿದ್ದ ಪಶುಬಂಧಯಾಗವನ್ನು ಮಾಡಬೇಕು ಎಂದು ಅದರ ಅರ್ಥ. ಈ ವಿಧಿವಾಕ್ಯದೊಡನೆ 'ವಾಯುರ್ವೈ ಕ್ಷೇಪಿಷ್ಠಾ ದೇವತಾ' ಎಂಬುದಾಗಿ ಅರ್ಥವಾದವಾಕ್ಯವಿದೆ. ವಾಯುವನ್ನುದ್ದೇಶಿಸಿ ಮಾಡುವ ಈ ಪಶುಬಂಧವು ಶೀಘ್ರಫಲವನ್ನು ನೀಡುವುದು. ಏಕೆಂದರೆ ವಾಯುವು ಶೀಘ್ರಗಾಮಿಯಾದ ದೇವತೆಯಾದುದರಿಂದ ಈ ಯಾಗದಿಂದ ಅವನು ಪ್ರಸನ್ನನಾಗಿ ಬೇಗನೆ ಭೂತಿ(ಐಶ್ವರ್ಯ) ರೂಪವಾದ ಫಲವನ್ನು ನೀಡುವನು ಎಂದು ಆ ವಾಕ್ಯಗಳ ಅರ್ಥ.

ಯಾಗವನ್ನು ವಿಧಾನ ಮಾಡುವ ವಾಕ್ಯಗಳಿಗೆ ಅರ್ಥವಾದವಾಕ್ಯಗಳ ಅಪೇಕ್ಷೆಯಿಲ್ಲ. ಅರ್ಥವಾದವಾಕ್ಯಗಳೂ ಸ್ವತಂತ್ರವಾದ ಅರ್ಥವನ್ನು ಹೊಂದಿರುವುದರಿಂದ ಅವುಗಳಿಗೂ ವಿಧಿವಾಕ್ಯಗಳ ಅಪೇಕ್ಷೆಯಿಲ್ಲ. ಹೀಗೆ ವಿಧಿವಾಕ್ಯಗಳಿಗೂ ಅರ್ಥವಾದ ವಾಕ್ಯಗಳಿಗೂ ಪರಸ್ಪರ ಅಪೇಕ್ಷೆ ಇಲ್ಲದಿರುವುದರಿಂದ ಎರಡು ವಾಕ್ಯಗಳಿಗೂ ಏಕವಾಕ್ಯತೆ (ಪರಸ್ಪರ ಅನ್ವಯಗೊಂಡು ಅರ್ಥವನ್ನು ಬೋಧಿಸುವಿಕೆ) ಇಲ್ಲದಿರುವುದರಿಂದ ಇರುವ ವಿಷಯವನ್ನು (ಸಿದ್ಧವಾದ ಅರ್ಥ) ಬೋಧಿಸುವ ಅರ್ಥವಾದಗಳು ಧರ್ಮದ

ವಿಷಯದಲ್ಲಿ ಪ್ರಮಾಣವಾಗಲಾರವು.

ಇಲ್ಲಿಯ ಸಿದ್ಧಾಂತವು ಹೀಗಿದೆ; ಅರ್ಥವಾದವಾಕ್ಯಗಳು ಸ್ವತಂತ್ರವಾಗಿ ಅರ್ಥವನ್ನು ನೀಡುತ್ತವೆಯಷ್ಟೆ. ವಿಧಿವಾಕ್ಯಗಳು ಅರ್ಥವಾದವಾಕ್ಯಗಳ ಅಪೇಕ್ಷೆ ಇಲ್ಲದೆ ಸ್ವತಂತ್ರವಾಗಿ ಯಜ್ಞಗಳನ್ನಾಗಲೀ, ಕಲಾಪಗಳನ್ನಾಗಲೀ ವಿಧಿಸಿದರೆ ಆ ಯಜ್ಞಗಳಲ್ಲಿಯೂ, ಕಲಾಪಗಳಲ್ಲಿಯಾಗಲೀ ಪ್ರವೃತ್ತಿಯು ಉಂಟಾಗಬೇಕಾದರೆ ಅವುಗಳನ್ನು ಪ್ರಶಸ್ತವೆಂದು ಸ್ತುತಿಸುವ ವಾಕ್ಯಗಳು ಬೇಕು. ಈ ವಾಕ್ಯಗಳೇ ಅರ್ಥವಾದವಾಕ್ಯಗಳು. ಅರ್ಥವಾದವಾಕ್ಯಗಳು ಸ್ತುತಿಯನ್ನು ಮಾಡುವುದರಿಂದ ಅವುಗಳಿಗೆ ಸ್ತುತಿಯ ಪ್ರಯೋಜನವನ್ನು ತಿಳಿಸುವ ವಿಧಿವಾಕ್ಯಗಳ ಅಪೇಕ್ಷೆಯಿರುತ್ತದೆ. ಹೀಗೆ ಸ್ತಾವಕಗಳಿಗೂ ವಿಧಿವಾಕ್ಯಗಳಿಗೂ ಪರಸ್ಪರ ಅಪೇಕ್ಷೆ ಇರುವುದರಿಂದ ಏಕವಾಕ್ಯತೆಯು ಉಂಟಾಗುತ್ತದೆ. 'ವಾಯವ್ಯಗ್ಂ ಶ್ವೇತಮಾಲಭೇತ.... ದೇವತಾ....' ಎಂಬ ವಿಧಿ-ಅರ್ಥವಾದವಾಕ್ಯಗಳು ವಾಕ್ಯೈಕವಾಕ್ಯತ್ವವನ್ನು (ಒಂದು ಇಡೀ ವಾಕ್ಯದ ಅರ್ಥವು ಇನ್ನೊಂದು ಇಡೀ ವಾಕ್ಯದ ಅರ್ಥದೊಡನೆ ಅನ್ವಯವನ್ನು ಹೊಂದುವಿಕೆ) ಹೊಂದಿ 'ಐಶ್ವರ್ಯವನ್ನು ಬಯಸುವವನು ವಾಯವ್ಯಯಾಗವನ್ನು ಅನುಷ್ಠಿಸಬೇಕು. ಇದು ಪ್ರಶಸ್ತವಾದುದು' ಎಂಬ ಅರ್ಥವನ್ನು ನೀಡುತ್ತವೆ. ಹೀಗೆ ಅರ್ಥವಾದವಾಕ್ಯಗಳು ವಿಧಿವಾಕ್ಯಗಳಂತಲ್ಲದೆ ಸ್ತಾವಕ (ಪ್ರಶಂಸಿಸುವುವು) ರೂಪಗಳಾಗಿ ಧರ್ಮದ ವಿಷಯದಲ್ಲಿ ಪ್ರಮಾಣಗಳೆನಿಸಿವೆ.

## ೧೦. ಅರ್ಥವಾದಗಳು ಫಲಸಮರ್ಪಕಗಳೂ ಆಗಬಲ್ಲವೇ?

ಅರ್ಥವಾದವಾಕ್ಯಗಳು ಸ್ತಾವಕಗಳಾಗಿದ್ದು ವಿಧಿವಾಕ್ಯಗಳು ತಿಳಿಸುವುದನ್ನು ಸ್ತುತಿಸುತ್ತವೆ ಎಂದು ನಿರೂಪಿಸಲಾಯಿತಷ್ಟೆ. ಆದರೆ ಕೆಲವೆಡೆ ಶ್ರುತಿಯಲ್ಲಿ ಅರ್ಥವಾದ ವಾಕ್ಯಗಳು ಕರ್ಮದ ಫಲವನ್ನು ತಿಳಿಸುವಂತೆ ತೋರುತ್ತದೆ. ದರ್ಶೇಷ್ಟಿಯಲ್ಲಿ ವತ್ಸಾಪಾಕರಣಕ್ಕಾಗಿ ಪಲಾಶಶಾಖೆಯನ್ನು ತರಬೇಕು. 'ಪ್ರಾಚೀಮುದೀಚೀಮಾಹರತಿ। ಉಭಯೋರ್ಲೋಕಯೋರಭಿಜಿತ್ಯೈ ।' ಎಂಬ ಶ್ರುತಿವಾಕ್ಯವು 'ಈಶಾನ್ಯದಿಕ್ಕಿನಲ್ಲಿರುವ ಶಾಖೆಯನ್ನು ತರಬೇಕು. ಇದರಿಂದ ದೇವಲೋಕ ಮತ್ತು ಮನುಷ್ಯಲೋಕ ಇವೆರಡನ್ನೂ ಜಯಿಸಬಹುದು' ಎಂದು ತಿಳಿಸುತ್ತದೆ. ಈ ಅರ್ಥವಾದವಾಕ್ಯದ ಅರ್ಥವನ್ನು ಗಮನಿಸಿದರೆ ಫಲವನ್ನು ಹೇಳುವಂತಿದೆಯೇ ಹೊರತು ಶಾಖಾಹರಣವು ಪ್ರಶಸ್ತ ಎಂಬ ಸ್ತುತಿಯನ್ನು ತಿಳಿಸುವಂತೆ ತೋರುವುದಿಲ್ಲ.

ಇಲ್ಲಿಯ ಸಿದ್ಧಾಂತವು ಹೀಗೆ; 'ಪ್ರಾಚೀಮುದೀಚೀಮಾಹರತಿ ।' ಎಂಬ ಅರ್ಥವಾದವಾಕ್ಯವೂ ಸಹ ಶಾಖಾಹರಣವಿಧಿಯ ಸ್ತಾವಕವೇ ಆಗಿದೆ. ಏಕೆಂದರೆ ಶ್ರುತಿಯಲ್ಲಿ

ಇನ್ನೊಂದು ಕಡೆ 'ಔದುಂಬರೋ ಯೂಪೋ ಭವತ್ಯೂರ್ಗ್ವಾ ಉದುಂಬರ... ಊರ್ಜೋಽವರುದ್ಧ್ಯೈ।' ಎಂದು ವಾಕ್ಯವಿದೆ. ಪಶುವಿನ ಬಂಧನಕ್ಕಾಗಿ ಯೂಪಸ್ತಂಭ ವನ್ನು ಉದುಂಬರವೃಕ್ಷ(ಅತ್ತಿಯ ಮರ)ದಿಂದ ಮಾಡಬೇಕು. ಉದುಂಬರವು ಬಲವನ್ನು ನೀಡುತ್ತದೆ. ಪಶುಗಳು ಊರ್ಜವೇ (ಬಲ). ಹೀಗೆ ಔದುಂಬರದಿಂದ ಬಲಪ್ರಾಪ್ತಿಯಾಗು ತ್ತದೆ ಎಂದು ಆ ಶ್ರುತಿವಾಕ್ಯದ ಅರ್ಥ. ಈ ವಾಕ್ಯವು ಬಲಪ್ರಾಪ್ತಿಯಾಗುತ್ತದೆಯೆಂಬು ದನ್ನು ತಿಳಿಸುತ್ತಿರುವುದರಿಂದ ಫಲವನ್ನು ತಿಳಿಸುವುದೇ? ಯೂಪವನ್ನು ಔದುಂಬರ ವೃಕ್ಷದಿಂದ ಮಾಡುವುದು ಪ್ರಶಸ್ತ ಎಂಬ ಅರ್ಥವನ್ನು ನೀಡುತ್ತದೆಯೇ? ಎಂದು ವಿಚಾರಮಾಡಿ ಯಾಗಗಳಿಗಾಗಿ ಖದಿರವೃಕ್ಷ(ಕಗ್ಗಲಿ)ದ ಯೂಪವಿರಬೇಕೆಂಬುದು ಸಾಮಾನ್ಯವಾಕ್ಯದಿಂದ ಪ್ರಾಪ್ತವಾಗುವಾಗ, ಪಶುಬಂಧಯಾಗಕ್ಕೆ ಔದುಂಬರದ ಯೂಪವಿರ ಬೇಕೆಂಬುದಕ್ಕಾಗಿಯೇ ಈ ವಾಕ್ಯವಿರುವುದರಿಂದ ಈ ವಾಕ್ಯವು ಸ್ತಾವಕವೇ ಆಗಿದೆ. ಅಲ್ಲದೆ "ಗೋದೋಹನೇನ ಪಶುಕಾಮಸ್ಯ ಪ್ರಣಯೇತ್" ಎಂಬ ವಾಕ್ಯದಲ್ಲಿರುವಂತೆ ಕಾಮಾದಿಪದಗಳೂ 'ಔದುಂಬರೋ..." ಎಂಬ ವಾಕ್ಯದಲ್ಲಿಲ್ಲ. ಆದುದರಿಂದ ಆ ವಾಕ್ಯವು ಸ್ತಾವಕವೇ ಹೊರತು ಫಲಸಮರ್ಪಕವಲ್ಲ. ಅದರಂತೆಯೇ 'ಪ್ರಾಚೀಮುದೀಚೀಮಾಹರತಿ।' ಎಂಬ ಅರ್ಥವಾದವಾಕ್ಯವು ಸ್ತಾವಕ. ಅದು ಫಲಸಮ ರ್ಪಕವಲ್ಲ.

ಈ ರೀತಿಯಾಗಿ ಶ್ರೀ ಸಾಯಣಾಚಾರ್ಯರು ಎಲ್ಲಾ ವೇದಗಳಿಗೂ ಸಾಧಾರಣವಾದ, ಈ ಶಾಖೆಯಲ್ಲಿನ ವಿಶೇಷವಾದ ಮತ್ತು ಮಂತ್ರ ಬ್ರಾಹ್ಮಣಗಳ ಬಗೆಗಿನ ಮೀಮಾಂಸಾ ವಿಷಯವನ್ನು ವಿಸ್ತಾರವಾಗಿ ನಿರೂಪಿಸಿ, ಈ ಎಲ್ಲಾ ಸಿದ್ಧಾಂತಗಳನ್ನೂ ಮುಂದಿನ ಅನುವಾಕಗಳಲ್ಲಿ ಯಥಾಯೋಗ್ಯವಾಗಿ ಅನ್ವಯಿಸಿಕೊಳ್ಳಬೇಕಾಗಿ ತಿಳಿಸಿರುತ್ತಾರೆ.

ಸಾಯಣಾಚಾರ್ಯರು ಮೀಮಾಂಸೆಯ ವಿಷಯವನ್ನು ತಿಳಿಸಿ, ನಂತರ ವ್ಯಾಕರಣ ಶಾಸ್ತ್ರದ ಪ್ರಾಮಾಣ್ಯ ಮುಂತಾದ ವಿಷಯಗಳನ್ನು ನಿರೂಪಿಸಿರುತ್ತಾರೆ.

**ಉದಾಹೃತ್ಯಾಥ ಮೀಮಾಂಸಾಂ ಪ್ರಕೃತಿಪ್ರತ್ಯಯಸ್ಥಿತಿಮ್ ।**
**ಅರ್ಥಂ ವ್ಯಾಕರಣೇ ಸಿದ್ಧಂ ಬೋದ್ಧುಂ ತತ್ಪ್ರಕ್ರಿಯೋಚ್ಯತೇ ॥**

[ಮೀಮಾಂಸೆಯನ್ನು ವಿವರಿಸಿ, ವ್ಯಾಕರಣದಲ್ಲಿರುವ ಪ್ರಕೃತಿ–ಪ್ರತ್ಯಯ ರೂಪ ವಾದ ಅರ್ಥವನ್ನು ತಿಳಿಯಲು ವ್ಯಾಕರಣವನ್ನು ಅನುಸರಿಸಿದ ಪ್ರಕ್ರಿಯೆಯನ್ನು ತಿಳಿಸಲಾಗುತ್ತದೆ.]

ವ್ಯಾಕರಣಶಾಸ್ತ್ರವು ಪ್ರಮಾಣವಾದದ್ದು ಎಂಬುದನ್ನು ಶ್ರೀ ಸಾಯಣರು ಪೂರ್ವ ಪಕ್ಷ–ಸಿದ್ಧಾಂತಗಳ ಮೂಲಕ ಪ್ರತಿಪಾದಿಸಿರುತ್ತಾರೆ.

## ೧) ವ್ಯಾಕರಣವು ಪ್ರಮಾಣವೇ?

ನಿರ್ಮೂಲತ್ವಾತ್ ವಿಗೀತತ್ವಾತ್ ವೈಫಲ್ಯಾದ್ವೇದಬಾಧನಾತ್ ।
ಪೂರ್ವಾಪರವಿರೋಧಾಚ್ಚ ನಾಸ್ಯ ಪ್ರಾಮಾಣ್ಯಸಂಭವಃ ॥

ವ್ಯಾಕರಣವು ಪೌರುಷೇಯವಾದುದರಿಂದ, ಮೂಲಪ್ರಮಾಣವಿಲ್ಲದಿರುವುದರಿಂದ ಅದಕ್ಕೆ ಪ್ರಾಮಾಣ್ಯವಿಲ್ಲ. ವೃದ್ಧವ್ಯವಹಾರದಲ್ಲಿ ಇಲ್ಲದ ಅನೇಕ ಪದಗಳು ವ್ಯಾಕರಣದಲ್ಲಿ ಕಂಡು ಬರುತ್ತವೆ. 'ಅ ಇ ಉ ಣ್' 'ಘೇರ್ಜ್ಗಿತಿ' 'ಸ್ತೋಃ ಶ್ಚುನಾ ಶ್ಚುಃ' ಇಂತಹ ಶಬ್ದಗಳು ವೃದ್ಧವ್ಯವಹಾರದಲ್ಲಿ ಇಲ್ಲದಿರುವುದರಿಂದ ಅಸಾಧುಗಳೆನಿಸುತ್ತವೆ. ಅನಾದಿಯಿಂದ ವೃದ್ಧವ್ಯವಹಾರದಲ್ಲಿ ಬಂದಿರುವ ಶಬ್ದಗಳೇ ಸಾಧುಗಳು ಎಂಬುದು ವ್ಯಾಕರಣಶಾಸ್ತ್ರದ ಮತ. ಹೀಗಿರುವಾಗ ಪಾಣಿನಿಯೇ ವ್ಯವಹಾರದಲ್ಲಿಲ್ಲದ ಶಬ್ದಗಳನ್ನು ಹೇಳಿರುವುದರಿಂದ ತಾನೇ ವಿರುದ್ಧವಾಗಿ ಹೇಳಿದಂತಾಗಿದೆ. ಅಲ್ಲದೆ ವ್ಯಾಕರಣವನ್ನು ತಿಳಿಯುವುದರಿಂದ ಧರ್ಮ, ಅರ್ಥ, ಕಾಮ ಅಥವಾ ಮೋಕ್ಷವೆಂಬ ಯಾವ ಫಲವೂ ಇಲ್ಲದಿರುವುದರಿಂದ ವ್ಯಾಕರಣವು ವಿಫಲವೇ ಸರಿ. ವೇದದಲ್ಲಿ 'ನ ಮ್ಲೇಚ್ಛಿತವೈ ನಾಪಭಾಷಿತವೈ' 'ಮ್ಲೇಚ್ಛೋ ಹ ವಾ ಏಷ ಯದಪಶಬ್ದಃ' ಎಂಬುದಾಗಿ ಅಪಶಬ್ದ ಪ್ರಯೋಗದ ನಿಷೇಧವಿದೆ. ವ್ಯಾಕರಣದಲ್ಲಿ ಹಿಂದೆ ತಿಳಿಸಿದ ಅಪಶಬ್ದಗಳ ಪ್ರಯೋಗ ವಿರುವುದರಿಂದ ವೇದವಿರೋಧವೂ ಇದೆ. ಅಲ್ಲದೆ ಪಾಣಿನಿಗಳು ಹೇಳಿರುವುದನ್ನು ಕಾತ್ಯಾಯನರು ಖಂಡಿಸಿರುತ್ತಾರೆ. 'ಇಂದಿಭವತಿಭ್ಯಾಂ ಚ' (1-2-6) ಎಂಬ ಪಾಣಿನೀಯಸೂತ್ರವನ್ನು 'ಇಂಧೇಶ್ಛಂದೋವಿಷಯತ್ವಾತ್.....' ಎಂಬ ವಾರ್ತಿಕದಿಂದ ಕಾತ್ಯಾಯನರು ನಿರಾಕರಿಸುತ್ತಾರೆ. ಇದೂ ಅಲ್ಲದೆ ಪಾಣಿನಿಗಳೇ ತಾವು ಹೇಳಿದುದಕ್ಕೆ ವಿರುದ್ಧವಾಗಿ ಹೇಳುತ್ತಾರೆ. 'ತದಶಿಷ್ಯಂ ಸಂಜ್ಞಾಪ್ರಮಾಣತ್ವಾತ್' (1-2-53) ಎಂಬ ಸೂತ್ರದಲ್ಲಿ ತಾವೇ ಹಿಂದೆ ಹೇಳಿದುದನ್ನು ನಿರಾಕರಿಸುತ್ತಾರೆ. ಹೀಗೆ ಪೂರ್ವಾಪರ ವಿರೋಧವಿದೆ. ಈ ಎಲ್ಲ ಕಾರಣಗಳಿಂದ ವ್ಯಾಕರಣವು ಪ್ರಮಾಣವಲ್ಲ.

ಇಲ್ಲಿಯ ಸಿದ್ಧಾಂತವು ಹೀಗಿದೆ; ವ್ಯಾಕರಣವು ನಿರ್ಮೂಲವಾದುದಲ್ಲ. ಹಿಂದಿನ ವ್ಯಾಕರಣಗಳೇ ಪಾಣಿನೀಯವ್ಯಾಕರಣಕ್ಕೆ ಮೂಲವಾಗಿವೆ. ಪಾಣಿನಿಗಳೇ ಹಿಂದಿನ ವ್ಯಾಕರಣಕಾರರಾದ ಕಾಶ್ಯಪ, ಗಾರ್ಗ್ಯ, ಶಾಕಲ್ಯ, ಭಾರದ್ವಾಜ ಮುಂತಾದವರ ಮತವನ್ನು ಉದಾಹರಿಸಿರುತ್ತಾರೆ. 'ಘೇರ್ಜ್ಗಿತಿ' ಮುಂತಾದ ಶಬ್ದಗಳು ಸಾಧುಶಬ್ದಗಳೇ. ಏಕೆಂದರೆ ಸಂಜ್ಞೆ(ಹೆಸರು)ಯಾಗಿರುವ ಶಬ್ದಗಳು ತಮ್ಮ ತಮ್ಮ ಸಂಜ್ಞೆ(ಹೆಸರುಳ್ಳದ್ದು)ಯನ್ನು ತಿಳಿಸುವ ವಿಷಯದಲ್ಲಿ ಸಾಧುಗಳೇ ಆಗಿರುತ್ತವೆ. ವ್ಯಾಕರಣದ ಅಧ್ಯಯನವು ನಿಷ್ಫಲವಲ್ಲ. 'ಏಕಃ ಶಬ್ಧಃ ಸಮ್ಯಕ್ ಜ್ಞಾತಃ ಸುಪ್ರಯುಕ್ತಃ ಸ್ವರ್ಗೇ ಲೋಕೇ ಕಾಮಧುಗ್ಭವತಿ'

ಎಂಬ ಶ್ರುತಿವಾಕ್ಯದಂತೆ ಸಾಧುಶಬ್ದಪ್ರಯೋಗದಿಂದ ಧರ್ಮವುಂಟಾಗಿ ಅದರಿಂದ ಸ್ವರ್ಗಪ್ರಾಪ್ತಿಯಾಗುತ್ತದೆ ಎಂಬ ಫಲವನ್ನು ನಿರ್ಧರಿಸುವುದರಿಂದ ವ್ಯಾಕರಣದ ಅಧ್ಯಯನವು ಸಫಲವೇ. ವೇದವಿರೋಧವೂ ವ್ಯಾಕರಣಕ್ಕಿಲ್ಲ. ಏಕೆಂದರೆ 'ನ ಮ್ಲೇಚ್ಛಿತವೈ' ಎಂಬ ನಿಷೇಧವು ಮ್ಲೇಚ್ಛಭಾಷಾಶಬ್ದಗಳಿಗೂ, ಗಾವೀ, ಗೋಣೀ ಮುಂತಾದ ಶಬ್ದಗಳಿಗೆ ಅನ್ವಯಿಸುತ್ತದೆ. ವ್ಯಾಕರಣದಲ್ಲಿರುವ ಶಬ್ದಗಳಿಗಲ್ಲ. ಆದುದರಿಂದ ವೇದವಿರೋಧವಿಲ್ಲ. ಪಾಣಿನಿಗಳು ಹೇಳಿದುದನ್ನು ಕಾತ್ಯಾಯನರು ನಿರಾಕರಿಸಿರುವುದು ಯುಕ್ತವೇ ಆಗಿದೆ. ಏಕೆಂದರೆ ಕಾತ್ಯಾಯನರು ವಾರ್ತಿಕಗಳನ್ನು ರಚಿಸಿದ್ದಾರೆ. ವಾರ್ತಿಕವೆಂದರೆ ಉಕ್ತಾನುಕ್ತದುರುಕ್ತಚಿಂತನೆ. ಹೇಳಿರುವ, ಹೇಳದಿರುವ, ತಪ್ಪಾಗಿ ಹೇಳಿರುವ ಬಗ್ಗೆಯ ವಿಮರ್ಶೆ. ಆದುದರಿಂದ ಕಾತ್ಯಾಯನರು ಹೇಳುವುದು ಸರಿಯಾಗಿಯೇ ಇದೆ. ಪೂರ್ವಪಕ್ಷ-ಸಿದ್ಧಾಂತಗಳನ್ನು ತಾವೇ ಹೇಳುವಾಗ ವಿರೋಧವೆಲ್ಲಿಯದು? ಅಲ್ಲದೆ ವ್ಯಾಕರಣದಲ್ಲಿ 'ಯಥೋತ್ತರಂ ಮುನೀನಾಂ ಪ್ರಾಮಾಣ್ಯಮ್' [ಪಾಣಿನಿ, ಕಾತ್ಯಾಯನ ಮತ್ತು ಪತಂಜಲಿ ಈ ಮೂವರು ಮಹರ್ಷಿಗಳಲ್ಲಿ ಮುಂದಿನವರು ಹಿಂದಿನವರಿಗಿಂತ ಪ್ರಮಾಣ] ಎಂದು ಅಂಗೀಕರಿಸಿರುವುದರಿಂದ ಅವ್ಯವಸ್ಥೆಯೂ ಇಲ್ಲ.

ಈ ಎಲ್ಲ ಯುಕ್ತಿಗಳಿಂದ ವ್ಯಾಕರಣವು ಪ್ರಮಾಣವಿಲ್ಲದುದು ಮತ್ತು ಪ್ರಯೋಜನವಿಲ್ಲದುದೆಂಬ ಪೂರ್ವಪಕ್ಷವು ಸರಿಯಲ್ಲವೆಂದು ಸಾಯಣರು ನಿರೂಪಿಸಿರುತ್ತಾರೆ.

ಅಲ್ಲದೆ ವ್ಯಾಕರಣದಲ್ಲಿ ನಿರೂಪಿತವಾಗಿರುವ ಪ್ರಕೃತಿ-ಪ್ರತ್ಯಯವಿಭಾಗವನ್ನು ತಿಳಿಯಬೇಕು ಎಂಬ ಅಭಿಪ್ರಾಯದಿಂದಲೇ ಅಲ್ಲಲ್ಲಿ ಶಬ್ದದ ನಿರ್ವಚನವು ಕಂಡು ಬರುತ್ತದೆ. 'ಪೃಥಿವೀ' ಎಂಬ ಶಬ್ದವನ್ನು 'ಯದಪ್ರಥಯತ್ । ತತ್ಪೃಥಿವ್ಯೈ ಪೃಥಿವಿತ್ವಮ್ । (ತೈ.ಬ್ರಾ ೧-೧-೩) (ಪ್ರಥನ (ವಿಸ್ತಾರ) ಗೊಂಡುದುದರಿಂದ 'ಪೃಥಿವೀ' ಎನಿಸಿತು.) ಅಭೂದ್ವಾ ಇದಮಿತಿ। ತದ್ಭೂಮ್ಯೈ ಭೂಮಿತ್ವಮ್ । (ತೈ.ಬ್ರಾ. ೧-೧-೩) ಎಂಬಿತ್ಯಾದಿಯಾಗಿ ನಿರ್ವಚನ ಮಾಡಲಾಗಿದೆ.

ವ್ಯಾಕರಣದ ಮೂಲಕವಾಗಿ ಪದಾರ್ಥಜ್ಞಾನವು ಅವಶ್ಯವಾದುದರಿಂದಲೇ ಶ್ರುತಿಯಲ್ಲಿ 'ತಾಮಿಂದ್ರೋ ಮಧ್ಯತೋಽವಕ್ರಮ್ಯ ವ್ಯಾಕರೋತ್ತಸ್ಮಾದಿಯಂ ವ್ಯಾಕೃತಾ ವಾಗುದ್ಯತೇ.....' (ತೈ.ಸಂ. ೬-೪-೭) ದೇವತೆಗಳಿಂದ ಪ್ರಾರ್ಥಿಸಲ್ಪಟ್ಟ ಇಂದ್ರನು 'ವಾಕ್' ಅನ್ನು ಪ್ರಕೃತಿ-ಪ್ರತ್ಯಯರೂಪವಾಗಿ ವಿಭಾಗಿಸಿ ವ್ಯಾಕರಣವನ್ನು ರಚಿಸಿದನು ಎಂದು ಹೇಳಿದೆ. ಅಥರ್ವಣವೇದದಲ್ಲಿ ಋಗ್ವೇದವೇ ಮೊದಲಾದವುಗಳಂತೆ ವ್ಯಾಕರಣವನ್ನು

ಅರಿಯಬೇಕು ಎಂಬ ಅಭಿಪ್ರಾಯದಿಂದ ಷಡಂಗಸಹಿತವಾದ ಚತುರ್ವೇದಗಳನ್ನು 'ಅಪರಾವಿದ್ಯೆ'ಯೆಂದೂ ಆತ್ಮವಿಜ್ಞಾನವನ್ನು 'ಪರಾವಿದ್ಯೆ'ಯೆಂದೂ ಹೇಳಲಾಗಿದೆ.

ಹೀಗೆ ವ್ಯಾಕರಣವು ಪ್ರಮಾಣವಾದುದೆಂಬುದನ್ನು ನಿರೂಪಿಸಿದ ನಂತರ ಶ್ರೀ ಸಾಯಣರು ವ್ಯಾಕರಣದ ಪ್ರಯೋಜನವನ್ನು ವಿಶೇಷವಾಗಿ ಕಾತ್ಯಾಯನರು ಹೇಳಿದ ರೀತಿಯಲ್ಲಿ ವಿವರಿಸಿರುತ್ತಾರೆ.

## ೨) ವ್ಯಾಕರಣಜ್ಞಾನದ ಪ್ರಯೋಜನಗಳು

ಕಾತ್ಯಾಯನರು **'ರಕ್ಷೋಹಾಗಮಲಘ್ವಸಂದೇಹಾಃ ಪ್ರಯೋಜನಮ್'** ಎಂದು ಹೇಳಿರುತ್ತಾರೆ.

1) ರಕ್ಷಾ 2) ಊಹಃ 3) ಆಗಮಃ 4) ಲಘು 5) ಅಸಂದೇಹಃ

೧. ಉದಾತ್ತ ಮುಂತಾದ ಸ್ವರವು ವ್ಯತ್ಯಾಸವಾಗದಂತೆ, ವರ್ಣಗಳು ವ್ಯತ್ಯಾಸವಾಗದಂತೆ ವೈದಿಕಪದಗಳ ರಕ್ಷಣೆಯು ವ್ಯಾಕರಣವನ್ನು ತಿಳಿಯುವುದರ ಪ್ರಯೋಜನ.

ಸ್ವರವು ವ್ಯತ್ಯಾಸವಾದರೆ 'ಇಂದ್ರಶತ್ರುರ್ವರ್ಧಸ್ವ' ಎಂಬಲ್ಲಿ ಅಂತೋದಾತ್ತಕ್ಕೆ ಬದಲಾಗಿ 'ಇಂದ್ರಶತ್ರುಃ' ಆದಿಯಲ್ಲಿ ಉದಾತ್ತವಿರುವ ಮಂತ್ರವನ್ನು ಉಚ್ಚರಿಸಿದುದರಿಂದ ಇಂದ್ರನ ಶತ್ರುವು ಹುಟ್ಟುವುದಕ್ಕೆ ಬದಲಾಗಿ ಇಂದ್ರನೇ ಶತ್ರು(ಕೊಲ್ಲತಕ್ಕವನು)ವಾಗತಕ್ಕ ವೃತ್ರನು ಜನಿಸಿದಂತೆ ಯಜಮಾನನಿಗೆ ಹಾನಿಯುಂಟಾಗಿ ಪರಿಣಮಿಸುತ್ತದೆ. ಆದುದರಿಂದ ಸ್ವರಗಳನ್ನು ವ್ಯತ್ಯಾಸವಾಗದಂತೆ ಉಚ್ಚರಿಸಲು ಸ್ವರಸಂಚಾರವನ್ನು ತಿಳಿಯಬೇಕು. ಇದಕ್ಕಾಗಿ ವ್ಯಾಕರಣವನ್ನು ಅರಿಯಬೇಕು.

೨. ಪ್ರಕೃತಿಯಾಗದಲ್ಲಿ 'ಅಗ್ನಯೇ ಜುಷ್ಟಂ ನಿರ್ವಪಾಮಿ' ಎಂಬ ಮಂತ್ರವನ್ನು ವಿಕೃತಿಯಾಗದಲ್ಲಿ (ಐಂದ್ರಾಗ್ನೇಷ್ಟಿ) 'ಇಂದ್ರಾಗ್ನಿಭ್ಯಾಂ ಜುಷ್ಟಂ ನಿರ್ವಪಾಮಿ' ಎಂದು ಊಹೆ ಮಾಡಿಕೊಳ್ಳಬೇಕು. ಈ ರೀತಿ ಪದಗಳನ್ನು ಊಹೆ ಮಾಡಲು ವ್ಯಾಕರಣವು ಅಗತ್ಯ. ಆದುದರಿಂದ ಊಹವೂ ವ್ಯಾಕರಣದ ಪ್ರಯೋಜನ.

೩. '.....ವೇದೋಽಧ್ಯೇಯೋ ಜ್ಞೇಯಶ್ಚ' ಎಂಬ ವಚನದಂತೆ ವೇದವನ್ನು ಅಧ್ಯಯನ ಮಾಡಬೇಕು. ಅದರ ಅರ್ಥವನ್ನು ತಿಳಿಯಬೇಕು ಎಂದು

ಆಗಮವು ಹೇಳುತ್ತದೆ. ವ್ಯಾಕರಣಜ್ಞಾನವಿಲ್ಲದಿದ್ದರೆ ವೇದದ ಅರ್ಥವನ್ನು ತಿಳಿಯಲಾಗುವುದಿಲ್ಲ. ಆದುದರಿಂದ ಆಗಮವೇ ವ್ಯಾಕರಣದ ಅಧ್ಯಯನವನ್ನು ತಿಳಿಸಿದೆ.

೪. ಒಮ್ಮೆ ಬೃಹಸ್ಪತಿಯು ದಿವ್ಯವರ್ಷಸಹಸ್ರಗಳವರೆಗೂ ಇಂದ್ರನಿಗೆ ಪಾಠ ಹೇಳಿದರೂ ಎಲ್ಲ ಶಬ್ದಗಳನ್ನೂ ತಿಳಿಸಿಕೊಡಲಾಗಲಿಲ್ಲ. ಆಗ ಪ್ರಕೃತಿ, ಪ್ರತ್ಯಯ, ಪ್ರಾತಿಪದಿಕ, ಆದೇಶ ಮೊದಲಾದ ಉಪಾಯಗಳಿಂದ ಸುಲಭವಾಗಿ ತಿಳಿಸಿಕೊಟ್ಟನು. ಈ ಕ್ರಮದಿಂದ ಶಬ್ದಜ್ಞಾನವು ಸುಲಭವಾಗುತ್ತದೆ. ಲಘುವಾದ ಉಪಾಯದಿಂದ ಶಬ್ದರಾಶಿಯನ್ನು ತಿಳಿಯಲು ವ್ಯಾಕರಣವು ಸುಲಭಮಾರ್ಗ.

೫. 'ಸ್ಥೂಲಪೃಷತೀಮಾಲಭೇತ' ಎಂಬ ವಾಕ್ಯದಲ್ಲಿರುವ 'ಸ್ಥೂಲಪೃಷತೀ' ಎಂಬ ಶಬ್ದಕ್ಕೆ ಎರಡು ವಿಧವಾದ ಸಮಾಸವನ್ನು ಮಾಡಬಹುದು. ಸ್ಥೂಲಾ ಚಾಸೌ ಪೃಷತೀ ಚ, (ಸ್ಥೂಲವಾಗಿಯೂ, ಬಿಂದುಗಳಿಂದ ಕೂಡಿಯೂ ಇರುವ) ಸ್ಥೂಲಾನಿ ಪೃಷಂತಿ ಯಸ್ಯಾಃ ಸಾ (ಸ್ಥೂಲವಾದ ಬಿಂದುಗಳಿಂದ ಕೂಡಿರುವ). ಮೊದಲನೆಯದು ಕರ್ಮಧಾರಯಸಮಾಸ. ಎರಡನೆಯದು ಬಹುವ್ರೀಹಿಸಮಾಸ. ಇಲ್ಲಿ ಪೂರ್ವಪದಪ್ರಕೃತಿಸ್ವರವಿರುವುದರಿಂದ ಇದು ಬಹುವ್ರೀಹಿಸಮಾಸವಾಗಿದೆ. ಸ್ವರವನ್ನು ಸಮಾಸಕ್ಕೆ ಅನುಗುಣವಾಗಿ ತಿಳಿಯಲು ವ್ಯಾಕರಣವು ಆವಶ್ಯಕ. ಸಂದೇಹವು ಉಂಟಾಗದಿರಲು ವ್ಯಾಕರಣವನ್ನು ಅಧ್ಯಯನ ಮಾಡಬೇಕು.

ಹೀಗೆ ವ್ಯಾಕರಣವು ಪ್ರಮಾಣವಾದದ್ದೂ, ಪ್ರಯೋಜನಗಳುಳ್ಳದ್ದೂ ಆಗಿದೆ. ಆದುದರಿಂದ ವ್ಯಾಕರಣವು ಆವಶ್ಯಕ.

* * *

# ಸ್ವರಸಂಚಾರರೀತಿ

ಶ್ರೀ ಸಾಯಣಾಚಾರ್ಯರು ವ್ಯಾಕರಣದ ಪ್ರಾಮಾಣ್ಯ ಮತ್ತು ಪ್ರಯೋಜನಗಳನ್ನು ನಿರೂಪಿಸಿದ ನಂತರ ಮೊದಲನೆಯ ಅನುವಾಕದ ಮಂತ್ರಗಳಲ್ಲಿ ಉದಾತ್ತ ಮುಂತಾದ ಸ್ವರನಿರ್ಣಯವನ್ನೂ, ಸ್ವರಗಳ ಸಂಯೋಗದಿಂದ ಉಂಟಾಗುವ ಬದಲಾವಣೆಯನ್ನೂ ತಿಳಿಸಿರುತ್ತಾರೆ. ಅಲ್ಲದೆ 'ಶಬ್ದಸಂಗ್ರಹ' ಎಂಬ ತಮ್ಮ ಗ್ರಂಥದಲ್ಲಿ 'ಇಷೇ ತ್ವಾ' ಮುಂತಾದ ಶಬ್ದಗಳ ನಿಷ್ಪತ್ತಿಯ ಕ್ರಮವನ್ನು ನಿರೂಪಿಸಿರುವುದರಿಂದ ಇಲ್ಲಿ ಸ್ವರದ ವಿಷಯವನ್ನು ಮಾತ್ರ ವಿಶದಪಡಿಸುವುದಕ್ಕಾಗಿ ಪುನಃ ಹೇಳುವೆನು ಎಂದು ತಿಳಿಸಿರುತ್ತಾರೆ.

ಸಾಯಣರು ಅನುವಾಕದ ಎಲ್ಲಾ ಮಂತ್ರಗಳಿಗೂ ಸ್ವರಸಂಚಾರರೀತಿಯನ್ನು ನಿರೂಪಿಸಿದ್ದರೂ ವಾಚಕರಿಗೆ ಪರಿಚಯಕ್ಕಾಗಿ ಒಂದು ಮಂತ್ರದ ಸ್ವರದ ವಿವರಣೆಯನ್ನು ನೀಡಲಾಗುತ್ತದೆ.

ಇಷೇ ತ್ವೋರ್ಜೇ ತ್ವಾ ।

ಇಷೇ । ತ್ವಾ । ಊರ್ಜೇ । ತ್ವಾ ।

'ಇಷೇ' ಎಂಬುದು 'ಇಟ್' ಎಂಬ ಪ್ರಾತಿಪದಿಕದ ಚತುರ್ಥೀವಿಭಕ್ತಿಯ ರೂಪ.

ಇಷೇ: 'ಇಟ್' ಎಂಬ ಪ್ರಾತಿಪದಿಕವು 'ಫಿಷೋಽನ್ತ ಉದಾತ್ತಃ' ಎಂಬ ಫಿಟ್‌ಸೂತ್ರದಂತೆ ಅಂತೋದಾತ್ತವಾಗಿರುತ್ತದೆ. ಅಂತ್ಯದಲ್ಲಿ ವ್ಯಂಜನವಿರುವುದರಿಂದ ಇಕಾರವೇ ಅಂತ್ಯ. ಅದು ಉದಾತ್ತವಾಗಿರುತ್ತದೆ ಎಂದರ್ಥ. ಚತುರ್ಥಿವಿಭಕ್ತಿಯ'ಏ' ಪ್ರತ್ಯಯವು 'ಸಾವೇಕಾಚಸ್ತೃತೀಯಾದಿರ್ವಿಭಕ್ತಿಃ' (ಪಾ.ಸೂ. 6-1-168) ಎಂಬ ಸೂತ್ರದಂತೆ ಉದಾತ್ತ. 'ಅನುದಾತ್ತಂ ಪದಮೇಕವರ್ಜಮ್' (ಪಾ.ಸೂ. 6-1-158) ಎಂಬ ಸೂತ್ರದಂತೆ ಇಟ್ ಎಂಬಲ್ಲಿರುವ ಇಕಾರವು ಅನುದಾತ್ತವಾಗುತ್ತದೆ. ಇಕಾರವು ಅನುದಾತ್ತ. ಏಕಾರವು ಉದಾತ್ತವಾಗಿ 'ಇಷೇ' ಎಂಬ ಪದವು ಅಂತೋದಾತ್ತವಾಗಿರುತ್ತದೆ.

ತ್ವಾ: 'ತ್ವಾ' ಎಂಬ ಪದವು 'ಅನುದಾತ್ತಂ ಸರ್ವಮಪಾದಾದೌ' (ಪಾ.ಸೂ.8-1-18) ಎಂಬ ಸೂತ್ರದಂತೆ ಅನುದಾತ್ತವಾಗಿರುತ್ತದೆ.

ಊರ್ಜೇ: 'ಊರ್ಜೇ' ಎಂಬುದೂ 'ಇಷೇ' ಎಂಬಲ್ಲಿಯಂತೆಯೇ ಸ್ವರವನ್ನು ಪಡೆಯುತ್ತದೆ.

ತ್ವಾ: 'ತ್ವಾ' ಎಂಬುದು ಹಿಂದಿನಂತೆಯೇ.

ಇಷೇ+ತ್ವಾ ಎಂಬುದಾಗಿ ಸ್ವರಗಳು ಸಂಯೋಗಗೊಂಡಾಗ 'ಉದಾತ್ತಾದನುದಾತ್ತಸ್ಯ ಸ್ವರಿತಃ' (ಪಾ.ಸೂ. 8-4-66) ಎಂಬ ಸೂತ್ರದಂತೆ ಉದಾತ್ತವಾದ ಏಕಾರದ ಮುಂದಿರುವ ಆಕಾರವು ಸ್ವರಿತವಾಗುತ್ತದೆ (ಸ್ವರಗಳು ಸಂಚರಿಸುವಾಗ ವ್ಯಂಜನಗಳಿಗೆ ಗಣನೆಯಿಲ್ಲ). ಹೀಗಾಗಿ 'ಇಷೇ ತ್ವಾ' ಎಂದಾಗುತ್ತದೆ. ಇದೇ ರೀತಿಯ ಸ್ವರಸಂಚಾರದಿಂದ 'ಊರ್ಜೇ ತ್ವಾ' ಎಂಬುದು ಸಿದ್ಧವಾಗುತ್ತದೆ. ಹೀಗೆ ಸಿದ್ಧವಾದ ಎರಡನ್ನೂ ಇಷೇ ತ್ವಾ+ಊರ್ಜೇ ತ್ವಾ ಎಂಬುದಾಗಿ ಕೂಡಿಸಿದಾಗ ತ್ವಾ+ಊ ಈ ಎರಡಕ್ಕೂ ಸಂಧಿಯು ಬರಬೇಕಷ್ಟೆ. ತ್ವಾ ಎಂಬುದು ಅನುದಾತ್ತವಾದುದರಿಂದ 'ಊ' ಎಂಬುದೂ ಅನುದಾತ್ತವಾದುದರಿಂದ ಸಂಧಿಯ ನಂತರ ಬರುವ ಓಕಾರವೂ ಅನುದಾತ್ತವಾಗಿ ಇಷೇ ತ್ವೋರ್ಜೇ ತ್ವಾ ಎಂದಾಗುತ್ತದೆ.

---

ಮೊದಲನೆಯ ಅನುವಾಕವನ್ನು ಶ್ರೀ ಸಾಯಣರು ವಿಶದವಾಗಿ ವ್ಯಾಖ್ಯಾನ ಮಾಡಿರುತ್ತಾರೆ. ನಂತರದ ಎರಡನೆಯ ಅನುವಾಕದಲ್ಲಿ ಯಜ್ಞಕ್ಕಾಗಿ ಬರ್‌ಹಿಸ್ಸನ್ನು (ದರ್ಭೆ) ತರುವ ಮಂತ್ರಗಳಿವೆ. ಈ ಮಂತ್ರಗಳಿಗೆ ವ್ಯಾಖ್ಯಾನ ಮಾಡುವ ಮೊದಲು ಈ ಮಂತ್ರಗಳ ಬ್ರಾಹ್ಮಣಭಾಗದಲ್ಲಿಯೂ, ಬೌಧಾಯನ ಮತ್ತು ಆಪಸ್ತಂಬರ ಶ್ರೌತಸೂತ್ರದಲ್ಲಿಯೂ 'ದೇವಸ್ಯ ತ್ವಾ ಸವಿತುಃ ಪ್ರಸವೇಽಶ್ವಿನೋರ್ಬಾಹುಭ್ಯಾಂ ಪೂಷ್ಣೋ ಹಸ್ತಾಭ್ಯಾಮಾದದೇ' ಎಂಬ ಮಂತ್ರವನ್ನು ನಿರ್ದೇಶಿಸಲಾಗಿದೆ. ದರ್ಭೆಯನ್ನು ಕತ್ತರಿಸಲು ಕುಡುಗೋಲು, ಕುದುರೆಯ ಪಕ್ಕೆಯ ಮೂಳೆ ಅಥವಾ ಎತ್ತಿನ ಪಕ್ಕೆಯ ಮೂಳೆಯನ್ನು ತೆಗೆದುಕೊಳ್ಳಬೇಕು. ಕುಡುಗೋಲನ್ನೋ ಅಥವಾ ಅಶ್ವಪರ್ಶುವನ್ನೋ ತೆಗೆದುಕೊಳ್ಳುವಾಗ ಈ ಮಂತ್ರವನ್ನು ಹೇಳಬೇಕು. ಅನಡುತ್ಪರ್ಶು(ಎತ್ತಿನ ಪಕ್ಕೆಯ ಮೂಳೆ)ವನ್ನು ಅಮಂತ್ರಕವಾಗಿ ತೆಗೆದುಕೊಳ್ಳಬೇಕು.

'ದೇವಸ್ಯ ತ್ವಾ....ಆದದೇ' ಎಂಬ ಈ ಮಂತ್ರವು ಈ ಸಂದರ್ಭದಲ್ಲಿ ವಿನಿಯೋಗವಾದುದು ಬೇರೆ ವೇದಶಾಖೆಯದಾಗಿರುತ್ತದೆ. ಈ ಮಂತ್ರದ ಅರ್ಥವು ಹೀಗಿದೆ:

'ಎಲೈ ಕತ್ತರಿಸುವ ಸಾಧನವೇ! ಪ್ರೇರಕನಾದ ದೇವನ (ಸವಿತೃ) (ಪರಮಾತ್ಮ) ಪ್ರೇರಣೆಯಾಗಲಾಗಿ, ಅಶ್ವಿನೀದೇವತೆಗಳ ತೋಳುಗಳಿಂದಲೂ, ಪೂಷದೇವನ ಹಸ್ತಗಳಿಂದಲೂ ನಿನ್ನನ್ನು ತೆಗೆದುಕೊಳ್ಳುತ್ತೇನೆ.



## ॥ ದ್ವಿತೀಯೋಽನುವಾಕಃ ॥

### ಯಜ್ಞಸ್ಯ ಘೋಷದಸಿ ಪ್ರತ್ಯುಷ್ಟಗ್‌ಂ ರಕ್ಷಃ

---

ಯಜ್ಞಸ್ಯ । ಘೋಷತ್ । ಅಸಿ । ಪ್ರತ್ಯುಷ್ಟಮಿತಿ ಪ್ರತಿ-ಉಷ್ಟಮ್ । ರಕ್ಷಃ ।

---

| ಮಂತ್ರ | ವಿನಿಯೋಗ (ಬೌಧಾಯನ) |
|---|---|
| ಯಜ್ಞಸ್ಯ ಘೋಷದಸಿ । | ಅಶ್ವಪರ್ಶುವಿನ ಅಭಿಮಂತ್ರಣ<br>ಆಪಸ್ತಂಬ<br>ಗಾರ್ಹಪತ್ಯದ ಅಭಿಮಂತ್ರಣ<br>ಬೌಧಾಯನ |
| ಪ್ರತ್ಯುಷ್ಟಗ್‌ಂ.... ಅರಾತಯಃ । | ಅಸಿದ (ಕುಡುಗೋಲು) ಅಥವಾ ಅಶ್ವಪರ್ಶುವನ್ನು ಗಾರ್ಹಪತ್ಯದಲ್ಲಿ ಪ್ರತಿತಪನ (ಕಾಯಿಸುವುದು) ಮಾಡಲು<br>ಆಪಸ್ತಂಬ<br>ಅಸಿದವನ್ನು ಮಾತ್ರ ಗಾರ್ಹಪತ್ಯ ಅಥವಾ ಆಹವನೀಯದಲ್ಲಿ ಪ್ರತಿತಪನ ಮಾಡಲು |



---

**ಪದಶಃ ಅರ್ಥ:** (ಎಲೈ ಪರ್ಶುವೇ!) (ಎಲೈ ಗಾರ್ಹಪತ್ಯನೇ !) (ನೀನು); ∴ ಯಜ್ಞಸ್ಯ= ಯಜ್ಞದ; ಘೋಷತ್= ಧನವಾಗಿ; ಅಸಿ = ಇರುವೆ. ರಕ್ಷಃ = ಯಜ್ಞಕ್ಕೆ ತೊಂದರೆಯನ್ನುಂಟು ಮಾಡುವ ಮತ್ತು ಕೊಯ್ಯುವ ಸಾಧನದಲ್ಲಿ ಅಡಗಿರುವ ರಕ್ಷಸ್ಸು;

---

**ತಾತ್ಪರ್ಯ:** ಅಶ್ವಪರ್ಶುವೇ! ನೀನು ಯಜ್ಞಕ್ಕೆ ಬೇಕಾದ ದರ್ಭೆಗಳನ್ನು ಕತ್ತರಿಸಲು ಸಾಧನವಾಗಿರುವುದರಿಂದ ಯಜ್ಞಸಾಧನದ್ರವ್ಯವಾಗಿರುವೆ. ಗಾರ್ಹಪತ್ಯಾಗ್ನಿಯೇ! ನೀನು ಯಜ್ಞದ ಧನರೂಪನಾಗಿರುವೆ. (ಹೋಮಕ್ಕೆ ಆಧಾರನಾಗಿರುವುದರಿಂದ ಫಲರೂಪವಾದ ಧನವನ್ನು ಒದಗಿಸುವವನಾಗಿವೆ).

## ಪ್ರತ್ಯುಷ್ಟಾ ಅರಾತಯಃ
## ಪ್ರೇಯಮಗಾದ್ಧಿಷಣಾ ಬರ್‌ಹಿರಚ್ಛ ಮನುನಾ ಕೃತಾ

---

ಪ್ರತ್ಯುಷ್ಟಾ ಇತಿ ಪ್ರತಿ-ಉಷ್ಟಾಃ । ಅರಾತಯಃ । ಪ್ರೇತಿ । ಇಯಮ್ ।
ಅಗಾತ್ । ಧಿಷಣಾ । ಬರ್‌ಹಿಃ । ಅಚ್ಛ । ಮನುನಾ । ಕೃತಾ ।

---

| ಮಂತ್ರ | ವಿನಿಯೋಗ (ಬೌಧಾಯನ) |
|---|---|
| ೧) ಪ್ರೇಯಂ.... ಜುಷ್ಟಮ್ । | ಗಾರ್ಹಪತ್ಯಾಗ್ನಿಯ ಪ್ರದೇಶದಿಂದ (ಆಪಸ್ತಂಬ) |
| ಪ್ರೇಯಂ.... ಬರ್ಹಿರಾಸದೇ । | ಈ ಮಂತ್ರೋಚ್ಚಾರಣೆಯ ನಂತರ 'ಉರ್ವಂತರಿಕ್ಷಮನ್ವಿಹಿ' ಎಂಬ ಮಂತ್ರದಿಂದ |



---

∴ ಪ್ರತ್ಯುಷ್ಟಂ = ಅತ್ಯಂತವಾಗಿ ಸುಟ್ಟುಹೋಗಲಿ. (ಹಾಗೆಯೇ) ಅರಾತಯಃ = ಯಜ್ಞ ಶತ್ರುಗಳೂ; ಪ್ರತ್ಯುಷ್ಟಾಃ = ಅತ್ಯಂತವಾಗಿ ಸುಟ್ಟುಹೋಗಲಿ.

ಇಯಮ್ = ಈ ಅಶ್ವಪರ್ಶುವು; ಧಿಷಣಾ = ವಿದ್ಯೆಯುಳ್ಳದ್ದಾಗಿದೆ; (ಜ್ಞಾನವುಳ್ಳದ್ದಾಗಿದೆ) ಮನುನಾ= ಪ್ರಜಾಪತಿರೂಪನಾದ ಮನುವಿನಿಂದ; ಕೃತಾ =

---

ಯಜ್ಞಕ್ಕೆ ತೊಂದರೆಯನ್ನುಂಟುಮಾಡುವ ಸೂಕ್ಷ್ಮರೂಪದಲ್ಲಿರುವ ರಕ್ಷಸ್ಸುಗಳೂ, ಯಜ್ಞಕ್ಕೆ ಶತ್ರುಗಳಾದ ರಾಕ್ಷಸಾದಿಗಳೂ ಮಂತ್ರಪೂರ್ವಕವಾದ ಈ ತಾಪನದಿಂದ ನಿಃಶೇಷವಾಗಿ ಸುಟ್ಟು ಹೋಗಲಿ.

ವಿದ್ಯೆಯಾಗಿರುವ, ಬರ್ಹಿಸ್ಸನ್ನು ಕತ್ತರಿಸಲು ತಿಳಿದಿರುವ ಈ ಅಶ್ವಪರ್ಶುವು ಪ್ರಜಾಪತಿರೂಪವಾದ ಮನುವಿನಿಂದ ಮಾಡಲ್ಪಟ್ಟಿದೆ. [ಪ್ರಜಾಪತಿಯ ಕಣ್ಣಿನಿಂದ ಅಶ್ವವು ಹುಟ್ಟಿತೆಂಬ ಉಪಾಖ್ಯಾನವಿದೆ— ತೈ. ಸಂ. 5 - 3 - 12] ಅನ್ನದಿಂದ ಅಸ್ಥಿಯು ವೃದ್ಧಿಯಾಗುವುದರಿಂದ ಅಶ್ವವು ಭಕ್ಷಿಸಿದ ವಸ್ತುಗಳಿಂದ ಅತಿತೀಕ್ಷ್ಣವಾಗಿಯೂ ಇದೆ. ಇದು ಬರ್ಹಿಸ್ಸನ್ನು ತರಲು ಪೂರ್ವದಿಕ್ಕಿಗೆ ಹೋಗುತ್ತದೆ. ಪೂರ್ವಕಾಲದ

## ಸ್ವಧಯಾ ವಿತಷ್ಟ್ವಾ ತ ಆವಹಂತಿ ಕವಯಃ
## ಪುರಸ್ತಾದ್ದೇವೇಭ್ಯೋ ಜುಷ್ಟಮಿಹ ಬರ್‌ಹಿರಾಸದೇ

---

ಸ್ವಧಯೇತಿ ಸ್ವ-ಧಯಾ । ವಿತಷ್ಟ್ವೇತಿ ವಿ-ತಷ್ಟ್ವಾ । ತೇ । ಏತಿ । ವಹಂತಿ । ಕವಯಃ।

ಪುರಸ್ತಾತ್ । ದೇವೇಭ್ಯಃ । ಜುಷ್ಟಮ್ । *ಇಹ। ಬರ್‌ಹಿಃ। ಆಸದ ಇತ್ಯಾ-ಸದೇ। *

---

| ಮಂತ್ರ | ವಿನಿಯೋಗ (ಬೌಧಾಯನ) |
|---|---|
| | ಆಹವನೀಯಾಗ್ನಿಯ ಪ್ರದೇಶಕ್ಕೆ ಹೋಗಲು; |
| ೨) ಇಹ ಬರ್‌ಹಿರಾಸದೇ । | ವೇದಿಯ ಪ್ರತ್ಯವೇಕ್ಷಣ (ನೋಡುವುದು) |
| | (ಆಪಸ್ತಂಬ) |
| | ಪೂರ್ವಕ್ಕೆ ಅಥವಾ ಉತ್ತರಕ್ಕೆ ಹೋಗಿ ನಂತರ ಅಲ್ಲಿ, ಎಲ್ಲಿಂದಲಾದರೂ ದರ್ಭೆಯನ್ನು ತರಲು. |

---

(ತನ್ನ ಕಣ್ಣಿನಿಂದ) ಮಾಡಲ್ಪಟ್ಟಿದೆ; ಸ್ವಧಯಾ = ಅಶ್ವಭಕ್ಷಿತವಾದ ತೃಣವೇ ಮೊದಲಾದ ಅನ್ನಗಳಿಂದ; ವಿತಷ್ಟ್ವಾ = ಅತಿತೀಕ್ಷ್ಣವಾಗಿ ಮಾಡಲ್ಪಟ್ಟಿದೆ. (ಇದು) ಬರ್‌ಹಿಃ = ಯಜ್ಞಕ್ಕೆ ಬೇಕಾದ ಬರ್ಹಿಸ್ಸನ್ನು; (ದರ್ಭೆಯನ್ನು) ಅಚ್ಛ = ಹೊಂದು ವಕ್ಕೆ; ಪ್ರ ಅಗಾತ್ = ಪೂರ್ವದಿಕ್ಕಿಗೆ ಹೋಗುತ್ತದೆ.(ಏಕೆಂದರೆ) ತೇ = ಆ (ಪ್ರಸಿದ್ಧರಾದ); ಕವಯಃ = ವಿದ್ವಾಂಸರು; ಪುರಸ್ತಾತ್ = ಪೂರ್ವದಿಕ್ಕಿನಿಂದ; ಆವಹಂತಿ = ತರುತ್ತಿದ್ದರು; ದೇವೇಭ್ಯಃ =ದೇವತೆಗಳಿಗೆ; ಜುಷ್ಟಂ = ಪ್ರಿಯವಾದ; ಬರ್‌ಹಿಃ = ಬರ್ಹಿಸ್ಸು; ⁘ ಇಹ = ಈ ವೇದಿಯಲ್ಲಿ; ಆಸದೇ = ಹರಡಲ್ಪಡಬೇಕಾಗಿದೆ.

---

ಯಜ್ಞಾನುಷ್ಠಾತೃಗಳಾದ ವಿದ್ವಾಂಸರೂ ಪೂರ್ವದಿಕ್ಕಿನಿಂದಲೇ ಬರ್ಹಿಸ್ಸನ್ನು ತರುತ್ತಿದ್ದರು. ದೇವತೆಗಳಿಗೆ ಪ್ರಿಯವಾದ ಬರ್ಹಿಸ್ಸನ್ನು ತಂದು ಈ ವೇದಿಯಲ್ಲಿ ಹರಡಬೇಕಾಗಿದೆ. ಆದುದರಿಂದ ಈ ಅಶ್ವಪರ್ಶುವು ಪೂರ್ವದಿಕ್ಕಿಗೆ ಹೋಗುತ್ತದೆ.

# ದೇವಾನಾಂ ಪರಿಷೂತಮಸಿ ವರ್ಷವೃದ್ಧಮಸಿ

---

ದೇವಾನಾಮ್ । ಪರಿಷೂತಮಿತಿ ಪರಿ-ಸೂತಮ್ । ಅಸಿ । * ವರ್ಷವೃದ್ಧಮಿತಿ ವರ್ಷ-ವೃದ್ಧಮ್ । ಅಸಿ । *

---

| ಮಂತ್ರ | ವಿನಿಯೋಗ (ಬೌಧಾಯನ) |
| --- | --- |
| ೧) ದೇವಾನಾಂ ಪರಿಷೂತಮಸಿ । | ಕೊಯ್ಯಬೇಕಾಗಿರುವ ದರ್ಭೆಗಳನ್ನು ಹಿಡಿದುಕೊಳ್ಳಲು |
| ೨) ವರ್ಷವೃದ್ಧಮಸಿ । | ದರ್ಭೆಯ ಮೇಲಿನವರೆಗೂ ಶುದ್ಧಿಮಾಡಲಿ: |

(ಆಪಸ್ತಂಬ)

ದೇವಾನಾಂ....ವರ್ಷವೃದ್ಧಮಸಿ । ದರ್ಭೆಗಳನ್ನು ಪರಿಗ್ರಹಿಸಲು.

---

(ಎಲೈ ದರ್ಭಸಮೂಹವೇ!) (ನೀನು) ✣ ದೇವಾನಾಂ = ದೇವತೆಗಳಿಗಾಗಿ; ಪರಿಷೂತಂ = ಸ್ವೀಕರಿಸಲ್ಪಟ್ಟಿರುವನು; ಅಸಿ = ಆಗಿರುವೆ. ✣ ವರ್ಷವೃದ್ಧಂ = ಮಳೆಯಿಂದ ಮತ್ತೆ ಬೆಳೆಯುವವನೂ; ಅಸಿ = ಆಗಿರುವೆ.

---

ದರ್ಭಪುಂಜವೇ! ನಾನು ದೇವತೆಗಳಿಗಾಗಿ ಮಾಡುವ ಯಜ್ಞಕ್ಕಾಗಿ ನಿನ್ನನ್ನು ಕೊಯ್ಯಲು ಹಿಡಿದಿರುತ್ತೇನೆ. ನನ್ನ ಸ್ವಂತ ಕೆಲಸಕ್ಕಾಗಿ (ಮನೆಯನ್ನು ಮುಚ್ಚುವುದೇ ಮೊದಲಾದ) ನಿನ್ನನ್ನು ಕೊಯ್ಯುತ್ತಿಲ್ಲ. ಆದರಿಂದ ನನಗೆ ದೋಷವಿಲ್ಲ. ಮಳೆ ಬಂದ ಮೇಲೆ ನೀನು ಮತ್ತೆ ಚಿಗುರಿ ಬೆಳೆಯುವುದರಿಂದ ನಿನಗೂ ಹಾನಿಯಿಲ್ಲ.

ಎಲೈ! ದೇವತೆಗಳ ಯಾಗಕ್ಕಾಗಿ ಬಳಸಲ್ಪಡುವ ದರ್ಭಪುಂಜವೇ! ನಿನ್ನನ್ನು ಮೇಲಿನಿಂದ ಕೆಳಕ್ಕೂ ಅಡ್ಡವಾಗಿಯೂ ಸಿಕ್ಕಿದಂತೆ ಕತ್ತರಿಸಿ ಹಿಂಸೆ ಮಾಡುವುದಿಲ್ಲ. ಮತ್ತೆ ಚಿಗುರು ಬರುವುದಕ್ಕೆ ತಕ್ಕಂತೆ ನಿನ್ನ ಗೆಣ್ಣಿನಿಂದ ಮೇಲ್ಭಾಗದಲ್ಲಿ ಕತ್ತರಿಸಿ ಗೆಣ್ಣಿನ ಭಾಗವು ಸುರಕ್ಷಿತವಾಗಿರುವಂತೆ ಮಾಡುತ್ತೇನೆ.

## ದೇವಬರ್‌ಹಿರ್ಮಾ ತ್ವಾನ್ವಞ್ಮಾ ತಿರ್ಯಕ್ಪರ್ವ ತೇ ರಾಧ್ನಾಸಮಾಚ್ಛೇತ್ತಾ

---

ದೇವಬರ್‌ಹಿರಿತಿ ದೇವ-ಬರ್‌ಹಿಃ । ಮಾ । ತ್ವಾ । ಅನ್ವಕ್ । ಮಾ । ತಿರ್ಯಕ್।
*ಪರ್ವ । ತೇ । ರಾಧ್ಯಾಸಮ್* । ಆಚ್ಛೇತ್ತೇತ್ಯಾ-ಛೇತ್ತಾ ।

---

| ಮಂತ್ರ | ವಿನಿಯೋಗ (ಬೌಧಾಯನ) |
|---|---|
| ದೇವಬರ್‌ಹಿರ್ಮಾ....ರಾಧ್ಯಾಸಮ್ । | ಕೊಯ್ಯಬೇಕಾಗಿರುವ ದರ್ಭೆಗಳ ಸಮೀಪದಲ್ಲಿ ಕುಡುಗೋಲು ಮೊದಲಾದವನ್ನು ಇಡಲು; |
| | (ಆಪಸ್ತಂಬ) |
| ೧) ದೇವಬರ್‌ಹಿರ್ಮಾ....ತಿರ್ಯಕ್ । | ದರ್ಭೆಗಳನ್ನು ಎಡಗೈಯಿಂದ ಹಿಡಿದು ಕೊಳ್ಳಲು; |
| ೨) ಪರ್ವ ತೇ ರಾಧ್ಯಾಸಮ್ । | ಕುಡುಗೋಲು ಮುಂತಾದುವನ್ನು ಸಮೀಪಕ್ಕೆ ತರಲು; |



---

(ಹೇ) ✣ ದೇವಬರ್‌ಹಿಃ = ಎಲೈ! ದೇವತೆಗಳ ಯಜ್ಞಾರ್ಥವಾಗಿರುವ ದರ್ಭಪುಂಜವೇ! ತ್ವಾ = ನಿನ್ನನ್ನು; ಅನ್ವಕ್ = ಉದ್ದವಾಗಿ; ಮಾ (ಹಿಗಂಸಿಷಮ್) = ಹಿಂಸಿಸುವುದಿಲ್ಲ; ತಿರ್ಯಕ್ = ಅಡ್ಡಲಾಗಿ; ಮಾ(ಹಿಗಂಸಿಷಮ್) = ಹಿಂಸಿಸುವುದಿಲ್ಲ, ತೇ = ನಿನ್ನ ✣ ಪರ್ವ= ಗಿಣ್ಣನ್ನು; ರಾಧ್ಯಾಸಮ್ = ನಾಶವಾಗದಂತೆ ಉಳಿಸುತ್ತೇನೆ. (ಎಲೈ ದೇವಬರ್ಹಿಯೇ!) (ನಾನು) ತೇ ಆಚ್ಛೇತ್ತಾ (ಅಪಿ) =ನಿನ್ನನ್ನು ಕತ್ತರಿಸುವವ

---

ಎಲೈ ದರ್ಭಪುಂಜವೇ ! ನಾನು ನಿನ್ನನ್ನು ವಿಧಿಗನುಗುಣವಾಗಿ ಮಂತ್ರಪೂರ್ವಕವಾಗಿ ಕತ್ತರಿಸುತ್ತೇನೆ. ಮತ್ತೆ ಚಿಗುರಲು ಗೆಣ್ಣಿನ ಭಾಗವನ್ನು ಉಳಿಸಿರುವೆನು. ಮಂತ್ರಸಾಮರ್ಥ್ಯದಿಂದ ನಿನಗೆ ಹಿಂಸೆಯಾಗುವುದಿಲ್ಲ.

## ತೇ ಮಾರಿಷಂ ದೇವಬರ್‍ಹಿಶ್ಶತವಲ್‍ಶಂ ವಿರೋಹ ಸಹಸ್ರವಲ್‍ಶಾ [ಶಾಃ (೧)] ವಿ ವಯಗ್‍ಂ ರುಹೇಮ

---

ತೇ । ಮಾ । ರಿಷಮ್ । ದೇವಬರ್‍ಹಿರಿತಿ ದೇವ ಬರ್‍ಹಿಃ । ಶತವಲ್‍ಶಮಿತಿ ಶತ-ವಲ್‍ಶಮ್ । ವೀತಿ । ರೋಹ । ಸಹಸ್ರವಲ್‍ಶಾ ಇತಿ ಸಹಸ್ರ-ವಲ್‍ಶಾಃ । ವೀತಿ । ವಯಮ್ । ರುಹೇಮ ।

---

| ಮಂತ್ರ | ವಿನಿಯೋಗ |
| --- | --- |
| ಆಚ್ಛೇತ್ತಾ... ರಿಷಮ್ । | ದರ್ಭೆಯನ್ನು ಕತ್ತರಿಸಲು. |
| ದೇವಬರ್‍ಹಿಃ.... ವಿರೋಹ। | ಕತ್ತರಿಸಿದ ದರ್ಭಮೂಲಗಳನ್ನು ಸ್ಪರ್ಶಿಸಲು. |
| ಸಹಸ್ರವಲ್‍ಶಾ... ರುಹೇಮ । | ಅಧ್ವರ್ಯುವು ತನ್ನನ್ನು ಸ್ಪರ್ಶಿಸಿಕೊಳ್ಳಲು, |
| ಪೃಥಿವ್ಯಾಃ.... ಪಾಹಿ । | ಕತ್ತರಿಸಿದ ದರ್ಭೆಗಳನ್ನು ನೆಲದ ಮೇಲಿಡದೆ ಯಾವುದಾದರೂ ವಸ್ತುವಿನ ಮೇಲಿಡಲು |



---

ನಾಗಿದ್ದರೂ; ಮಾ ರಿಷಮ್ = (ಮಂತ್ರಬಲದಿಂದ) (ನಿನ್ನನ್ನು) ಹಿಂಸಿಸುವುದಿಲ್ಲ; ✣ **ದೇವಬರ್‍ಹಿಃ** = ಎಲೈ! ದೇವಾರ್ಥವಾದ ದರ್ಭಪುಂಜವೇ! **ಶತವಲ್‍ಶಂ** = ನೂರಾರು ಶಾಖೆಗಳಾಗಿ; **ವಿರೋಹ** = ಒಡೆದು ವೃದ್ಧಿಹೊಂದು; **ವಯಮ್** = ನಾವು; ✣**ಸಹಸ್ರವಲ್‍ಶಾಃ** = ಪುತ್ರಪೌತ್ರಾದಿ ಸಹಸ್ರ ಶಾಖೆಗಳುಳ್ಳವರಾಗಿ; **ವಿರುಹೇಮ** = ವೃದ್ಧಿಹೊಂದೋಣ. (ಎಲೈ ಆಧಾರಭೂತವಾದ ತೃಣಕಾಷ್ಠಾದಿಯೇ!)

---

ಎಲೈ ದೇವಬರ್ಹಿಯೇ! ನೀನು ಮತ್ತೆ ನೂರಾರು ಶಾಖೆಗಳಾಗಿ ಚಿಗುರಿ ವೃದ್ಧಿಹೊಂದು.

ನಾವೂ (ಯಜ್ಞಕ್ಕೆ ಸಂಬಂಧಿಸಿದವರು) ಪುತ್ರಪೌತ್ರಾದಿ ಸಹಸ್ರಶಾಖೆಗಳುಳ್ಳವರಾಗಿ ಬೆಳೆಯೋಣ.

ಎಲೈ ದರ್ಭಾಧಾರವಾದ ವಸ್ತುವೇ! ಈ ದರ್ಭಪುಂಜವು ಭೂಮಿಯ ಮೇಲಿನ ಅಶುಚಿಯಾದ ವಸ್ತುಗಳ ಸಂಪರ್ಕದಿಂದ ತ್ಯಾಜ್ಯವಾಗದಂತೆ ಈ ದರ್ಭಪುಂಜವನ್ನು ರಕ್ಷಿಸು.

ಪೃಥಿವ್ಯಾಃ ಸಂಪೃಚಃ ಪಾಹಿ

ಸುಸಂಭೃತಾ ತ್ವಾ ಸಂಭರಾಮ್ಯದಿತ್ಯೈ ರಾಸ್ನಾಸೀಂದ್ರಾಣ್ಯೈ

---

ಪೃಥಿವ್ಯಾಃ । ಸಂಪೃಚ ಇತಿ ಸಂ-ಪೃಚಃ । ಪಾಹಿ । ಸುಸಂಭೃತೇತಿ ಸು-ಸಂಭೃತಾ । ತ್ವಾ । ಸಮಿತಿ । ಭರಾಮಿ । ಅದಿತ್ಯೈ । ರಾಸ್ನಾ । ಅಸಿ । ಇಂದ್ರಾಣ್ಯೈ ।

---

| ಮಂತ್ರ | ವಿನಿಯೋಗ |
|---|---|
| * ಅದಿತ್ಯೈ ರಾಸ್ನಾಸಿ । | ಮೂರೆಳೆ ಅಥವಾ ಐದೆಳೆಯುಳ್ಳ ದರ್ಭೆಯ ಹುರಿ (ಶುಲ್ಬ)ಯನ್ನು ಭೂಮಿಯಲ್ಲಿ ಹರಡಲು |
| ಸುಸಂಭೃತಾ ತ್ವಾ ಸಂಭರಾಮಿ । | ಕತ್ತರಿಸಿದ ದರ್ಭಮುಷ್ಟಿಗಳನ್ನು ಇಡಲು |



---

ಪೃಥಿವ್ಯಾಃ = ಭೂಮಿಯ; ಸಂಪೃಚಃ = ಸಂಪರ್ಕದ ದೆಸೆಯಿಂದ (ಈ ದರ್ಭಪುಂಜವನ್ನು); ಪಾಹಿ = ಕಾಪಾಡು.

(ಎಲೈ ರಜ್ಜುವೇ!) (ನೀನು) ✢ ಅದಿತ್ಯೈ ರಾಸ್ನಾ = ಭೂಮಿಯ ಒಡ್ಯಾಣವಾಗಿ; ಅಸಿ= ಇರುವೆ; (ಎಲೈದರ್ಭಮುಷ್ಟಿಯೇ!) ಸುಸಂಭೃತಾ = ಚೆನ್ನಾಗಿ ಕಟ್ಟಲು ಸಮರ್ಥವಾಗಿರುವ (ಈ ರಜ್ಜುವಿನಿಂದ) ತ್ವಾ = ನಿನ್ನನ್ನು; ಸಂಭರಾಮಿ = ಸೇರಿಸುತ್ತೇನೆ. (ಒಟ್ಟುಗೂಡಿಸು ತ್ತೇನೆ.) ✢ ಇಂದ್ರಾಣ್ಯೈ = ಇಂದ್ರಪತ್ನಿಯಾದ ಶಚೀದೇವಿಯ;

---

ಎಲೈ ರಜ್ಜುವೇ! ನೆಲದ ಮೇಲೆ ಹಾಸಿರುವ ನೀನು ಭೂಮಿಯ ಮೇಖಲೆಯಂತಿರುವೆ.

ಎಲೈ ದರ್ಭಪುಂಜವೇ! ನಿನ್ನನ್ನು ಕಟ್ಟಿ ಸೇರಿಸಲು ಸಮರ್ಥವಾದ ಈ ಹುರಿ(ಶುಲ್ಬ)ಯಿಂದ ನಿನ್ನನ್ನು ಒಟ್ಟುಗೂಡಿಸುತ್ತೇನೆ.

---

* ಪಾಠಕ್ರಮದಂತೆ 'ಸುಸಂಭೃತಾ' ಎಂಬ ಮಂತ್ರವನ್ನು ವ್ಯಾಖ್ಯಾನ ಮಾಡಬೇಕಾದರೂ ಸಹ ಕಲ್ಪಸೂತ್ರಕಾರರು, ಮಂತ್ರಗಳ ವಿನಿಯೋಗಕ್ಕನುಸಾರವಾಗಿ ಪಾಠಕ್ರಮಕ್ಕಿಂತಲೂ ಅರ್ಥಕ್ರಮವು ಮುಖ್ಯವೆಂದು ಮೊದಲು 'ಅದಿತ್ಯೈ' ಮಂತ್ರವನ್ನು ವ್ಯಾಖ್ಯಾನ ಮಾಡಿರುತ್ತಾರೆ.

# ಸಂನಹನಂ ಪೂಷಾ ತೇ ಗ್ರಂಥಿಂ ಗ್ರಥ್ನಾತು
# ಸ ತೇ ಮಾಸ್ಥಾದಿಂದ್ರಸ್ಯ ತ್ವಾ

---

ಸಂನಹನಮಿತಿ ಸಂ-ನಹನಮ್ । ಪೂಷಾ । ತೇ । ಗ್ರಂಥಿಮ್ । ಗ್ರಥ್ನಾತು ।
ಸಃ । ತೇ । ಮಾ । ಏತಿ । ಸ್ಥಾತ್ । ಇಂದ್ರಸ್ಯ । ತ್ವಾ ।

---

| ಮಂತ್ರ | ವಿನಿಯೋಗ |
| --- | --- |
| ಇಂದ್ರಾಣ್ಯೈ ಸಂನಹನಮ್ । | ಶುಲ್ಬದ ಎರಡು ತುದಿಗಳನ್ನು ಕಟ್ಟಲು |
| ಪೂಷಾ.... ಗ್ರಥ್ನಾತು । | ಗಂಟು ಹಾಕಲು |
| ಸ.... ಸ್ಥಾತ್ । | ಗಂಟು ಕಟ್ಟಿದ ಮೇಲೆ ಮೂಲಾಗ್ರಗಳನ್ನು ಒಳಗೆ ಸೇರಿಸಲು (ಪೂರ್ವದಿಂದ ಪಶ್ಚಿಮಕ್ಕೆ ಅಥವಾ ಪಶ್ಚಿಮದಿಂದ ಪೂರ್ವಕ್ಕೆ) |

---

**ಸಂನಹನಂ** = (ಮೇಖಲಾರೂಪವಾದ) ಬಂಧನವೇ (ಇದಾಗಿದೆ); (ಎಲೈರಜ್ಜುವೇ!) ✣ **ಪೂಷಾ** = ಪೋಷಕನಾದ ದೇವನು; **ತೇ** = ನಿನ್ನ; **ಗ್ರಂಥಿಮ್** = ಗಂಟನ್ನು; **ಗ್ರಥ್ನಾತು** = ಕಟ್ಟಲಿ. (ಎಲೈ ದರ್ಭವೇ!) **ತೇ** = ನಿನ್ನ; ✣ **ಸಃ** = ಆ ಗಂಟು; **ಮಾಸ್ಥಾತ್** = ಬಹಳ ಕಾಲ ಇರದಿರಲಿ. (ಎಲೈ ದರ್ಭರಾಶಿಯೇ!) **ತ್ವಾ** = ನಿನ್ನನ್ನು; ✣ **ಇಂದ್ರಸ್ಯ** =

---

ಶಚೀದೇವಿಯು ಪೂರ್ವಜನ್ಮದಲ್ಲಿ ಯಜಮಾನನು ಮಾಡಿದ ನೂರಾರು ಯಜ್ಞಗಳಲ್ಲಿ ಮೇಖಲೆಗಳಿಂದ ಕಟ್ಟಲ್ಪಟ್ಟಳು. ಆ ಪುಣ್ಯದಿಂದ ಇಂದ್ರನ ಪತ್ನಿಯಾಗುವ ಸಮೃದ್ಧಿಯನ್ನು ಹೊಂದಿದಳು. ಹಾಗೆಯೇ ಈ ಬಂಧನದಿಂದ ಸಮೃದ್ಧಿಯುಂಟಾಗುತ್ತದೆ.

ಮೂಲಾಗ್ರಗಳನ್ನು ಜೋಡಿಸಿರುವ ಹಗ್ಗವೇ! ಪೋಷಕನಾದ ಪೂಷದೇವತೆಯೇ ನಿನ್ನ ಗಂಟನ್ನು ಕಟ್ಟಲಿ.

## ಬಾಹುಭ್ಯಾಮುದ್ಯಚ್ಛೇ ಬೃಹಸ್ಪತೇರ್ಮೂರ್ಧ್ನಾ
## ಹರಾಮ್ಯುರ್ವಂತರಿಕ್ಷಮನ್ವಿಹಿ

---

ಬಾಹುಭ್ಯಾಮಿತಿ ಬಾಹು-ಭ್ಯಾಮ್ । ಉದಿತಿ । ಯಚ್ಛೇ । ಬೃಹಸ್ಪತೇಃ । ಮೂರ್ಧ್ನಾ । ಹರಾಮಿ । ಉರು । ಅಂತರಿಕ್ಷಮ್ । ಅನ್ವಿತಿ । ಇಹಿ ।

---

| ಮಂತ್ರ | ವಿನಿಯೋಗ |
|---|---|
| ಇಂದ್ರಸ್ಯ..... ಉದ್ಯಚ್ಛೇ । | ದರ್ಭೆಗಳ ಹೊರೆಯನ್ನು ಮೇಲೆತ್ತಲು |
| ಬೃಹಸ್ಪತೇಃ..... ಹರಾಮಿ । | ದರ್ಭೆಯ ಹೊರೆಯನ್ನು ತಲೆಯಲ್ಲಿ ಇಡಲು |
| ಉರು.... ಅನ್ವಿಹಿ । | ಅಧ್ವರ್ಯುವು ಯಾಗಶಾಲೆಗೆ ಹಿಂದಿರುಗಲು |



---

ದೇವೇಂದ್ರನ; ಬಾಹುಭ್ಯಾಮ್ = ತೋಳುಗಳಿಂದ; ಉದ್ಯಚ್ಛೇ = ಮೇಲಕ್ಕೆ ಎತ್ತುತ್ತೇನೆ; (ಎಲೈ ದರ್ಭಪುಂಜವೇ! ನಿನ್ನನ್ನು) ÷ ಬೃಹಸ್ಪತೇಃ = ಬೃಹಸ್ಪತಿಯ; ಮೂರ್ಧ್ನಾ = ತಲೆಯಿಂದ; ಹರಾಮಿ = ಒಯ್ಯುತ್ತೇನೆ; (ಎಲೈ ದರ್ಭ ರಾಶಿಯೇ!) ÷ ಉರು = ವಿಸ್ತೀರ್ಣವಾದ; ಅಂತರಿಕ್ಷಮ್ = ಆಕಾಶವನ್ನು; ಅನ್ವಿಹಿ = ಅನುಸರಿಸಿ ಬಾ. (ಎಲೈದರ್ಭರಾಶಿಯೇ!) (ನೀನು)

---

ಎಲೈ ದರ್ಭಪುಂಜವೇ! ನಿನ್ನನ್ನು ಹಿಂಸಿಸುವ ಆ ಗಂಟು ಬಹುಕಾಲ ಇರದಿರಲಿ.

ಎಲೈ ದರ್ಭರಾಶಿಯೇ! ನಾನು ಇಂದ್ರದೇವನ ತೋಳುಗಳಿಂದ ನಿನ್ನನ್ನು ಮೇಲಕ್ಕೆ ಎತ್ತುತ್ತೇನೆ (ನನ್ನ ತೋಳುಗಳಿಂದಲ್ಲ).

ಎಲೈ ದರ್ಭಪುಂಜವೇ! ನಿನ್ನನ್ನು ಬೃಹಸ್ಪತ್ಯಾಚಾರ್ಯರ ತಲೆಯಿಂದಲೇ ಹೊರುತ್ತೇನೆ (ನನ್ನ ತಲೆಯಿಂದಲ್ಲ)..

# ದೇವಂಗಮಮಸಿ ॥೨॥3॥

[ ಸಹಸ್ರವಲ್ಶಾ ಅಷ್ಟಾತ್ರಿಗ್ಂಶಚ್ಚ ]

---

ದೇವಂಗಮಮಿತಿ ದೇವಮ್-ಗಮಮ್ । ಅಸಿ ॥ ೨ ॥

---

| ಮಂತ್ರ | ವಿನಿಯೋಗ |
|---|---|
| ದೇವಂಗಮಮಸಿ । | ಗಾರ್ಹಪತ್ಯದ ಉತ್ತರಭಾಗದಲ್ಲಿ ಮೇಲು ಭಾಗದಲ್ಲಿ ದರ್ಭರಾಶಿಯನ್ನಿಡಲು |

---

∴ ದೇವಂಗಮಮ್ = ದೇವತೆಗಳನ್ನು ಹೊಂದುವವನಾಗಿ; ಅಸಿ = ಇರುವೆ.

---

ಎಲೈ ದರ್ಭರಾಶಿಯೇ! ವಿಸ್ತೀರ್ಣವಾದ ಅಂತರಿಕ್ಷವು ಪ್ರಯಾಣಕ್ಕೆ ಸುಖಕರವಾಗಿದೆ. ಆ ಮಾರ್ಗವನ್ನು ಅನುಸರಿಸಿ ಬಾ.

ಎಲೈ ದರ್ಭರಾಶಿಯೇ! ನೀನು ದೇವತೆಗಳನ್ನು ಹೊಂದುತ್ತೀಯೆ. (ಪ್ರಸ್ತರವನ್ನು ಅಗ್ನಿಯಲ್ಲಿ ಹೋಮ ಮಾಡುವುದರಿಂದ ಈ ಶ್ರುತಿವಚನ).

## ವಿನಿಯೋಗ ಸಂಗ್ರಹ

[1]ಯಜ್ಞಸ್ಯೇತ್ಯಗ್ನಿಮಾಮಂತ್ರ್ಯ ಪ್ರತ್ಯು[2] ದಾತ್ರಸ್ಯ ತಾಪನಮ್ । ಪ್ರೇಯಂ[3] ವ್ರಜತಿ ದೇವಾನಾಂ[4] ದರ್ಭಸೀಮಾಥ ಮುಷ್ಟಿತಃ ॥ ೧ ॥ ದೇವೇ[5]ತಿ ದರ್ಭಾನ್ ಸಂಯಮ್ಯ ಪರ್ವ[6] ಸಂಸ್ಥಾಪ್ಯ ದಾತ್ರಕಮ್। ಆಚ್ಛೇ[7]ಚ್ಛಿಂದ್ಯಾದ್ದೇವ[8]ಮೂಲಂ ಸ್ಪೃಶೇತ್ ಸ್ವಂ ಚ ಸಹೇ[9]ತ್ಯತಃ ॥ ೨ ॥ [10]ಪೃಥಿವ್ಯುಪರ್ಯವಸ್ಥಾಪ್ಯಾದಿತ್ಯೈ[11] ರಜ್ಜುಂ ಪ್ರಸಾರಯೇತ್ ।

[12] ಸುಸಂಭೃದ್ದರ್ಭಾಃ ಸಂಭಾರ್ಯಾ ಇಂದ್ರಾಣ್ಯಾ [13] ಇತಿ ಬಂಧನಮ್ ॥ ೩ ॥ [14]ಪೂಷಾ ಗ್ರಂಥಿಃ ಸ ತೇ[15] ಗೂಹ [16]ಇಂದ್ರೋದ್ಯಮ್ಯ ಬೃಹಸ್ಪತೇಃ[17]। ಮೂರ್ಧ್ನಾರ್ಥ ದಾಯೋರ್ವೇ[18]ತ್ಯ ಚೋರ್ಧ್ವಂ ಸ್ಥಾಪಯೇದ್ದೇವ[19]ಮಿತ್ಯತಃ ॥ ಅನುವಾಕೇ ದ್ವಿತೀಯೇಽಸ್ಮಿನ್ನುಕ್ತಾ ಏಕೋನವಿಂಶತಿಃ ॥ ೧೪ ॥

ಅನುವಾಕದಲ್ಲಿರುವ ಮಂತ್ರಸಂಖ್ಯೆ —ಆಪಸ್ತಂಬ ಮತ—19
—ಬೌಧಾಯನಮತ—20

## ಅನುವಾಕದ ವಿಶೇಷ ವಿಷಯಗಳು

### ಅ) ಭ.ಭಾ. ಭಾಷ್ಯ

ಅನುವಾಕದಲ್ಲಿ ಇರುವ ಮಂತ್ರಗಳನ್ನು ಆದರ ಸಂಖ್ಯೆಯೊಡನೆ ಉಲ್ಲೇಖಿಸಿ ಅಲ್ಲಿ ಮಿಶ್ರರಿಂದ ವಿಶೇಷವು ಹೇಳಲ್ಪಟ್ಟಿದ್ದರೆ ಅದನ್ನು ತಿಳಿಸಲಾಗುವುದು.

೧) ಯಜ್ಞಸ್ಯ ಘೋಷದಸಿ ।

ಎಲೈ ಅಶ್ವಪರ್ಶುವೇ! ಅಸಿದವೇ! ನೀನು ಯಜ್ಞಕ್ಕೋಸ್ಕರ ಘೋಷಣೆ ಮಾಡುತ್ತಿದ್ದೀಯೆ. 'ನನ್ನಿಂದ ದರ್ಭಚ್ಛೇದನವನ್ನು ಮಾಡಿ ಬೇಗನೆ ಯಜ್ಞವನ್ನು ನೆರವೇರಿಸು' ಎಂದು ಘೋಷಿಸುವವನಾಗಿದ್ದೀಯೆ. 'ಘೋಷತ್' ಎಂಬುದು 'ಧನದ ಹೆಸರು ಎಂದು ಕೆಲವರು ಹೇಳುತ್ತಾರೆ' ಎಂದು ತಿಳಿಸಿರುತ್ತಾರೆ.

೩) ಪ್ರೇಯಂ.... ಬರ್ಹಿರಾಸದೇ ।

ಇಯಂ = ಈ ಅಶ್ವಪರ್ಶುವು; ಮನುನಾ = ಸರ್ವಕರ್ತನಾದ ಪ್ರಜಾಪತಿಯಿಂದ; ಸ್ವಧಯಾ = ಮಾಂಸರೂಪವಾದ ಅನ್ನದಿಂದ; ಕೃತಾ = ಮಾಡಲ್ಪಟ್ಟಿದೆ; ಧಿಷಣಾ = ಕೊಯ್ಯುವುದರಲ್ಲಿ ಸಮರ್ಥವಾಗಿದೆ; ವಿತಷ್ಟಾ = ಚೆನ್ನಾಗಿ ಹರಿತವಾಗಿದೆ; ಬರ್ಹಿರಚ್ಛ = ಬರ್ಹಿಸ್ಸನ್ನು ಹೊಂದಲು; ಪ್ರಾಗಾತ್ = ಪೂರ್ವದಿಕ್ಕಿಗೆ ಹೋಗುತ್ತದೆ.

ಇದೇ ಮಂತ್ರದಲ್ಲಿ 'ತೇ ಕವಯಃ ಪುರಸ್ತಾತ್ ಆವಹಂತಿ ದೇವೇಭ್ಯಃ ಜುಷ್ಟಮ್' ಎಂದು ಅನ್ವಯ ಮಾಡಿ 'ಮೇಧಾವಿಗಳಾದ ಯಜ್ಞಕರ್ಮವಿದರು ಪೂರ್ವದಿಕ್ಕಿನಿಂದ ತರುತ್ತಾರೆ. ಹೀಗೆ ಮಾಡುವುದರಿಂದ ದೇವತೆಗಳಿಗೆ ಪ್ರಿಯವಾಗುವುದು' ಎಂದು ಅರ್ಥವನ್ನು ನಿರೂಪಿಸಿರುತ್ತಾರೆ.

೫) ದೇವಬರ್ಹಿಃ.... ರಾಧ್ಯಾಸಮ್ ।

ಈ ಮಂತ್ರದಲ್ಲಿ ಅನ್ವಕ್ = ಗೆಣ್ಣಿನಿಂದ ಕೆಳಭಾಗದಲ್ಲಿ; ತಿರ್ಯಕ್ = ಅಡ್ಡಲಾಗಿ ನಿನ್ನನ್ನು ಕತ್ತರಿಸುವುದಿಲ್ಲ ಎಂದು ಅರ್ಥವನ್ನು ತಿಳಿಸಿರುತ್ತಾರೆ.

೭) ಆಚ್ಛೇತ್ತಾ ತೇ ಮಾ ರಿಷಮ್ ।

'ವಿಧಿಗನುಗುಣವಾಗಿ ನಿನ್ನನ್ನು ಕತ್ತರಿಸುತ್ತೇನೆ. ವ್ಯರ್ಥವಾಗಿ ಕತ್ತರಿಸುತ್ತಿಲ್ಲ. ಆದುದರಿಂದ ನನಗೆ ನಾಶವು (ಹಿಂಸೆಯು) ಬರದಿರಲಿ.

೧೦) ಪೃಥಿವ್ಯಾಃ.... ಪಾಹಿ ।

ಮೇಲೆ ದ್ಯುಲೋಕದಲ್ಲಿರುವ ನೀನು ಭೂಮಿಯಲ್ಲಿರುವ ನಮ್ಮನ್ನು ರಕ್ಷಿಸು.

೧೧) ಅದಿತ್ಯೈ ರಾಸ್ನಾಸಿ ।

ಅಖಂಡನೀಯ ಪೃಥಿವಿಯೇ ಅದಿತಿ. ಆ ಅದಿತಿಯು ಮಾಡಿದ ರಜ್ಜುವೇ ನೀನಾಗಿದ್ದೀಯೆ.

೧೪) ಪೂಷಾ.... ಗ್ರಥ್ನಾತು ।

ಪೂಷಾ = ಆದಿತ್ಯಃ (ಸೂರ್ಯನು)

೧೫) ಸ ತೇ ಮಾಸ್ಥಾತ್ ।

ಆ ನಿನ್ನ ಗಂಟು ಬೇರೆಯ ಕಡೆಗೆ ಹೋಗದಿರಲಿ. ಬಿಚ್ಚುವವರೆಗೂ ದೃಢವಾಗಿರಲಿ.



ಛಂದಸ್ಸು

| | ಮಂತ್ರ | ಅಕ್ಷರ ಸಂಖ್ಯೆ | ಛಂದಸ್ಸಿನ ಹೆಸರು |
|---|---|---|---|
| 1. | ಪ್ರತ್ಯುಷ್ಟಾ ಅರಾತಯಃ । | [illegible] | ಯಜುರಾದಿಕಾ ಏಕಪದಾ ಗಾಯತ್ರೀ ['ಪ್ರತ್ಯುಷ್ಟಗಂ ರಕ್ಷಃ' ಎಂಬುದು ಯಜುಸ್ಸು] |
| 2. | ಪ್ರೇಯಂ... ಆಸದೇ । | ೪೪ | ತ್ರಿಷ್ಟುಪ್ |
| 3. | ಸಹಸ್ರ.... ರುಹೇಮ | ೧೧ | ಏಕಪದಾ ತ್ರಿಷ್ಟುಪ್ |
| 4. | ಉರ್ವಂತರಿಕ್ಷಮನ್ವಿಹಿ । | ೮ | ಏಕಪದಾ ಗಾಯತ್ರೀ |

ಭಟ್ಟಭಾಸ್ಕರರ ಭಾಷ್ಯದಲ್ಲಿ ಈ ಮೇಲಿನ ವಿಶೇಷಾಂಶಗಳಿವೆ. ಇದಲ್ಲದೆ ವ್ಯಾಕರಣಶಾಸ್ತ್ರವನ್ನನುಸರಿಸಿದ ಶಬ್ದಗಳ ನಿಷ್ಪತ್ತಿಯನ್ನೂ, ಸ್ವರಗಳ ವಿಷಯಗಳನ್ನೂ ವಿವರವಾಗಿ ತಿಳಿಸಿರುತ್ತಾರೆ. ಗ್ರಂಥವಿಸ್ತರವಾಗುವುದೆಂದು ಅವುಗಳನ್ನು ಇಲ್ಲಿ ನೀಡಿಲ್ಲ.

## ಆ) ಮೀಮಾಂಸಾ

ಈ ಅನುವಾಕದಲ್ಲಿ ಪಾಠಕ್ರಮಕ್ಕಿಂತಲೂ ಅರ್ಥಕ್ರಮವು ಮುಖ್ಯವೆಂದು 'ಅದಿತ್ಯೈ ರಾಸ್ನಾಸಿ' ಎಂಬ ಮಂತ್ರವನ್ನು ಮೊದಲು ವ್ಯಾಖ್ಯಾನ ಮಾಡಿರುವರಷ್ಟೆ. ಶ್ರುತಿಯಲ್ಲಿ ಪಾಠಕ್ರಮಕ್ಕೆ ಪ್ರಾಧಾನ್ಯವಿಲ್ಲದಿಲ್ಲ. ಇದನ್ನು ಶ್ರೀ ಸಾಯಣರು ನಿರೂಪಿಸಿರುತ್ತಾರೆ.

### 1. ಪ್ರಯಾಜಗಳಲ್ಲಿ ಕ್ರಮವಿದೆಯೇ?

'ಅಧ್ವರ್ಯುರ್ಗೃಹಪತಿಂ ದೀಕ್ಷಯಿತ್ವಾ ಬ್ರಹ್ಮಾಣಂ ದೀಕ್ಷಯತಿ, ತತ ಉದ್ಗಾತಾರಮ್' (ಆಪ. ಶ್ರೌ.21-2-16) ಎಂಬ ವಚನವು ಶ್ರೌತಸೂತ್ರದಲ್ಲಿದೆ. ಈ ವಚನದಲ್ಲಿ 'ದೀಕ್ಷಯಿತ್ವಾ' ಎಂಬಲ್ಲಿ 'ಕ್ತ್ವಾ' ಪ್ರತ್ಯಯವು ಇರುವುದರಿಂದ, 'ತತಃ' ಎಂಬ ಪಂಚಮೀವಿಭಕ್ತಿಯಿಂದ ಕೂಡಿದ ಶಬ್ದವಿರುವುದರಿಂದ, ಅಧ್ವರ್ಯುವು ಯಜಮಾನನನ್ನು ದೀಕ್ಷೆಗೊಳಿಸಿದ ನಂತರ ಬ್ರಹ್ಮನಿಗೂ ಬಳಿಕ ಉದ್ಗಾತೃವಿಗೂ ದೀಕ್ಷಾವಿಧಿಯನ್ನು ಮಾಡಿಸುತ್ತಾನೆ ಎಂಬುದಾಗಿ ದೀಕ್ಷೆಯ ಕ್ರಮವನ್ನು ತಿಳಿಯಲು ಅವಕಾಶವಿದೆ. ಆದರೆ ಪ್ರಯಾಜಯಾಗವನ್ನು ತಿಳಿಸುವ 'ಸಮಿಧೋ ಯಜತಿ' 'ತನೂನಪಾತಂ ಯಜತಿ' ಎಂಬ ಶ್ರುತಿವಚನಗಳಲ್ಲಿ ಕ್ರಮವನ್ನು ತಿಳಿಸುವ ಪ್ರತ್ಯಯಾದಿಗಳು ಇಲ್ಲದಿರುವುದರಿಂದ ಪ್ರಯಾಜಾದಿಗಳಲ್ಲಿ ಕ್ಲೃಪ್ತವಾದ ಕ್ರಮವಿಲ್ಲ.

ಇಲ್ಲಿಯ ಸಿದ್ಧಾಂತವು ಹೀಗಿದೆ. ಬೇರೆಯ ಪ್ರಮಾಣವಿಲ್ಲದಿದ್ದರೂ ಶ್ರುತಿಯ ಪಾಠವೇ ಕ್ರಮಕ್ಕೆ ಪ್ರಮಾಣವಾಗುತ್ತದೆ. ಮೊದಲು ಹೇಳಿದುದು ಮೊದಲು. ಅನಂತರ ಹೇಳಿದುದು ಅನಂತರ. ಹೀಗೆ ಪಾಠವು ಕ್ರಮಕ್ಕೆ ಪ್ರಮಾಣವಾದುದರಿಂದ ಪ್ರಥಮಾನುವಾಕ ದಲ್ಲಿ ಹೇಳಿದ ವತ್ಸಾಪಾಕರಣವು ಮೊದಲು. ಎರಡನೆಯ ಅನುವಾಕದಲ್ಲಿ ಹೇಳಿರುವ ಬರ್ಹಿರಾಹರಣವು ಬಳಿಕ ಎಂದು ಪೌರ್ವಾಪರ್ಯವು ಸಿದ್ಧವಾಗಿದೆ.

ಕೆಲವೆಡೆ ಪಾಠಕ್ರಮಕ್ಕಿಂತಲೂ ಅರ್ಥಕ್ರಮವು ಪ್ರಬಲವಾಗಿರುತ್ತದೆ. 'ಅಗ್ನಿಹೋತ್ರಂ ಜುಹೋತಿ' 'ಯವಾಗೂಂ ಪಚತಿ' ಎಂಬ ಶ್ರುತಿವಚನಗಳಿವೆ. ಅಲ್ಲದೆ 'ಯವಾಗ್ವಾಗ್ನಿ ಹೋತ್ರಂ ಜುಹೋತಿ' ಎಂಬ ಮತ್ತೊಂದು ವಾಕ್ಯವಿದೆ. ಇಲ್ಲಿ 'ಅಗ್ನಿಹೋತ್ರಂ ಜುಹೋತಿ' ಎಂದು ಪಾಠಕ್ರಮದಂತೆ ಮೊದಲು ಇದ್ದರೂ ಯವಾಗೂವನ್ನು (ಗಂಜಿ) ಮಾಡಿ ಬಳಿಕ ಅಗ್ನಿಹೋತ್ರವನ್ನು ಮಾಡಬೇಕೆಂದು-ಪಾಠಕ್ರಮಕ್ಕಿಂತಲೂ ಅರ್ಥಕ್ರಮವು ಪ್ರಬಲ ವಾದುದರಿಂದ-ನಿರ್ಣಯಿಸಲಾಗಿದೆ. ಅಂತೆಯೇ'ಸುಸಂಭೃತಾ....' ಮತ್ತು 'ಅದಿತ್ಯೈ ರಾಸ್ನಾಸಿ' ಎಂಬಲ್ಲಿ ಅರ್ಥ ಕ್ರಮವೇ ಪ್ರಬಲ.

### 2. 'ಧಿಷಣಾ ಬರ್ಹಿರಚ್ಛ' ಎಂಬಲ್ಲಿ ಬರ್ಹಿಃಶಬ್ದಾರ್ಥ ಏನು?

'ಬರ್ಹಿರ್ಲುನಾತಿ' 'ಆಜ್ಯಂ ವಿಲಾಪಯತಿ' 'ಪುರೋಡಾಶಂ ಪರ್ಯಗ್ನಿ ಕರೋತಿ' ಎಂಬ ವಚನಗಳಿವೆ. ಇಲ್ಲಿ ಬರ್ಹಿಃ, ಆಜ್ಯಂ, ಪುರೋಡಾಶಃ ಈ ಶಬ್ದಗಳು ದರ್ಭೆ, ತುಪ್ಪ ಮತ್ತು ಹಿಟ್ಟು ಇವುಗಳನ್ನು ಹೇಳುತ್ತವೆಯೇ? ಅಥವಾ ಮಂತ್ರಗಳಿಂದ ಸಂಸ್ಕರಿಸಲ್ಪಟ್ಟ ಈ ವಸ್ತುಗಳನ್ನು ತಿಳಿಸುತ್ತವೆಯೇ? ಈ ಪದಗಳನ್ನು ಸಂಸ್ಕಾರಸಂಸ್ಕೃತ ವಸ್ತುಗಳಲ್ಲಿಯೇ

ಪ್ರಯೋಗಿಸುವುದರಿಂದ ಇವು ಜಾತಿವಾಚಕಗಳಲ್ಲ. ಮರದ ಕಂಬವನ್ನು ಯಜ್ಞಸಾಧನವನ್ನಾಗಿ ಸಂಸ್ಕಾರ ಮಾಡಿದ ನಂತರ ಅದಕ್ಕೆ 'ಯೂಪ' ಎಂಬ ಹೆಸರಿರುವಂತೆ, ಅಗ್ನಿಯನ್ನು ಸಂಸ್ಕಾರಗೊಳಿಸಿದ ನಂತರ 'ಆಹವನೀಯ' ಎಂಬ ಹೆಸರು ಉಂಟಾಗುವಂತೆ ಸಂಸ್ಕಾರಗೊಂಡ ವಸ್ತುಗಳಿಗೇ ಈ ಹೆಸರುಗಳು. ಅಂತೆಯೇ 'ಬರ್ಹಿಃ' ಎಂಬುದು ಸಂಸ್ಕಾರಗೊಂಡ ದ್ರವ್ಯವನ್ನು ತಿಳಿಸುತ್ತದೆ.

ಇಲ್ಲಿಯ ಸಿದ್ಧಾಂತವು ಹೀಗಿದೆ. ಈ ಶಬ್ದಗಳು ಮಂತ್ರಸಂಸ್ಕಾರಗೊಂಡ ಅಥವಾ ಸಂಸ್ಕಾರಗೊಳ್ಳದ ವಸ್ತುಗಳನ್ನು ಹೇಳುವ ಜಾತಿವಾಚಕಗಳೇ ಆಗಿವೆ. ಲೋಕದಲ್ಲಿಯಾಗಲೀ, ವೇದದಲ್ಲಿಯಾಗಲೀ ಈ ಶಬ್ದಗಳು ಜಾತಿವಾಚಕಗಳಂತೂ ಆಗಿಯೇ ಇವೆ. ಆದರೆ ಲೋಕದಲ್ಲಿ ಸಂಸ್ಕರಿಸಲ್ಪಡದಿರುವ ಆಯಾ ವಸ್ತುಗಳಲ್ಲಿಯೂ ಪ್ರಯೋಗವಿದೆ. 'ಬರ್ಹಿರಾದಾಯ ಗಾವೋ ಗತಾಃ' (ಹಸುಗಳು ದರ್ಭೆಯನ್ನು ಒಯ್ದುವು) 'ಗವ್ಯಮಾಜ್ಯಂ' (ಹಸುವಿನ ತುಪ್ಪ). ಪುರೋಡಾಶೇನ ಮೇ ಮಾತಾ ಪ್ರಹೇಲಕಂ ದದಾತಿ' (ನನ್ನ ತಾಯಿಯು ಹಿಟ್ಟಿನ ಬೊಂಬೆಯನ್ನು ಕೊಡುತ್ತಾಳೆ). ಆದುದರಿಂದ ಈ ಶಬ್ದಗಳು ಜಾತಿವಾಚಕಗಳೇ.

ಬರ್ಹಿಃಶಬ್ದವು ಯಾವ ವಸ್ತುವಿನ ವಾಚಕ ಎಂಬ ವಿಚಾರವನ್ನು ಮಾಡಿದುದರಿಂದ ಪ್ರಯೋಜನವಿದೆ. 'ಬರ್ಹಿಷಾ ಯೂಪಾವಟಮಾಸ್ತೃಣಾತಿ (ದರ್ಭೆಯಿಂದ ಯೂಪದ ಗುಂಡಿಯನ್ನು ಆಸ್ತರಣ ಮಾಡುತ್ತಾನೆ) ಎಂಬಲ್ಲಿ, ಸಂಸ್ಕರಿಸಲ್ಪಡದ ದರ್ಭೆಗಳಿಂದಲೂ ಆಸ್ತರಣ ಮಾಡಬಹುದು ಎಂಬುದು ನಿರ್ಣಯವಾಗುತ್ತದೆ.

ಹಿಂದಿನ ಅನುವಾಕದಂತೆಯೇ ಈ ಅನುವಾಕದಲ್ಲಿಯೂ ಸಹ ಶ್ರೀ ಸಾಯಣರು ಮಂತ್ರಗಳ ಸ್ವರಸಂಚಾರರೀತಿಯನ್ನು ನಿರೂಪಿಸಿರುತ್ತಾರೆ. ಪ್ರತಿಯೊಂದು ಪದಗಳಲ್ಲಿನ ಸ್ವರವನ್ನು ನಿರೂಪಿಸಿ, ಸಂಹಿತೆಯಲ್ಲಿ ಆಗುವ ಬದಲಾವಣೆಗಳನ್ನೂ ತಿಳಿಸಿರುತ್ತಾರೆ. ಗ್ರಂಥವಿಸ್ತರವಾಗುವುದೆಂದು ಅನುವಾದದಲ್ಲಿ ಅವುಗಳನ್ನು ನೀಡಿಲ್ಲ.

ಈ ಎರಡು ಅನುವಾಕಗಳಲ್ಲಿ ದರ್ಶೇಷ್ಟಿಯ ಹಿಂದಿನ ದಿನದಲ್ಲಿ ಹಗಲು ಮಾಡಬೇಕಾದ ವತ್ಸಾಪಾಕರಣ ಮತ್ತು ಬರ್ಹಿರಾಹರಣ ಇವು ತಿಳಿಸಲ್ಪಟ್ಟಿವೆ. 'ಪೂರ್ವೇದ್ಯುರಿಧ್ಮಾಬರ್ಹಿಃ ಕರೋತಿ' ಎಂಬ ಶ್ರುತಿವಚನದಂತೆ ಇಧ್ಮವನ್ನು (ಸಮಿತ್ತುಗಳು) ತರುವುದೂ ದರ್ಭೆಯ ಜೊತೆಯಲ್ಲಿಯೇ. ಆದರೆ ಇಧ್ಮಾಹರಣದ ಮಂತ್ರಗಳು ಬೇರೆ ಕಡೆಯಲ್ಲಿ ಆಮ್ನಾತವಾಗಿರುವುದರಿಂದ (ತ್ರೈ. ಬ್ರಾ. 3-7-4) ಅಲ್ಲಿಯೇ ಅದನ್ನು ವ್ಯಾಖ್ಯಾನ ಮಾಡಿರುತ್ತಾರೆ.

ಮೂರನೆಯ ಅನುವಾಕದಲ್ಲಿ ಹಿಂದಿನ ದಿನ ಸಾಯಂಕಾಲ ಮಾಡುವ ಸಾಯಂದೋಹ (ಹಾಲನ್ನು ಕರೆಯುವುದು)ದ ಮಂತ್ರಗಳಿವೆ.

---

## ॥ ತೃತೀಯೋऽನುವಾಕಃ ॥

### ಶುಂಧಧ್ವಂ ದೈವ್ಯಾಯ ಕರ್ಮಣೇ ದೇವಯಜ್ಯಾಯೈ

### ಮಾತರಿಶ್ವನೋ ಘರ್ಮೋऽಸಿ

---

ಶುಂಧಧ್ವಮ್ । ದೈವ್ಯಾಯ । ಕರ್ಮಣೇ । ದೇವಯಜ್ಯಾಯಾ ಇತಿ ದೇವ-ಯಜ್ಯಾಯೈ । ಮಾತರಿಶ್ವನಃ । ಘರ್ಮಃ । ಅಸಿ । *ದ್ಯೌಃ ।

---

| ಮಂತ್ರ | ವಿನಿಯೋಗ |
|---|---|
| ಶುಂಧಧ್ವಂ.... ಯಜ್ಯಾಯೈ । | ಗಾರ್ಹಪತ್ಯದ ಉತ್ತರದಲ್ಲಿ ಆಸಾದನೆ ಮಾಡಿರುವ ಪಾತ್ರೆಗಳನ್ನು ಪ್ರೋಕ್ಷಿಸಲು<br>ಪಾತ್ರೆಗಳು -4- ಬೌಧಾಯನರ ಮತ<br>ಪಾತ್ರೆಗಳು - 10 - ಆಪಸ್ತಂಬರ ಮತ |
| ೧) ಮಾತರಿಶ್ವನೋ ಘರ್ಮೋऽಸಿ । | ಗಾರ್ಹಪತ್ಯದಲ್ಲಿ ಅಂಗಾರಗಳನ್ನು ಉತ್ತರಕ್ಕೆ ಸರಿಸಲು - ಬೌಧಾಯನ |

---

❖ (ಎಲ್ಲೈ ಪಾತ್ರೆಗಳೇ!) ದೇವಯಜ್ಯಾಯೈ = ದೇವಪೂಜಾರೂಪವಾದ; (ಯಜ್ಞರೂಪವಾದ) ದೈವ್ಯಾಯ ಕರ್ಮಣೇ = ದೇವಸಂಬಂಧಿಯಾದ ಕರ್ಮಕ್ಕಾಗಿ; ಶುಂಧಧ್ವಮ್ = ಶುದ್ಧರಾಗಿರಿ. (ಎಲ್ಲೈ ಕುಂಭವೇ) (ನೀನು) ಮಾತರಿಶ್ವನಃ = ವಾಯುವಿನ (ಗೆ); ಘರ್ಮಃ = (ಅವಕಾಶವನ್ನು ಕೊಡುವುದರಿಂದ) ಉದ್ದೀಪಕವಾಗಿರುವ (ಅಂತರಿಕ್ಷಲೋಕವೇ)

---

ಎಲ್ಲೈ ಸಾನ್ನಾಯ್ಯ (ಹಾಲು-ಮೊಸರು) ಪಾತ್ರೆಗಳೇ ! ಯಜ್ಞರೂಪವಾದ ದೇವಕಾರ್ಯವನ್ನು ನೆರವೇರಿಸಲು ನೀವು ಶುದ್ಧರಾಗಿರಿ.

[ದಾನ-ವ್ರತ ಮುಂತಾದವುಗಳೂ ದೇವಸಂಬಂಧಿಯಾದ ಕರ್ಮಗಳೇ. ಇದು ಯಜ್ಞವೆಂಬ ದೈವಿಕಕರ್ಮ ಎಂದು ತಿಳಿಸಲು ದೇವಯಜ್ಯಾಯೈ ಎಂಬ ವಿಶೇಷಣದೊಡನೆ 'ದೈವ್ಯಾಯ ಕರ್ಮಣೇ' ಎಂದು ಶ್ರುತಿಯು ತಿಳಿಸುತ್ತದೆ.]

# ದ್ಯೌರಸಿ ಪೃಥಿವ್ಯಸಿ ವಿಶ್ವಧಾಯಾ ಅಸಿ ಪರಮೇಣ ಧಾಮ್ನಾ ದೃಗ್ಂಹಸ್ವ ಮಾ ಹ್ವಾರ್ವಸೂನಾಂ

---

ಅಸಿ । ಪೃಥಿವೀ । ಅಸಿ । ವಿಶ್ವಧಾಯಾ ಇತಿ ವಿಶ್ವ-ಧಾಯಾಃ । ಅಸಿ ಪರಮೇಣ । ಧಾಮ್ನಾ । ದೃಗ್ಂಹಸ್ವ । ಮಾ । ಹ್ವಾಃ* । ವಸೂನಾಮ್।

| ಮಂತ್ರ | ವಿನಿಯೋಗ |
|---|---|
| ೨) ದ್ಯೌರಸಿ... ಮಾ ಹ್ವಾಃ । | ಹಾಲಿನ ಕುಂಭಿಯನ್ನು ಕಾಯಿಸುವ ಸಲುವಾಗಿ ಇಡಲು (ಬೌಧಾಯನ) |
| ಮಾತರಿಶ್ವನೋ... ಮಾ ಹ್ವಾಃ । | ಹಾಲಿನ ಕುಂಭಿಯನ್ನು ಕಾಯಿಸಲು ಇಡಲು ಆಪಸ್ತಂಬ |

---

ಅಸಿ = ಆಗಿರುವೆ; ❖ ದ್ಯೌಃ ಅಸಿ = (ವೃಷ್ಟಿಯ ನೀರಿನಿಂದ ಆಗಿರುವುದರಿಂದ) ದ್ಯುಲೋಕವಾಗಿರುವೆ; ಪೃಥಿವೀ ಅಸಿ = (ಮಣ್ಣಿನಿಂದ ಆಗಿರುವುದರಿಂದ) ಭೂಮಿಯೂ ಆಗಿದ್ದೀಯೆ; ವಿಶ್ವಧಾಯಾಃ = (ಹೆಚ್ಚಾದ ಕ್ಷೀರಧಾರಣಸಾಮರ್ಥ್ಯದಿಂದ) ವಿಶ್ವವನ್ನು ಧರಿಸುವ (ವೃಷ್ಟಿರೂಪನೂ) ಅಸಿ = ಆಗಿರುವೆ. ಪರಮೇಣ ಧಾಮ್ನಾ= ಶ್ರೇಷ್ಠವಾದ ಧಾರಣಶಕ್ತಿಯಿಂದ; ದೃಗ್ಂಹಸ್ವ = ದೃಢವಾಗಿರು; ಮಾ ಹ್ವಾಃ = ಒಡೆದು ಹೋಗಬೇಡ. (ಎಲೈ ಶಾಖಾಪವಿತ್ರವೇ!) (ಕುಂಭೀಮಧ್ಯದಲ್ಲಿರುವ ನೀನು ) ❖ ವಸೂನಾಮ್ = [ಪ್ರಾಣನಿವಾಸಕಾರಣವಾದ (ಕ್ಷೀರ

---

ಎಲೈ ಕುಂಭವೇ! ನೀನು ಮಧ್ಯದಲ್ಲಿ ಅವಕಾಶವನ್ನು ಹೊಂದಿ ವಾಯುವಿನ ಸಂಚಾರಕ್ಕೆ ಕಾರಣನಾಗಿರುವುದರಿಂದ ಅಂತರಿಕ್ಷರೂಪನಾಗಿದ್ದೀಯೆ.ದ್ಯುಲೋಕದ ವೃಷ್ಟಿಯ ನೀರು ಪೃಥಿವಿಯ ಮತ್ತಿಕೆ ಇವುಗಳಿಂದ ಉತ್ಪನ್ನವಾಗಿರುವುದರಿಂದ ದ್ಯುಲೋಕ - ಭೂಲೋಕ ರೂಪನೂ ಆಗಿರುವೆ. ಕ್ಷೀರಧಾರಣಸಮರ್ಥನಾದ ನೀನು ವಿಶ್ವಧಾರಕವಾದ ವೃಷ್ಟಿರೂಪನೂ ಆಗಿರುವೆ.ನೀನು ಅಧಿಕವಾದ ಧಾರಣಶಕ್ತಿಯಿಂದ ಗಟ್ಟಿಯಾಗಿರು.ಒಡೆದು ಹೋಗಬೇಡ.

ಎಲೈ ಶಾಖಾಪವಿತ್ರವೇ! ನೀನು ಕುಂಭೀಮಧ್ಯದಲ್ಲಿ ಇದ್ದುಕೊಂಡು ಪ್ರಾಣಧಾರಣ ಕಾರಣವಾದ ಕ್ಷೀರಧಾರೆಯನ್ನು ಅದರಲ್ಲಿರುವ ಕಶ್ಮಲಗಳನ್ನು ತಡೆದು ಶುದ್ಧಗೊಳಿಸುವೆ.

ಪವಿತ್ರಮಸಿ ಶತಧಾರಂ ವಸೂನಾಂ ಪವಿತ್ರಮಸಿ

ಸಹಸ್ರಧಾರಗ್ಂ ಹುತಃ ಸ್ತೋಕೋ ಹುತೋ

ದ್ರಪ್ಸೋಽಗ್ನಯೇ ಬೃಹತೇ ನಾಕಾಯ

---

ಪವಿತ್ರಮ್ । ಅಸಿ । ಶತಧಾರಮಿತಿ ಶತ-ಧಾರಮ್ । ವಸೂನಾಮ್ । ಪವಿತ್ರಮ್।

ಅಸಿ । ಸಹಸ್ರಧಾರಮಿತಿ ಸಹಸ್ರ-ಧಾರಮ್ । ಹುತಃ । ಸ್ತೋಕಃ । ಹುತಃ ।

ದ್ರಪ್ಸಃ । ಅಗ್ನಯೇ । ಬೃಹತೇ । ನಾಕಾಯ ।

---



| ಮಂತ್ರ | ವಿನಿಯೋಗ |
| --- | --- |
| ವಸೂನಾಂ... ಸಹಸ್ರಧಾರಮ್ | ಸಾನ್ನಾಯ್ಯಕುಂಭಿಯಲ್ಲಿ ಶಾಖಾ ಪವಿತ್ರವನ್ನು ಪೂರ್ವಾಗ್ರವಾಗಿ ಇಡಲು |

---

ಧಾರಾರೂಪವಾದ] ವಸುಗಳ; ಪವಿತ್ರಮ್ = ಶುದ್ಧಗೊಳಿಸುವವನು; ಅಸಿ = ಆಗಿದ್ದೀಯೆ. ಶತಧಾರಮ್ = ನೂರು ಧಾರೆಗಳಾಗಿ; ಸಹಸ್ರಧಾರಮ್ = ಸಾವಿರಧಾರೆಗಳಾಗಿ (ಕುಂಭದಲ್ಲಿ ಬೀಳುವ) ವಸೂನಾಮ್ = (ಕ್ಷೀರರೂಪವಾದ) ವಸುಗಳ; ಪವಿತ್ರಮ್ ಅಸಿ = ಶೋಧಕನಾಗಿರುವೆ. ಸ್ತೋಕಃ = ಅಲ್ಪಬಿಂದುವು; ∴ ಹುತಃ = ಹುತವಾಗಲಿ; ದ್ರಪ್ಸಃ = ದೊಡ್ಡ ಹನಿಯೂ; ಹುತಃ = ಹುತವಾಗಲಿ; ಬೃಹತೇ= ಪ್ರೌಢನಾದ; ನಾಕಾಯ = (ಸ್ವರ್ಗವಾಸಿಯಾದ) ನಾಕನೆಂಬ ಹೆಸರುಳ್ಳ;

---

ನೂರಾರು ಸಾವಿರಾರು ಧಾರೆಗಳಾಗಿ ಕುಂಭದಲ್ಲಿ ಬೀಳುವ ಹಾಲಿನ ಧಾರೆಗಳನ್ನು ಶೋಧಿಸತಕ್ಕವನೂ ನೀನೇ ಆಗಿರುವೆ.

ಸಾಂನಾಯ್ಯಕುಂಭದಲ್ಲಿ ಶಾಖಾಪವಿತ್ರವನ್ನಿಟ್ಟು ಹಾಲನ್ನು ಸುರಿಯುವಾಗ ಸಿಡಿದು ಹಾರುವ ಸಣ್ಣ ಹನಿಗಳೂ ಹುತವಾಗಲಿ. ಸ್ವರ್ಗದಲ್ಲಿರುವ ಪ್ರೌಢನಾದ ನಾಕನೆಂಬ ಅಗ್ನಿಗೆ ಇವು ಹುತವಾಗಲಿ. ದ್ಯಾವಾಪೃಥಿವಿಗಳಿಗೂ ಇವು ಹುತವಾಗಲಿ.

## ಸ್ವಾಹಾ ದ್ಯಾವಾಪೃಥಿವೀಭ್ಯಾಗ್ಂ
## ಸಾ ವಿಶ್ವಾಯುಃ ಸಾ ವಿಶ್ವವ್ಯಚಾಃ ಸಾ ವಿಶ್ವಕರ್ಮಾ

---

ಸ್ವಾಹಾ । ದ್ಯಾವಾಪೃಥಿವೀಭ್ಯಾಮಿತಿ ದ್ಯಾವಾ - ಪೃಥಿವೀಭ್ಯಾಮ್ । ಸಾ । ವಿಶ್ವಾಯುರಿತಿ ವಿಶ್ವ-ಆಯುಃ । ಸಾ। ವಿಶ್ವವ್ಯಚಾ ಇತಿ ವಿಶ್ವ-ವ್ಯಚಾಃ। ಸಾ । ವಿಶ್ವಕರ್ಮೇತಿ ವಿಶ್ವ-ಕರ್ಮಾ ।

---



| ಮಂತ್ರ | ವಿನಿಯೋಗ (ಬೌಧಾಯನ) |
|---|---|
| ಹುತಃ...ದ್ಯಾವಾಪೃಥಿವೀಭ್ಯಾಮ್। | ಕರೆಯಲ್ಪಡುತ್ತಿರುವ ಹಾಲನ್ನು ಅನುಮಂತ್ರಿಸಲು ಆಪಸ್ತಂಬ |
| | ಹಾಲನ್ನು ಕುಂಭಕ್ಕೆ ಸುರಿಯುವಾಗ ಹೊರಗೆ ಬೀಳುವ ಹಾಲಿನ ಹನಿಗಳ ಅಭಿಮಂತ್ರಣಕ್ಕೆ |
| ಸಾ ವಿಶ್ವಾಯುಃ । | ಮೊದಲು ಕರೆದ ಹಸುವನ್ನು ಅಧ್ವರ್ಯುವು ಅನುಮಂತ್ರಣ ಮಾಡಲು |
| ಸಾ ವಿಶ್ವವ್ಯಚಾಃ । | ಎರಡನೆಯ ಹಸುವಿನ ಅನುಮಂತ್ರಣ |
| ಸಾ ವಿಶ್ವಕರ್ಮಾ । | ಮೂರನೆಯ ಹಸುವಿನ ಅನುಮಂತ್ರಣ |

---

ಅಗ್ನಯೇ = ಅಗ್ನಿಗೆ; ಸ್ವಾಹಾ = (ಅಲ್ಪಸ್ಥೂಲಕ್ಷೀರಬಿಂದುಗಳು) ಹುತವಾಗಲಿ; ದ್ಯಾವಾಪೃಥಿವೀಭ್ಯಾಮ್ = ದ್ಯಾವಾಪೃಥಿವಿಗಳಿಗೂ; (ಸ್ವಾಹಾ = ಹುತವಾಗಲಿ); ✣ ಸಾ = ಆ ಧೇನುವು; ವಿಶ್ವಾಯುಃ = ಪೂರ್ಣಾಯುವಾದ (ಭೂಮಿಯಾಗಿದೆ). ✣ ಸಾ = ಆ ಧೇನುವು; ವಿಶ್ವವ್ಯಚಾಃ = ವಿಶ್ವವ್ಯಾಪಕವಾದ (ಅಂತರಿಕ್ಷವಾಗಿದೆ). ✣ ಸಾ = ಆ ಧೇನುವು; ವಿಶ್ವಕರ್ಮಾ = ಸರ್ವಕರ್ಮಗಳಿಗೂ ಫಲವನ್ನು ಕೊಡುವ

---

ಮೂರು ಧೇನುಗಳನ್ನೂ 'ವಿಶ್ವಾಯುಃ' (ಭೂರೂಪಿ), 'ವಿಶ್ವವ್ಯಚಾಃ' (ಅಂತರಿಕ್ಷ ರೂಪಿ) ವಿಶ್ವಕರ್ಮಾ(ದ್ಯೋರೂಪಿ) ಎಂದು ಅಧ್ವರ್ಯುವು ಪ್ರಶಂಸಿಸುತ್ತಾ ಅನುಮಂತ್ರಣ ಮಾಡುತ್ತಾನೆ.

ಸಂಪೃಚ್ಯಧ್ವಮೃತಾವರೀರೂರ್ಮಿಣೀರ್ಮಧುಮತ್ತಮಾ

ಮಂದ್ರಾ ಧನಸ್ಯ ಸಾತಯೇ ಸೋಮೇನ (೧)

ತ್ವಾತನಚ್ಮೀಂದ್ರಾಯ

---

ಸಮಿತಿ । ಪೃಚ್ಯಧ್ವಮ್ । ಋತಾವರೀರಿತ್ಯೃತ-ವರೀಃ । ಊರ್ಮಿಣೀಃ । ಮಧುಮತ್ತಮಾ ಇತಿ ಮಧುಮತ್-ತಮಾಃ । ಮಂದ್ರಾಃ । ಧನಸ್ಯ । ಸಾತಯೇ । ಸೋಮೇನ । ತ್ವಾ । ಏತಿ । ತನಚ್ಮಿ । ಇಂದ್ರಾಯ ।

---



| ಮಂತ್ರ | ವಿನಿಯೋಗ |
|---|---|
| ಸಂಪೃಚ್ಯಧ್ವಮ್....ಸಾತಯೇ । | ಹಾಲನ್ನು ಕರೆದ ಪಾತ್ರೆಯಲ್ಲಿ ನೀರನ್ನು ಹಾಕಿ, ಅದನ್ನು ಹಾಲಿನ ಪಾತ್ರೆಯಲ್ಲಿ ಹಾಕಲು |
| ಸೋಮೇನ.... ದಧಿ । | ಹಾಲನ್ನು ಕಾಯಿಸಿ, ತಣ್ಣಗಾಗುವಂತೆ ಮಾಡಿ ಅಡ್ಡಲಾಗಿ ಪವಿತ್ರವನ್ನಿಟ್ಟು ಮೊಸರನ್ನು ಹಾಕುವುದಕ್ಕಾಗಿ [ಹೆಪ್ಪು ಹಾಕಲು] |

---

(ದ್ಯುಲೋಕವಾಗಿದೆ); ಋತಾವರೀಃ = (ಎಲ್ಯೆ ನೀರುಗಳೇ!) ಸತ್ಯವಾದ ಸಾಮರ್ಥ್ಯವುಳ್ಳ; ಊರ್ಮಿಣೀಃ= ಅಲೆಗಳುಳ್ಳ; ಮಧುಮತ್ತಮಾಃ = ಅತ್ಯಂತ ಮಧುರವಾಗಿರುವ; ಮಂದ್ರಾಃ = ಹರ್ಷದಾಯಕರಾದ(ನೀವು) ಧನಸ್ಯ = ಸಾನ್ನಾಯ್ಯರೂಪವಾದ ಧನದ; ಸಾತಯೇ= ಲಾಭಕ್ಕಾಗಿ; ✣ ಸಂಪೃಚ್ಯಧ್ವಮ್ = (ಹಾಲಿನೊಡನೆ) ಸೇರಿರಿ. (ಎಲ್ಯೆ ಕ್ಷೀರವೇ!) ✣ ಸೋಮೇನ = ದಧಿರೂಪನಾದ ಸೋಮನಿಂದ; ತ್ವಾ = ನಿನ್ನನ್ನು; ಆತನಚ್ಮಿ = ಹೆಪ್ಪು ಹಾಕುತ್ತೇನೆ. (ಅನಂತರ ಉತ್ಪನ್ನವಾಗುವ) ದಧಿ = ಮೊಸರು; ಇಂದ್ರಾಯ = ಇಂದ್ರನಿಗೆ (ಹೋಮ ಮಾಡಲ್ಪಡುತ್ತದೆ)

---

ವಸ್ತುವನ್ನು ತೊಳೆದು ಶುದ್ಧಿಗೊಳಿಸುವ ಸಾಮರ್ಥ್ಯವುಳ್ಳ ನೀರೇ! ನೀನು ಅತ್ಯಂತ ಮಧುರವಾಗಿರುವೆ. ಅಲೆಗಳನ್ನು ಹೊಂದಿರುವೆ. ಸಂತೋಷವನ್ನು ಕೊಡತಕ್ಕವನೂ

## ದಧಿ ವಿಷ್ಣೋ ಹವ್ಯಗ್ಂ ರಕ್ಷಸ್ವ ॥ ೩ ॥ 4 ॥

[ಸೋಮೇನಾಷ್ಟ್ವಾಚ ।]

---

ದಧಿ । ವಿಷ್ಣೋ ಇತಿ । ಹವ್ಯಮ್ । ರಕ್ಷಸ್ವ ॥ ೩ ॥

---

| ಮಂತ್ರ | ವಿನಿಯೋಗ |
| --- | --- |
| ವಿಷ್ಣೋ ಹವ್ಯಗ್ಂ ರಕ್ಷಸ್ವ ॥ | ಸುರಕ್ಷಿತವಾದ ಮೇಲಿನ ಸ್ಥಳದಲ್ಲಿ ಹೆಪ್ಪು ಹಾಕಿದ ಹಾಲಿನ ಪಾತ್ರೆಯನ್ನಿಡಲು |



---

✢ ವಿಷ್ಣೋ = (ಸರ್ವವ್ಯಾಪಕನಾದ) ವಿಷ್ಣುವೇ! ಹವ್ಯಮ್ = (ದೇವತೆಗಳ) ಹೋಮಾರ್ಥವಾಗಿರುವ (ಈ ಹೆಪ್ಪು ಹಾಕಿದ ಹಾಲನ್ನು) ರಕ್ಷಸ್ವ = ಕಾಪಾಡು.

---

ಆಗಿರುವೆ. ನೀನು ಸಾನ್ನಾಯ್ಯ [ಹಾಲು, ಮೊಸರು] ರೂಪ ಧನದ ಲಾಭಕ್ಕಾಗಿ ಹಾಲಿನೊಡನೆ ಸೇರು.

ಎಲೈ ಕ್ಷೀರವೇ! ಈ ಮೊಸರು ಇಂದ್ರನಿಗೆ ಪ್ರಿಯವಾಗಿದ್ದು ಸೋಮರೂಪವಾಗಿದೆ. ಇದನ್ನು ಹೆಪ್ಪು ಹಾಕಲು ನಿನ್ನಲ್ಲಿ ಸೇರಿಸುತ್ತಿದ್ದೇನೆ. ಮೂರದೆ ಉತ್ಪನ್ನವಾಗುವ ಮೊಸರು ದರ್ಶಯಾಗದಲ್ಲಿ ದೇವತೆಯಾದ ಇಂದ್ರನಿಗೆ ಹೋಮ ಮಾಡಲ್ಪಡುತ್ತದೆ.

ಎಲೈ! ಸರ್ವವ್ಯಾಪಕನೂ ಸರ್ವರಕ್ಷಕನೂ ಆಗಿರುವ ವಿಷ್ಣುವೇ! ದೇವತೆಗಳಿಗೋಸ್ಕರ ಸಿದ್ಧಪಡಿಸುತ್ತಿರುವ ಈ ಹವ್ಯವನ್ನು ರಕ್ಷಿಸು.

### ವಿನಿಯೋಗ ಸಂಗ್ರಹ

ಶುಂಧ[1] ಸಾಂನಾಯ್ಯಪಾತ್ರಾಣಿ ಪ್ರೋಕ್ಷ್ಯ ಮಾತೇತಿ[2] ಕುಂಭಿಕಾಮ್ ।
ಸಂಸ್ಥಾಪ್ಯಾಗ್ನೌ ವಸೂ[3] ಶಾಖಾಪವಿತ್ರಂ ತತ್ರ ನಿಕ್ಷಿಪೇತ್ ॥
ಹುತೋ[4] ಬಿಂದೂನ್ ಸೇತಿ[5,6,7] ಗಾಶ್ಚ
ದುಗ್ಧಾಸ್ತಿಸ್ರೋಽಭಿಮಂತ್ರಯೇತ್ ।

ಸಂಪೃ[8] ಸಂಕ್ಷಾಲನಂ ಕ್ಷಿಪ್ತ್ವಾ ಸೋಮೇ[9] ದಧ್ನಾತನಕ್ತಿ ಹಿ ।
ವಿಷ್ಣೋಽ[10]ನಧೋ ದಧಾತ್ಮಸ್ಮಿಂತಸ್ಪತೀಯೇ ದಶ ವರ್ಣಿತಾಃ ॥

ಅನುವಾಕದಲ್ಲಿರುವ ಮಂತ್ರ ಸಂಖ್ಯೆ— ಆಪಸ್ತಂಬ ಮತ-10
ಬೌಧಾಯನ ಮತ-11

### ಅನುವಾಕದ ವಿಶೇಷ ವಿಷಯಗಳು
### ಅ) ಭ.ಭಾ. ಭಾಷ್ಯ

೧) ಶುಂಧಧ್ವಂ.... ದೇವಯಜ್ಞಾಯೈ ।

ಈ ಮಂತ್ರದಲ್ಲಿ ಯಜ್ಯಾ ಎಂಬ ಶಬ್ದವಿದೆ. 'ಯಜ' ಎಂಬ ಧಾತುವಿನಿಂದ ಅದು ಉಂಟಾದುದು.'ಯಜ' ಧಾತುವಿಗೆ ದೇವಪೂಜೆ ಎಂಬ ಅರ್ಥವು ದೊರೆಯುವುದರಿಂದ ಪುನಃ 'ದೇವಯಜ್ಯಾ' ಎಂದು ಶ್ರುತಿಯು ತಿಳಿಸುತ್ತಲಿದೆ. ಇದು ದೇವತೆಗಳ ಸಂಬಂಧದ ಪ್ರಾಧಾನ್ಯವನ್ನು ತಿಳಿಸುವುದಕ್ಕಾಗಿ ಅಥವಾ ಎಲ್ಲ ದೇವತೆಗಳು ಎಂಬ ಅರ್ಥವನ್ನು ತೋರಿಸುವುದಕ್ಕಾಗಿ. ಶ್ರುತಿಯಲ್ಲಿ ಬೇರೆಡೆ ಹೀಗೆ ತಿಳಿಸುವುದುಂಟು. 'ನಿಧೀನಾಂ ತ್ವಾ ನಿಧಿಪತಿಗ್ಂ ಹವಾಮಹೇ' [ತೈ. ಸಂ. 7.4.12] ಎಂಬಲ್ಲಿ ನಿಧೀನಾಂ ಎಂಬ ಶಬ್ದವೂ ಹೀಗೆಯೇ ಎಂದು ಮಿಶ್ರರು ತಿಳಿಸಿರುತ್ತಾರೆ.

೨) ಮಾತರಿಶ್ವನೋ ಘರ್ಮೋಽಸಿ ।

ಬೌಧಾಯನಮತದಂತೆ ಇದು ಪ್ರತ್ಯೇಕ ಮಂತ್ರ. ಈ ಮಂತ್ರಕ್ಕೆ 'ಎಲೈ ಅಂಗಾರವೇ! ವಾಯುವಿಗೆ ಸಂಬಂಧಿಸಿದ ಮಿಂಚೆಂಬ (ಸಿಡಿಲೆಂಬ) ಅಗ್ನಿಯೇ ನೀನು ಎಂಬುದಾಗಿ ಅಗ್ನಿಯ ಸ್ತುತಿ. ಈ ಅರ್ಥವನ್ನೂ ತಿಳಿಸಿರುತ್ತಾರೆ. ಬೌಧಾಯನಮತದಂತೆ ಎರಡನೆಯ ಮಂತ್ರವಾದ 'ದ್ಯೌರಸಿ.... ಮಾ ಹ್ವಾಃ' ಎಂಬಲ್ಲಿ ಮಾ ಹ್ವಾಃ = ಕುಟಿಲಳಾಗಬೇಡ ಎಂಬ ಅರ್ಥವನ್ನು ಹೇಳಿರುತ್ತಾರೆ.

೩) ವಸೂನಾಂ.... ಸಹಸ್ರಧಾರಮ್ ।

ವಸೂನಾಂ = ಹಾಲೇ ಮೊದಲಾದ ವಸು(ಧನ)ಗಳಿಗೆ; ಶತಧಾರಂ = ನೂರು

ಪ್ರಕಾರವಾಗಿ; ಸಹಸ್ರಧಾರಮ್ = ಸಾವಿರ ಪ್ರಕಾರವಾಗಿ; ಸಹಸ್ರಧಾರಮ್ = ಸಾವಿರ ಪ್ರಕಾರವಾಗಿ; ಪವಿತ್ರಂ = ಶೋಧಕನು (ಆಗಿರುವೆ).

'ಸಹಸ್ರಧಾರಮ್' ಎಂಬ ಪದವನ್ನು ಸಾಯಣರು 'ವಸೂನಾಮ್' ಎಂಬುದಕ್ಕೆ ವಿಶೇಷಣವನ್ನಾಗಿ ಅನ್ವಯ ಮಾಡಿರುತ್ತಾರೆ. ಮಿಶ್ರರು 'ಪವಿತ್ರಮ್' ಎಂಬುದಕ್ಕೆ ವಿಶೇಷಣವನ್ನಾಗಿ ಮಾಡಿ ಅನ್ವಯ ಮಾಡಿರುತ್ತಾರೆ.

೫) ಸಾ ವಿಶ್ವಾಯುಃ ।

ವಿಶ್ವಾಯುಃ = ವಿಶ್ವಸ್ಯ ಆಯುಃ ಯಸ್ಯಾಂ ಸಾ ಎಂದು ವಿಗ್ರಹವಾಕ್ಯವನ್ನು ಹೇಳಿ ಯಾವ ಭೂಮಿಯಲ್ಲಿ ಎಲ್ಲರ ಜೀವನವೂ ಇದೆಯೋ ಆ ಭೂಮಿ ಎಂದು ಅರ್ಥವನ್ನು ನಿರೂಪಿಸಿರುತ್ತಾರೆ.

ಸಾಯಣರು ವಿಶ್ವಂ = ಕೃತ್ಸ್ನಂ ಆಯುಃ ಯಸ್ಯಾಃ ಸಾ ವಿಶ್ವಾಯುಃ = ಪೂರ್ಣಾಯುವುಳ್ಳ ಭೂಮಿ ಎಂದಿರುತ್ತಾರೆ.



೬) ಸಾ ವಿಶ್ವವ್ಯಚಾಃ । ವಿಶ್ವಂ ವ್ಯಚತಿ = ಪ್ರಾಪ್ನೋತಿ ಇತಿ ವಿಶ್ವವ್ಯಚಾಃ ।

೭) ಸಾ ವಿಶ್ವಕರ್ಮಾ । ವಿಶ್ವಾನಿ ಕರ್ಮಾಣಿ = ಕರ್ಮಫಲಾನಿ ಯಸ್ಯಾಂ ಸಾ = ವಿಶ್ವಕರ್ಮಾ ಎಂದು ವಿಗ್ರಹವಾಕ್ಯಗಳನ್ನು ಮಿಶ್ರರು ತೋರಿಸಿರುತ್ತಾರೆ.

ಸಾಯಣರು ವಿಶ್ವಸ್ಯ ವ್ಯಚಃ = ವ್ಯಾಪ್ತಿಃ ಯಸ್ಯಾಃ ಸಾ ಎಂಬುದಾಗಿಯೂ, ವಿಶ್ವಾನಿ ಕರ್ಮಾಣಿ ಯಸ್ಯಾಃ ಸಾ ಎಂಬುದಾಗಿಯೂ ವಿಗ್ರಹವಾಕ್ಯಗಳನ್ನು ತೋರಿಸಿರುತ್ತಾರೆ.

೮) ಸೋಮೇನ... ದಧಿ ।

ಸೋಮದೊಡನೆ ಹೋಲಿಕೆಯಿರುವುದರಿಂದ ಸಾನ್ನಾಯ್ಯವೇ ಸೋಮ ಎಂದು ಮಿಶ್ರರ ಮತ. ದಧಿರೂಪನಾದ ಸೋಮನಿಂದ ಎಂದು ಸಾಯಣರು ತಿಳಿಸಿರುತ್ತಾರೆ.

ಛಂದಸ್ಸು

| | ಮಂತ್ರ | ಅಕ್ಷರ ಸಂಖ್ಯೆ | ಛಂದಸ್ಸಿನ ಹಸರು |
|---|---|---|---|
| 1. | ಸಂಪೃಚ್ಯಧ್ವಂ...ಸಾತಯೇ । | ೨೪ | ಗಾಯತ್ರೀ |

## ಅ) ಮೀಮಾಂಸಾ

೧) "ಶುಂಧಧ್ವಂ ದೈವ್ಯಾಯ ಕರ್ಮಣೇ" ಈ ಮಂತ್ರದ ವಿನಿಯೋಗದ ವಿಷಯದಲ್ಲಿ ವಿಚಾರ ಮಾಡಲಾಗಿದೆ. ಯಾಜ್ಞಿಕರು ಪೌರೋಡಾಶಿಕ ಎಂಬುದಾಗಿ ಹೇಳುವ (ಸಮಾಖ್ಯೆ) ಮಂತ್ರಗಳ ಸಮೂಹದಲ್ಲಿ ಈ ಮಂತ್ರವು ಪಠಿತವಾಗಿರುವುದರಿಂದ ಪುರೋಡಾಶಕ್ಕೆ ಸಂಬಂಧಿಸಿದ ಉಲೂಖಲ(ಒರಳು) ಮುಂತಾದ ಪಾತ್ರೆಗಳ ಪ್ರೋಕ್ಷಣದಲ್ಲಿ ಈ ಮಂತ್ರಕ್ಕೆ ವಿನಿಯೋಗವೇ ಅಥವಾ ಸಾಂನಾಯ್ಯಪಾತ್ರೆ ಪ್ರೋಕ್ಷಣದಲ್ಲಿ ವಿನಿಯೋಗವೇ? ಎಂಬ ಸಂಶಯವು ಉಂಟಾಗುತ್ತದೆ.

ಇಲ್ಲಿಯ ಪೂರ್ವಪಕ್ಷವು ಹೀಗಿದೆ. ಸಮಾಖ್ಯೆಯಿಂದ ಈ ಮಂತ್ರಕ್ಕೆ ಪುರೋಡಾಶಕ್ಕೆ ಸಂಬಂಧಿಸಿದ ಉಲೂಖಲ ಮುಂತಾದ ಪಾತ್ರೆಗಳ ಪ್ರೋಕ್ಷಣದಲ್ಲಿಯೇ ವಿನಿಯೋಗವನ್ನು ಹೇಳಬೇಕು.

ಇಲ್ಲಿಯ ಸಿದ್ಧಾಂತವು ಹೀಗಿದೆ. ಶ್ರುತಿ, ಲಿಂಗ, ವಾಕ್ಯ, ಪ್ರಕರಣ, ಸ್ಥಾನ ಮತ್ತು ಸಮಾಖ್ಯಾ ಇವುಗಳಲ್ಲಿ ಮೊದಲಿನವುಗಳು ಮುಂದಿನವುಗಳಿಗಿಂತ ಪ್ರಬಲವೆನಿಸುತ್ತವೆ. ಸಮಾಖ್ಯೆಗಿಂತಲೂ ಸ್ಥಾನವೂ, ಸ್ಥಾನಕ್ಕಿಂತಲೂ ಪ್ರಕರಣವೂ ಪ್ರಬಲವೆನಿಸುತ್ತವೆ. ಸಮಾಖ್ಯಾ (ಹೆಸರು, ಅಭಿಧಾನ) ಪ್ರಮಾಣದಿಂದ ಸ್ಥಾನವನ್ನು ಕಲ್ಪಿಸಿ ವಿನಿಯೋಗವನ್ನು ಹೇಳುವುದು ವಿಪ್ರಕೃಷ್ಟವಾಗುತ್ತದೆ. ಅಂದರೆ ಯಾವುದಾದರೂ ಒಂದು ಮಂತ್ರಕ್ಕೆ ವಿನಿಯೋಗವನ್ನು ಹೇಳುವಾಗ ಅದಕ್ಕಿರುವ ಸಮಾಖ್ಯೆಯಿಂದಲೂ, ಅದು ಪಠಿತವಾಗಿರುವ ಸ್ಥಾನದಿಂದಲೂ ಎರಡು ಬೇರೆ ಬೇರೆ ವಿನಿಯೋಗಗಳು ಒದಗುವುದಾದರೆ ಸ್ಥಾನದಿಂದ ಒದಗುವ ವಿನಿಯೋಗವೇ ಪ್ರಬಲವೆನಿಸುತ್ತದೆ. ಪ್ರಕೃತದಲ್ಲಿ 'ಶುಂಧಧ್ವಂ' ಮಂತ್ರವು 'ಪೌರೋಡಾಶಿಕ' ಎಂಬ ಸಮಾಖ್ಯೆಯನ್ನು ಹೊಂದಿದ್ದರೂ ಬರ್ಹಿರಾಹರಣದಲ್ಲಿ ವಿನಿಯೋಗವಾಗುವ ಮತ್ತು ಹವಿರ್ನಿರ್ವಾಪದಲ್ಲಿ ವಿನಿಯೋಗವಾಗುವ ಮಂತ್ರಗಳ ನಡುವೆ ಪಠಿತವಾಗಿರುವುದರಿಂದ, ಬರ್ಹಿರಾಹರಣ ಮತ್ತು ಹವಿರ್ನಿರ್ವಾಪ ಇವೆರಡರ ಮಧ್ಯವೇ ಸಾಂನಾಯ್ಯ ಪಾತ್ರದ ಸ್ಥಾನವಾದುದರಿಂದ ಸಮಾಖ್ಯೆಯನ್ನು ಬಾಧಿಸಿ ಸ್ಥಾನಪ್ರಮಾಣದಿಂದ ಸಾಂನಾಯ್ಯಪಾತ್ರಪ್ರೋಕ್ಷಣದಲ್ಲಿ ವಿನಿಯೋಗವಾಗುತ್ತದೆ.

೨) ಸಮಾಖ್ಯೆಗಿಂತಲೂ ಸ್ಥಾನವು ಪ್ರಬಲವೆನ್ನಿಸುವಂತೆ ಸ್ಥಾನಕ್ಕಿಂತಲೂ ಪ್ರಕರಣವು ಪ್ರಬಲವೆನಿಸುತ್ತದೆ. ಈ ವಿಷಯವನ್ನು ಹೀಗೆ ತಿಳಿಸಲಾಗಿದೆ.

ದರ್ಶ-ಪೂರ್ಣಮಾಸಪ್ರಕರಣದಲ್ಲಿ ಶಾಖೆಯ ಛೇದನದ ಮಂತ್ರಗಳೂ,

ವತ್ಸಾಪಾಕರಣದ ಮಂತ್ರಗಳೂ ಪಠಿತವಾಗಿವೆ. ಇವೆಲ್ಲವೂ ಸಾಂನಾಯ್ಯವನ್ನು ಸಿದ್ಧಪಡಿಸಲು ಮಾಡಬೇಕಾದ ದೋಹ (ಹಾಲನ್ನು ಕರೆಯುವುದು)ಕ್ಕೆ ಸಂಬಂಧಿಸಿರುವುದರಿಂದ ದೋಹಧರ್ಮಗಳು. ಅಮಾವಾಸ್ಯೆಯ ರಾತ್ರಿಯಲ್ಲಿ ಮತ್ತು ಪಾಡ್ಯದ ಬೆಳಗಿನಲ್ಲಿ ಮಾಡುವ ಎರಡು ದೋಹಗಳಿವೆ. ಹೀಗಿರುವಾಗ ಸ್ಥಾನಪ್ರಮಾಣದಿಂದ — ಮೊದಲು ಹೇಳಲ್ಪಟ್ಟ ಈ ಮಂತ್ರಗಳಿಗೆ ಮೊದಲು ಮಾಡುವ ಸಾಯಂದೋಹದಲ್ಲಿ ಮಾತ್ರ— ವಿನಿಯೋಗವನ್ನು ಹೇಳಬೇಕು. ಇದು ಪೂರ್ವಪಕ್ಷ. ಅಲ್ಲದೆ ಸೋಮಪ್ರಕರಣದಲ್ಲಿ ಪ್ರಕರಣಕ್ಕೆ ಬಾಧವನ್ನು ಅಂಗೀಕರಿಸಲಾಗಿದೆ. ಅಂತೆಯೇ ಇಲ್ಲಿಯೂ ಆಗಬೇಕಲ್ಲವೇ?

ಇಲ್ಲಿಯ ಸಿದ್ಧಾಂತವು ಹೀಗಿದೆ. ಸೋಮಪ್ರಕರಣದಲ್ಲಿ ಬರುವ ವಿಶಸನಾದಿ ಧರ್ಮಗಳು ಸೋಮಕ್ಕೆ ಅನ್ವಯಿಸಲಾರವು. ಆದುದರಿಂದ ಸೋಮಯಾಗದಲ್ಲಿ ಬರುವ ಅಗ್ನೀಷೋಮೀಯಪಶುಯಾಗದಲ್ಲಿ ಅವುಗಳು ಅನ್ವಿತವಾಗಿವೆ. ಅಲ್ಲಿ ಪ್ರಕರಣಕ್ಕೆ ಬಾಧವಿದೆ. 'ಉಭಯಾಕಾಂಕ್ಷಾ ಪ್ರಕರಣಮ್'. ಇಲ್ಲಿ ಪ್ರಕರಣಕ್ಕೆ ಬಾಧವಿಲ್ಲದಿರುವುದರಿಂದ ಸ್ಥಾನಪ್ರಮಾಣದಿಂದ ಸಾಯಂದೋಹದಲ್ಲಿ ಮಾತ್ರ ವಿನಿಯೋಗವು ಪ್ರಾಪ್ತವಾದರೂ, ಪ್ರಕರಣವು ಸ್ಥಾನವನ್ನು ಬಾಧಿಸುವುದರಿಂದ ಸಾಯಂದೋಹ ಮತ್ತು ಪ್ರಾತರ್ದೋಹ ಎರಡರಲ್ಲಿಯೂ ಈ ಶಾಖಾಚ್ಛೇದನ ಮತ್ತು ವತ್ಸಾಪಾಕರಣದ ಮಂತ್ರಗಳ ವಿನಿಯೋಗವಾಗುತ್ತದೆ.

೩) 'ಹುತಃ ಸ್ತೋಕಃ..... ದ್ಯಾವಾಪೃಥಿವೀಭ್ಯಾಮ್' ಎಂಬಲ್ಲಿ 'ಸ್ವಾಹಾ' ಎಂಬ ಪದವು ದ್ಯಾವಾಪೃಥಿವೀಭ್ಯಾಮ್ ಎಂಬುದಕ್ಕಿಂತಲೂ ಮೊದಲು ಬಂದಿದೆ. ಹೀಗಿರುವಾಗ ಸ್ವಾಹಾಕಾರಕ್ಕೆ ಸಂಬಂಧಿಸಿದ ಮೀಮಾಂಸೆಯನ್ನು ತಿಳಿಸಿರುತ್ತಾರೆ.

ಸ್ವಾಹಾಕಾರದಿಂದಲೂ ವಷಟ್‌ಕಾರದಿಂದಲೂ ದೇವತೆಗಳಿಗೆ ದ್ರವ್ಯವು ಕೊಡಲ್ಪಡುತ್ತದೆ ಎಂಬುದಾಗಿ'ವಷಟ್ಕಾರೇಣ ಸ್ವಾಹಾಕಾರೇಣ ವಾ ದೇವೇಭ್ಯೋಽನ್ನಂ ಪ್ರದೀಯತೇ' ಎಂಬ ವಾಕ್ಯವು ತಿಳಿಸುತ್ತದೆ. ಈ ವಾಕ್ಯವು ಯಾವುದೇ ಒಂದು ಪ್ರಕರಣಕ್ಕೆ ಸಂಬಂಧಿಸಿದಂತೆ ಪಠಿತವಾಗಿಲ್ಲ. ಈ ರೀತಿಯ ವಚನಗಳನ್ನು 'ಅನಾರಭ್ಯಪಠಿತ'ಗಳೆನ್ನುತ್ತಾರೆ. ಹೀಗೆ ದೇವತೆಗಳಿಗೆ ಸ್ವಾಹಾಕಾರದಿಂದಲೂ ವಷಟ್ಕಾರದಿಂದಲೂ ಹವಿಸ್ಸು ಅರ್ಪಿಸಲ್ಪಡುತ್ತದೆ ಎಂಬುದು ಸಿದ್ಧವಾಗಿರುವಾಗ ರಾಜಸೂಯಕ್ಕೆ ಸಂಬಂಧಿಸಿದ ದರ್ವಿಹೋಮದಲ್ಲಿ 'ಪೃಥಿವ್ಯೈ ಸ್ವಾಹಾಂತರಿಕ್ಷಾಯ ಸ್ವಾಹಾ' ಎಂಬ ಮಂತ್ರಗಳಿವೆ. ಅನಾರಭ್ಯಪಠಿತವಾದ ವಚನದಿಂದಲೇ ಸ್ವಾಹಾಕಾರವು ವಿಹಿತವಾಗಿರುವಾಗ ಪುನಃ ದರ್ವಿಹೋಮದಲ್ಲಿ ಹೇಳಿರುವ ಸ್ವಾಹಾಕಾರವು ಉಪಸಂಹಾರವಾಗುತ್ತದೆ. ಅಂದರೆ ಬೇರೆ ಹೋಮಗಳಲ್ಲಿ ಸ್ವಾಹಾಕಾರವನ್ನು ಹೇಳಬಾರದು ಎಂಬ ಅರ್ಥವು ದೊರೆಯುತ್ತದೆ. ಇದು ಪೂರ್ವಪಕ್ಷ.

ಇಲ್ಲಿಯ ಸಿದ್ಧಾಂತವು ಹೀಗಿದೆ:— 'ಪೃಥಿವ್ಯೈ ಸ್ವಾಹಾಂತರಿಕ್ಷಾಯ ಸ್ವಾಹಾ' ಎಂಬ ಮಂತ್ರಗಳಲ್ಲಿರುವ ಸ್ವಾಹಾಕಾರಗಳು ಸ್ವಾಹಾಕಾರವನ್ನು ಉಚ್ಚರಿಸಬೇಕೆಂಬ ವಿಧಾಯಕ ಗಳಲ್ಲ. ಆದುದರಿಂದ ಅನಾರಭ್ಯ ಪಠಿತವಾದ ವಾಕ್ಯವೂ ಈ ವಾಕ್ಯಗಳೂ ಉಪ ಸಂಹಾರ್ಯ-ಉಪಸಂಹಾರಕಗಳಲ್ಲ. ಆದುದರಿಂದ ಪುನಃ ಸ್ವಾಹಾಕಾರವು ವಿಹಿತವಾಗಿಲ್ಲ ವಾದುದರಿಂದ ಇತರ ಹೋಮಗಳಲ್ಲಿ ಸ್ವಾಹಾಕಾರವನ್ನು ಹೇಳಬಾರದೆಂಬ ಅರ್ಥವು ದೊರೆಯುವುದಿಲ್ಲ.

ರಾಜಸೂಯಪ್ರಕರಣದಲ್ಲಿ ಈ ಮಂತ್ರವು ಪಠಿತವಾದುದರಿಂದ, ಹೋಮ ದಲ್ಲಿಯೇ ಈ ಮಂತ್ರದ ವಿನಿಯೋಗವಿರುವುದರಿಂದ ಸ್ವಾಹಾ ಅಥವಾ ವಷಟ್ಕಾರವಿಲ್ಲದೆ ಹೋಮವಿಲ್ಲವಾದುದರಿಂದ ಸ್ವಾಹಾಕಾರವನ್ನು ಉಚ್ಚರಿಸಿ ಹೋಮ ಮಾಡಬೇಕೆಂಬ ವಿಧಿ ಯನ್ನು ಕಲ್ಪಿಸಬಹುದು. ಹೀಗಿದ್ದರೂ ಪುನಃ ಸ್ವಾಹಾಕಾರವನ್ನು ಶ್ರುತಿಯು ತಿಳಿಸುತ್ತಿದೆ. ಆದರಿಂದ ಈ ಉಪಹೋಮದಲ್ಲಿ ಸ್ವಾಹಾಕಾರದಿಂದಲೇ ದ್ರವ್ಯವು ನೀಡಲ್ಪಡುತ್ತದೆ ಎಂಬ ನಿಯಮವು ಉಂಟಾಗಿ, ವಷಟ್ಕಾರವನ್ನು ಹೇಳಕೂಡದೆಂಬ 'ವಷಟ್' ಶಬ್ದದ ನಿವೃತ್ತಿ ಯು ಉಂಟಾಗುತ್ತದೆ. ಅಲ್ಲದೆ ಶ್ರುತಿಯು 'ಪುರಸ್ತಾತ್‌ಸ್ವಾಹಾಕಾರಾ ವಾ ಅನ್ಯೇ ದೇವಾಃ। ಉಪರಿಷ್ಟಾತ್ ಸ್ವಾಹಾಕಾರಾ ಅನ್ಯೇ।[ತೈ. ಬ್ರಾ. 3-9-10] ಕೆಲವು ದೇವತೆಗಳಿಗೆ ಹವಿಸ್ಸನ್ನು ಅರ್ಪಿಸುವಾಗ ಪ್ರಾರಂಭದಲ್ಲಿಯೇ ಸ್ವಾಹಾಕಾರವಿರುವುದೆಂದೂ, ಇನ್ನು ಕೆಲವು ದೇವತೆಗಳಿಗೆ ಅಂತ್ಯದಲ್ಲಿ ಸ್ವಾಹಾಕಾರವಿರುವುದೆಂದೂ, ಇನ್ನು ಕೆಲವು ದೇವತೆಗಳಿಗೆ ಅಂತ್ಯದಲ್ಲಿ ಸ್ವಾಹಾಕಾರವಿರುವುದೆಂದೂ ತಿಳಿಸುತ್ತದೆ. ಹೀಗಿರುವಾಗ 'ಸ್ವಾಹಾ ಪೃಥಿವ್ಯೈ' 'ಪೃಥಿವ್ಯೈ ಸ್ವಾಹಾ' ಎರಡೂ ರೀತಿಯ ವಚನಗಳು ಪ್ರಾಪ್ತವಾಗುತ್ತವೆ. ಶ್ರುತಿಯಲ್ಲಿಯೇ 'ಪೃಥಿವ್ಯೈ ಸ್ವಾಹಾ' ಎಂದು ಪಾಠ ಮಾಡಿರುವುದರಿಂದ—ಸ್ವಾಹಾಕಾರವನ್ನು ಉಚ್ಚರಿಸಿ ಹೋಮ ಮಾಡಬೇಕೆಂಬುದು ಪ್ರಕರಣದಿಂದ ತಿಳಿದರೂ— ಇಲ್ಲಿ ಸ್ವಾಹಾಕಾರವನ್ನು ಅಂತ್ಯದಲ್ಲಿಯೇ ಹೇಳಬೇಕೆಂಬ ನಿಯಮವು ಸಿದ್ಧವಾಗುತ್ತದೆ.

ಈ ವಿಷಯದ ನಿರ್ಣಯದಿಂದ ಉಳಿದ ಹೋಮಗಳಲ್ಲಿ ಸ್ವಾಹಾಕಾರ ಅಥವಾ ವಷಟ್ಕಾರಗಳಿಂದ ಹೋಮವನ್ನು ಮಾಡಬಹುದೆಂಬ ವಿಕಲ್ಪವು ಉಳಿಯುತ್ತದೆ. 'ಹುತಃ ಸ್ತೋಕಃ' 'ಸ್ವಾಹಾ ದ್ಯಾವಾಪೃಥಿವೀಭ್ಯಾಮ್'। ಈ ಮಂತ್ರಾಂಶಗಳಿಂದ ಒಂದೆಡೆ "ಹುತಃ" ಎಂದಿರುವುದರಿಂದ, ಒಂದೆಡೆ"ಸ್ವಾಹಾ" ಎಂದಿರುವುದರಿಂದ ದೇವಹವಿಃಪ್ರದಾನದಲ್ಲಿ ಸ್ವಾಹಾಕಾರವು ವಿಕಲ್ಪವಾಗಿದೆ ಎಂಬುದು ಸೂಚಿತವಾಗುತ್ತದೆ.

೪) ಸಾಂನಾಯ್ಯಕ್ಕಾಗಿ ಗೋದೋಹವನ್ನು ಮಾಡಬೇಕು. ಈ ಗೋದೋಹ ಪ್ರಸಂಗದಲ್ಲಿ ಬಂದ "ಅಗ್ನಿಹೋತ್ರಮೇವ ನ ದುಹ್ಯಾಚ್ಛೂದ್ರಃ । ತದ್ಧಿ ನೋತ್ಪುನಂತಿ ।" ಎಂಬ ಬ್ರಾಹ್ಮಣವು ಇರುವುದರಿಂದ ಎರಡನೆಯ ವಾಕ್ಯದಲ್ಲಿರುವ "ಹಿ" ಎಂಬುದಕ್ಕೆ ಸಂಬಂಧಿಸಿದ ನಿರ್ಣಯಕ್ಕಾಗಿ ಮೀಮಾಂಸೆಯನ್ನು ತಿಳಿಸಿರುತ್ತಾರೆ.

ಶ್ರುತಿಯಲ್ಲಿ 'ಶೂರ್ಪೇಣ ಜುಹೋತಿ। ತೇನ ಹ್ಯನ್ನಂ ಕ್ರಿಯತೇ' । ಎಂಬ ವಾಕ್ಯಗಳಿವೆ. (ಶ. ಬ್ರಾ. 2-5-23) ಎರಡನೆಯ ವಾಕ್ಯದಲ್ಲಿರುವ "ಹಿ" ಎಂಬುದಕ್ಕೆ ಕಾರಣ ಎಂದರ್ಥ. ಹೋಮಕ್ಕೆ ಸಾಧನವಾದುದು ಶೂರ್ಪ (ಮೊರ). ಅದು ಅನ್ನವನ್ನು ಮಾಡಲೂ ಸಹ ಸಾಧನವಾದುದರಿಂದ ಮೇಲಿನ ವಾಕ್ಯಕ್ಕೆ ಅನ್ನವನ್ನು ಮಾಡಲು ಸಾಧನವಾದ ಕಾರಣ ಶೂರ್ಪದಿಂದ ಹೋಮವನ್ನು ಮಾಡಬೇಕು ಎಂದು ಅರ್ಥವನ್ನು ಹೇಳಬೇಕು. ಈ ರೀತಿ ಅರ್ಥವನ್ನು ಹೇಳಿದರೆ ಅನ್ನವನ್ನು ಮಾಡಲು ಸಾಧನವಾದ ದ್ರವ್ಯಗಳಿಂದ [ಪಾತ್ರೆ, ದರ್ವಿ (ಸೌಟು)] ಸಹ ಹೋಮವನ್ನು ಮಾಡಬೇಕೆಂಬುದಾಗಿ "ಹಿ" ಎಂಬ ಶಬ್ದವಿರುವುದರಿಂದ ಹೇಳಬೇಕಾಗುತ್ತದೆ. ಆಗ ಶೂರ್ಪದಿಂದಾಗಲೀ, ಅನ್ನವನ್ನು ಮಾಡಲು ಸಾಧನವಾದ ಇತರ ಪಾತ್ರೆಗಳಿಂದಾಗಲೀ ಹೋಮವನ್ನು ಮಾಡಬಹುದೆಂಬ ವಿಕಲ್ಪವು ಉಂಟಾಗುತ್ತದೆ. "ಹಿ" ಎಂಬ ಶಬ್ದವಿದ್ದುದರಿಂದ ಹೀಗೆ ಅರ್ಥವನ್ನು ಹೇಳಬೇಕಾಗುತ್ತದೆ ಎಂಬುದು ಪೂರ್ವಪಕ್ಷ.

ಇಲ್ಲಿಯ ಸಿದ್ಧಾಂತವು ಹೀಗಿದೆ:- ಶೂರ್ಪದಂತೆಯೇ ಉಳಿದ ಪಾತ್ರೆಗಳು ಅನ್ನವನ್ನು ಮಾಡಲು ಸಾಧನಗಳೇ ಆದರೂ "ಶೂರ್ಪೇಣ" ಎಂಬುದಾಗಿ ತೃತೀಯಾ ವಿಭಕ್ತಿಯಿಂದ ನಿರ್ದೇಶಿಸಲ್ಪಡುವ ಶೂರ್ಪವು ಸಾಧನವೆಂಬುದು ಶ್ರುತಿಯಲ್ಲಿಯೇ ಶ್ರುತವಾಗಿದೆ. ಆದುದರಿಂದ ಶೂರ್ಪವು ಶ್ರೌತಸಾಧನ. "ಕರ್ತೃಕರಣಯೋಸ್ತೃತೀಯಾ" [ಪಾ. ಸೂ. 2-4-18] ಎಂಬ ಪಾಣಿನಿಯ ಸೂತ್ರದಿಂದ "ಕರಣ" ಎಂಬ ಅರ್ಥದಲ್ಲಿ ತೃತೀಯಾ ವಿಭಕ್ತಿಯನ್ನು ವಿಧಿಸಲಾಗಿದೆ. ಉಳಿದ ಪಾತ್ರೆಗಳು ಅನ್ನವನ್ನು ಮಾಡಲು ಸಾಧನವಾಗಿದೆಯೆಂಬುದನ್ನು ಶ್ರುತಿಯು ನಿರ್ದೇಶಿಸುತ್ತಿಲ್ಲವಾದುದರಿಂದ ಅವುಗಳು ಆನುಮಾನಿಕಕರಣಗಳು. ಪ್ರತ್ಯಕ್ಷವಾಗಿ ಹೇಳಿದ ಸಾಧನತ್ವವನ್ನು ಪಡೆದ ಶೂರ್ಪಕ್ಕೂ ಊಹಿಸಲ್ಪಟ್ಟ ಸಾಧನತ್ವವನ್ನು ಪಡೆದ ಪಾತ್ರೆಗಳಿಗೂ ಸಮಾನಬಲವಿಲ್ಲವಾದುದರಿಂದ ವಿಕಲ್ಪವು ಸರಿಯಲ್ಲ.

ಅಲ್ಲದೆ "ಶೂರ್ಪೇಣ ಜುಹೋತಿ" ಎಂಬ ವಿಧಿಗೆ "ತೇನ ಹ್ಯನ್ನಂ ಕ್ರಿಯತೇ" ಎಂಬ ವಾಕ್ಯವು "ಸ್ತುತ್ಯರ್ಥವಾದ"ವೆನ್ನಬೇಕು. ಅಂದರೆ ಅನ್ನಸಾಧನವಾದುದರಿಂದ ಶೂರ್ಪವು ಪ್ರಶಸ್ತ ಎಂದರ್ಥ. ಆದುದರಿಂದ "ತೇನ ಹ್ಯನ್ನಂ ಕ್ರಿಯತೇ" ಎಂಬುದು ಸ್ತುತ್ಯರ್ಥವಾದ.

ಇದರಂತೆಯೇ "ಅಗ್ನಿಹೋತ್ರಮೇವ ನ ದುಹ್ಯಾಚ್ಛೂದ್ರಃ" ಎಂಬುದಕ್ಕೆ "ತದ್ಧಿ ನೋತ್ಪುನಂತಿ" ಎಂಬುದು ಸ್ತಾವಕವೇ ಹೊರತು ವಿಧಾಯಕವಲ್ಲ. "ಹಿಂ" ಎಂಬುದಕ್ಕೆ ಕಾರಣ ಎಂಬ ಅರ್ಥವು ಇಲ್ಲಿಲ್ಲ. "ಉತ್ಪವನವಿಲ್ಲದುದರಿಂದ ಅಗ್ನಿಹೋತ್ರದೋಹವನ್ನು ಶೂದ್ರನು ಮಾಡಬಾರದು" ಎಂದರ್ಥ. ಉತ್ಪವನವಿಲ್ಲದ ಅಂತಹ ಉಳಿದ ಯಾಗದ್ರವ್ಯಗಳನ್ನು ಯಾಗದಲ್ಲಿ ಬಳಸಬಾರದು ಎಂದರ್ಥವಲ್ಲ.

ಇದುವರೆಗಿನ ಮೂರು ಅನುವಾಕಗಳಲ್ಲಿ ಇಷ್ಟಿಯ ಹಿಂದಿನ ದಿನದ ಕರ್ತವ್ಯಗಳನ್ನು ಹೇಳಿರುತ್ತಾರೆ. ಇಷ್ಟಿಯ ದಿನದ ಕಾರ್ಯಗಳನ್ನು ಮುಂದಿನ ಹತ್ತು ಅನುವಾಕಗಳಿಂದ ಶ್ರುತಿಯು ತಿಳಿಸುತ್ತದೆ. ನಾಲ್ಕನೆಯ ಅನುವಾಕದಲ್ಲಿ ಹವಿರ್ನಿರ್ವಾಪವು ಹೇಳಲ್ಪಟ್ಟಿದೆ.



# ॥ ಚತುರ್ಥೋಽನುವಾಕಃ ॥

## ಕರ್ಮಣೇ ವಾಂ ದೇವೇಭ್ಯಃ ಶಕೇಯಂ ವೇಷಾಯ ತ್ವಾ

---

ಕರ್ಮಣೇ । ವಾಮ್ । ದೇವೇಭ್ಯಃ । ಶಕೇಯಮ್ । ವೇಷಾಯ । ತ್ವಾ।

---

| ಮಂತ್ರ | ವಿನಿಯೋಗ |
| --- | --- |
| ಕರ್ಮಣೇ...ಶಕೇಯಮ್ । | ಕೈಗಳನ್ನು ತೊಳೆದುಕೊಳ್ಳಲು |
| ವೇಷಾಯ ತ್ವಾ । | ಯಜ್ಞಾಯುಧಗಳನ್ನು ಆಸಾದನೆ ಮಾಡಿದ ನಂತರ ಶೂರ್ಪ(ಮೊರ)ವನ್ನು ತೆಗೆದುಕೊಳ್ಳಲು.* |



---

(ಎಲೈ! ಕೈಗಳೇ) ದೇವೇಭ್ಯಃ + ಕರ್ಮಣೇ = ದೇವಸಂಬಂಧಿಯಾದ ಕರ್ಮಗಳಿಗಾಗಿ; ವಾಂ = (ನೀರಿನಿಂದ ತೊಳೆದಿರುವ) ನಿಮ್ಮನ್ನು (ಉಪಯೋಗಿಸಲು); ಶಕೇಯಮ್ = ಸಮರ್ಥನಾಗುವೆನು. (ಎಲೈ ಶೂರ್ಪವೇ!) + ವೇಷಾಯ = ವ್ಯಾಪಿಯಾದ ಯಜ್ಞಕ್ಕಾಗಿ; ತ್ವಾ = ನಿನ್ನನ್ನು (ಆದದೇ = ತೆಗೆದುಕೊಳ್ಳುತ್ತೇನೆ.)

---

ಎಲೈ ಕೈಗಳೇ! ಮಂತ್ರಪೂರ್ವಕವಾಗಿ ತೊಳೆದಿರುವ ನಿಮ್ಮನ್ನು ದೇವಸಂಬಂಧಿಯಾದ ಈ ಯಾಗಕರ್ಮದಲ್ಲಿ ವಿನಿಯೋಗಿಸಲು ಸಮರ್ಥನಾಗುವೆನು.

ಎಲೈ ಶೂರ್ಪವೇ! ಸರ್ವವ್ಯಾಪಿಯಾದ ಯಜ್ಞವನ್ನು ನೆರವೇರಿಸಲು ನಿನ್ನನ್ನು ತೆಗೆದುಕೊಳ್ಳುತ್ತೇನೆ.

---

* ಶೂರ್ಪವನ್ನು ತೆಗೆದುಕೊಳ್ಳುವ ಮೊದಲು 'ಯಜ್ಞಸ್ಯ ಸಂತತಿರಸಿ' ಎಂದು ಆರಂಭಗೊಳ್ಳುವ ಮಂತ್ರದಿಂದ ದರ್ಭೆಯ ಆಸ್ತರಣವಿಧಿಯಿದೆ. ನಂತರ ಉದಕಪ್ರಣಯನವಿಧಿಯೂ ಇದೆ.

**ಪ್ರತ್ಯುಷ್ಟಗ್ಂ ರಕ್ಷಃ ಪ್ರತ್ಯುಷ್ಟಾ ಅರಾತಯೋ ಧೂರಸಿ ಧೂರ್ವ ಧೂರ್ವಂತಂ ಧೂರ್ವ ತಂ ಯೋಽಸ್ಮಾನ್ಧೂರ್ವತಿ**

---

ಪ್ರತ್ಯುಷ್ಟಮಿತಿ–ಪ್ರತಿ–ಉಷ್ಟಮ್ । ರಕ್ಷಃ । ಪ್ರತ್ಯುಷ್ಟಾ ಇತಿ ಪ್ರತಿ-ಉಷ್ಟಾಃ । ಅರಾತಯಃ। ಧೂಃ। ಅಸಿ। ಧೂರ್ವ । ಧೂರ್ವಂತಮ್। ಧೂರ್ವ। ತಮ್ । ಯಃ। ಅಸ್ಮಾನ್ । ಧೂರ್ವತಿ ।

---

| ಮಂತ್ರ | ವಿನಿಯೋಗ |
|---|---|
| ಪ್ರತ್ಯುಷ್ಟಗ್ಂ.... ಅರಾತಯಃ । | ಅಗ್ನಿಹೋತ್ರಹವಣೀ, ಶೂರ್ಪಗಳನ್ನು ಗಾರ್ಹಪತ್ಯ ಅಥವಾ ಆಹವನೀಯದಲ್ಲಿ ಕಾಯಿಸಲು. |
| ಧೂರಸಿ...ಧೂರ್ವಾಮಃ । | ಗಾರ್ಹಪತ್ಯದ ಹಿಂದುಗಡೆಯಲ್ಲಿರುವ ಧಾನ್ಯ ತುಂಬಿದ ಬಂಡಿಯ ಉತ್ತರ ಭಾಗದ ನೊಗವನ್ನು ಅಭಿಮರ್ಶಿಸಲು. |

---

ರಕ್ಷಃ =[ಯಜ್ಞಕ್ಕೆ ತೊಂದರೆಯನ್ನುಂಟುಮಾಡುವ ಮತ್ತು ಈ ಸಾಧನದಲ್ಲಿರುವ] ರಕ್ಷಸ್ಸು ✢ ಪ್ರತ್ಯುಷ್ಟಂ= ಅತ್ಯಂತವಾಗಿ ಸುಟ್ಟು ಹೋಗಲಿ. (ಹಾಗೆಯೇ) ಅರಾತಯಃ = ಯಜ್ಞಶತ್ರು ಗಳೂ; ಪ್ರತ್ಯುಷ್ಟಾಃ = ಅತ್ಯಂತವಾಗಿ ಸುಟ್ಟುಹೋಗಲಿ. (ಎಲೈ ಧುರ್ಯಾಗ್ನಿಯೇ!) (ನೀನು) ✢ ಧೂಃ = ಹಿಂಸಕನು; ಅಸಿ = ಆಗಿರುವೆ. (ಆದುದರಿಂದ ನೀನು) ಧೂರ್ವಂತಂ = ನಮ್ಮನ್ನು ಹಿಂಸಿಸುವ ಪಾಪವನ್ನು ಧೂರ್ವ = ನಾಶಪಡಿಸು; ಯಃ = ಯಾವ ರಾಕ್ಷಸಾದಿಯು; ಅಸ್ಮಾನ್ = ನಮ್ಮನ್ನು; ಧೂರ್ವತಿ = [ಯಜ್ಞವಿಘ್ನಾದಿಗಳಿಂದ] ತೊಂದರೆಪಡಿಸಲು

---

ರಾಕ್ಷಸರೂ, ಯಜ್ಞಶತ್ರುಗಳೂ ಈ ಪ್ರತಿತಪನದಿಂದ ಸುಟ್ಟುಹೋಗಲಿ.
ಎಲೈ ಧುರ್ಯಾಗ್ನಿಯೇ! (ಎತ್ತಿನ ಕುತ್ತಿಗೆಯ ಮೇಲೆ ಹೇರುವ ನೊಗದ ಭಾಗದಲ್ಲಿ ಈ ಅಗ್ನಿ ಇರುವನೆಂದು 'ಏಷ ವೈ ಧುರ್ಯೋಽಗ್ನಿಃ' ಎಂಬ ಬ್ರಾಹ್ಮಣ ವಾಕ್ಯವು ಹೇಳಿದೆ. ನೀನು ಹಿಂಸಕನು. ನಮ್ಮನ್ನು ಹಿಂಸಿಸುವ ಪಾಪವನ್ನು ನೀನು ನಾಶಪಡಿಸು. ಯಜ್ಞಕ್ಕೆ ವಿಘ್ನವನ್ನುಂಟುಮಾಡಿ ನಮಗೆ ತೊಂದರೆಯನ್ನುಂಟು ಮಾಡುವ ರಾಕ್ಷಸಾದಿಗಳನ್ನೂ ನಾಶ ಮಾಡು. ನಾವು ಕಳೆದುಕೊಳ್ಳಲು ಅಪೇಕ್ಷಿಸುವ ಸೋಮಾರಿತನವೇ ಮುಂತಾದ ಅಂತಃಶತ್ರುಗಳನ್ನೂ ನೀನು ನಾಶಪಡಿಸು.

ತಂ ಧೂರ್ವ ಯಂ ವಯಂ ಧೂರ್ವಾಮಸ್ತ್ವಂ
ದೇವಾನಾಮಸಿ ಸಸ್ನಿತಮಂ ಪಪ್ರಿತಮಂ ಜುಷ್ಟತಮಂ
ವಹ್ನಿತಮಂ

---

ತಮ್ । ಧೂರ್ವ । ಯಮ್ । ವಯಮ್ । ಧೂರ್ವಾಮಃ । ತ್ವಮ್। ದೇವಾನಾಮ್।
ಅಸಿ । ಸಸ್ನಿತಮಮಿತಿ ಸಸ್ನಿ-ತಮಮ್ । ಪಪ್ರಿತಮಮಿತಿ ಪಪ್ರಿ-ತಮಮ್ ।
ಜುಷ್ಟತಮಮಿತಿ ಜುಷ್ಟ-ತಮಮ್ । ವಹ್ನಿತಮಮಿತಿ ವಹ್ನಿ-ತಮಮ್ ।

---

ಮಂತ್ರ ವಿನಿಯೋಗ

ತ್ವಂ ದೇವಾನಾಮಸಿ...ಮಾ ಹ್ವಾಃ । ಹವಿರ್ಧಾನಶಕಟದ ಅಭಿಮಂತ್ರಣ
—ಬೌಧಾಯನ



೧) ತ್ವಂ.....ದೇವಹೂತಮಮ್ । ನೊಗವನ್ನು ಅಭಿಮರ್ಶಿಸಲು
೨) ಅಹ್ರುತಮಸಿ....ಮಾ ಹ್ವಾಃ । ಶಕಟವನ್ನು ಏರಲು
—ಆಪಸ್ತಂಬ

---

ಇಚ್ಛಿಸುತ್ತಾನೆಯೋ; ತಮ್ = ಅವನನ್ನು; ಧೂರ್ವ = ಹಿಂಸಿಸು; ಯಮ್ = ಯಾವ ಆಲಸ್ಯಾದಿರೂಪವಾದ ವೈರಿಯನ್ನು; ವಯಮ್ = ನಾವು; ಧೂರ್ವಾಮಃ = ನಾಶಪಡಿಸಲು ಇಚ್ಛಿಸುತ್ತೇವೆಯೋ; ತಮ್ = ಅವನನ್ನು (ಅದನ್ನು) ಧೂರ್ವ = ಹೋಗಲಾಡಿಸು. [ಎಲೈ! ಹವಿರ್ಧಾನಶಕಟವೇ] ✣ ತ್ವಮ್ = ನೀನು; ದೇವಾನಾಮ್ = ದೇವತೆಗಳಿಗೆ ಸಂಬಂಧಿಸಿದವನಾಗಿ; ಅಸಿ = ಇರುವೆ; (ನೀನು) ಸಸ್ನಿತಮಮ್ = ಅತ್ಯಂತಶುದ್ಧನೂ; ಪಪ್ರಿತಮಮ್ = ಧಾನ್ಯಗಳಿಂದ ಪರಿಪೂರ್ಣನೂ; ಜುಷ್ಟತಮಮ್ = ದೇವತೆಗಳಿಗೆ ಅತ್ಯಂತಪ್ರಿಯನೂ; ವಹ್ನಿತಮಮ್ = ಹವಿರ್ಧಾನ್ಯಗಳನ್ನು ಅತ್ಯಂತ ಧರಿಸಿದವನೂ;

---

ಎಲೈ ಹವಿರ್ಧಾನಶಕಟವೇ! ದೇವತೆಗಳಿಗೆ ಹವಿಸ್ಸನ್ನು ಉಂಟುಮಾಡಿ ಕೊಡಲಿರುವ ಧಾನ್ಯ(ಬತ್ತ ಮೊದಲಾದುದು)ಗಳನ್ನು ಧರಿಸಿರುವ ನೀನು ದೇವಸಂಬಂಧಿಯಾಗಿರುವೆ. ಅತ್ಯಂತ ಶುದ್ಧನೂ, ಧಾನ್ಯಗಳಿಂದ ತುಂಬಿರುವವನೂ, ದೇವತೆಗಳಿಗೆ ಅತ್ಯಂತಪ್ರಿಯನೂ,

# ದೇವಹೂತಮಮಹ್ರುತಮಸಿ ಹವಿರ್ಧಾನಂ ದೃಗ್ಂಹಸ್ವ ಮಾಹ್ವಾರ್ಮಿತ್ರಸ್ಯ ತ್ವಾ ಚಕ್ಷುಷಾ ಪ್ರೇಕ್ಷೇ ಮಾ ಭೇರ್ಮಾ

---

ದೇವಹೂತಮಮಿತಿ ದೇವ-ಹೂತಮಮ್ । *ಅಹ್ರುತಮ್ । ಅಸಿ । ಹವಿರ್ಧಾನಮಿತಿ ಹವಿಃ-ಧಾನಮ್ । ದೃಗ್ಂಹಸ್ವ । ಮಾ । ಹ್ವಾಃ * । ಮಿತ್ರಸ್ಯ । ತ್ವಾ । ಚಕ್ಷುಷಾ। ಪ್ರೇತಿ । ಈಕ್ಷೇ । ಮಾ । ಭೇಃ । ಮಾ ।

---

| ಮಂತ್ರ | ವಿನಿಯೋಗ |
|---|---|
| ಮಿತ್ರಸ್ಯ...... ಹಿಗ್ಂಸಿಷಮ್ । | ಪುರೋಡಾಶಕ್ಕಾಗಿ ಉಪಯೋಗಿಸುವ ವ್ರೀಹಿ ಮೊದಲಾದವುಗಳನ್ನು ನೋಡಲು. |
| ಉರು ವಾತಾಯ । | ಭತ್ತವನ್ನು ಮುಚ್ಚಿರುವ ಮುಚ್ಚಳ (ಚಾಪೆ ಮೊದಲಾದವನ್ನು) ತೆಗೆಯಲು. |

---

**ದೇವಹೂತಮಮ್** = ದೇವತೆಗಳನ್ನು ಆಹ್ವಾನಿಸುವುದರಲ್ಲಿ ಶ್ರೇಷ್ಠನೂ; [**ಅಸಿ**= ಆಗಿದ್ದೀಯೆ] **ಅಹ್ರುತಮ್** = [ವ್ರೀಹಿಯೇ ಮೊದಲಾದ ಧಾನ್ಯಗಳ ಭಾರದಿಂದ] ಬಾಗಿ ಹೋಗದ; **ಹವಿರ್ಧಾನಮ್** = ಹವಿರ್ಧಾನ್ಯಗಳನ್ನು ಹೊತ್ತಿರುವ ಬಂಡಿಯೂ; **ಅಸಿ** = ಆಗಿರುವೆ; **ದೃಗ್ಂಹಸ್ವ** = ದೃಢವಾಗಿರು; **ಮಾ ಹ್ವಾಃ** = ಭಗ್ನನಾಗಬೇಡ. [ಎಲೈ ವ್ರೀಹಿಸಮೂಹವೇ! ನಾನು] ∻ **ಮಿತ್ರಸ್ಯ** = ಜಗತ್ತಿಗೇ ಮಿತ್ರನಾದ ಸೂರ್ಯದೇವನ; **ಚಕ್ಷುಷಾ** =[ಮೈತ್ರೀಯುತವಾದ] ಕಣ್ಣಿನಿಂದ; **ತ್ವಾ** = ನಿನ್ನನ್ನು; **ಪ್ರೇಕ್ಷೇ** = ನೋಡುವೆನು; (ವೈರಿದೃಷ್ಟಿಯಿಂದ ನೋಡುತ್ತಿಲ್ಲ). (ಆದುದರಿಂದ) **ಮಾ ಭೇಃ** = ಭಯಪಡಬೇಡ; **ಮಾ ಸಂವಿಕ್ಥಾಃ** = ನಡುಗಬೇಡ.

---

ಧಾನ್ಯಗಳನ್ನು ಹೊರುವವರಲ್ಲಿ ಶ್ರೇಷ್ಠನೂ, ದೇವತೆಗಳನ್ನು ಕರೆಯುವವರಲ್ಲಿ ಶ್ರೇಷ್ಠನೂ ಆಗಿರುವೆ. ಧಾನ್ಯಭಾರದಿಂದ ಬಾಗಿ ಹೋಗದೆ ವ್ರೀಹಿ ಮೊದಲಾದವನ್ನು ಹೊತ್ತಿರುವ ಶಕಟವಾಗಿರುವೆ. ದೃಢವಾಗಿರು. ಭಗ್ನನಾಗಬೇಡ.

ಎಲೈ ವ್ರೀಹಿರಾಶಿಯೇ! ನಾನು ನಿನ್ನನ್ನು ಲೋಕಮಿತ್ರನಾದ ಸೂರ್ಯನ ಕಣ್ಣಿನಿಂದ ನೋಡುತ್ತೇನೆ. ವೈರಿಯ ದೃಷ್ಟಿಯಿಂದಲ್ಲ. ಆದುದರಿಂದ ನೀನು ಭಯಪಟ್ಟು ನಡುಗಬೇಡ. ನಾನು ನಿನ್ನನ್ನು ಹಿಂಸಿಸುವುದಿಲ್ಲ.

**ಸಂವಿಕ್ಥಾ ಮಾ ತ್ವಾ [ತ್ವಾ (೧) ಹಿಗ್ಂಸಿಷಮುರು]**

**ಹಿಗ್ಂಸಿಷಮುರು ವಾತಾಯ ದೇವಸ್ಯ ತ್ವಾ ಸವಿತುಃ**

**ಪ್ರಸವೇಶ್ವಿನೋರ್ಬಾಹುಭ್ಯಾಂ**

---

ಸಮಿತಿ । ವಿಕ್ಥಾಃ । ಮಾ । ತ್ವಾ । ಹಿಗ್ಂಸಿಷಮ್ । ಉರು । ವಾತಾಯ ।

ದೇವಸ್ಯ । ತ್ವಾ । ಸವಿತುಃ । ಪ್ರಸವ ಇತಿ ಪ್ರ-ಸವೇ । ಅಶ್ವಿನೋಃ ।

ಬಾಹುಭ್ಯಾಮಿತಿ ಬಾಹು-ಭ್ಯಾಮ್ ।

---



| ಮಂತ್ರ | ವಿನಿಯೋಗ |
|---|---|
| ದೇವಸ್ಯ..... ನಿರ್ವಪಾಮಿ । | ಶೂರ್ಪದಲ್ಲಿ ಪವಿತ್ರಗಳನ್ನಿಟ್ಟು ಅಗ್ನಿಹೋತ್ರ ಹವಣಿಯಿಂದ ಹವಿರ್ನಿರ್ವಾಪ (ಹವಿಸ್ಸಿಗೆ ಬೇಕಾದ ಧಾನ್ಯವನ್ನು ಹಾಕುವುದು) ಮಾಡಲು. |

---

(ನಾನು) ತ್ವಾ = ನಿನ್ನನ್ನು; ಮಾ ಹಿಗ್ಂಸಿಷಮ್ = ಹಿಂಸಿಸುವುದಿಲ್ಲ (ನಾನು ಮಾಡಲಿರುವ ದ್ವಾರವೇ!) ವಾತಾಯ = ವಾಯುಪ್ರವೇಶಕ್ಕಾಗಿ; ∴ ಉರು = ವಿಸ್ತೀರ್ಣನಾಗು, (ನಾನು) ಸವಿತುಃ ∴ ದೇವಸ್ಯ = ಸವಿತೃದೇವನ; ಪ್ರಸವೇ = ಪ್ರೇರಣೆಯಾಗಲಾಗಿ; ಅಶ್ವಿನೋಃ = ಅಶ್ವಿನೀದೇವತೆಗಳ; ಬಾಹುಭ್ಯಾಮ್ = ತೋಳುಗಳಿಂದಲೂ;

ವಾಯುಪ್ರವೇಶವಿಲ್ಲದ ವಸ್ತುವಿಗೆ ವರುಣನು ಸ್ವಾಮಿಯಾಗಿರುತ್ತಾನೆ. ಮುಚ್ಚಳವನ್ನು ತೆಗೆದು ವಾಯುಪ್ರವೇಶಕ್ಕೆ ಅವಕಾಶ ಮಾಡಿಕೊಡುತ್ತೇನೆ. ಇದರಿಂದ ವರುಣನ ಸ್ವಾಮ್ಯವು ಹೋಗುತ್ತದೆ. ದೇವಾರ್ಹವಾಗುತ್ತದೆ.

ಎಲೈ ಹವಿರ್ಧಾನ್ಯವೇ! ಸರ್ವಪ್ರೇರಕನಾದ ಪರಮಾತ್ಮನ ಪ್ರೇರಣೆಯಿಂದ ಅಶ್ವಿನೀ ದೇವತೆಗಳ ತೋಳುಗಳಿಂದಲೂ, ಪೂಷದೇವನ ಕೈಗಳಿಂದಲೂ ನಿನ್ನನ್ನು ಅಗ್ನಿಗೆ ಪ್ರಿಯವಾಗುವಂತೆ ಮೊರದಲ್ಲಿ ಪ್ರತ್ಯೇಕಿಸಿ ಹಾಕುತ್ತೇನೆ. ಹೀಗೆಯೇ ಪೂರ್ಣಮಾಸದೇವತೆಯಾದ ಅಗ್ನೀಷೋಮರಿಗಾಗಿಯೂ ಹವಿಸ್ಸನ್ನು ನಿರ್ವಾಪ ಮಾಡುತ್ತೇನೆ.

ಪೂಷ್ಣೋ ಹಸ್ತಾಭ್ಯಾಮಗ್ನಯೇ ಜುಷ್ಟಂ

ನಿರ್ವಪಾಮ್ಯಗ್ನೀಷೋಮಾಭ್ಯಾಮಿದಂ

ದೇವಾನಾಮಿದಮು ನಃ

---

ಪೂಷ್ಣಃ । ಹಸ್ತಾಭ್ಯಾಮ್ । ಅಗ್ನಯೇ । ಜುಷ್ಟಮ್ । ನಿರಿತಿ । ವಪಾಮಿ ।
ಅಗ್ನೀಷೋಮಾಭ್ಯಾಮಿತ್ಯಗ್ನೀ - ಸೋಮಾಭ್ಯಾಮ್ । ಇದಮ್ । ದೇವಾನಾಮ್ ।
ಇದಮ್ । ಉ । ನಃ ।

---



| ಮಂತ್ರ | ವಿನಿಯೋಗ |
|---|---|
| ಅಗ್ನೀಷೋಮಾಭ್ಯಾಮ್ । (ದೇವಸ್ಯ...ಹಸ್ತಾಭ್ಯಾಂ...ನಿರ್ವಪಾಮಿ) | ಅಗ್ನೀಷೋಮ ದೇವತೆಗೆ ಹವಿರ್ನಿರ್ವಾಪ ಮಾಡಲು |
| ಇದಂ ದೇವಾನಾಮ್ । | ನಿರ್ವಾಪ ಮಾಡಿದ ವ್ರೀಹಿಯನ್ನು ಸ್ಪರ್ಶಿಸಲು |

---

**ಪೂಷ್ಣಃ** = ಪೂಷದೇವನ; **ಹಸ್ತಾಭ್ಯಾಮ್** = ಕೈಗಳಿಂದಲೂ; **ಅಗ್ನಯೇ** = (ದರ್ಶಪೂರ್ಣಮಾಸದೇವತೆಯಾದ) ಅಗ್ನಿಗಾಗಿ; **ತ್ವಾ** = ನಿನ್ನನ್ನು; **ಜುಷ್ಟಮ್** = (ದೇವತೆಗೆ) ಪ್ರಿಯವಾಗುವಂತೆ; **ನಿರ್ವಪಾಮಿ** = ಪ್ರತ್ಯೇಕಗೊಳಿಸಿ ಮೊರದಲ್ಲಿ ಹಾಕುತ್ತೇನೆ. [ದೇವಸ್ಯ..... + **ಅಗ್ನೀಷೋಮಾಭ್ಯಾಂ** = (ಪೂರ್ಣಮಾಸದೇವತೆಯಾದ) ಅಗ್ನೀಷೋಮರಿಗಾಗಿ; ನಿರ್ವಪಾಮಿ]. + **ಇದಮ್** = ಈ ನಿರುಪ್ತವಾದ ವ್ರೀಹಿಯು; **ದೇವಾನಾಮ್** = ದೇವತೆಗಳಿಗಾಗಿದೆ. **ಇದಮ್ ಉ** = ಇದಾದರೋ;

ಈ ಮೊರದಲ್ಲಿ ಪ್ರತ್ಯೇಕಿಸಿ ಹಾಕಿರುವ ವ್ರೀಹಿಯು ಅಗ್ನ್ಯಾದಿ ದೇವತೆಗಳಿಗಾಗಿದೆ.

ಈ ಉಳಿದಿರುವ ವ್ರೀಹಿರಾಶಿಯು ದೇವತೆಗಳಿಂದ ಕೂಡಿದ ನಮಗೆಲ್ಲರಿಗೂ ಸೇರಿದೆ.

## ಸಹ ಸ್ಫಾತ್ಯೈ ತ್ವಾ ನಾರಾತ್ಯೈ ಸುವರಭಿ ವಿ ಖ್ಯೇಷಂ ವೈಶ್ವಾನರಂ ಜ್ಯೋತಿರ್ದೃಗ್ಂಹಂತಾಂ ದುರ್ಯಾ

---

ಸಹ । ಸ್ಫಾತ್ಯೈ । ತ್ವಾ । ನ । ಅರಾತ್ಯೈ । ಸುವಃ । ಅಭಿ । ವೀತಿ । ಖ್ಯೇಷಮ್।
*ವೈಶ್ವಾನರಮ್ । ಜ್ಯೋತಿಃ*। ದೃಗ್ಂಹನ್ತಾಮ್ । ದುರ್ಯಾಃ ।

---

| ಮಂತ್ರ | ವಿನಿಯೋಗ |
|---|---|
| ಇದಂ...ಸಹ । | ಶಕಟದಲ್ಲಿರುವ ವ್ರೀಹಿಯನ್ನು ಸ್ಪರ್ಶಿಸಲು |
| ಸ್ಫಾತ್ಯೈ.... ಅರಾತ್ಯೈ । | ನಿರ್ವಾಪ ಮಾಡಿದ ಧಾನ್ಯಗಳನ್ನು ಅಭಿಮಂತ್ರಿಸಲು |
| | ಆಪಸ್ತಂಬ |
| ೧) ಸುವರಭಿ ವಿಖ್ಯೇಷಮ್ । | ಯಾಗಪ್ರದೇಶವನ್ನು ನೋಡಲು |
| ೨) ವೈಶ್ವಾನರಂ ಜ್ಯೋತಿಃ । | ಆಹವನೀಯವನ್ನು ನೋಡಲು |



---

ನಃ ಸಹ = ದೇವತೆಗಳಿಂದೊಡನೆ ನಮ್ಮ ನಮ್ಮ ಸ್ವತ್ತೂ ಆಗಿದೆ. [ಎಲೈ ಹವಿರ್ಧಾನ್ಯವೇ!] ✣ ಸ್ಫಾತ್ಯೈ = ವೃದ್ಧಿಗಾಗಿ; ತ್ವಾ = ನಿನ್ನನ್ನು [ಅಭಿಮಂತ್ರಿಸುತ್ತೇನೆ] ನ ಅರಾತ್ಯೈ = ದಾನಕೊಡದಿರುವುದಕ್ಕೆ [ನಿನ್ನ ವೃದ್ಧಿಯು] ಅಲ್ಲ. [ದಾನಕ್ಕಾಗಿಯೇ ಆಗಿದೆ.] (ನಾನು) ✣ ಸುವಃ =ಸ್ವರ್ಗದಂತಿರುವ(ಯಾಗಪ್ರದೇಶವನ್ನು) ಅಭಿ = ಸುತ್ತಲೂ; ವಿ ಖ್ಯೇಷಮ್ = ಚೆನ್ನಾಗಿ ನೋಡುತ್ತೇನೆ. ✣ ವೈಶ್ವಾನರಂ ಜ್ಯೋತಿಃ = ಸ್ವರ್ಗಪ್ರಕಾಶಕಜ್ಯೋತಿ ಯಂತಿರುವ (ಆಹವನೀಯವನ್ನು ನೋಡುತ್ತೇನೆ). ದ್ಯಾವಾಪೃಥಿವ್ಯೋಃ = ಇಹಲೋಕ ಪರಲೋಕ ಗಳಲ್ಲಿರುವ; ದುರ್ಯಾಃ = ನಮ್ಮ ಮನೆಗಳು;

---

ಎಲೈ! ಹವಿರ್ಧಾನ್ಯವೇ! ನಿನ್ನ ಹೆಚ್ಚಳವುಂಟಾಗಲು ನಿನ್ನನ್ನು ಅಭಿಮಂತ್ರಿಸುತ್ತೇನೆ. ನಿನ್ನ ಹೆಚ್ಚಳವು ದಾನಕ್ಕಾಗಿ ಅಲ್ಲವೆಂದಲ್ಲ. ವೃದ್ಧಿಯನ್ನು ಪಡೆದ ನಿನ್ನನ್ನು ದಾನ ಮಾಡುತ್ತೇನೆ.

ಈ ಯಾಗಪ್ರದೇಶವು ಸ್ವರ್ಗದಂತಿದೆ. ಇದನ್ನು ಎಲ್ಲಾ ಕಡೆಯೂ ಚೆನ್ನಾಗಿ ನೋಡುತ್ತೇನೆ. ಆಹವನೀಯಾಗ್ನಿಯು ಸ್ವರ್ಗಪ್ರಕಾಶಜ್ಯೋತಿಯಂತಿದೆ.

ದ್ಯಾವಾಪೃಥಿವ್ಯೋರುರ್ವಂತರಿಕ್ಷಮನ್ವಿಹ್ಯದಿತ್ಯಾ

ಸ್ತ್ವೋಪಸ್ಥೇ ಸಾದಯಾಮ್ಯಗ್ನೇ ಹವ್ಯಗ್ಂ ರಕ್ಷಸ್ವ ||೪|| 6||

[ಮಾ ತ್ವಾ ಷಟ್ಚತ್ವಾರಿಗ್ಂಶಚ್ಚ||]

---

ದ್ಯಾವಾಪೃಥಿವ್ಯೋರಿತಿ ದ್ಯಾವಾ-ಪೃಥಿವ್ಯೋಃ | ಉರು | ಅಂತರಿಕ್ಷಮ್ | ಅನ್ವಿತಿ | ಇಹ| ಅದಿತ್ಯಾಃ| ತ್ವಾ | ಉಪಸ್ಥ ಇತ್ಯುಪ-ಸ್ಥೇ | ಸಾದಯಾಮಿ | ಅಗ್ನೇ| ಹವ್ಯಮ್ | ರಕ್ಷಸ್ವ || ೪ ||

---



| ಮಂತ್ರ | ಉಪಯೋಗ |
|---|---|
| ಸುವರಭಿ.......ಜ್ಯೋತಿಃ | | ಆಹವನೀಯವನ್ನು ನೋಡಲು (ಬೌಧಾಯನ) |
| ದೃಗ್ಂಹಂತಾಂ...ಪೃಥಿವ್ಯೋಃ | | ಯಾಗಗೃಹವನ್ನು ನೋಡಲು ಬಂಡಿಯಿಂದ ಇಳಿಯಲು -ಆಪಸ್ತಂಬ |
| ಉರ್ವಂತರಿಕ್ಷಮನ್ವಿಹಿ | | ನಿರ್ವಾಪ ಮಾಡಿ ಧಾನ್ಯವನ್ನು ತರಲು |
| ಅದಿತ್ಯಾಃ... ಸಾದಯಾಮಿ | | ಗಾರ್ಹಪತ್ಯದ ಉತ್ತರದಲ್ಲಿ ಧಾನ್ಯವನ್ನಿಡಲು |
| ಅಗ್ನೇ.... ರಕ್ಷಸ್ವ|| | ಗಾರ್ಹಪತ್ಯವನ್ನು ಅಭಿಮಂತ್ರಿಸಲು |

---

ಮನೆಗಳು;❖ ದೃಗ್ಂಹಂತಾಮ್ = ದೃಢವಾಗಿರಲಿ. ❖ ಉರು = ವಿಸ್ತೀರ್ಣವಾದ; ಅಂತರಿಕ್ಷಮ್= ಆಕಾಶವನ್ನು; ಅನ್ವಿಹಿ= ಅನುಸರಿಸಿ ಬಾ. [ಎಲೈ ಧಾನ್ಯವೇ!] ❖ತ್ವಾ = ನಿನ್ನನ್ನು; ಅದಿತ್ಯಾಃ= ಈ ಭೂಮಿಯ; ಉಪಸ್ಥೇ = ತೊಡೆಯಲ್ಲಿ ; ಸಾದಯಾಮಿ = ಇಡುತ್ತೇನೆ. ❖ಅಗ್ನೇ!=ಗಾರ್ಹಪತ್ಯನೇ! ಹವ್ಯಮ್= ಈ ಹವ್ಯವನ್ನು; ರಕ್ಷಸ್ವ = ಕಾಪಾಡು.

---

ಇದನ್ನು ನಾನು ನೋಡುತ್ತೇನೆ. ಹವಿರ್ಗ್ರಹಣವನ್ನು ಮಾಡಿದಾಗ ಇಹ-ಪರಲೋಕಗಳು "ಲೋಕನಾಶಾರ್ಥವಾಗಿ ಸಂಕಲ್ಪಿಸುವನೋ ಎಂದು ಭಯಪಡುತ್ತವೆ.ಈ ಮಂತ್ರದಿಂದ ಆ ಭಯವು ನಿವೃತ್ತಿಯಾಗಿ ದೃಢವಾಗುತ್ತವೆ.

ಎಲೈ ಹವಿರ್ಧಾನ್ಯವೇ ಪ್ರತಿಬಂಧಕವಿಲ್ಲದ ವಿಶಾಲವಾದ ಅಂತರಿಕ್ಷಮಾರ್ಗವನ್ನುಅನುಸರಿಸಿ ಬಾ. ಎಲೈ ಹವಿರ್ಧಾನ್ಯವೇ! ನಿನ್ನನ್ನು ಭೂಮಿಯ ತೊಡೆಯಲ್ಲಿ ಇಡುತ್ತೇನೆ. ಗಾರ್ಹಪತ್ಯಾಗ್ನಿಯೇ! ಈ ಹವ್ಯವನ್ನು ರಕ್ಷಿಸು.

# ವಿನಿಯೋಗ ಸಂಗ್ರಹ

ಕರ್ಮಣೇ[1] ಹಸ್ತಯೋಃ ಶುದ್ಧಿರ್ವೇಷಾ[2] ಶೂರ್ಪಪರಿಗ್ರಹಃ।
ಪ್ರತ್ಯುಷ್ಟ[3] ಸಂತಪ್ಯ ಧೂಃ[4] ಸ್ಪೃಶೇತ್ ಶಕಟೇ ಧುರಮ್॥

[5]ತ್ವಮಿಷಾಂ ಸಂಸ್ಪೃಶೇ*ದ್ದೃಗ್ಂಹ[6] ಶಕಟಂ ತ್ವಧಿರೋಹತಿ।
ಉರ್ವಂ[7]ತರ್ಧಿಮಪಚ್ಛಾದ್ಯ ಮಿತ್ರೇ[8] ತಿ ಹವಿರೀಕ್ಷತೇ॥

[9]ದೇವೇತಿ ನಿರ್ವಪೇದಗ್ನೇ[10] ತ್ವಪಿ ಪೂರ್ವಾನುಷಂಜನಾತ್।
ಇದಂ[11, 12] ನಿರುಪ್ತತಚ್ಛೇಷೌ ಸ್ಪೃಶೇತ್[13] ಸ್ವಾತ್ಯಭಿಮಂತ್ರಣಮ್॥

ಸುವ[14] ರ್ವಿಹಾರಂ ವೀಕ್ಷ್ಯಾಥ ವೈಶ್ವಾ[15]* ಪೂರ್ವಾವೀಕ್ಷಣಮ್ ।
ದೃಗ್ಂಹಾ[16] ವರುಹ್ಯೋರು[17] ಗಚ್ಛೇದ್ವೇದಿ[18] ಭೂಮೌ ಹಿ ಸಾದಯೇತ್॥
ಅಗ್ನೇ[19] ಽಭಿಮಂತ್ರಣಂ ಮಂತ್ರಾ ಉಕ್ತಾ ಏಕೋನವಿಂಶತಿಃ॥



ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ —ಬೌಧಾಯನ-17
—ಆಪಸ್ತಂಬ-19

ಅನುವಾಕದ ವಿಶೇಷ ವಿಷಯಗಳು

ಅ) ಭಟ್ಟಭಾಸ್ಕರ ಭಾಷ್ಯ

೧) ವೇಷಾಯ ತ್ವಾ॥ ವ್ಯಾಪ್ನೋತಿ ಇತಿ ವೇಷಃ=ಯಾವುದು ವ್ಯಾಪಿಸುವುದೋ ಅದು ವೇಷ = ವಿಷ್ಣು । ವೇಷಃ, ವಿಷ್ಣುಃ, ಯಜ್ಞಃ ಇತಿ ಪರ್ಯಾಯಾಃ । ಸರ್ವವ್ಯಾಪಿನೇ ವಿಷ್ಣ್ವಾತ್ಮನೇ ಯಜ್ಞಾಯ ತ್ವಾಮಾದದೇ। ಸರ್ವವ್ಯಾಪಿಯಾದ ವಿಷ್ಣ್ವಾತ್ಮಕವಾದ ಯಜ್ಞಕ್ಕಾಗಿ ನಿನ್ನನ್ನು ತೆಗೆದುಕೊಳ್ಳುವೆನು ಎಂದು ಮಿಶ್ರರ ವ್ಯಾಖ್ಯಾನ.

* "ಅಹ್ರುತಮ್" । ಎಂದು ಮಂತ್ರವು ಆರಂಭಗೊಳ್ಳುತ್ತದೆ. ವಿನಿಯೋಗಸಂಗ್ರಹಕಾರರು ಮಂತ್ರದ ಮಧ್ಯದ ಪದವನ್ನು ಸೂಚಿಸಿದ್ದಾರೆ.

● ಕ್ರಿಯಾಕಲಾಪಕ್ಕೆ ಅನುಗುಣವಾಗಿ ಹೀಗೆ ಹೇಳಿದ್ದಾರೆ. ಶ್ರುತಿಯಲ್ಲಿ ಇದು ನಂತರದ ಮಂತ್ರ.
● ಪೂರ್ವದಿಕ್ಕಿನ ಅಗ್ನಿ_ಆಹವನೀಯ.

ಸಾಯಣರು ಯಜ್ಞಕ್ಕಾಗಿ ನಿನ್ನನ್ನು ತೆಗೆದುಕೊಳ್ಳುತ್ತೇನೆ ಎಂದು ಅರ್ಥವನ್ನು ಬರೆದಿರುತ್ತಾರೆ.

೪) ಧೂರಸಿ.... ಧೂರ್ವಾಮಃ ।

ಇಲ್ಲಿ 'ಧೂಃ' ಎಂಬ ಶಬ್ದವು ನೊಗದಲ್ಲಿರುವ ಅಗ್ನಿಯನ್ನು ತಿಳಿಸುತ್ತದೆ. ಧೂರ್ವಂತಂ = ಯಜ್ಞಸ್ಯ ಹಿಂಸಕಂ ರಾಕ್ಷಸಾದಿಕಂ = ಯಜ್ಞವನ್ನು ಅಡ್ಡಿಪಡಿಸುವ ರಾಕ್ಷಸರೇ ಮೊದಲಾದವರನ್ನು; ಧೂರ್ವ = ನಾಶಯ = ನಾಶಪಡಿಸು. ಯಾರು ನಮ್ಮನ್ನು ಕೊಲ್ಲಲು ಬಯಸುವರೋ ಅಥವಾ ನಾವು ಯಾರನ್ನು ಹಿಂಸಿಸಲು ಬಯಸುವೆವೋ ಅವರಿಬ್ಬರನ್ನೂ ನೀನು ಶಿಕ್ಷಿಸು.

ಸಾಯಣರು ಪಾಪವು ನಮ್ಮನ್ನು ಹಿಂಸಿಸುವುದೆಂದೂ, ನಾವು ಆಲಸ್ಯವನ್ನು ಹಿಂಸಿಸಬಯಸುವೆವೆಂದೂ ವ್ಯಾಖ್ಯಾನ ಮಾಡಿರುವರು.

೮) ಮಿತ್ರಸ್ಯ...... ಹಿಂಗ್‌ಸಿಷಮ್

ಮಿಶ್ರರು 'ಮಾ ತ್ವಾ ಹಿಗ್‌ಂಸಿಷಮ್' = ಧಾನ್ಯವನ್ನು ಕುಟ್ಟುವುದರಿಂದ ನಿನ್ನನ್ನು ನಾನು ಹಿಂಸಿಸುವುದಿಲ್ಲ ಎಂಬ ಮಾತು ಸರಿಯಲ್ಲ ಎಂದು ಹೇಳಿ ಅದರ ತಾತ್ಪರ್ಯವನ್ನು ಹೀಗೆ ಹೇಳಿರುತ್ತಾರೆ. ನ ತ್ವಾಮಹಂ ನಾಶಯಾಮಿ ಕಿಂತು ಹವಿರ್ಭೂತಂ ತ್ವಾಂ ದೇವತಾಯ್ಯೆ ಸಂಕಲ್ಪ್ಯ ಉಚ್ಛ್ರಿತಂ ಸ್ಥಾನಂ ಪ್ರಾಪಯಾಮಿ = ನಿನ್ನನ್ನು ಕುಟ್ಟಿ ದೇವತೆಗೆ ಹವಿಸ್ಸನ್ನಾಗಿ ಸಂಕಲ್ಪಿಸಿ ನಿನಗೆ ಉನ್ನತಗತಿಯನ್ನು ಒದಗಿಸಿಕೊಡುವೆನು. ಏಕೆಂದರೆ

ಯಜ್ಞಾರ್ಥಂ ನಿಧನಂ ಪ್ರಾಪ್ತಾಃ ಪ್ರಾಪ್ನುವನ್ತ್ಯುಚ್ಛ್ರಿತಿಂ ಪುನಃ ।

—ಮನುಸ್ಮೃತಿ 5-40

ಯಜ್ಞಕ್ಕಾಗಿ ಪ್ರಾಣ ನೀಡುವವರು ಉನ್ನತಿಯನ್ನು ಪಡೆಯುವವರು. ಎಂಬ ಸ್ಮೃತಿವಚನವೇ ಇದಕ್ಕೆ ಆಧಾರ ಎಂದಿದ್ದಾರೆ.

೧೪) ಸುವರಭಿ ವಿ ಖ್ಯೇಷಮ್ । ಸುವಃ ಎಂಬ ಶಬ್ದಕ್ಕೆ ಮಿಶ್ರರು 'ಸುಷ್ಠು ಶ್ರೇಯಾಂಸಿ ಗಮಯತಿ ಇತಿ ಸುವಃ' ಎಂಬ ವಿವರಣೆಯನ್ನು ನೀಡಿರುತ್ತಾರೆ.

೧೫) ವೈಶ್ವಾನರಂ ಜ್ಯೋತಿಃ ।

ವಿಶ್ವೇಷಾಂ ನರಣಾಂ ಸಂಬಂಧೀ ವೈಶ್ವಾನರಃ = ಎಲ್ಲ ಜನರಿಗೂ ಸಂಬಂಧಿಸಿದವನು. ಎಲ್ಲ ಜನರಿಗೂ ಒಡೆಯನಾಗಿರುವುದೇ ಜನರಿಗೂ ಅಗ್ನಿಗೂ ಇರುವ

ಸಂಬಂಧ. ಜ್ಯೋತಿಃ = ದ್ಯೋತನಶೀಲಮ್ (ಬೆಳಗುವ ಸ್ವಭಾವವುಳ್ಳ); ಆಹವನೀಯವನ್ನು– ಅಭಿ ವಿ ಖ್ಯೇಷಮ್ = ಅಭಿಮುಖ್ಯೇನ ಪಶ್ಯಾಮಿ = ಎದುರಿನಿಂದ ನೋಡುತ್ತೇನೆ ಎಂದು ಮಿಶ್ರರ ವಿವರಣೆ. ಸಾಯಣರು ಸುತ್ತಲೂ ಚೆನ್ನಾಗಿ ನೋಡುತ್ತೇನೆ ಎಂದಿದ್ದಾರೆ.

೧೬) ದೃಗ್ಂಹಂತಾಂ....ಪೃಥಿವ್ಯೋಃ ।

ದುರ್ಯಾಃ = ಗೃಹಾಃ = ಮನೆಗಳು; ದೃಗಂಹಂತಾಮ್ = ವರ್ಧಂತಾಮ್ = ಹೆಚ್ಚಲಿ(ಸಮೃದ್ಧಿಗೊಳ್ಳಲಿ) ಎಂದು ಮಿಶ್ರರ ವಿವರಣೆ. ಸಾಯಣರು ದೃಗಂಹಂತಾಮ್ = ದೃಢೀಭವಂತು = ದೃಢವಾಗಿರಲಿ ಎಂದು ತಿಳಿಸಿರುತ್ತಾರೆ.

## ಆ) ಮೀಮಾಂಸಾ



ಈ ಅನುವಾಕದಲ್ಲಿ ಸಾಯಣರು ಕೆಲವು ಸಾಮಾನ್ಯವಿಚಾರಗಳನ್ನು ಪ್ರಸ್ತಾಪ ಮಾಡಿದ್ದಾರೆ. ಮೊದಲನೆಯ ಅನುವಾಕದಲ್ಲಿ ಹೇಳಿದ ಸಾಮಾನ್ಯಮೀಮಾಂಸಾ ವಿಚಾರಗಳ ಜೊತೆಯಲ್ಲಿಯೇ ಇವುಗಳನ್ನೂ ಹೇಳಬಹುದಾಗಿತ್ತಾದರೂ ನ್ಯಾಯಗಳು ಎಲ್ಲೆಡೆಯೂ ಅನ್ವಯವಾಗುತ್ತವೆಯೆಂಬ ಶಾಸ್ತ್ರಸಿದ್ಧಾಂತವನ್ನು ದೃಢಪಡಿಸಲು ಆಯಾ ಅನುವಾಕದಲ್ಲಿ ಹೇಳಲಾಗಿದೆ. ಈ ಅನುವಾಕದಲ್ಲಿ ಮಂತ್ರಗಳಿಗೆ ಸಂಬಂಧಿಸಿದ ಮೀಮಾಂಸೆಯನ್ನೂ ತಿಳಿಸಿದ್ದಾರೆ.

೧) 'ಪರ್ವಣಿ ನಾಧ್ಯೇತವ್ಯಮ್' ಎಂಬುದಾಗಿ ಪರ್ವಕಾಲದಲ್ಲಿ (ಅಮಾವಾಸ್ಯೆ, ಪೂರ್ಣಿಮೆ) ಮಂತ್ರಪಾಠವನ್ನು ಮಾಡಬಾರದೆಂಬ ನಿಷೇಧವಿದೆ. ಆದುದರಿಂದ ಅನಧ್ಯಾಯದಲ್ಲಿ ಬರುವ ಕ್ರತುಪ್ರಯೋಗದಲ್ಲಿ ಮಂತ್ರಪಾಠವನ್ನು ಮಾಡಬಾರದು. ಇದು ಪೂರ್ವಪಕ್ಷ.

ಇಲ್ಲಿಯ ಸಿದ್ಧಾಂತವೂ ಹೀಗಿದೆ. ಅನಧ್ಯಯನವಿಧಿಯು ಗ್ರಹಣಾರ್ಥವಾದ ಅಧ್ಯಯನಕ್ಕೆ ಮಾತ್ರ. ಅಂದರೆ ಗುರುವಿನ ಅಧ್ಯಾಪನಸಮಯದಲ್ಲಿ ಮಂತ್ರಗಳನ್ನು ಕಲಿಯುವ ಸಲುವಾಗಿ ಮಾಡುವ ಗ್ರಹಣಾಧ್ಯಯನಕ್ಕೆ ಈ ನಿಷೇಧವು ಅನ್ವಿತವಾಗುತ್ತದೆ. ಹಾಗಲ್ಲದೆ ಪರ್ವಕಾಲದಲ್ಲಿ ಮಾಡುವ ಕ್ರತುಪ್ರಯೋಗಕ್ಕೂ ಈ ನಿಷೇಧವು ಅನ್ವಯ ವಾಗುವುದಾದರೆ— ಇಷ್ಟಿಯನ್ನು ಪ್ರತಿಪತ್ತಿನಂದೇ ಮಾಡಬೇಕಾದುದರಿಂದ, ಅನಧ್ಯಯನ ದಿನವೆಂಬ ಕಾರಣದಿಂದ ಮಂತ್ರಪಾಠವನ್ನು ಮಾಡದಿದ್ದರೆ— ಆ ಮಂತ್ರಗಳ ಅಧ್ಯಯ ನವೇ ವ್ಯರ್ಥವಾಗುತ್ತದೆ. ಆದುದರಿಂದ ಕರ್ಮಗಳಲ್ಲಿ ಅನಧ್ಯಯನವೆಂಬ ನಿಷೇಧವಿಲ್ಲ. ಹೀಗಾಗಿ 'ಕರ್ಮಣೇ ವಾಂ' ಇತ್ಯಾದಿ ಮಂತ್ರಗಳನ್ನು ಪ್ರತಿಪತ್ತಿನಂದು ಹೇಳಬಹುದು.

೨) ಬ್ರಾಹ್ಮಣದಲ್ಲಿರುವ ಮಂತ್ರಗಳ ಸ್ವರನಿರ್ಣಯ

ಛಂದೋಗಾ ಬಹ್ವೃಚಾಶ್ಚೈವ ತಥಾ ವಾಜಸನೇಯಿನಃ ।
ಉಚ್ಚನೀಚಸ್ವರಂ ಪ್ರಾಹುಃ ಸ ವೈ ಭಾಷಿಕ ಉಚ್ಯತೇ ॥

ಸಾಮಗರೂ, ಋಗ್ವೇದಿಗಳೂ ಮತ್ತು ಶುಕ್ಲಯಜುರ್ವೇದಿಗಳೂ ಬ್ರಾಹ್ಮಣವನ್ನು ಹೇಳುವಾಗ ಉದಾತ್ತ ಅನುದಾತ್ತಗಳನ್ನು ಮಾತ್ರ ಹೇಳುತ್ತಾರೆ. ಆ ಸ್ವರವನ್ನು 'ಭಾಷಿಕ ಸ್ವರ'ವೆನ್ನುತ್ತಾರೆ. ಬ್ರಾಹ್ಮಣಗಳಿಂದ ವಿನಿಯುಕ್ತವಾದ ಮಂತ್ರಗಳಿಗೂ ಸಹ ಈ ಭಾಷಿಕಸ್ವರವನ್ನು ಹೇಳುವುದೇ ಯುಕ್ತ. ಏಕೆಂದರೆ ಬ್ರಾಹ್ಮಣಗಳಲ್ಲಿ ಮಂತ್ರಗಳನ್ನು ಪಾಠಮಾಡಿರುವುದೇ ಆ ಮಂತ್ರಗಳಿಗೆ ವಿಶಿಷ್ಟವಾದ ಈ ರೀತಿಯ'ಭಾಷಿಕ ಸ್ವರ'ವನ್ನು ಹೇಳುವುದಕ್ಕಾಗಿಯೇ ಎಂಬುದೇ ಇಲ್ಲಿನ ಪೂರ್ವ ಪಕ್ಷ.

ಇಲ್ಲಿಯ ಸಿದ್ಧಾಂತವು ಹೀಗಿದೆ.—ಬ್ರಾಹ್ಮಣದಲ್ಲಿ ಮಂತ್ರಪಾಠವಿರುವುದಿಲ್ಲ. ಮಂತ್ರಗಳನ್ನು ಮಂತ್ರಕಾಂಡದಲ್ಲಿ ಪಾಠ ಮಾಡುವಾಗ ಯಾವ ಸ್ವರವಿರುತ್ತದೆಯೋ ಅದೇ ಸ್ವರಗಳಿಂದ ಕೂಡಿದ ಮಂತ್ರಗಳ ಕೆಲವು ಮೊದಲಿನ ಪದಗಳನ್ನು ಮಾತ್ರ ಬ್ರಾಹ್ಮಣದಲ್ಲಿ ಪಾಠ ಮಾಡಲಾಗುತ್ತದೆ. 'ಇಮಾಮಗೃಭ್ಣನ್ರಶನಾಮೃತಸ್ಯೇತ್ಯಶ್ವಾಭಿಧಾನೀಮಾದತ್ತೇ'। ಆದುದರಿಂದ ಬ್ರಾಹ್ಮಣದಲ್ಲಿ ಮಂತ್ರಪಾಠವಿಲ್ಲ. ಬ್ರಾಹ್ಮಣವು ಮಂತ್ರಕಾಂಡದ ಮಂತ್ರಗಳಿಗೆ ಸೂಚಕವಾಗಿರುತ್ತದೆ ಎಂಬ ಅಭಿಪ್ರಾಯದಿಂದಲೇ ನೇರವಾಗಿ ಮಂತ್ರವನ್ನು ಸೂಚನೆ ಮಾಡದೆ ಆ ಮಂತ್ರಗಳ ದೇವತೆಯ ಮೂಲಕ ಬ್ರಾಹ್ಮಣದಲ್ಲಿ ಸೂಚಿಸುವುದೂ ಉಂಟು. 'ಸಾವಿತ್ರಾಣಿ' ಜುಹೋತಿ ಪ್ರಸೂತ್ಯೈ' ಎಂಬ ಬ್ರಾಹ್ಮಣವು 'ಯುಞ್ಜಾನಃ ಪ್ರಥಮಂ' ಮುಂತಾದ ಸವಿತೃ ದೇವತೆಯ ಮಂತ್ರಗಳನ್ನು ಸೂಚಿಸುತ್ತದೆ. ಆದುದರಿಂದ ಮಂತ್ರಪಾಠದಲ್ಲಿರುವ ಸ್ವರವೇ ಮಂತ್ರಗಳಿಗೆ ಕರ್ಮಗಳಲ್ಲಿ ಹೇಳಲ್ಪಡಬೇಕೇ ಹೊರತು ಬ್ರಾಹ್ಮಣದ ಭಾಷಿಕಸ್ವರವಲ್ಲ.

ತೈತ್ತರೀಯಬ್ರಾಹ್ಮಣದಲ್ಲಿ ಉದಾತ್ತ, ಅನುದಾತ್ತ, ಸ್ವರಿತ ಮತ್ತು ಪ್ರಚಯಗಳೆಂಬ ಚಾತುಸ್ಸ್ವರ್ಯ(ನಾಲ್ಕು ಸ್ವರಗಳು)ವೇ ಇದೆ.

ಬ್ರಾಹ್ಮಣದಲ್ಲಿಯೇ ಪಠಿತವಾದ ಮಂತ್ರಗಳಿಗೆ—ಸ್ವರಗಳಿಗಾಗಿಯೇ ಅಲ್ಲಿ ಪಾಠ ಮಾಡಿರುವುದರಿಂದ—ಭಾಷಿಕಸ್ವರವೇ ಯುಕ್ತ ಎಂಬುದು ಇನ್ನೊಂದು ಪೂರ್ವಪಕ್ಷ.

ಇದರ ಸಿದ್ಧಾಂತವು ಹೀಗಿದೆ:— ತಾಂಡ್ಯಬ್ರಾಹ್ಮಣದಲ್ಲಿ "ವಾನಸ್ಪತ್ಯೋऽಸಿ" [2-2-4; 6-5-3] ಎಂಬ ಮಂತ್ರವು ಪಠಿತವಾಗಿದೆ. ಅದಕ್ಕೆ ಮಂತ್ರಕಾಂಡದಲ್ಲಿ ಪಾಠ ವಿಲ್ಲದ ಕಾರಣ ತ್ರೈಸ್ವರ್ಯವಿಲ್ಲ. ಭಾಷಿಕ ಸ್ವರವೇ. 'ಯಜ್ಞಸ್ಯ ಸಂತತಿರಸಿ' ಎಂಬ ಮಂತ್ರವು ತೈತ್ತಿರೀಯ ಬ್ರಾಹ್ಮಣದಲ್ಲಿ ತ್ರೈಸ್ವರ್ಯ(ಚಾತುಸ್ವರ್ಯ)ದಿಂದ ಉಕ್ತವಾಗಿರು ವುದರಿಂದ ಮಂತ್ರಕಾಂಡದ ಮಂತ್ರಗಳಂತೆಯೇ ಇರುತ್ತದೆ. ಆದರೆ 'ಸೋಮಾಯ ರಾಜ್ಞೇ ಕ್ರೀತಾಯ ಪ್ರೋಹ್ಯಮಾಣಾಯಾನುಬ್ರೂಹಿ' ಮೊದಲಾದ ಬಹ್ವೃಚ ಬ್ರಾಹ್ಮಣದ ಮಂತ್ರ ಗಳಿಗೆ ಭಾಷಿಕಸ್ವರವನ್ನೇ ಹೇಳಬೇಕು.

**೩) ಕರ್ಮಾರಂಭವು ಯಾವಾಗ?**

'ಇಷೇ ತ್ವಾ' ಎಂಬುದು ಶಾಖಾಛೇದನದ ಮಂತ್ರ. ಈ ಮಂತ್ರವನ್ನು ಉಚ್ಚರಿಸುವ ಪ್ರಾರಂಭದಲ್ಲಿಯೇ ಕರ್ಮವನ್ನು ಆರಂಭಿಸಬೇಕೆ? ಮಂತ್ರ ಮಧ್ಯದಲ್ಲಿಯೇ? ಮಂತ್ರಾಂತ್ಯದಲ್ಲಿಯೇ? ಅಥವಾ ಇನ್ನೂ ವಿಲಂಬವಾಗಿಯೇ? ಇದಾವುದಕ್ಕೂ ನಿರ್ದಿಷ್ಟ ವಾದ ವಚನವು ಇಲ್ಲದುದರಿಂದ ಹೇಗಾದರೂ ಮಾಡಬಹುದು. ಇದು ಪೂರ್ವಪಕ್ಷ.

ಇಲ್ಲಿಯ ಸಿದ್ಧಾಂತವು ಹೀಗಿದೆ: ಮಂತ್ರವು ಅರ್ಥಕ್ಕೆ ಸ್ಮಾರಕಗಳು. ತಮ್ಮೊಡನೆ ಸಮವೇತವಾದ ಅರ್ಥವನ್ನು ಮಂತ್ರಗಳು ತಿಳಿಸಿಕೊಡಬೇಕಾದರೆ ಅವು ಪೂರ್ತಿಯಾಗಿ ಉಚ್ಚರಿಸಲ್ಪಟ್ಟಿದ್ದರೆ ಮಾತ್ರ ಸಾಧ್ಯ. ಮಂತ್ರವು ಪೂರ್ಣವಾಗದ ಹೊರತು ಇಡೀ ಅರ್ಥದ ಸ್ಮರಣೆಯು ಆಗುವುದಿಲ್ಲ. ವಿಲಂಬವಾದರೆ ಸ್ಮೃತಿಯು ನಾಶವಾಗುತ್ತದೆ. ಆದುದರಿಂದ ಮಂತ್ರಾಂತ್ಯದಲ್ಲಿ ಕರ್ಮಾರಂಭವನ್ನು ಮಾಡಬೇಕು.

**೪) ಹಸ್ತಪ್ರಕ್ಷಾಲನವು ಯಾವ ಕರ್ಮದ ಅಂಗ?**

ದರ್ಶ-ಪೂರ್ಣಮಾಸಪ್ರಕರಣದಲ್ಲಿ 'ಹಸ್ತಾವವನೇನಿಕ್ತೇ' 'ಉಲಪರಾಜೀಂ ಸ್ತೃಣಾತಿ' ಎಂಬ ವಾಕ್ಯಗಳು ಇವೆ. (ಆಪ. ಶ್ರೌ. ಸೂ. 1-15-4) ಹಸ್ತಪ್ರಕ್ಷಾಲನವನ್ನು ಮಾಡಿ ಕೊಂಡು ವೇದಿಯಲ್ಲಿ ಹುಲ್ಲಿನ ಸಮೂಹ (ಉಲಪರಾಜಿ)ವನ್ನು ಹರಡುತ್ತಾನೆ ಎಂದರ್ಥ. ಇವೆರಡು ವಾಕ್ಯಗಳನ್ನು ಕ್ರಮವಾಗಿ ಪಾಠ ಮಾಡಿರುವುದರಿಂದ ಪಾಠಕ್ರಮದಂತೆ ಹಸ್ತಪ್ರಕ್ಷಾಲನವು ಉಲಪರಾಜಿಸ್ತರಣಕ್ಕೆ ಮಾತ್ರ ಅಂಗವಾಗಿರುತ್ತದೆ ಎಂಬುದು ಇಲ್ಲಿನ ಪೂರ್ವಪಕ್ಷ.

ಇಲ್ಲಿಯ ಸಿದ್ಧಾಂತವು ಹೀಗಿದೆ: ಪ್ರಕ್ಷಾಲನವು ಕೈಗಳಿಗೆ ಸಂಸ್ಕಾರವನ್ನುಂಟು ಮಾಡುತ್ತದೆ. ಶುದ್ಧವಾದ ಕೈಗಳು ಮುಂದಿನ ಎಲ್ಲ ಕಾರ್ಯಗಳನ್ನೂ ಮಾಡಬಲ್ಲವು ಎಂಬುದು ಸಾಮರ್ಥ್ಯರೂಪವಾದ ಲಿಂಗ. ಈ ವಾಕ್ಯವು ದರ್ಶ-ಪೂರ್ಣಮಾಸ

ಪ್ರಕರಣದಲ್ಲಿದೆ. ಆದುದರಿಂದ ಕ್ರಮಪ್ರಕಾರವಾಗಿ ಹಸ್ತಪ್ರಕ್ಷಾಲನವು ಉಲಪರಾಜಿಯ ಆಸ್ತರಣಕ್ಕೆ ಅಂಗವಾಗುವುದಾದರೂ ಲಿಂಗ ಮತ್ತು ಪ್ರಕರಣಗಳಿಂದ ಕ್ರಮವು ಬಾಧಿತವಾಗುತ್ತದೆ. ಅದರಿಂದ ಹಸ್ತಪ್ರಕ್ಷಾಲನವು ಮುಂದಿನ ಎಲ್ಲ ಕಾರ್ಯಗಳ ಅಂಗವಾಗುತ್ತದೆ. ಇದರಂತೆ ವಾಙ್ನಿಯಮವೂ ಕೂಡ ಮುಂದಿನ ಎಲ್ಲ ಕರ್ಮಗಳ ಅಂಗವಾಗುತ್ತದೆ.

### ೫) ಉದಕಪ್ರಣಯನದ ಪಾತ್ರ ಯಾವುದು?

'ಅಪಃ ಪ್ರಣಯತಿ' ಎಂಬುದಾಗಿ ಆರಂಭವಾಗಿ 'ಮೃನ್ಮಯೇನ ಪ್ರತಿಷ್ಠಾಕಾಮಸ್ಯ ಪ್ರಣಯೇತ್' ಎಂಬುದಾಗಿ (ಆಪ. ಶ್ರೌ. ಸೂ. 1-16-2) ಹೇಳಿದೆ. ಅಂದರೆ ಪ್ರತಿಷ್ಠಾಕಾಮನಾದವನು ಮಣ್ಣಿನ ಪಾತ್ರೆಯಿಂದ ಅಪ್ಪ್ರಣಯನ (ಜಲ ಸಂಸ್ಕಾರ)ವನ್ನು ಮಾಡಬೇಕು ಎಂದರ್ಥ. ಹೀಗಿರುವಾಗ ಈ ಕಾಮ್ಯವಿಧಿಯಲ್ಲಿ ಮೃತ್ಪಾತ್ರವನ್ನು ಹೇಳಲಾಗಿದೆ. ಪ್ರತಿಷ್ಠಾಕಾಮನೆಯಿಲ್ಲದ ನಿತ್ಯಪ್ರಯೋಗದಲ್ಲಿಯೂ ಉದಕಪ್ರಣಯನಕ್ಕಾಗಿ ಪಾತ್ರವು ಬೇಕಾದುದರಿಂದ ಪ್ರಣಯನಕ್ಕಾಗಿ ಯಾವುದೋ ಪಾತ್ರವನ್ನು ತೆಗೆದುಕೊಳ್ಳುವುದಕ್ಕಿಂತ ಶ್ರುತಿಯಲ್ಲಿ ಹೇಳಿರುವ ಕಾಮ್ಯಮೃತ್ಪಾತ್ರವನ್ನು ತೆಗೆದುಕೊಳ್ಳುವುದೇ ಯುಕ್ತ. ಇದು ಇಲ್ಲಿನ ಪೂರ್ವಪಕ್ಷ.

ಇಲ್ಲಿಯ ಸಿದ್ಧಾಂತವು ಹೀಗಿದೆ: ಪ್ರತಿಷ್ಠಾಕಾಮನೆ ಇರುವವನು ಮೃತ್ಪಾತ್ರವನ್ನು ಪರಿಗ್ರಹಿಸಬೇಕು. ಪ್ರತಿಷ್ಠಾಕಾಮನೆ ಇರುವವನಿಗೆ ಮಾತ್ರ ಮೃತ್ಪಾತ್ರವು ಪ್ರಾಪ್ತವಾಗುವುದು. ಒಂದು ವೇಳೆ ಕಾಮನೆ ಇದ್ದರೆ ಬಳಸಬೇಕಾದ ವಸ್ತುವನ್ನು ಮಾಡಲೇಬೇಕಾದ ನಿತ್ಯಕರ್ಮಕ್ಕೆ ಅನ್ವಯಿಸಲು ಬಾರದು. ಅಲ್ಲದೆ 'ಅಪಃ ಪ್ರಣಯತಿ' ಎಂಬ ವಿಧಿಯು ಪಾತ್ರವಿಲ್ಲದೆ ಪ್ರಣಯನವು ಸಾಧ್ಯವಿಲ್ಲದುದರಿಂದ ಯಾವುದಾದರೊಂದು ಪಾತ್ರವಿರಬೇಕೆಂಬುದನ್ನು ಕಲ್ಪಿಸಿಕೊಡುತ್ತದೆ. ಆದುದರಿಂದ ನಿತ್ಯಪ್ರಯೋಗದಲ್ಲಿ ಕಾಮ್ಯಮೃನ್ಮಯ ಪಾತ್ರವು ಸಂಬಂಧಿಸುವುದಿಲ್ಲ.

ವಸ್ತುತಃ 'ಚಮಸೇನಾಪಃ ಪ್ರಣಯತಿ' ಎಂದು ನಿತ್ಯಪ್ರಯೋಗದಲ್ಲಿ ಚಮಸವನ್ನು ಬಳಸಬೇಕೆಂಬ ವಿಧಿಯೇ ಇದೆ. ಅಂದ ಮೇಲೆ ಮೃನ್ಮಯಪಾತ್ರವನ್ನು ಬಳಸಬೇಕೆ? ಎಂಬ ವಿಚಾರವನ್ನು ಏಕೆ ಮಾಡಿದ್ದಾರೆ? ಎಂಬ ಸಂಶಯವು ಬರುತ್ತದೆ. ಈ ರೀತಿಯ ವಿಚಾರಗಳನ್ನು "ಕೃತ್ವಾಚಿಂತಾ" ವಿಚಾರಗಳೆನ್ನುತ್ತಾರೆ. ಅಂದರೆ 'ಒಂದು ವೇಳೆ ನಿತ್ಯಕರ್ಮದಲ್ಲಿ ಪ್ರಣಯನಕ್ಕೆ ಚಮಸವು ಇಲ್ಲದಿದ್ದರೆ ಏನಾಗುತ್ತಿತ್ತು?' ಎಂಬ ರೀತಿಯಲ್ಲಿ ವಿಚಾರ ಮಾಡಿದ್ದಾರೆಂದು ತಿಳಿಯಬೇಕು. ಅಲ್ಲದೆ "ಕಾಮ್ಯೇನ ನಿತ್ಯಸ್ಯ ಪ್ರಸಂಗಃ" ಎಂಬಂತೆ ಕಾಮನೆಯಿದ್ದಾಗ ಮಾಡುವ ಮೃನ್ಮಯಪಾತ್ರೆಯ ಉದಕಪ್ರಣಯ

ನದಿಂದಲೇ ನಿತ್ಯವಾದ ಚಮಸದಿಂದ ಮಾಡುವ ಕಾರ್ಯವೂ ಸಿದ್ಧಿಸುತ್ತದೆ.

೬) "ದೇವಸ್ಯ ತ್ವಾ....." ಮುಂತಾದವುಗಳು ಏಕವಾಕ್ಯವೇ? ಭಿನ್ನವಾಕ್ಯಗಳೇ ?

ದರ್ಶ-ಪೂರ್ಣಮಾಸ ಪ್ರಕರಣದಲ್ಲಿ "ದೇವಸ್ಯ ತ್ವಾ ಸವಿತುಃ ಪ್ರಸವೇಽಶ್ವಿನೋ ರ್ಬಾಹುಭ್ಯಾಂ ಪೂಷ್ಣೋ ಹಸ್ತಾಭ್ಯಾಮಗ್ನಯೇ ಜುಷ್ಟಂ ನಿರ್ವಪಾಮಿ" ಎಂಬುದಾಗಿ ವಚನವಿದೆ. ಈ ವಚನದಲ್ಲಿರುವ ವಾಕ್ಯಗಳು ಬೇರೆ ಬೇರೆಯೇ? ಅಥವಾ 'ನಿರ್ವಪಾಮಿ' ಎಂಬಲ್ಲಿಯವರೆಗೆ ಒಂದೇ ವಾಕ್ಯವೇ? ಅಲ್ಲದೆ ಏಕವಾಕ್ಯದ ಲಕ್ಷಣವೇನು? ಮೇಲಿನ ವಾಕ್ಯವನ್ನು ಒಂದೇ ವಾಕ್ಯವೆಂದು ಪರಿಗಣಿಸಲು ನಿಯಾಮಕವಾದುದು ಏನೂ ಅಲ್ಲ. ಒಂದೇ ಅರ್ಥವು ತೋರುವುದರಿಂದ ಅರ್ಥೈಕ್ಯವಿರುವೆಡೆ ವಾಕ್ಯೈಕತ್ವವನ್ನು ಹೇಳಲೂ ಬರುವುದಿಲ್ಲ ಏಕೆಂದರೆ "ಘಟ" ಮುಂತಾದ ಒಂದೇ ಪದದಲ್ಲಿಯೂ ಅರ್ಥವು ಒಂದೇ. ಆದರೆ "ಘಟ"ವೆಂಬುದು ವಾಕ್ಯವೆನಿಸುವುದಿಲ್ಲ. ಪದಗಳ ಸಮೂಹವೇ ಏಕವಾಕ್ಯದ ಲಕ್ಷಣವೆನ್ನುವುದಾದರೆ, ಮೇಲಿನ ವಚನದಲ್ಲಿ ಪದಗಳ ಸಮೂಹಗಳು ಅನೇಕ ಇವೆ. ಆದುದರಿಂದ "ದೇವಸ್ಯ ತ್ವಾ" ಮುಂತಾದವುಗಳು ಬೇರೆ ಬೇರೆ ವಾಕ್ಯಗಳೇ ಹೊರತು ಏಕವಾಕ್ಯವಲ್ಲ. ಇದು ಇಲ್ಲಿನ ಪೂರ್ವಪಕ್ಷ.



ಇಲ್ಲಿಯ ಸಿದ್ಧಾಂತವು ಹೀಗಿದೆ. "ಯದ್ವಿಭಾಗೇ ಸಾಕಾಂಕ್ಷಮವಿಭಾಗೇ ಚೈಕಾರ್ಥಂ ತದೇಕಂ ವಾಕ್ಯಮ್" ಎಂಬುದು ಏಕವಾಕ್ಯದ ಲಕ್ಷಣ. "ವಿಭಾಗವನ್ನು ಮಾಡಿದರೆ ಆಕಾಂಕ್ಷೆಯಿಂದ ಕೂಡಿದ್ದಾಗಿ, ಒಟ್ಟುಗೂಡಿ ಏಕಾರ್ಥಕವಾದ ಪದಪುಂಜವೇ ಏಕ ವಾಕ್ಯ" ಎಂದರ್ಥ. ಮೇಲಿನ 'ದೇವಸ್ಯ ತ್ವಾ' ಎಂಬಲ್ಲಿ ಬೇರೆ ಬೇರೆ ಮಾಡಿದಾಗ "ಅಶ್ವಿನೋರ್ಬಾಹುಭ್ಯಾಮ್" (ಅಶ್ವಿನಿದೇವತೆಗಳ ತೋಳುಗಳಿಂದ) ಮೊದಲಾದವುಗಳಿಗೆ ಅನ್ವಯಿಸುವ ಕ್ರಿಯಾಪದವು ಇಲ್ಲವಾದುದರಿಂದ ಅವು ಕ್ರಿಯೆಯನ್ನು ಅರ್ಥಪೂರ್ತಿಗಾಗಿ ಆಕಾಂಕ್ಷಿಸುವುದರಿಂದ ಸಾಕಾಂಕ್ಷಗಳಾಗುತ್ತವೆ. (ವಿಭಾಗೇ ಸಾಕಾಂಕ್ಷಮ್). ಒಟ್ಟುಗೂಡಿದಾಗ ನಿರ್ವಾಪವೆಂಬ ಒಂದು ಅರ್ಥವನ್ನು ನೀಡುತ್ತವೆ. (ಅವಿಭಾಗೇ ಚೈಕಾರ್ಥಮ್) ಆದುದರಿಂದ 'ದೇವಸ್ಯ ತ್ವಾ... ನಿರ್ವಪಾಮಿ" ಎಂಬುದು ಏಕವಾಕ್ಯವೇ. ಅವು ಭಿನ್ನವಾಕ್ಯಗಳಲ್ಲ.

೭) "ಯಾತೇ ಅಗ್ನೇ...." ಎಂಬಲ್ಲಿಯ ಅನುಷಂಗದ ವಿಚಾರ

ಜ್ಯೋತಿಷ್ಟೋಮದಲ್ಲಿ ಉಪಸದ್ಹೋಮಗಳನ್ನು ಅನುಷ್ಠಿಸಬೇಕು. ಅಲ್ಲಿ 'ಯಾ ತೇ ಅಗ್ನೇಽಯಾಶಯಾ ತನೂರ್ವರ್ಷಿಷ್ಠಾ ಗಹ್ವರೇಷ್ಠೋಗ್ರಂ ವಚೋ

ಅಪಾವಧೀಂ ತ್ವೇಷಂ ವಚೋ ಅಪಾವಧೀಗ್ಂ ಸ್ವಾಹಾ । ಯಾ ತೇ ಅಗ್ನೇ ರಜಾಶಯಾ । ಯಾ ತೇ ಅಗ್ನೇ ಹರಾಶಯಾ' ಎಂಬ ಮಂತ್ರವಿದೆ. ಇಲ್ಲಿ ಮೊದಲನೆಯ ಮಂತ್ರದ "ತನೂರ್ವರ್ಷಿಷ್ಠಾ ಸ್ವಾಹಾ".. ಎಂಬಲ್ಲಿಯವರೆಗಿನ ಭಾಗವನ್ನು ಎರಡನೆಯ ಮತ್ತು ಮೂರನೆಯ ಮಂತ್ರಗಳಿಗೆ ಅನುಷಂಗ (ಸೇರಿಸುವುದು) ಮಾಡಬೇಕೇ? ಎಂಬ ಸಂಶಯವು ಬಂದರೆ "ತನೂಃ...ಸ್ವಾಹಾ" ಎಂಬ ಭಾಗವು ಮೊದಲನೆಯ ಮಂತ್ರದ ಶೇಷವಾದು ದರಿಂದ ಎರಡನೆಯ ಮತ್ತು ಮೂರನೆಯ ಮಂತ್ರಗಳಿಗೆ ಸೇರಿಸುವಂತಿಲ್ಲ. ಆದುದರಿಂದ ಲೌಕಿಕವಾದ ಅಧ್ಯಾಹಾರವನ್ನು ಮಾಡಿಪೂರ್ಣಗೊಳಿಸಬೇಕು. ಇದು ಇಲ್ಲಿನ ಪೂರ್ವಪಕ್ಷ.

ಇಲ್ಲಿಯ ಸಿದ್ಧಾಂತವು ಹೀಗಿದೆ: ಲೌಕಿಕವಾದ ಅಧ್ಯಾಹಾರಕ್ಕಿಂತಲೂ ಅನುಷಂಗವೇ ಇಲ್ಲಿ ಯುಕ್ತ. ವೇದದ ಮಂತ್ರಗಳ ಆಕಾಂಕ್ಷೆಯನ್ನು ವೇದದ ಮಂತ್ರಗಳಿಂದಲೇ ಪೂರ್ಣ ಗೊಳಿಸುವುದು ಉಚಿತವಾದುದು. "ತನೂಃ ಸ್ವಾಹಾ" ಎಂಬುದು ಮೊದಲನೆಯ ಮಂತ್ರಕ್ಕೆ ಶೇಷವಾದುದೇನೋ ಹೌದು. ಆದರೂ ಬುದ್ಧಿಸ್ಥವಾಗಿದೆ. ಅಧ್ಯಾಹಾರವನ್ನು ಹೊಸದಾಗಿ ಕಲ್ಪಿಸಬೇಕಾದುದರಿಂದ ಅದಕ್ಕಿಂತಲೂ ಶ್ರುತವಾದ ಈ ವೈದಿಕಮಂತ್ರವೇ ಸಮೀಪ ದಲ್ಲಿದೆ. ಆದುದರಿಂದ ಅನುಷಂಗವೇ ಸರಿಯಾದುದು. ಇದರಂತೆಯೇ "ಅಗ್ನೀಷೋಮಾ ಭ್ಯಾಮ್" ಎಂಬ ಮಂತ್ರದಲ್ಲಿಯೂ "ದೇವಸ್ಯ... ಹಸ್ತಾಭ್ಯಾಮ್" ಎಂಬ ಪೂರ್ವ ಭಾಗವನ್ನೂ "ಜುಷ್ಟಂ ನಿರ್ವಪಾಮಿ" ಎಂಬ ಉತ್ತರಭಾಗವನ್ನೂ ಅನುಷಂಗ ಮಾಡಿಕೊಳ್ಳಬೇಕು.



**೮) 'ದೇವಸ್ಯ ತ್ವಾ.....' ಎಂಬಲ್ಲಿಯ ಊಹದ ವಿಚಾರ**

"ದೇವಸ್ಯ ತ್ವಾ ಸವಿತುಃ ಪ್ರಸವೇಽಶ್ವಿನೋರ್ಬಾಹುಭ್ಯಾಂ ಪೂಷ್ಣೋ ಹಸ್ತಾಭ್ಯಾಂ" ಎಂಬಲ್ಲಿ ಸವಿತೃ, ಅಶ್ವಿನೀದೇವತೆಯರು ಮತ್ತು ಪೂಷದೇವತೆಯ ಉಲ್ಲೇಖವಿದೆ. ಇವು ದೇವತಾವಾಚಕಗಳಾದುದರಿಂದ ಕರ್ಮಸಂಗತವಾದ ದೇವತೆಗಳನ್ನು ಹೇಳುತ್ತವೆ ಎಂಬುದು ಯುಕ್ತ. ಪ್ರಕೃತದಲ್ಲಿ ನಿರ್ವಾಪ ಕರ್ಮವು ಪ್ರಸಕ್ತವಾದುದರಿಂದ ನಿರ್ವಾಪ ಕರ್ಮಸಂಗತವಾದ ದೇವತೆಗಳನ್ನು ಹೇಳುತ್ತವೆಯೆನ್ನಬೇಕು. ಆದರೆ ಅಗ್ನಿಯು ಮಾತ್ರ ನಿರ್ವಾಪಕ್ಕೆ ಸಂಗತವಾದ ದೇವತೆಯಾದುದರಿಂದ(ಅಗ್ನಿಗೆ ನಿರ್ವಾಪ ಮಾಡುತ್ತಿರುವುದ ರಿಂದ) ಈ ಮೂರು ದೇವತಾವಾಚಿಗಳಾದ ಶಬ್ದಗಳಿಗೆ ಅಗ್ನಿಯೆಂಬ ಅರ್ಥವನ್ನು ಕೊಡ ಲಾರವಾದರೂ ಆ ಅರ್ಥವು ಉಂಟಾಗುವಂತೆ ಈ ಶಬ್ದಗಳಿಗೆ ವ್ಯುತ್ಪತ್ತಿ (ಪ್ರಕೃತಿ-ಪ್ರತ್ಯಯ)ಯನ್ನು ಕಲ್ಪಿಸಬೇಕು.

ಅಗ್ನಿಶಬ್ದವೇ ಅಗ್ನಿದೇವತೆ ಎಂಬ ಅರ್ಥವನ್ನು ತಿಳಿಸಿಬಿಟ್ಟಿರುವುದರಿಂದ ಈ ಶಬ್ದ

ಗಳು ಮತ್ತೆ ಅದೇ ಅರ್ಥವನ್ನೇ ತಿಳಿಸುವುದು ಯುಕ್ತವಲ್ಲ. ಅಲ್ಲದೆ ಬೇರೆ ಬೇರೆ ದೇವತೆ ಎಂಬ ಅರ್ಥದಲ್ಲಿ ರೂಢವಾಗಿರುವ ಈ ಶಬ್ದಗಳು ಅಗ್ನಿ ಎಂಬ ಒಂದು ಅರ್ಥವನ್ನು ತಿಳಿಸಲಾರವು ಎನ್ನುವುದಾದರೆ ಈ ಕರ್ಮದಲ್ಲಿ ಒಮ್ಮೆ ಕರ್ಮಸಂಗತವಾದ ದೇವತೆಗಳು ವಿಕಲ್ಪವಾಗಿರಲಿ. ಪ್ರಕೃತಿಯಾದ ದರ್ಶ-ಪೂರ್ಣಮಾಸೇಷ್ಟಿಯಲ್ಲಿ ಹೀಗಾಗುವುದರಿಂದ ಐಷ್ಟಿಕಗಳಲ್ಲೆಲ್ಲ (ವಿಕೃತಿ) ಸವಿತೃ ಮೊದಲಾದ ಮೂರು ದೇವತೆಗಳ ಸ್ಥಾನದಲ್ಲಿ ಆಯಾ ದೇವತಾವಾಚಕಗಳನ್ನು ಊಹ ಮಾಡಬೇಕು. ಇದು ಇಲ್ಲಿಯ ಪೂರ್ವಪಕ್ಷ.

ಇಲ್ಲಿಯ ಸಿದ್ಧಾಂತವು ಹೀಗಿದೆ; ಪ್ರಸಿದ್ಧದೇವತಾವಾಚಿಗಳಾದ ಈ ಶಬ್ದಗಳು ಅಗ್ನಿಯೆಂಬ ಅರ್ಥವನ್ನು ಕೊಡುವುದಿಲ್ಲ. ಅಗ್ನಿಯೊಡನೆ ಈ ದೇವತೆಗಳಿಗೆ ವಿಕಲ್ಪವನ್ನು ಹೇಳಿದರೆ ವಾಕ್ಯ ಭೇದವು ಒದಗುತ್ತದೆ. ಅಲ್ಲದೆ 'ದೇವಸ್ಯ.... ನಿರ್ವಪಾಮಿ' ಎಂಬ ಇಡೀ ಮಂತ್ರವು ನಿರ್ವಾಪದಲ್ಲಿ ವಿನಿಯುಕ್ತವಾಗುವುದರಿಂದಲೂ, ನಿರ್ವಾಪಕ್ಕೆ ಇವು ಸ್ತಾವಕಗಳಾದುದರಿಂದಲೂ, ನಿರ್ವಾಪಕರ್ಮದೊಡನೆ ಇವು ಸಮವೇತ (ಸೇರುವಿಕೆ) ವಾಗಿಲ್ಲವಾದುದರಿಂದಲೂ ವಿಕೃತಿಯಲ್ಲಿ ಈ ದೇವತೆಗಳ ಸ್ಥಾನದಲ್ಲಿ ಊಹವಿಲ್ಲ. ಇಲ್ಲೊಂದು ಚಿಕ್ಕ ಆಕ್ಷೇಪವಿದೆ. ವಿಕೃತಿಯಲ್ಲಿ ಈ ದೇವತೆಗಳ ಸ್ಥಾನದಲ್ಲಿ ಊಹವಿಲ್ಲವೆನ್ನುವುದಾದರೆ 'ಅಗ್ನಯೇ' ಎಂಬ ಮಂತ್ರದ ಸ್ಥಾನದಲ್ಲಿಯೂ ವಿಕೃತಿಯಲ್ಲಿ ಊಹವು ಬೇಡ. ಸವಿತೃ ಮುಂತಾದ ಶಬ್ದಗಳಂತೆಯೇ ಅಗ್ನಿಶಬ್ದವೂ ನಿರ್ವಾಪಸ್ತಾವಕವಾಗಿರಲಿ. ಈ ಆಕ್ಷೇಪಕ್ಕೆ ಹೀಗೆ ಸಮಾಧಾನವನ್ನು ನೀಡಬಹುದು; ಅಗ್ನಿಯು ದರ್ಶ— ಪೂರ್ಣಮಾಸೇಷ್ಟಿಯ ದೇವತೆಯಾದುದರಿಂದ ಸವಿತೃ ಮುಂತಾದ ದೇವತೆಗಳಂತೆ ಅಲ್ಲ. ಆದುದರಿಂದ ವಿಕೃತಿಯಲ್ಲಿ 'ಅಗ್ನಯೇ' ಎಂಬ ಸ್ಥಳದಲ್ಲಿ 'ಇಂದ್ರಾಯ ಕ್ಷಾಮವತೇ' ಮುಂತಾದ ಊಹಗಳನ್ನು ಮಾಡಬೇಕು. ಹವಿರ್ನಿರ್ವಾಪಕ್ರಿಯೆಯಿಂದಲೂ ಮೂರೂ ದೇವತೆ ಪ್ರೀತಿಯು ಉಂಟಾಗದ ಕಾರಣ 'ಜುಷ್ಟಂ' ಎಂಬ ಶಬ್ದವು ನಿರ್ವಾಪಕರ್ಮದೊಡನೆ ಸಮವೇತಾರ್ಥಕವಲ್ಲ. ಆದರೂ'ಪ್ರೀತಿಕರವಾಗುವಂತೆ ನಿರ್ವಾಪ ಮಾಡುತ್ತೇನೆ' ಎಂಬ ಅರ್ಥವಿರುವುದರಿಂದ, ಕ್ರಿಯೆಗೆ ವಿಶೇಷಣವಾಗಿ ಸಮವೇತಾರ್ಥಕವೇ ಆಗುತ್ತದೆ.

**೯) ಊಹ, ಪ್ರವರ ಮತ್ತು ನಾಮಧೇಯಗಳಿಗೆ ಮಂತ್ರತ್ವ ಇದೆಯೇ?**

'ಅಗ್ನಯೇ ಜುಷ್ಟಂ ನಿರ್ವಪಾಮಿ' ಎಂದು ಪ್ರಕೃತಿಯಲ್ಲಿ ಹೇಳುವಂತೆ ಸೌರ್ಯಚರುವಿನಲ್ಲಿ 'ಸೂರ್ಯಾಯ ಜುಷ್ಟಂ ನಿರ್ವಪಾಮಿ' ಎಂದು ಬೇರೆ ಪದವನ್ನು ಸೇರಿಸಿ ಹೇಳುವುದು 'ಊಹ'. ಯಜ್ಞದಲ್ಲಿ ಋತ್ವಿಜರನ್ನು—ಕರ್ಮವನ್ನು ನಿರ್ವಹಿಸಲು—ಪ್ರಾರ್ಥಿಸುವಾಗ 'ಆಂಗೀರಸ ಬಾರ್ಹಸ್ಪತ್ಯ ಭಾರದ್ವಾಜಗೋತ್ರಂ ಬ್ರಾಹ್ಮಣಂ ತ್ವಾಂ ವೃಣೀಮಹೇ' ಎಂದು ಮೊದಲಾಗಿ ಹೇಳುವುದು 'ಪ್ರವರಂ'. ಯಜ್ಞಕ್ಕಾಗಿ ದೀಕ್ಷಿತನಾಗುವ

ಸಮಯದಲ್ಲಿ 'ಅದೀಕ್ಷಿಷ್ಟಾಯಂ ಬ್ರಾಹ್ಮಣಃ' ಎಂಬ ಮಂತ್ರದ ಶೇಷವಾಗಿ 'ದೇವದತ್ತೋಽಯಂ ಬ್ರಾಹ್ಮಣಃ' ಎಂಬ ಮಂತ್ರದ ಶೇಷವಾಗಿ'ದೇವದತ್ತೋಽಯಂ ಬ್ರಾಹ್ಮಣಃ' ಎಂದು ದೀಕ್ಷೆಯನ್ನು ತೆಗೆದುಕೊಳ್ಳುವವನ ಹೆಸರನ್ನು ಯಾಜ್ಞಿಕರು ಹೇಳುತ್ತಾರೆ. ಇದು 'ನಾಮಧೇಯ'ವೆನಿಸುತ್ತದೆ. ಇವೂ ಮಂತ್ರಗಳಿಗೆ ಸಂಬಂಧಿಸಿದ ಭಾಗ ಗಳಾದುದರಿಂದ ಮಂತ್ರಗಳೇ ಆಗುತ್ತವೆಯೆಂಬುದು ಇಲ್ಲಿನ ಪೂರ್ವಪಕ್ಷ.

ಇಲ್ಲಿಯ ಸಿದ್ಧಾಂತವು ಹೀಗಿದೆ; ಯಾಜ್ಞಿಕರು ಯಾವುಗಳನ್ನು ಮಂತ್ರಗಳೆಂದು ಹೇಳುತ್ತಾರೆಯೋ, ಅವೇ ಮಂತ್ರಗಳು, ಊಹ, ಪ್ರವರ ಮತ್ತು ನಾಮಧೇಯಗಳನ್ನು ಮಂತ್ರಕಾಂಡದಲ್ಲಿ ಅಧ್ಯಯನ ಮಾಡದ ಕಾರಣ ಅವು ಮಂತ್ರಗಳಲ್ಲ. ಸ್ವರಗಳ ವ್ಯತ್ಯಾಸವಾದರೆ 'ಮಂತ್ರೋ ಹೀನಃ' ಎಂಬಂತೆ ಉಂಟಾಗುವ ದೋಷವು ಈ ಊಹಾದಿಗಳಲ್ಲಿ ವ್ಯತ್ಯಾಸವಾದರೆ ಇಲ್ಲ.

ಹೀಗೆ ಈ ಅನುವಾಕದಲ್ಲಿ ಕೆಲವು ಸಾಮಾನ್ಯವಿಚಾರಗಳ ಮೀಮಾಂಸೆಯನ್ನು ಸಾಯಣರು ನೀಡಿದ್ದಾರೆ.



## ॥ ಪಂಚಮೋಽನುವಾಕಃ ॥

**ದೇವೋ ವಃ ಸವಿತೋತ್ಪುನಾತ್ವಚ್ಛಿದ್ರೇಣ ಪವಿತ್ರೇಣ**

**ವಸೋಃ ಸೂರ್ಯಸ್ಯ ರಶ್ಮಿಭಿರಾಪೋ**

---

ದೇವಃ । ವಃ । ಸವಿತಾ । ಉದಿತಿ । ಪುನಾತು । ಅಚ್ಛಿದ್ರೇಣ । ಪವಿತ್ರೇಣ ।

ವಸೋಃ । ಸೂರ್ಯಸ್ಯ । ರಶ್ಮಿಭಿರಿತಿ ರಶ್ಮಿ-ಭಿಃ । ಆಪಃ ।

---



ನಾಲ್ಕನೆಯ ಅನುವಾಕದಲ್ಲಿ ಹವಿರ್ನಿರ್ವಾಪವನ್ನು ಹೇಳಿರುತ್ತಾರೆ. ಈ ಅನುವಾಕದಲ್ಲಿ ಹವಿದ್ರ್ರವ್ಯಾವಘಾತ (ಭತ್ತವನ್ನು ಕುಟ್ಟುವುದು)ವನ್ನು ಹೇಳುತ್ತಾರೆ. ಕುಟ್ಟುವ ಮೊದಲು ದ್ರವ್ಯವನ್ನು ಪ್ರೋಕ್ಷಿಸಬೇಕು. ಮಂತ್ರಗಳಿಂದ ಪ್ರೋಕ್ಷಣವಾಗ ಬೇಕು. ಅದಕ್ಕಾಗಿ ಪ್ರೋಕ್ಷಣವಿಧಿ. ಪ್ರೋಕ್ಷಣದ ಸಾಧನವಾದ ಪ್ರೋಕ್ಷಣಿಯ ಶುದ್ಧಿಗಾಗಿ ಉತ್ಪವನ ಮತ್ತು ಅಭಿಮಂತ್ರಣಗಳನ್ನು ಮೊದಲು ಹೇಳಿರುತ್ತಾರೆ.

| ಮಂತ್ರ | ವಿನಿಯೋಗ |
|---|---|
| ದೇವಃ...... ರಶ್ಮಿಭಿಃ | ಪ್ರೋಕ್ಷಣೀಜಲದ ಉತ್ಪವನವನ್ನು ಮಾಡಲು (ಉತ್ಪವನವು ಮೂರು ಬಾರಿ) |

---

[ಎಲೈ ಪ್ರೋಕ್ಷಣಸಲಿಲಗಳೇ!] ಸವಿತಾ ದೇವಃ=[ಅಧ್ವರ್ಯುವಿನ ಹೃದಯ ದಲ್ಲಿರುವ] ಸರ್ವಪ್ರೇರಕನಾದ ಪರಮಾತ್ಮನು; ವಃ = ನಿಮ್ಮನ್ನು; ಉತ್ಪುನಾತು = ಮೇಲೆ ಶುದ್ಧಿಮಾಡಲಿ; ಅಚ್ಛಿದ್ರೇಣ = ರಂಧ್ರವಿಲ್ಲದ; [ಪರಿಪೂರ್ಣನಾದ] ಪವಿತ್ರೇಣ= ಶೋಧಕವಾದ[ಸೂರ್ಯರೂಪವಾದ]ದರ್ಭದ್ವಯದಿಂದ; (ಉತ್ಪುನಾತು = ಶುದ್ಧಿ ಗೊಳಿಸಲಿ); ವಸೋಃ = ಜಗನ್ನಿವಾಸಕಾರಣನಾದ; ಸೂರ್ಯಸ್ಯ = ಸೂರ್ಯನ;

---

ಅಗ್ನಿಹೋತ್ರಹವಣಿಯಲ್ಲಿರುವ ಪ್ರೋಕ್ಷಣೀಜಲವೇ! ಅಧ್ವರ್ಯುವಿನ ಹೃದಯ ದಲ್ಲಿ ಇರುವ, ಸರ್ವಾಂತರ್ಯಾಮಿಯಾದ, ಸರ್ವಪ್ರೇರಕನಾದ ಪರಮಾತ್ಮನು ನಿಮ್ಮನ್ನು ಮೇಲೆತ್ತಿ ಶುದ್ಧಗೊಳಿಸಲಿ. ಆ ಸವಿತೃದೇವನು ಲೋಕ ನಿವಾಸಕಾರಣನಾದ ಪೂರ್ಣ

## ದೇವೀರಗ್ರೇಪುವೋ ಅಗ್ರೇಗುವೋಽಗ್ರ ಇಮಂ ಯಜ್ಞಂ ನಯತಾಗ್ರೇ ಯಜ್ಞಪತಿಂ ಧತ್ತ

ದೇವೀಃ । ಅಗ್ರೇಪುವ ಇತ್ಯಗ್ರೇ-ಪುವಃ । ಅಗ್ರೇಗುವ ಇತ್ಯಗ್ರೇ-ಗುವಃ । ಅಗ್ರೇ । ಇಮಮ್ । ಯಜ್ಞಮ್ । ನಯತ । ಅಗ್ರೇ । ಯಜ್ಞಪತಿಮಿತಿ ಯಜ್ಞ-ಪತಿಮ್ । ಧತ್ತ ।

| ಮಂತ್ರ | ವಿನಿಯೋಗ |
|---|---|
| ಆಪಃ......ಪ್ರೋಕ್ಷಿತಾಃ ಸ್ಥ । | ಪ್ರೋಕ್ಷಣೀಜಲದ ಅಭಿಮಂತ್ರಣ ಆಪಸ್ತಂಬ |
| ೧) ಆಪಃ.....ಅವೃಣೀಧ್ವಂ ವೃತ್ರತೂರ್ಯೇ । | ಪ್ರೋಕ್ಷಣೀಜಲದ ಸ್ತೋತ್ರ |
| ೨) ಪ್ರೋಕ್ಷಿತಾಃ ಸ್ಥ । | ಜಲಕ್ಕೆ ಪ್ರೋಕ್ಷಣೆಯನ್ನು ಮಾಡಲು ಬೌಧಾಯನ |

**ರಶ್ಮಿಭಿಃ** = (ಲೋಕಪಾವನವಾದ) ಕಿರಣಗಳಂತಿರುವ (ದರ್ಭದ್ವಯದಿಂದ) (ನಿಮ್ಮನ್ನು ಪವಿತ್ರಗೊಳಿಸಲಿ). **ಅಗ್ರೇಪುವಃ** = (ಎಲ್ಲವನ್ನೂ) ಮೊದಲು ಶುದ್ಧಿಗೊಳಿಸುವ; **ಅಗ್ರೇಗುವಃ** = (ಪ್ರವಾಹಕಾಲದಲ್ಲಿ) (ಎಲ್ಲಕ್ಕಿಂತಲೂ) ಶೀಘ್ರವಾಗಿ ಹೋಗುವ ಸಾಮರ್ಥ್ಯವುಳ್ಳ; **ದೇವೀಃ** = ದೇವನಗುಣ (ಸೇರಿಕೊಳ್ಳುವಿಕೆ, ಒಂದಾಗುವಿಕೆ)ದಿಂದ ಕೂಡಿರುವ; **ಆಪಃ** = ನೀರುಗಳೇ! (ನೀವು) **ಇಮಮ್ ಯಜ್ಞಮ್** = ಈ ಯಜ್ಞವನ್ನು; **ಅಗ್ರೇ ನಯತ** = ನಿರ್ವಿಘ್ನವಾಗಿ ಪರಿಸಮಾಪ್ತಿಗೊಳಿಸಿರಿ;

ಸೂರ್ಯನಂತಿರುವ ದರ್ಭದ್ವಯಪವಿತ್ರದಿಂದ ನಿಮ್ಮನ್ನು ಪವಿತ್ರಗೊಳಿಸಲಿ. ಸವಿತೃ ದೇವನು ಪ್ರಾಣರೂಪವಾದ ನಿಮ್ಮನ್ನು ಪ್ರಾಣರೂಪ (ಇಂದ್ರಿಯರೂಪ)ವಸುಗಳ ವ್ಯವಹಾರಕ್ಕೆ ಕಾರಣಭೂತನಾದ ಸೂರ್ಯನ ಪ್ರಾಣರೂಪವಾದ ಕಿರಣಗಳಂತಿರುವ ದರ್ಭದ್ವಯದಿಂದ ಪಾವನ ಮಾಡಲಿ.

# ಯುಷ್ಮಾನಿಂದ್ರೋಽವೃಣೀತ ವೃತ್ರತೂರ್ಯೇ ಯೂಯ-
# ಮಿಂದ್ರಮವೃಣೀಧ್ವಂ ವೃತ್ರತೂರ್ಯೇ
# ಪ್ರೋಕ್ಷಿತಾಃ ಸ್ಥಾಗ್ನಯೇ ವೋ ಜುಷ್ಟಂ

---

ಯುಷ್ಮಾನ್ । ಇಂದ್ರಃ । ಅವೃಣೀತ । ವೃತ್ರತೂರ್ಯ ಇತಿ ವೃತ್ರ-ತೂರ್ಯೇ । ಯೂಯಮ್ । ಇಂದ್ರಮ್ । ಅವೃಣೀಧ್ವಮ್ । ವೃತ್ರತೂರ್ಯ ಇತಿ ವೃತ್ರ-ತೂರ್ಯೇ । ಪ್ರೋಕ್ಷಿತಾ ಇತಿ ಪ್ರ-ಉಕ್ಷಿತಾಃ । ಸ್ಥ । ಅಗ್ನಯೇ । ವಃ । ಜುಷ್ಟಮ್ ।

---



| ಮಂತ್ರ | ವಿನಿಯೋಗ |
|---|---|
| [ದೇವಸ್ಯ.......ಬಾಹುಭ್ಯಾಂ.....ಹಸ್ತಾಭ್ಯಾಮ್] ಅಗ್ನಯೇ.......ಪ್ರೋಕ್ಷಾಮಿ | ಪುರೋಡಾಶಕ್ಕೆ ಸಂಬಂಧಿಸಿದ ವ್ರೀಹಿಯನ್ನು ಪ್ರೋಕ್ಷಿಸಲು |

---

ಯಜ್ಞಪತಿಮ್ = ಯಜಮಾನನನ್ನು; ಧತ್ತ= ಸ್ವರ್ಗವನ್ನು ಹೊಂದಿಸಿರಿ; ಯುಷ್ಮಾನ್ = ನಿಮ್ಮನ್ನು; ಇಂದ್ರಃ = ಇಂದ್ರನು; ವೃತ್ರತೂರ್ಯೇ = ವೃತ್ರನೊಡನೆ ನಡೆದ ಯುದ್ಧದಲ್ಲಿ; ಅವೃಣೀತ = ಸಹಾಯಕರನ್ನಾಗಿ ಆರಿಸಿಕೊಂಡನು. ಯೂಯಮ್= ನೀವು; ವೃತ್ರತೂರ್ಯೇ = ವೃತ್ರಯುದ್ಧದಲ್ಲಿ; ಇಂದ್ರಮ್= ಇಂದ್ರನನ್ನು; ಅವೃಣೀಧ್ವಮ್ = ವೃತ್ರವಧೆಗಾಗಿ ಆರಿಸಿಕೊಂಡಿರಿ. (ನೀವು) ಪ್ರೋಕ್ಷಿತಾಃ ಸ್ಥ=(ಈ ಮಂತ್ರೋಚ್ಚಾರಣೆಯಿಂದಲೇ) ಪ್ರೋಕ್ಷಿಸಲ್ಪಟ್ಟು (ಶುದ್ಧರಾಗಿದ್ದೀರಿ). (ಎಲೈ ಹವಿರ್ದ್ರವ್ಯಗಳೇ!) ವಃ = ನಿಮ್ಮನ್ನು; ಅಗ್ನಯೇ = ಅಗ್ನಿದೇವತೆಗೆ ಜುಷ್ಟಮ್ = ಪ್ರಿಯವಾಗುವಂತೆ;

---

ಎಲೈ ಜಲದೇವಿಯರೇ! ನೀವು ಎಲ್ಲವನ್ನೂ ಶುದ್ಧಿಗೊಳಿಸುವುದರಲ್ಲಿ ಮೊದಲಿಗರು. ಪ್ರವಾಹಕಾಲದಲ್ಲಿ ಎಲ್ಲಕ್ಕಿಂತಲೂ ವೇಗವಾಗಿ ಹೋಗಬಲ್ಲವರು. ನೀವು ಯಜ್ಞವನ್ನು ಅಡ್ಡಿಗಳಿಲ್ಲದಂತೆ ಸಮಾಪ್ತಿಯಾಗುವಂತೆ ಮಾಡಿರಿ. ಯಜ್ಞದ ನಿಮ್ಮ ಸಾಮರ್ಥ್ಯವು

## ಪ್ರೋಕ್ಷಾಮ್ಯಗ್ನೀಷೋಮಾಭ್ಯಾಗ್ಂ ಶುಂಧಧ್ವಂ ದೈವ್ಯಾಯ ಕರ್ಮಣೇ ದೇವಯಜ್ಯಾಯಾ ಅವಧೂತಗ್ಂ ರಕ್ಷೋऽವಧೂತಾ

ಪ್ರೇತಿ । ಉಕ್ಷಾಮಿ । ಅಗ್ನೀಷೋಮಾಭ್ಯಾಮಿತ್ಯಗ್ನೀ — ಸೋಮಾಭ್ಯಾಮ್ । ಶುಂಧಧ್ವಮ್। ದೈವ್ಯಾಯ । ಕರ್ಮಣೇ । ದೇವಯಜ್ಯಾಯಾ ಇತಿ ದೇವ - ಯಜ್ಯಾಯೈ । ಅವಧೂತಮಿತ್ಯವ-ಧೂತಮ್ । ರಕ್ಷಃ । ಅವಧೂತಾ ಇತ್ಯವ-ಧೂತಾಃ।

| ಮಂತ್ರ | ವಿನಿಯೋಗ |
| --- | --- |
| ಅಗ್ನಿಷೋಮಾಭ್ಯಾಮ್ । | ವ್ರೀಹಿಯನ್ನು ಪ್ರೋಕ್ಷಿಸಲು. |
| (ದೇವಸ್ಯ......ಹಸ್ತಾಭ್ಯಾಂ.......ಪ್ರೋಕ್ಷಾಮಿ) | |
| ಶುಂಧಧ್ವಂ......ದೇವಯಜ್ಯಾಯೈ | ಪಾತ್ರೆಗಳನ್ನು ಪ್ರೋಕ್ಷಿಸಲು |
| ಅವಧೂತಂ........ಅರಾತಯಃ । | ಕೃಷ್ಣಾಜಿನವನ್ನು ಉತ್ಕರಪ್ರದೇಶದಲ್ಲಿ ಕೊಡಹುವುದಕ್ಕಾಗಿ |



ಪ್ರೋಕ್ಷಾಮಿ = (ನೀರಿನಿಂದ) ಪ್ರೋಕ್ಷಿಸುತ್ತೇನೆ. ಅಗ್ನೀಷೋಮಾಭ್ಯಾಂ = ಅಗ್ನೀಷೋಮ ದೇವತೆಗೆ [ಜುಷ್ಟಂ = ಪ್ರಿಯವಾಗುವಂತೆ; ಪ್ರೋಕ್ಷಾಮಿ = (ನೀರಿನಿಂದ) ಪ್ರೋಕ್ಷಿಸುತ್ತೇನೆ]. ಪಾತ್ರೆಗಳೇ! ದೇವಯಜ್ಯಾಯೈ = ದೇವಯಾಗರೂಪವಾದ; ದೈವ್ಯಾಯ ಕರ್ಮಣೇ = ದೇವಸಂಬಂಧಿಕರ್ಮಕ್ಕಾಗಿ; ಶುಂಧಧ್ವಮ್ = ಶುದ್ಧರಾಗಿರಿ. ✢ ರಕ್ಷಃ = (ಯಾಗವಿಘ್ನಕಾರಿಯಾದ) ರಕ್ಷಸ್ಸು; ಅವಧೂತಮ್ = ನಾಶಗೊಳಿಸಲ್ಪಡಲಿ(ನಾಶಗೊಳಿಸಲ್ಪಟ್ಟಿತು).

ಅಪಾರವಾದುದು. ಇಂದ್ರನು ವೃತ್ರನನ್ನು ಕೊಲ್ಲುವಾಗ ನೀರಿನಿಂದ ವಜ್ರವನ್ನು ತೊಳೆದು (ನೀರಿನ ನೊರೆಯಿಂದ ವಜ್ರವನ್ನು ಲೇಪಿಸಿ) ಅವನನ್ನು ಕೊಂದನು. ನಿಮ್ಮಿಂದಲೇ ವಜ್ರಾಯುಧವು ಶುದ್ಧವಾಯಿತು. ನೀವೂ ವೃತ್ರನನ್ನು ವಧಿಸಲು ಶಕ್ತನಾದ ಇಂದ್ರನನ್ನೇ ಆರಿಸಿಕೊಂಡಿರಿ. ನಿಮ್ಮಿಂದ ಬೇರೆಯ ವಸ್ತುಗಳೂ ಶುದ್ಧವಾಗುತ್ತವೆ. ಈ ಮಂತ್ರೋಚ್ಚಾರಣೆಯಿಂದಲೇ ನೀವು ಶುದ್ಧರಾಗಿದ್ದೀರಿ.

ಅರಾತಯೋಽದಿತ್ಯಾಸ್ತ್ವಗಸಿ ಪ್ರತಿ ತ್ವಾ [ಪ್ರತಿ ತ್ವಾ (೧)

ಪೃಥಿವೀ] ಪೃಥಿವೀ ವೇತ್ತ್ವಧಿಷವಣಮಸಿ

ವಾನಸ್ಪತ್ಯಂ ಪ್ರತಿ

---

ಅರಾತಯಃ । ಅದಿತ್ಯಾಃ । ತ್ವಕ್ । ಅಸಿ । ಪ್ರತೀತಿ । ತ್ವಾ । ಪೃಥಿವೀ ।

ವೇತ್ತು । ಅಧಿಷವಣಮಿತ್ಯಧಿ-ಸವನಮ್ । ಅಸಿ । ವಾನಸ್ಪತ್ಯಮ್ । ಪ್ರತೀತಿ ।

---

| ಮಂತ್ರ | ವಿನಿಯೋಗ |
|---|---|
| ಅದಿತ್ಯಾಃ........ವೇತ್ತು । | ಕೃಷ್ಣಾಜಿನವನ್ನು ಪಶ್ಚಿಮಮುಖವಾಗಿ, ಮೇಲಕ್ಕೆ ಕೂದಲು ಬರುವಂತೆ ಹಾಸಲು. |



---

ಅರಾತಯಃ=ಯಾಗವೈರಿಗಳು; ಅಪಧೂತಾಃ=ನಾಶಗೊಳಿಸಲ್ಪಟ್ಟರು. (ನಾಶಗೊಳಿಸಲ್ಪಡಲಿ). ÷ (ಎಲೈ ಕೃಷ್ಣಾಜಿನವೇ! ನೀನು) ಅದಿತ್ಯಾಃ = ಆರಾಧನೀಯಳಾದ ಭೂದೇವಿಯ; ತ್ವಕ್ = ಚರ್ಮರೂಪವೇ; ಅಸಿ=ಆಗಿರುವೆ. ತ್ವಾ = ನಿನ್ನನ್ನು; ಪೃಥಿವೀ = ಭೂಮಿಯು; ಪ್ರತಿ ವೇತ್ತು = ಪ್ರತಿಗ್ರಹಿಸಿ (ತನ್ನ ಚರ್ಮವೆಂದು) ತಿಳಿಯಲಿ. ÷ (ಎಲೈ ಉಲೂಖಲವೇ! ನೀನು) ಅಧಿಷವಣಮ್ = ಬತ್ತವನ್ನು ಕುಟ್ಟುವುದಕ್ಕೆ ಆಧಾರವೂ; ವಾನಸ್ಪತ್ಯಮ್ =

---

ಇದೇ ನಿಮ್ಮ ಪ್ರೋಕ್ಷಣೆ. ಎಲೈ ಹವಿರ್ದ್ರವ್ಯಗಳೇ! ನಿಮ್ಮನ್ನು ಅಗ್ನಿದೇವತೆಗೆ ಪ್ರಿಯವಾಗುವಂತೆಯೂ, ಅಗ್ನೀಷೋಮದೇವತೆಗೆ ಪ್ರಿಯವಾಗುವಂತೆಯೂ ನೀರಿನಿಂದ ಪ್ರೋಕ್ಷಿಸುತ್ತೇನೆ.

ಎಲೈ ಪಾತ್ರೆಗಳೇ! ಈ ಜಲಪ್ರೋಕ್ಷಣೆಯಿಂದ ದೇವಯಾಗರೂಪವಾದ ಕರ್ಮದ ನಿರ್ವಹಣೆಗಾಗಿ ನೀವು ಶುದ್ಧರಾಗಿರಿ. (ಬತ್ತವನ್ನು ಕುಟ್ಟುವಾಗ ಒರಳಿನ ಕೆಳಗಡೆ ಕೃಷ್ಣಾಜಿನವನ್ನು ಹಾಸಬೇಕು. ಹಾಸುವ ಮೊದಲು ಕೃಷ್ಣಾಜಿನವನ್ನು ಮಂತ್ರಪೂರ್ವಕವಾಗಿ

# ತ್ವಾದಿತ್ಯಾಸ್ತ್ವಗ್ವೇತ್ತ್ವಗ್ನೇಸ್ತನೂರಸಿ ವಾಚೋ ವಿಸರ್ಜನಂ ದೇವವೀತಯೇ ತ್ವಾ

ತ್ವಾ । ಅದಿತ್ಯಾಃ । ತ್ವಕ್ । ವೇತ್ತು । ಅಗ್ನೇಃ । ತನೂಃ । ಅಸಿ । ವಾಚಃ। ವಿಸರ್ಜನಮಿತಿ ವಿ-ಸರ್ಜನಮ್ । ದೇವವೀತಯ ಇತಿ ದೇವ-ವೀತಯೇ । ತ್ವಾ ।

| ಮಂತ್ರ | ವಿನಿಯೋಗ |
|---|---|
| ಅಧಿಷವಣಮಸಿ......ವೇತ್ತು । | ಕೃಷ್ಣಾಜಿನವನ್ನು ಉಲೂಖಲ (ಒರಳು)ದ ಮೇಲೆ ಇಡಲು. |
| ಅಗ್ನೇಃ........ಗೃಹ್ಣಾಮಿ । | ಒರಳಿನಲ್ಲಿ ( ) ಪುರೋಡಾಶಕ್ಕೆ ಸಂಬಂಧಿಸಿದ ಬತ್ತವನ್ನು ಹಾಕಲು. |

ವನಸ್ಪತಿಯಿಂದ ಜನ್ಯವೂ; ಅಸಿ = ಆಗಿರುವೆ; ತ್ವಾ = ನಿನ್ನನ್ನು; ಅದಿತ್ಯಾಃ = ಭೂಮಿಯ; ತ್ವಕ್ = ಚರ್ಮದಂತಿರುವ (ಕೃಷ್ಣಾಜಿನವು) ಪ್ರತಿ ವೇತ್ತು = ಪ್ರತಿಗ್ರಹಿಸಿ (ತನ್ನದೆಂದು) ಭಾವಿಸಲಿ. ÷ +ಎಲೈ ವ್ರೀಹಿಯೇ ಮೊದಲಾದ್ದ ಪುರೋಡಾಶದ್ರವ್ಯದ ಸಮೂಹವೇ!) (ನೀನು) ಅಗ್ನೇಃ= ಉದರಾಗ್ನಿ ಮತ್ತು ಆಹವನೀಯಾಗ್ನಿಯ; ತನೂಃ = ಶರೀರವು; ಅಸಿ = ಆಗಿದ್ದೀಯೆ; ವಾಚಃ = ಮಾತಿನ; ವಿಸರ್ಜನಂ = ಪ್ರವೃತ್ತಿಗೆ ಕಾರಣವಾಗಿ (ಇರುವೆ.) (ಮಾತನ್ನು ಹುಟ್ಟುವಂತೆ ಮಾಡುವೆ.) ತ್ವಾ = ನಿನ್ನನ್ನು; ದೇವವೀತಯೇ = ದೇವತೆಗಳ ಭಕ್ಷಣಕ್ಕೆ ಯೋಗ್ಯವಾಗುವಂತೆ;

ಉತ್ಕರಪ್ರದೇಶದಲ್ಲಿ ಕೊಡಹಬೇಕು). ಇದರಿಂದ ಯಜ್ಞನಾಶಕರಾದ ರಾಕ್ಷಸರೂ, ಶತ್ರುಗಳೂ ನಾಶ ಹೊಂದಲಿ.

ಕೃಷ್ಣಾಜಿನವೇ ! ನೀನು ಭೂದೇವಿಯ ಚರ್ಮದಂತಿರುವೆ. ನಿನ್ನನ್ನು ಭೂಮಿಯು ತನ್ನದೆಂದು ಭಾವಿಸಿ, ತನ್ನ ಮೇಲಿರಲು ನಿನಗೆ ಅನುಮತಿ ಕೊಡಲಿ.

ಎಲೈ ಉಲೂಖಲವೇ ! ನೀನು ವನಸ್ಪತಿಯಿಂದ ಹುಟ್ಟಿರುವೆ. ಬತ್ತವನ್ನು ಕುಟ್ಟಲು ಸಾಧನವೂ ಆಗಿರುವೆ. ಭೂಮಿಯ ಚರ್ಮರೂಪದಂತಿರುವ ಕೃಷ್ಣಾಜಿನವು ನಿನ್ನನ್ನು ತನ್ನವನೆಂದು ಅಂಗೀಕರಿಸಲಿ. ನಿನ್ನನ್ನು ತನ್ನ ಮೇಲಿಟ್ಟುಕೊಳ್ಳಲು ಅನುಮತಿಸಲಿ.

## ಗೃಹ್ಣಾಮ್ಯದ್ರಿರಸಿ ವಾನಸ್ಪತ್ಯಃ ಸ ಇದಂ ದೇವೇಭ್ಯೋ ಹವ್ಯಗ್ಂ ಸುಶಮಿ ಶಮಿಷ್ವೇಷ ಮಾವದೋರ್ಜಮಾವದ

---

ಗೃಹ್ಣಾಮಿ । ಅದ್ರಿಃ । ಅಸಿ । ವಾನಸ್ಪತ್ಯಃ । ಸಃ । ಇದಮ್ । ದೇವೇಭ್ಯಃ । ಹವ್ಯಮ್ । ಸುಶಮೀತಿ ಸು-ಶಮಿ । ಶಮಿಷ್ವ । ಇಷಮ್ । ಆ । ಇತಿ । ವದ । ಊರ್ಜಮ್ । ಆ । ಇತಿ । ವದ ।

---

| ಮಂತ್ರ | ವಿನಿಯೋಗ |
|---|---|
| ಅದ್ರಿರಸಿ.....ಶಮಿಷ್ವ । | ಬತ್ತವನ್ನು ಕುಟ್ಟಲು ಒನಕೆಯನ್ನು ತೆಗೆದು ಕೊಳ್ಳಲು |
| ಇಷಮ್.....ಜೇಷ್ಮ । | ಕಲ್ಲಿನಿಂದ ಅಥವಾ ಶಮ್ಯೆಯಿಂದ ಅಗ್ನೀಧ್ರನು ದೃಷತ್ - ಉಪಲಾ (ಅರೆಯುವ ಕಲ್ಲು- ಗುಂಡು) ಗಳನ್ನು ಕುಟ್ಟಿ ಶಬ್ದ ಮಾಡಲು |



---

ಮಾಡಲು; ಗೃಹ್ಣಾಮಿ = (ಒರಳಿನಲ್ಲಿ) ಹಾಕುತ್ತೇನೆ. ✣ ಎಲೈ ಮುಸಲ (ಒನಕೆ)ವೇ! (ನೀನು) ವಾನಸ್ಪತ್ಯಃ= ವೃಕ್ಷದಿಂದ ಉಂಟಾದವನು; ಅದ್ರಿಃ = ಕಲ್ಲಿನಂತೆ ಗಟ್ಟಿಯಾದವನೂ; ಅಸಿ = ಆಗಿದ್ದೀಯೆ ಸಃ = ಅಂತಹ ನೀನು; ದೇವೇಭ್ಯಃ = ದೇವತೆಗಳಿಗಾಗಿರುವ; ಇದಂ ಹವ್ಯಮ್ = ಈ ಹವ್ಯವನ್ನು (ದೇವತೆಗಳಿಗೆ ಕೊಡುವ ಧಾನ್ಯವನ್ನು); ಸುಶಮಿ = ಸುಖವಾಗಿ ತಿನ್ನಲು ಸಾಧ್ಯವಾಗುವಂತೆ (ಹೊಟ್ಟನ್ನು ತೆಗೆದು); ಶಮಿಷ್ವ = ಸುಖಕರವನ್ನಾಗಿ ಮಾಡು. ✣ ✈ಎಲೈ ಪಾಷಾಣವೇ!) ಇಷಮ್= ಹವಿಃಸ್ವರೂಪವಾದ ಅನ್ನವನ್ನು; ಆ ವದ = (ಯಜಮಾನನು ತರುವನೆಂದು ದೇವತೆಗಳಿಗೆ) ಹೇಳು; ಊರ್ಜಮ್ = (ಹವ್ಯದ ರುಚಿಕರವಾದ) ರಸವನ್ನು; ಆ ವದ = (ಯಜಮಾನನು ನಿಮಗೆ ಅರ್ಪಿಸುವನೆಂದು ದೇವತೆಗಳಿಗೆ) ಹೇಳು.

---

ಎಲೈ ಬತ್ತವೇ ಮುಂತಾದ ಯಜ್ಞಿಯಧಾನ್ಯವೇ! ನೀನು ಜಾಠರಾಗ್ನಿಯನ್ನೂ ಆಹವನೀಯಾಗ್ನಿಯನ್ನೂ ವೃದ್ಧಿಗೊಳಿಸುವುದರಿಂದ ಅಗ್ನಿಯ ಶರೀರವೇ ಆಗಿರುವೆ. ಅನ್ನವನ್ನು ತಿಂದು ಶಕ್ತಿಯನ್ನು ಪಡೆದ ಮನುಷ್ಯರು ಮಾತಾಡುವಂತೆಯೂ ನೀನೇ ಮಾಡುವೆ. ದೇವತೆಗಳ ಭಕ್ಷಣಕ್ಕಾಗಿ ಪುರೋಡಾಶವನ್ನು ಸಂಪಾದಿಸಲು ಕುಟ್ಟುವುದಕ್ಕಾಗಿ ನಿನ್ನನ್ನು ಒರಳಿನಲ್ಲಿ ಹಾಕುತ್ತೇನೆ.

## ದ್ಯುಮದ್ವದತ ವಯಗ್ಂ ಸಂಘಾತಂ ಜೇಷ್ಮ ವರ್ಷವೃದ್ಧಮಸಿ ಪ್ರತಿ ತ್ವಾ ವರ್ಷವೃದ್ಧಂ ವೇತ್ತು

---

ದ್ಯುಮದಿತಿ ದ್ಯು-ಮತ್ । ವದತ । ವಯಮ್ । ಸಂಘಾತಮಿತಿ ಸಮ್ - ಘಾತಮ್ । ಜೇಷ್ಮ । ವರ್ಷವೃದ್ಧಮಿತಿ ವರ್ಷ-ವೃದ್ಧಮ್ । ಅಸಿ । ಪ್ರತೀತಿ। ತ್ವಾ । ವರ್ಷವೃದ್ಧಮಿತಿ ವರ್ಷ-ವೃದ್ಧಮ್ । ವೇತ್ತು ।

---

| ಮಂತ್ರ | ವಿನಿಯೋಗ |
|---|---|
| ವರ್ಷವೃದ್ಧಮಸಿ । | ಶೂರ್ಪ(ಮೊರ)ವನ್ನು ಒರಳಿನ ಉತ್ತರ ಭಾಗದಲ್ಲಿ ಇಡಲು. |
| ಪ್ರತಿ.......ವೇತ್ತು । | ಕುಟ್ಟಿದ ಭತ್ತವನ್ನು ಮೊರದಲ್ಲಿ ಹಾಕಲು |

---

✣ (ಎಲೈ ಯಜ್ಞಾಯುಧಗಳೇ!) (ನೀವು) ದ್ಯುಮತ್ = (ಇದು ರಸಭರಿತವಾಗಿ) ಪ್ರಕಾಶಮಾನವಾದ ಹವಿಸ್ಸು (ಎಂದು) ವದತ = (ದೇವತೆಗಳಿಗೆ) ತಿಳಿಸಿರಿ; ವಯಮ್ = ನಾವು; ಸಂಘಾತಮ್ = ಶತ್ರುಸಮೂಹವನ್ನು; ಜೇಷ್ಮ = ಗೆಲ್ಲೋಣ. ✣ (ಎಲೈ ಬಿದಿರಿನಿಂದ ಉಂಟಾದ ಮೊರವೇ!) ನೀನು; ವರ್ಷವೃದ್ಧಮ್ = ಮಳೆಯಿಂದ ವೃದ್ಧಿಹೊಂದಿದವನಾಗಿ (ಬಿದಿರಿನಿಂದ ಮಾಡಲ್ಪಟ್ಟದ್ದಾಗಿ) ಅಸಿ = ಇರುವೆ. ✣ (ಎಲೈ ವ್ರೀಹಿಸಮೂಹವೇ!) ವರ್ಷವೃದ್ಧಮ್ = ಮಳೆಯಿಂದ ಬೆಳೆದಿರುವ; ತ್ವಾ = ನಿನ್ನನ್ನು; (ಮಳೆಯಿಂದ ಬೆಳೆದಿರುವ ಮೊರವು) ಪ್ರತಿ ವೇತ್ತು= (ತನ್ನವನೆಂದು) ತಿಳಿಯಲಿ.

ಓ ಮುಸಲವೇ ! ನೀನು ವೃಕ್ಷದಿಂದ ಜನಿಸಿದವನು. ಕಲ್ಲಿನಂತೆ ಗಟ್ಟಿಯಾದವನು. ನೀನು ಈ ದೇವಾರ್ಥವಾದ ಹವ್ಯವನ್ನು ಕುಟ್ಟಿ, ಹೊಟ್ಟನ್ನು ತೆಗೆದು ದೇವತೆಗಳು ಸುಖವಾಗಿ ತಿನ್ನಲು ಸಾಧ್ಯವಾಗುವಂತೆ ಮಾಡು.

ಎಲೈ ಪಾಷಾಣವೇ ! ಯಜಮಾನನು ರಸಪೂರ್ಣವಾದ ಹವಿಸ್ಸಿನ ರೂಪದ ಅನ್ನವನ್ನು ನಿಮಗೆ ಅರ್ಪಿಸುವೆನೆಂದು ದೇವತೆಗಳಿಗೆ ಹೇಳು.

ಎಲೈ ಯಜ್ಞಾಯುಧಗಳೇ ! ಇದು (ಹವಿಸ್ಸು)ರಸಾಭಿವ್ಯಕ್ತಿಯುಳ್ಳದ್ದು ಎಂದು ದೇವತೆಗಳಿಗೆ ಹೇಳಿರಿ. ಈ ಪಾಷಾಣಶಬ್ದದಿಂದ ಶತ್ರುಗಳನ್ನು ಗೆಲ್ಲೋಣ.

**ಪರಾಪೂತಗ್ಂ ರಕ್ಷಃ ಪರಾಪೂತಾ ಅರಾತಯೋ**

**ರಕ್ಷಸಾಂ ಭಾಗೋऽಸಿ ವಾಯುರ್ವೋ ವಿ ವಿನಕ್ತು**

---

ಪರಾಪೂತಮಿತಿ ಪರಾ-ಪೂತಮ್ । ರಕ್ಷಃ । ಪರಾಪೂತಾ ಇತಿ ಪರಾ-ಪೂತಾಃ । ಅರಾತಯಃ । ರಕ್ಷಸಾಮ್ । ಭಾಗಃ । ಅಸಿ । ವಾಯುಃ । ವಃ । ವೀತಿ । ವಿನಕ್ತು ।

---

ಮಂತ್ರ — ವಿನಿಯೋಗ



ಪರಾಪೂತಗ್ಂ.........ಅರಾತಯಃ । — ಹೊಟ್ಟನ್ನು ಕೇರಿ ಹಾಕಲು.

ರಕ್ಷಸಾಮ್........ಅಸಿ । — ಮೃನ್ಮಯಕಪಾಲದಲ್ಲಿ ಹೊಟ್ಟನ್ನು ತುಂಬಿ ಕೃಷ್ಣಾಜಿನದ ಕೆಳಗೆ ಹಾಕಲು

ವಾಯುಃ.......ವಿವಿನಕ್ತು । — ಅಕ್ಕಿಯನ್ನೂ, ನುಚ್ಚನ್ನೂ ಬೇರ್ಪಡಿಸಲು

---

(ತನ್ನಲ್ಲಿ ನಿನ್ನನ್ನು ಹಾಕುವುದನ್ನು ಅನುಮತಿಸಲಿ.) ರಕ್ಷಃ = ಯಜ್ಞವಿರೋಧಿಯಾದ ರಕ್ಷಸ್ಸು; ಪರಾಪೂತಮ್ = [ಈ ಮಂತ್ರದಿಂದ ಕೇರುವುದರಿಂದ] ದೂರ ಮಾಡಲ್ಪಡಲಿ; ಅರಾತಯಃ=ಯಜ್ಞಶತ್ರುಗಳೂ; ಪರಾಪೂತಾಃ = ದೂರಮಾಡಲ್ಪಡಲಿ; ∴ ಎಲೈ ವ್ರೀಹಿತುಷವೇ! (ಬತ್ತದ ಹೊಟ್ಟು) (ನೀನು) ರಕ್ಷಸಾಮ್ = ರಾಕ್ಷಸರ; ಭಾಗಃ = ಭಾಗವಾಗಿ; ಅಸಿ = ಇದ್ದೀಯೆ. ∴ (ಎಲೈ ತಂಡುಲಗಳೇ!) ವಃ = ನಿಮ್ಮನ್ನು; ವಾಯುಃ = ಶೋಧಕನಾದ ವಾಯುವು; ವಿವಿನಕ್ತು = ನುಚ್ಚುಗಳಿಂದ ಬೇರ್ಪಡಿಸಲಿ.

---

ಎಲೈ ಮೊರವೇ! ಮಳೆಯಿಂದ ವೃದ್ಧಿ ಹೊಂದಿದ ಬಿದಿರಿನಿಂದ ಮಾಡಲ್ಪಟ್ಟುದುದರಿಂದ ನೀನೂ ಸಹ 'ವರ್ಷವೃದ್ಧ'ವೇ! ಆಗಿರುವೆ.

ಎಲೈ ವ್ರೀಹಿಸಮೂಹವೇ! ನೀನೂ ಮೊರವೂ ಇಬ್ಬರೂ ವರ್ಷವೃದ್ಧರೇ. ಆದುದರಿಂದ(ಸಾಧರ್ಮ್ಯದಿಂದ) ಮೊರವು ನಿನ್ನನ್ನು ತನ್ನವನೆಂದು ತಿಳಿಯಲಿ.

ಮಂತ್ರದಿಂದ ಹೊಟ್ಟನ್ನು ಕೇರಿ ದೂರ ಮಾಡುವುದರಿಂದ ಯಜ್ಞಕಂಟಕರಾದ ರಾಕ್ಷಸರೂ, ಶತ್ರುಗಳೂ ದೂರ ಮಾಡಲ್ಪಡಲಿ.

ದೇವೋ ವಃ ಸವಿತಾ ಹಿರಣ್ಯಪಾಣಿಃ ಪ್ರತಿಗೃಹ್ಣಾತು ॥೫-8॥

[ತ್ವಾ ಭಾಗ ಏಕಾದಶ ಚ॥]

---

ದೇವಃ । ವಃ । ಸವಿತಾ । ಹಿರಣ್ಯಪಾಣಿರಿತಿ ಹಿರಣ್ಯ - ಪಾಣಿಃ । ಪ್ರತೀತಿ । ಗೃಹ್ಣಾತು ॥ ೫ ॥

---

| ಮಂತ್ರ | ವಿನಿಯೋಗ |
|---|---|
| ದೇವಃ....ಪ್ರತಿಗೃಹ್ಣಾತು । | ಪಾತ್ರೆಯಲ್ಲಿ ಅಕ್ಕಿಯನ್ನು ಹಾಕಲು. |



---

✣ (ಎಲೈ ತಂಡುಲಗಳೇ!) ಹಿರಣ್ಯಪಾಣಿಃ= ಕೈಯಲ್ಲಿ ಉಂಗುರವಿರುವ; ಸವಿತಾ ದೇವಃ= ಸರ್ವಪ್ರೇರಕನಾದ ದೇವನು; ವಃ = ನಿಮ್ಮನ್ನು; ಪ್ರತಿ ಗೃಹ್ಣಾತು = ಸ್ವೀಕರಿಸಲಿ.[ಸ್ವೀಕರಿಸಿ ರಕ್ಷಿಸಲಿ].

---

ಎಲೈ ತುಷವೇ! (ಹೊಟ್ಟು) ನೀನು ರಾಕ್ಷಸರ ಭಾಗವಾಗಿದ್ದೀಯೇ. ನಿನ್ನಿಂದ ತೃಪ್ತಿ ಹೊಂದಿದ ರಾಕ್ಷಸರು ದೂರವಾಗಲಿ. [ಓಷಧಿಗಳಿಂದ ಮಾಡುವ ಯಾಗಗಳಲ್ಲಿ ರಾಕ್ಷಸರಿಗೆ ಹೊಟ್ಟನ್ನು ಭಾಗವನ್ನಾಗಿ ಕೊಟ್ಟು ಅವರನ್ನು ದೂರ ಮಾಡಿದರು ಎಂದು ಬ್ರಾಹ್ಮಣದಲ್ಲಿ ಇದೆ.]

ಎಲೈ ತಂಡುಲವೇ! ಸರ್ವಶೋಧಕನಾದ ವಾಯುವು ನಿಮ್ಮನ್ನು ನುಚ್ಚಿನಿಂದ ಬೇರ್ಪಡಿಸಲಿ.

ಕೈಯಲ್ಲಿ ಸುವರ್ಣಾಭರಣಗಳನ್ನು ಧರಿಸಿರುವ ಸವಿತೃದೇವನು ನಿಮ್ಮನ್ನು (ತಂಡುಲ) ಅತ್ತಿತ್ತ ಹೋಗದಂತೆ ತಡೆದು ಸ್ವೀಕರಿಸಲಿ.

## ವಿನಿಯೋಗ ಸಂಗ್ರಹ

ದೇವೋ ವ[1] ಉತ್ಪುನಾತ್ವಂಶ್ಯೈಸ್ತ್ರಿಭಿರಾಪೋ[2]ನುಮಂತ್ರಯೇತ್ ।
ಅಗ್ನಯೇಽಗ್ನಿ[4] ಹವಿಃ ಪ್ರೋಕ್ಷ್ಯ ಶುಂಧೋ[5]ಕ್ಷೇತ್ ಯಾಗಪಾತ್ರಕಮ್ ॥

ಅವ[6] ಚರ್ಮೋತ್ಕರೇ ಧುತ್ವಾ ಹ್ಯದಿತ್ಯಾ[7]ಶ್ಚರ್ಮಸಂಸ್ತುತಿಃ ।
ಅಧ್ಯು[8]ಲೂಖಲಮಾದಧ್ಯಾದಗ್ನೇ[9]ಸ್ತತ್ರ ಹವಿಃ ಕ್ಷಿಪೇತ್ ॥

[10]ಅದ್ರಿರ್ಮುಸಲಮಾದತ್ತೇ ಇಷಂ[11] ದೃಷದಿ ವಾದನಮ್ ।
ವರ್ಷ[12]ಶೂರ್ಪಮುಪೋಹ್ಯಾತ್ರ ಪ್ರತಿ ತ್ವಾ[13] ಹವಿರಾವಪೇತ್ ॥
ಪರಾ[14]ವ್ರೀಹೀನ್ ಪರಾಪೂಯ [15]ರಕ್ಷಸಾಮಿತಿ ಚರ್ಮಣಃ ।
ಅಧಸ್ತುಷಂ ಕಪಾಲೇನ ಕ್ಷಿಪೇದ್ವಾಯು[16]ರ್ವಿವಿಚ್ಯತೇ ।
ದೇವಃ[17] ಕ್ಷಿಪೇದ್ಧವಿಃ ಪಾತ್ರ್ಯಾಂ ಮಂತ್ರಾಃ ಸಪ್ತದಶೇರಿತಾಃ ॥

ಅನುವಾಕದಲ್ಲಿನ ಮಂತ್ರಗಳ ಸಂಖ್ಯೆ — ಆಪಸ್ತಂಬ – 17
ಬೌಧಾಯನ – 18

### ಅನುವಾಕದ ವಿಶೇಷ ವಿಷಯಗಳು

#### ಅ) ಭ.ಭಾ. ಭಾಷ್ಯ

೧) ದೇವೋ........ರಶ್ಮಿಭಿಃ ।

ಸವಿತಾ = ಸರ್ವಪ್ರೇರಕನಾದ ದೇವನು; ಉತ್ಪುನಾತು = ಶುದ್ಧಿಗೊಳಿಸಲಿ. [ಸಾಯಣರು ಅಧ್ವರ್ಯುರ್ಹೃದಯಸ್ಥನೆಂದು ತಿಳಿಸಿರುತ್ತಾರೆ.]

ಪವಿತ್ರೇಣ = ಜಗತ್ತನ್ನು ಪವಿತ್ರಗೊಳಿಸುವ ಸೂರ್ಯರೂಪವಾದ ಈ ಪವಿತ್ರದಿಂದ; (ಉತ್ಪುನಾತು) [ಸಾಯಣರು ಶೋಧಕನೆಂದು ತಿಳಿಸಿರುತ್ತಾರೆ.]

ಅಚ್ಛಿದ್ರೇಣ = ಅವಿಚ್ಛಿನ್ನವಾದ; ಸೂರ್ಯಸ್ಯ ರಶ್ಮಿಭಿಃ = ಸೂರ್ಯನ ರಶ್ಮಿಗಳಿಂದ; [ಸಾಯಣರು ರಶ್ಮಿಗಳಂತಿರುವ ದರ್ಭೆಗಳಿಂದ ಎಂದು ತಿಳಿಸಿರುತ್ತಾರೆ.]

೨) ಆಪಃ.......ವೃತ್ರತೂರ್ಯೇ ।

ಅಗ್ರೇಪುವಃ=ವಸ್ತುವನ್ನು ಶೋಧಿಸಲು ಕಾರಣವಾದ ಭಸ್ಮಾದಿಗಳಿಗಿಂತಲೂ ಮೊದಲೇ ವಸ್ತುಗಳನ್ನು ಶೋಧಿಸುವ; ಅಗ್ರೇಗುವಃ = ಮೊದಲೇ (ಸ್ನಾನಕಾಲದಲ್ಲಿಯೇ) ಯಾಗಸಾಧನತ್ವವನ್ನು ಹೊಂದಿದ;

(ನೀವು) ಇಮಂ ಯಜ್ಞಂ ಅಗ್ರೇ ನಯತ=(ಈ ಯಜ್ಞವನ್ನು) ಯಜ್ಞಗಳಲ್ಲಿ

ಶ್ರೇಷ್ಠವನ್ನಾಗಿ ಮಾಡಿರಿ. ಯಜ್ಞಪತಿಮಗ್ರೇ ನಯತ=ಯಜಮಾನನನ್ನು ಯಜಮಾನರಲ್ಲಿ ಅಗ್ರಗಣ್ಯನನ್ನಾಗಿ ಮಾಡಿರಿ.

**೩) ಪ್ರೋಕ್ಷಿತಾಃ ಸ್ಥ ।**

'ಶುದ್ಧಾಃ ಸ್ಥ' ಎಂಬ ಮಂತ್ರದ ಉಚ್ಚಾರಣೆಯಿಂದ ನೀವು ಪ್ರೋಕ್ಷಿತರಾಗಿ ಶುದ್ಧರಾಗಿದ್ದೀರಿ.(ಸಾಯಣರು 'ಪ್ರೋಕ್ಷಿತಾಃ ಸ್ಥ' ಎಂಬ ಮಂತ್ರದಿಂದ ಎಂದು ತಿಳಿಸಿರುತ್ತಾರೆ.)

**೪) ಅವಧೂತಂ.........ಅರಾತಯಃ ।**

'ಅವಧೂತಂ' ಎಂಬ ಯಜುರ್ಮಂತ್ರವು ಆದಿಯಲ್ಲಿರುವ ಏಕಪದಾ ಗಾಯತ್ರೀ ಛಂದಸ್ಸು.

**೫) ಅದಿತ್ಯಾಃ......ವೇತ್ತು ।**

ಅದಿತ್ಯಾಃ ಸ್ವಕ್ ಅಸಿ = ಅಖಂಡಿತಳಾದ ಭೂದೇವಿಗೆ ಚರ್ಮದಂತೆ ನೀನು ಅತಿಪ್ರಿಯನಾಗಿರುವೆ.

ಪ್ರತಿ.......ವೇತ್ತು = ಆ ಭೂಮಿಯು ನಿನ್ನನ್ನು (ಕೃಷ್ಣಾಜಿನವನ್ನು) ತನ್ನ ಮೇಲಿಡಲು ಅನುಮತಿಸಲಿ ಮತ್ತು ತಿರಸ್ಕರಿಸದಿರಲಿ.

**೬) ಅಧಿಷವಣಮಸಿ..................ವೇತ್ತು ।**

ಅಧಿಷೂಯತೇ = ಅವಹನ್ಯತೇ ಅಸ್ಮಿನ್ ಇತಿ ಅಧಿಷವಣಮ್ । (ಒರಳು)

**೭) ಅದ್ರಿರಸಿ........ಶಮಿಷ್ವ ।**

ಅದ್ರಿಃ = ಅತ್ತಾ = ಆಹರ್ತಾ ತುಷಾಣಾಮಿತಿ ಅದ್ರಿಃ । ಹೊಟ್ಟನ್ನು ಉಂಟು ಮಾಡುವುದು(ಒನಕೆ).

**೮) ದೇವಃ.......ಹಿರಣ್ಯಪಾಣಿಃ ಪ್ರತಿಗೃಹ್ಣಾತು ।**

ಹಿರಣ್ಯಪಾಣಿಃ = ಹಿರಣ್ಯಾಭರಣಪಾಣಿಃ ।

ಬಂಗಾರದ ಆಭರಣವನ್ನು ಕೈಯಲ್ಲಿ ಧರಿಸಿದವನು. (ಸಾಯಣರು ಉಂಗುರವನ್ನು ಧರಿಸಿದವನಂತೆ ತಿಳಿಸಿರುತ್ತಾರೆ.)

## ಆ) ಮೀಮಾಂಸಾ

ದರ್ಶ-ಪೂರ್ಣಮಾಸಪ್ರಕರಣದಲ್ಲಿ 'ಹವಿಷ್ಕೃದೇಹೀತಿ ತ್ರಿರವಘ್ನನ್ನಾಹ್ವಯತಿ' (ಬೌ. ಶ್ರೌ. ಸೂ.1-6. ಆಪ. ಶ್ರೌ. ಸೂ. 1-19-7) ಎಂಬ ವಾಕ್ಯವಿದೆ. ಅಧ್ವರ್ಯುವು ಪುರೋಡಾಶಕ್ಕಾಗಿ ಭತ್ತವನ್ನು ಮೂರು ಬಾರಿ ಕುಟ್ಟುತ್ತಾ 'ಹವಿಷ್ಕೃದೇಹಿ' ಎಂಬುದಾಗಿ ಭತ್ತ ಕುಟ್ಟುವವರನ್ನು(ಸ್ತ್ರೀ) ಕರೆಯುತ್ತಾನೆ.

### ೧) 'ಹವಿಷ್ಕೃದೇಹಿ' ಎಂಬ ಮಂತ್ರವು ಆಹ್ವಾನಾಂಗವೇ? ಅವಘಾತಾಂಗವೇ?

ಈ ಮಂತ್ರದ ವಿನಿಯೋಗವನ್ನು ತಿಳಿಸುವ ಬ್ರಾಹ್ಮಣವಾಕ್ಯವು ಹೀಗಿದೆ.

'ಹವಿಷ್ಕೃದೇಹಿತ್ಯಾಹ । ಯ ಏವ ದೇವಾನಾಗ್ಂ ಹವಿಷ್ಕೃತಃ। ತಾನ್ ಹ್ವಯತಿ' ।
ಈ ವಾಕ್ಯದಿಂದ ಮಂತ್ರವು ಅವಘಾತದಲ್ಲಿ ವಿನಿಯೋಗಿಸಲ್ಪಟ್ಟಿದೆಯೆಂದು ತಿಳಿಯುತ್ತದೆ. 'ಏಹಿ' (ಬಾ) ಎಂಬ ಅರ್ಥವನ್ನು ಕೊಡುವ ಪದವಿರುವುದರಿಂದ ಈ ಮಂತ್ರಕ್ಕೆ ಹವಿಷ್ಕರ್ತನ ಆಹ್ವಾನದಲ್ಲಿಯೇ ವಿನಿಯೋಗವನ್ನು ಹೇಳುವುದು ಉಚಿತವಲ್ಲವೇ? ಎಂಬ ಸಂಶಯವು ಬರುತ್ತದೆ. ಆದರೆ 'ಏಹಿ' ಎಂಬ ಪದಕ್ಕೆ 'ಅವಘಾತ ಮಾಡು' (ಕುಟ್ಟು) ಎಂಬ ಅರ್ಥವನ್ನೇ ಹೇಳಬೇಕು. ಶ್ರುತಿಯಲ್ಲಿರುವ ಶಬ್ದಕ್ಕೆ ಈ ರೀತಿ ಅರ್ಥಾಂತರವನ್ನು ಕಲ್ಪಿಸಬಹುದೇ? ಎಂಬ ಸಂಶಯ ಬಂದರೆ 'ಐಂದ್ರ್ಯಾ ಗಾರ್ಹಪತ್ಯಮುಪತಿಷ್ಠತೇ' ಎಂಬಲ್ಲಿ 'ಐಂದ್ರ್ಯಾ' ಎಂಬ ಪದವು ಗೌಣವಾಗಿ (ಲಾಕ್ಷಣಿಕವಾಗಿ) ಅಗ್ನಿ (ಗಾರ್ಹಪತ್ಯ) ಎಂಬ ಅರ್ಥವನ್ನು ಕೊಡುತ್ತದೆ ಎಂದು ಸಿದ್ಧಾಂತ ಮಾಡಿರುವಂತೆ ಇಲ್ಲಿಯೂ 'ಏಹಿ' ಎಂಬ ಪದಕ್ಕೆ 'ಅವಘಾತ ಮಾಡು' ಎಂಬ ಅರ್ಥವನ್ನು ಹೇಳಬಹುದು. 'ಹವಿಷ್ಕೃದೇಹಿ' ಎಂಬ ಮಂತ್ರಕ್ಕೂ ಆಹ್ವಾನಪರವಾಗಿ ಅರ್ಥ ಮಾಡಿ ಬ್ರಾಹ್ಮಣವಾಕ್ಯವೂ ಆಹ್ವಾನಪರವಾಗಿಯೇ ಎಂದಾದರೆ ಸೂತ್ರದಲ್ಲಿ 'ಹವಿಷ್ಕೃದೇಹೀತಿ ತ್ರಿರಾಹ್ವಯತಿ' ಎಂದೇ ಹೇಳಬಹುದಾಗಿತ್ತು. 'ಅವಘ್ನನ್' ಎಂದು ಹೇಳಿದುದು ವ್ಯರ್ಥವಾಗುತ್ತದೆ. ಈ ಬ್ರಾಹ್ಮಣವಾಕ್ಯವು ಅವಹನನಕ್ಕೆ ಮಂತ್ರವನ್ನು ವಿಧಿಸುತ್ತದೆಯಲ್ಲದೆ ಮೂರು ಬಾರಿ ಅವಹನನ ಮಾಡಬೇಕೆಂಬ ತ್ರಿತ್ವವನ್ನೂ ವಿಧಿಸುತ್ತದೆಯೆಂದಾದರೆ ವಾಕ್ಯಭೇದವು ಒದಗುತ್ತದೆಯೆಂಬ ಸಂಶಯವು ಬರುತ್ತದೆ. ಆದರೆ ಮೂರು ಬಾರಿ ಮಾಡಬೇಕೆಂಬ (ತ್ರಿತ್ವವು) ಅಂಶವು - ಶಾಖಾಂತರದಲ್ಲಿ ಈ ಮಂತ್ರವು ಮೂರು ಬಾರಿ ಉಚ್ಚರಿಸಲ್ಪಟ್ಟಿದುದರಿಂದ - ತಾನಾಗಿಯೇ ಸಿದ್ಧವಾಗುತ್ತದೆ. ಇಲ್ಲಿ 'ತ್ರಿಃ' ಎಂಬುದು ಅನುವಾದ ಮಾತ್ರ. ವಿಧಿಯಲ್ಲ. ಆದರೂ 'ಹ್ವಯತಿ' ಎಂಬ ಕ್ರಿಯಾಪದಕ್ಕೆ ಆಹ್ವಾನ ಮಾಡುತ್ತಾನೆ ಎಂಬ ಪ್ರಸಿದ್ಧವಾದ ಅರ್ಥವನ್ನು ಬಿಡುವುದು ಹೇಗೆ? ಎಂಬ ಸಂಶಯವು ಬರುತ್ತದೆ. ಆ ಕ್ರಿಯಾಪದಕ್ಕೂ ಸಹ 'ಅವಹಂತಿ' (ಕುಟ್ಟುತ್ತಾನೆ) ಎಂದೇ ಗೌಣವಾಗಿ ಅರ್ಥವನ್ನು ಮಾಡಬೇಕು. ಆದುದರಿಂದ 'ಹವಿಷ್ಕೃದೇಹಿ' ಎಂಬ ಮಂತ್ರವು ಅವಘಾತಾಂಗವೇ ಹೊರತು ಆಹ್ವಾನಾಂಗವಲ್ಲ. ಇದು ಇಲ್ಲಿನ ಪೂರ್ವಪಕ್ಷ.

ಇಲ್ಲಿಯ ಸಿದ್ಧಾಂತವು ಹೀಗಿದೆ; ಶಾಖಾಂತರದಲ್ಲಿ ಈ ಮಂತ್ರವು ಮೂರು ಬಾರಿ ಹೇಳಲ್ಪಟ್ಟಿದ್ದರೂ ತ್ರಿತ್ವವು ತಾನಾಗಿಯೇ ಸಿದ್ಧವಾಗುವುದಿಲ್ಲ. ಏಕೆಂದರೆ ಮತ್ತೊಂದು ಶಾಖೆಯಲ್ಲಿ ಎರಡು ಬಾರಿ ಮತ್ತೊಂದು ಶಾಖೆಯಲ್ಲಿ ಒಂದೇ ಬಾರಿ ಹೇಳಲ್ಪಟ್ಟಿದೆ. ಆದುದರಿಂದ ನಿತ್ಯವಾದ ತ್ರಿತ್ವವನ್ನು ಈ ವಾಕ್ಯವು ವಿಧಿಸುತ್ತಾ ಇದೆ. 'ಅವಘ್ನನ್' ಎಂಬುದು ವ್ಯರ್ಥವಲ್ಲ. ಆ ಪದಕ್ಕೆ 'ಅವಘಾತಕಾಲದಲ್ಲಿ' ಎಂದರ್ಥ. 'ಏಹಿ' ಎಂಬುದಾಗಿ ಮಂತ್ರದಲ್ಲಿಯೇ ಇರುವುದರಿಂದ ಇದು ಆಹ್ವಾನವಿಧಿಯಾಗುತ್ತದೆ. ಆಹ್ವಾನದ ವಿಧಿಯೂ ಸಿದ್ಧವಾಗುವುದರಿಂದ ಈ ಬ್ರಾಹ್ಮಣವಾಕ್ಯವು ತ್ರಿತ್ವವನ್ನು ಮಾತ್ರ ವಿಧಿಸುತ್ತದೆ. 'ಐಂದ್ರೀನ್ಯಾಯ'ವು ಇಲ್ಲಿ ಅನ್ವಿತವಾಗುವುದಿಲ್ಲ. 'ಐಂದ್ರ್ಯಾ' ಎಂಬ ತೃತೀಯಾಶ್ರುತಿಯಿರುವುದರಿಂದ ಶ್ರುತಿಯು ಪ್ರಬಲವಾದುದರಿಂದ ಆ ರೀತಿ ಅರ್ಥ ಮಾಡಬೇಕು. ಇಲ್ಲಿ ಆ ರೀತಿ ಶ್ರುತಿಯು ಇಲ್ಲ. ಹೀಗಾಗಿ ಲಿಂಗಪ್ರಾಪ್ತವಾದ ಆಹ್ವಾನ ಮಂತ್ರದಲ್ಲಿ ತ್ರಿತ್ವವು ವಿಹಿತವಾಗುತ್ತದೆ. ಆದುದರಿಂದ ಈ ಮಂತ್ರವು ಆಹ್ವಾನಾಂಗವೇ ಹೊರತು ಅವಘಾತಾಂಗವಲ್ಲ.

೨) ಸವನೀಯಪುರೋಡಾಶಯಾಗದಲ್ಲಿ ಹವಿಷ್ಕೃದಾಹ್ವಾನವುಂಟೇ?

ಆಗ್ನೇಯಪುರೋಡಾಶಯಾಗವು ಸವನೀಯಪುರೋಡಾಶಯಾಗದ ಪ್ರಕೃತಿ. 'ಪ್ರಕೃತಿವತ್ ವಿಕೃತಿಃ ಕರ್ತವ್ಯಾ' ಎಂಬ ವಚನದಂತೆ ಆಗ್ನೇಯಪುರೋಡಾಶಯಾಗದಲ್ಲಿ (ದರ್ಶ-ಪೂರ್ಣಮಾಸದಲ್ಲಿ) ಹವಿಷ್ಕೃತನ ಆಹ್ವಾನವಿರುವುದರಿಂದ, ಇದು ಪ್ರಕೃತಿ ಯಾಗವಾದುದರಿಂದ, ವಿಕೃತಿಯಾಗವಾದ ಸವನೀಯಪುರೋಡಾಶಯಾಗದಲ್ಲಿಯೂ ಹವಿಷ್ಕರ್ತನ ಆಹ್ವಾನವು ಅತಿದೇಶದಿಂದ ಪ್ರಾಪ್ತವಾಗುತ್ತದೆ. ಇದು ಪೂರ್ವಪಕ್ಷ.

ಇಲ್ಲಿಯ ಸಿದ್ಧಾಂತವು ಹೀಗಿದೆ : ಪಶುಯಾಗಾಂಗವಾದ ಹವಿಷ್ಕರ್ತನ ಆಹ್ವಾನದಿಂದಲೇ ಅದೇ ಕಾಲದಲ್ಲಿ ಮಾಡಬೇಕಾದ ಪುರೋಡಾಶಕ್ಕೂ ಸಹ ವಿಷ್ಕೃದಾಹ್ವಾನವು ಪ್ರಸಂಗಸಿದ್ಧವಾಗುತ್ತದೆ.

ಪ್ರಸಂಗಸಿದ್ಧಿಯೆಂದರೆ ಮತ್ತೊಂದಕ್ಕೆ ಅಂಗವಾಗಿರುವುದರಿಂದಲೇ ಪ್ರಯೋಜನದ ಸಿದ್ಧಿ. ಆದುದರಿಂದ ಸವನೀಯಪುರೋಡಾಶಯಾಗದಲ್ಲಿ ಹವಿಷ್ಕೃದಾಹ್ವಾನವನ್ನು ಬೇರೆ ಯಾಗಿ ಮಾಡಬೇಕಾಗಿಲ್ಲ. ಹಾಗೆ ನೋಡಿದರೆ ಪಶುಯಾಗದಲ್ಲಿ ಅವಘಾತವೇ ಇಲ್ಲವಾದುದರಿಂದ ಹವಿಷ್ಕೃದಾಹ್ವಾನವಿಲ್ಲ. ಆದುದರಿಂದ ಪ್ರಸಂಗಸಿದ್ಧಿಯೂ ಇಲ್ಲ. ಈ ರೀತಿಯ ವಿಚಾರಗಳನ್ನು 'ಕೃತ್ವಾ ಚಿಂತಾ' (ಎಂದರೆ—ಹೀಗಿದ್ದರೆ ಹೇಗೆ? ಎನ್ನುವ ರೀತಿ) ವಿಚಾರ ಎನ್ನುತ್ತಾರೆ.

**ತಂತ್ರ :–** ಅನೇಕೋದ್ದೇಶೇನ ಸಕೃದನುಷ್ಠಾನಂ ತಂತ್ರಮ್. ಅಂದರೆ ಅನೇಕ ಪ್ರಧಾನಗಳಿಗಾಗಿ ಒಂದೇ ಬಾರಿ ಅನುಷ್ಠಾನ ಮಾಡುವುದು. (ಪ್ರಯಾಜಾದಿಗಳಂತೆ)

**ಪ್ರಸಂಗ:–** ಅನ್ಯಾರ್ಥಂ ಕೃತಸ್ಯ ಅನ್ಯೇನೋಪಜೀವನಂ ಪ್ರಸಂಗಃ. ಪಶುಯಾಗದಲ್ಲಿ ಅವಘಾತವಿದ್ದಿದ್ದರೆ ಆಗ ಪ್ರಸಂಗವಿರುತ್ತಿತ್ತು.

## ೩. ತೃತೀಯಸವನದಲ್ಲಿ ಹವಿಷ್ಕರ್ತನ ಆಹ್ವಾನವುಂಟೇ?

ಸೋಮಯಾಗದ ತೃತೀಯಸವನದಲ್ಲಿ ಸೌಮ್ಯಚರ್ವಾದಿಯಾಗಗಳ ಅನುಷ್ಠಾನ ವಿದೆ. ಅಲ್ಲಿ ಹವಿಸ್ಸನ್ನು ಮಾಡುವ ಪತ್ನಿಗೆ ಆಹ್ವಾನವುಂಟೇ? ಪಶುಪಾಕವಾದ ಮೇಲೆ ಮೊದಲಿನ ಆಹ್ವಾನವು ಮುಗಿದುದರಿಂದ ಪುನಃ ಆಹ್ವಾನವನ್ನು ಮಾಡಬೇಕು. ಇದು ಇಲ್ಲಿನ ಪೂರ್ವಪಕ್ಷ.



ಇಲ್ಲಿಯ ಸಿದ್ಧಾಂತವು ಹೀಗಿದೆ : ದರ್ಶ-ಪೂರ್ಣಮಾಸೇಷ್ಟಿಯಲ್ಲಿ ಪತ್ನೀಸಂಯಾಜ ಹೋಮವಾದ ಮೇಲೆಯೇ ಪತ್ನಿಯ ಉತ್ಥಾನವಿರುವುದರಿಂದ ಪಶುಯಾಗದಲ್ಲಿಯೂ ಪತ್ನೀಸಂಯಾಜದ ನಂತರವೇ ಆಹ್ವಾನದ ನಿವೃತ್ತಿಯಾಗುವುದರಿಂದ ಸೌಮ್ಯಚರ್ವಾದಿ ಯಾಗಗಳಲ್ಲಿ ಪುನರಾಹ್ವಾನವಿಲ್ಲ. ಪ್ರಸಂಗಸಿದ್ಧಿಯಿರುವುದರಿಂದ ಪುನಃ ಆಹ್ವಾನವು ಅವಶ್ಯಕವಿಲ್ಲ.

## ೪. ಅವಘಾತವು ಎಷ್ಟು ಬಾರಿ?

'ವ್ರೀಹೀನವಹಂತಿ' (ಬತ್ತವನ್ನು ಕುಟ್ಟುತ್ತಾನೆ) 'ತಂಡುಲಾನ್ ಪಿನಷ್ಟಿ' (ಅಕ್ಕಿಯನ್ನು ಹಿಟ್ಟು ಮಾಡುತ್ತಾನೆ) ಮೊದಲಾದ ವಿಧಿಗಳಿವೆ. ಈ ಅವಹನನ-ಪೇಷಣಗಳನ್ನು ಎಷ್ಟು ಬಾರಿ ಅನುಷ್ಠಿಸಬೇಕು? ಅವಹನನವನ್ನೂ, ಪೇಷಣವನ್ನೂ ಒಮ್ಮೆ ಅನುಷ್ಠಿಸುವುದ ರಿಂದಲೇ ಶಾಸ್ತ್ರಾರ್ಥಾನುಷ್ಠಾನವಾಗುತ್ತದೆ. ಮತ್ತೆ ಮತ್ತೆ ಮಾಡಬೇಕಾಗಿಲ್ಲ. ಇದು ಇಲ್ಲಿನ ಪೂರ್ವಪಕ್ಷ.

ಇಲ್ಲಿಯ ಸಿದ್ಧಾಂತವು ಹೀಗಿದೆ : ಕುಟ್ಟುವುದು ಹೊಟ್ಟನ್ನು ತೆಗೆಯುವುದಕ್ಕಾಗಿ, ಅರೆಯುವುದೂ ಹಿಟ್ಟನ್ನು ಮಾಡುವುದಕ್ಕಾಗಿ. ಇವು ದೃಷ್ಟಾರ್ಥಕರ್ಮಗಳು. ಕರ್ಮಫಲವು ಕಾಣುವುದರಿಂದ ಇವನ್ನು 'ದೃಷ್ಟಾರ್ಥಕರ್ಮ'ಗಳೆನ್ನುತ್ತಾರೆ. ಆದುದರಿಂದ ಶ್ರುತಿಯು ಆವೃತ್ತಿಯನ್ನು ಹೇಳದಿದ್ದರೂ ಹೊಟ್ಟು ಹೋಗುವವರೆಗೂ ಕುಟ್ಟಬೇಕು. ಹಿಟ್ಟಾ ಗುವವರೆಗೂ ಅರೆಯಬೇಕು. ಉಳಿದ ದೃಷ್ಟಾರ್ಥಕರ್ಮಗಳಲ್ಲಿಯೂ ಫಲಪ್ರಾಪ್ತಿ ಯಾಗುವವರೆಗೂ ಕರ್ಮದ ಅಭ್ಯಾಸವುಂಟು.

**೫. ಸರ್ವೌಷಧದ ಅವಹನನ ಎಷ್ಟು ಬಾರಿ?**

ಅಗ್ನಿಚಯನದಲ್ಲಿ 'ಔದುಂಬರಮುಲೂಖಲಂ ಸರ್ವೌಷಧಸ್ಯ ಪೂರಯಿತ್ವಾ ಅವಹಂತಿ । ಅಥೈನದಾದಧಾತಿ ।' ಅತ್ತಿಮರದ ಒರಳಿನಲ್ಲಿ ಓಷಧಿಗಳನ್ನು ಕುಟ್ಟಿ ಆಧಾನ ಮಾಡಬೇಕು ಎಂದರ್ಥ. ಇಲ್ಲಿ ಮಾಡುವ ಅವಘಾತವು ಅದೃಷ್ಟಾರ್ಥವಾದುದರಿಂದ ಆವೃತ್ತಿ ಇಲ್ಲ. ಒಮ್ಮೆ ಮಾಡುವ ಅವಘಾತದಿಂದಲೇ ಅದೃಷ್ಟಸಿದ್ಧಿಯಾಗುತ್ತದೆ.

**೬. 'ಅವ ರಕ್ಷೋ......' ಎಂಬಲ್ಲಿ ಎಷ್ಟು ಬಾರಿ ಮಂತ್ರೋಚ್ಚಾರಣೆ?**

'ಅವ ರಕ್ಷೋ ದಿವಃ ಸಪತ್ನಂ ವಧ್ಯಾಸಮಿತ್ಯವಹಂತಿ' (ಆಪ. ಶ್ರೌ. ಸೂ. 1. 19. 10) ಎಂಬುದಾಗಿ ಅವಘಾತದಲ್ಲಿ ಮಂತ್ರವಿಧಿಯಿದೆ. ಅವಘಾತವೆಂದರೆ ಪ್ರಹಾರ (ಕುಟ್ಟುವಿಕೆ). ಅನೇಕ ಪ್ರಹಾರಗಳಿಂದ ವ್ರೀಹಿಯು ತಂಡುಲವಾಗುವುದರಿಂದ ಪ್ರಹಾರಕ್ಕನುಗುಣವಾಗಿ ಮಂತ್ರವನ್ನು ಆವೃತ್ತಿ ಮಾಡಬೇಕು. ಇದು ಇಲ್ಲಿನ ಪೂರ್ವಪಕ್ಷ.

ಸಿದ್ಧಾಂತವು ಹೀಗಿದೆ : ಅಕ್ಕಿಯನ್ನು ಪಡೆಯುವವರೆಗೂ ಅನೇಕ ಪ್ರಹಾರಗಳನ್ನೊಳಗೊಂಡ ಅವಘಾತಕ್ರಿಯೆಯು ಒಂದೇ ಆದುದರಿಂದ ಒಂದೊಂದು ಸಲ ಒನಕೆಯಿಂದ ಕುಟ್ಟುವಾಗಲೂ ಮಂತ್ರವನ್ನು ಹೇಳಬೇಕಾಗಿಲ್ಲ. ಅವಘಾತದ ಪ್ರಾರಂಭದಲ್ಲಿ ಒಮ್ಮೆ ಹೇಳಿದರೆ ಸಾಕು.

**೭. ನಾನಾಬೀಜೇಷ್ಟಿಯಲ್ಲಿ ಆವೃತ್ತಿ ಇದೆಯೇ?**

ರಾಜಸೂಯಯಾಗದಲ್ಲಿ ನಾನಾಬೀಜೇಷ್ಟಿಯನ್ನು ಅನುಷ್ಠಿಸಬೇಕು. ಬಗೆ ಬಗೆಯ ಧಾನ್ಯಗಳಿಂದ ಚರು-ಪುರೋಡಾಶವನ್ನು ಮಾಡಬೇಕು. 'ಅಗ್ನಯೇ ಗೃಹಪತಯೇ ಪುರೋಡಾಶಮಷ್ಟಾಕಪಾಲಂ ನಿರ್ವಪತಿ ಕೃಷ್ಣಾನಾಂ ವ್ರೀಹೀಣಾಮ್। ಸೋಮಾಯ ವನಸ್ಪತಯೇ ಶ್ಯಾಮಾಕಂ ಚರುಮ್' ಇತ್ಯಾದಿಯಾಗಿ ಬೇರೆ ಬೇರೆ ಧಾನ್ಯಗಳ ಚರು-ಪುರೋಡಾಶಗಳು ಹವಿಸ್ಸಾಗಿವೆ. ಇಲ್ಲಿ ಎಲ್ಲ ಧಾನ್ಯಗಳನ್ನು ಅವಹನನ ಮಾಡಬೇಕೆಂಬ ಇಚ್ಛೆಯು ಒಂದೇ ಆದುದರಿಂದ ಒಮ್ಮೆ ಅವಹನನವು ಸಾಕು. ಇದು ಇಲ್ಲಿನ ಪೂರ್ವಪಕ್ಷ.

ಇಲ್ಲಿಯ ಸಿದ್ಧಾಂತವು ಹೀಗಿದೆ : 'ಪ್ರಕೃತಿವತ್ ವಿಕೃತಿಃ ಕರ್ತವ್ಯಾ' ಎಂಬ ವಚನದಂತೆ ಪ್ರಕೃತಿಯಂತೆಯೇ ಇಲ್ಲಿಯೂ ತಂಡುಲವು ದೊರೆಯುವವರೆಗೂ ಅವಹನನವನ್ನು ಮಾಡಲೇಬೇಕಷ್ಟೆ. ಆಗಲೇ ಆ ಅವಘಾತಮಂತ್ರವು ಅತಿದೇಶದಿಂದ ಪ್ರಾಪ್ತವಾಗಿ ತಾನು ಕೃತಾರ್ಥವಾಗುತ್ತದೆ. ಮತ್ತೊಂದು ಧಾನ್ಯದಿಂದ ಅಕ್ಕಿಯನ್ನು ಪಡೆಯುವುದಕ್ಕಾಗಿ

ಮಾಡುವ ಮತ್ತೊಂದು ಅವಘಾತಕ್ಕೆ ಪುನಃ ಅವಘಾತಮಂತ್ರವನ್ನು ಹೇಳಬೇಕು. ಆದುದರಿಂದ ಈ ನಾನಾಬೀಜೇಷ್ಟಿಯಲ್ಲಿ ಮಂತ್ರದ ಆವೃತ್ತಿ ಇದೆ.

### ೮. ಕೃಷ್ಣಲಗಳಿಗೆ ಅವಘಾತವಿದೆಯೇ?

ಕಾಮ್ಯೇಷ್ಟಿಪ್ರಕರಣದಲ್ಲಿ 'ಪ್ರಾಜಾಪತ್ಯಂ ಘೃತೇ ಚರುಂ ನಿರ್ವಪೇತ್ ಶತಕೃಷ್ಣಲಮಾಯುಷ್ಕಾಮಃ' (ಮೈ. ಸಂ. 2.2.2) ಆಯುರ್ವೃದ್ಧಿಯನ್ನು ಬಯಸುವವನು ಪ್ರಾಜಾಪತ್ಯೇಷ್ಟಿಯನ್ನು ಮಾಡಬೇಕು. ಘೃತದಲ್ಲಿ ನೂರು ಕೃಷ್ಣಲಗಳನ್ನು (ಬಂಗಾರದ ವ್ರೀಹಿ) ಪಚನ ಮಾಡಿ ಚರುವನ್ನು ಹವಿಸ್ಸನ್ನಾಗಿ ಅರ್ಪಿಸಬೇಕೆಂದರ್ಥ. ಇಲ್ಲಿ ಕೃಷ್ಣಲಗಳಿಗೆ ಅವಘಾತವಿದೆಯೇ? ಪ್ರಕೃತಿಯಲ್ಲಿ ಹೇಳಿದ ಅವಘಾತವು ಅತಿದೇಶದಿಂದ ಇಲ್ಲಿಯೂ ಪ್ರಾಪ್ತವಾಗುತ್ತದೆ. ಹೊಟ್ಟನ್ನು ತೆಗೆಯುವ ಪ್ರಸಕ್ತಿಯು ಸುವರ್ಣಕ್ಕೆ ಇಲ್ಲವಾದುದರಿಂದ ಅವಘಾತ ಏಕೆ? ಎಂದು ಶಂಕಿಸಬಾರದು. ಚರುವನ್ನು ಹವಿಸ್ಸನ್ನಾಗಿ ಹೇಳಿರುವುದರಿಂದ-ಪಾಕ ಮಾಡುವುದರಿಂದ ಸುವರ್ಣವ್ರೀಹಿಯು ಬೇಯುವುದಿಲ್ಲವಾದರೂ-ಪಾಕವನ್ನು ಮಾಡಿಯೇ ಮಾಡುತ್ತಾರೆ. ಅಂತೆಯೇ ಅವಘಾತವೂ ಇರಲಿ. ಇದು ಇಲ್ಲಿನ ಪೂರ್ವಪಕ್ಷ.



ಇಲ್ಲಿಯ ಸಿದ್ಧಾಂತವು ಹೀಗಿದೆ : 'ಘೃತೇ ಶ್ರಪಯತಿ' ಎಂಬುದಾಗಿ ಪ್ರತ್ಯಕ್ಷ ವಿಧಿಯಿರುವುದರಿಂದ ಅನ್ನವಾಗದಿದ್ದರೂ ಶ್ರಪಣವನ್ನು ಮಾಡಬೇಕು. ವಿಧಿ-ವಚನವಿಲ್ಲದಿರುವುದರಿಂದ ಪ್ರಯೋಜನವಿಲ್ಲದ (ದೃಷ್ಟ-ಅದೃಷ್ಟ) ಕೃಷ್ಣಲಗಳಿಗೆ ಅವಘಾತವನ್ನು ಮಾಡಬೇಕಾಗಿಲ್ಲ.

### ೯. 'ನೀವಾರಾನವಹಂತಿ' ಎಂಬ ಊಹವಿದೆಯೇ?

ಪ್ರಕೃತಿಯಾಗದಲ್ಲಿ 'ವ್ರೀಹೀನವಹಂತಿ' ಎಂಬ ವಿಧಿಯು ಇದೆ. ವ್ರೀಹಿಗಳನ್ನು ಕುಟ್ಟಬೇಕು ಎಂದು ಅದರ ಅರ್ಥ. ವಾಜಪೇಯಯಾಗದಲ್ಲಿ 'ನೈವಾರಶ್ಚರುರ್ಭವತಿ' ಎಂಬುದಾಗಿ ನೀವಾರಧಾನ್ಯಗಳಿಂದ ಮಾಡಿದ ಚರುವನ್ನು ಹವಿಸ್ಸನ್ನಾಗಿ ಹೇಳಿರುತ್ತಾರೆ. ಪ್ರಕೃತಿಯಾಗದಲ್ಲಿರುವ ಅವಹನನವಾಕ್ಯದಲ್ಲಿ 'ವ್ರೀಹಿ' ಎಂಬುದಾಗಿ ಅವಹನನ ಮಾಡಬೇಕಾಗಿರುವ ವ್ರೀಹಿಯನ್ನು ಹೇಳಿರುವುದರಿಂದ ನೀವಾರವು ವ್ರೀಹಿಯಲ್ಲದಿರುವುದರಿಂದ 'ನೀವಾರಾನವಹಂತಿ' ಎಂಬುದಾಗಿ 'ವ್ರೀಹಿ' ಎಂಬ ಪದದ ಸ್ಥಾನದಲ್ಲಿ 'ನೀವಾರ' ಎಂಬ ಪದದ ಊಹವನ್ನು ಮಾಡುವಂತಿಲ್ಲ. ಆದುದರಿಂದ ನೀವಾರಗಳಿಗೆ ಅವಘಾತವೂ ಇಲ್ಲ. ವಾಕ್ಯದಲ್ಲಿ ಊಹವೂ ಇಲ್ಲ. ಇದು ಇಲ್ಲಿನ ಪೂರ್ವಪಕ್ಷ.

ಇಲ್ಲಿಯ ಸಿದ್ಧಾಂತವು ಹೀಗಿದೆ : ಪ್ರಕೃತಿಯಾಗದ ವಾಕ್ಯದಲ್ಲಿ ವ್ರೀಹಿಯು ವಿವಕ್ಷಿತವಾಗಿದ್ದರೂ ಆದು ಅಪೂರ್ವಕ್ಕೆ ಸಾಧನವಾಗಿಯೇ ವಿವಕ್ಷಿತವಾಗಿದೆ. ಹೊಟ್ಟನ್ನು

ತೆಗೆದು ಅಕ್ಕಿಯನ್ನು ಮಾಡಲು ಉಗುರಿನಿಂದ ಹೊಟ್ಟನ್ನು ತೆಗೆಯುವುದೇ ಮೊದಲಾದ ಬೇರೆ ಉಪಾಯಗಳಿದ್ದರೂ ಅವಹನನದಿಂದಲೇ ಅಕ್ಕಿಯನ್ನು ಮಾಡಬೇಕೆಂಬ ನಿಯಮ ವಿಧಿಯಿಂದ ನಿಯಮಾಪೂರ್ವವು ಉಂಟಾಗುತ್ತದೆ. 'ವ್ರೀಹೀನವಹಂತಿ' ಎಂಬ ವಾಕ್ಯದಲ್ಲಿ ವ್ರೀಹಿಯನ್ನು ಅಪೂರ್ವಕ್ಕೆ ಸಾಧನವನ್ನಾಗಿ ವಿವಕ್ಷೆ ಮಾಡಲಾಗಿದೆ. ನೀವಾರವನ್ನೂ ಶ್ರುತಿಯು ವಿಧಾನ ಮಾಡಿರುವುದರಿಂದ ಅದೂ ಅಪೂರ್ವಸಾಧನವೇ. ಆದುದರಿಂದ ಅದಕ್ಕೂ ಅವಘಾತವು ಉಂಟು. 'ನೀವಾರಾನವಹಂತಿ' ಎಂಬ ಊಹವೂ ಇದೆ.

## ೧೦. ಪ್ರೋಕ್ಷಣೆಯು ಅವಘಾತಾಂಗವೇ? ಅಪೂರ್ವಕ್ಕಾಗಿಯೇ?

'ಪ್ರೋಕ್ಷಿತಾಭ್ಯಾಮುಲೂಖಲಮುಸಲಾಭ್ಯಾಮವಹಂತಿ' ಎಂಬ ವಿಧಿಯಿಂದ ಪ್ರೋಕ್ಷಿಸಲ್ಪಟ್ಟ ಉಲೂಖಲ-ಮುಸಲಗಳಿಂದ ಅವಹನನವನ್ನು ಮಾಡಬೇಕು. ಈ ಪ್ರೋಕ್ಷಣವು ಅವಘಾತಕ್ಕಾಗಿ, ವಿಧಿವಾಕ್ಯದಿಂದ 'ಪ್ರೋಕ್ಷಿತಾಭ್ಯಾಮವಹಂತಿ' ಎಂದೇ ತಿಳಿಯುತ್ತದೆ. ಇದು ಇಲ್ಲಿನ ಪೂರ್ವಪಕ್ಷ.

ಇಲ್ಲಿಯ ಸಿದ್ಧಾಂತವು ಹೀಗಿದೆ : ಪ್ರೋಕ್ಷಣವು ಅಪೂರ್ವಕ್ಕಾಗಿಯೇ ಹೊರತು ಅವಘಾತಾಂಗವಾಗಿಯಲ್ಲ. ಏಕೆಂದರೆ ಪೂರ್ವಪಕ್ಷದಂತೆ ಎಲ್ಲಿ ಅವಘಾತವೋ ಅಲ್ಲಿ ಮಾತ್ರ ಪ್ರೋಕ್ಷಣೆಯು ಪ್ರಾಪ್ತವಾಗುವುದರಿಂದ 'ನೈರ್ಋತಂ ಚರುಂ..... ನಖನಿರ್ಭಿನ್ನಂ' ಎಂಬಂತೆ ವಿಕೃತಿಯಲ್ಲಿ ಉಗುರುಗಳಿಂದ ಹೊಟ್ಟನ್ನು ಬಿಡಿಸಿ ಮಾಡಿದ ಕೃಷ್ಣವ್ರೀಹಿಗಳ ಚರುವನ್ನೇ ಹವಿಸ್ಸನ್ನಾಗಿ ಹೇಳಿರುವುದರಿಂದ ಅಲ್ಲಿ ಅವಘಾತ ವಿಲ್ಲದಿರುವುದರಿಂದ ಉಗುರುಗಳಿಗೆ ಪ್ರೋಕ್ಷಣೆ ಪ್ರಾಪ್ತವಾಗದೇ ಹೋದೀತು. ಪ್ರೋಕ್ಷಣೆಯು ಅಪೂರ್ವಕ್ಕಾಗಿಯಾದರೆ ಅವಘಾತವಿಲ್ಲದ ನೈರ್ಋತಚರುವಿನಲ್ಲಿಯೂ ಅಪೂರ್ವಕ್ಕಾಗಿ ನಖಪ್ರೋಕ್ಷಣೆಯು ಸಿದ್ಧಿಸುತ್ತದೆ.

## ॥ ಷಷ್ಠೋಽನುವಾಕಃ ॥

**ಅವಧೂತಗ್ಂ ರಕ್ಷೋಽವಧೂತಾ ಅರಾತಯೋಽದಿತ್ಯಾ**

**ಸ್ತ್ವಗಸಿ ಪ್ರತಿ ತ್ವಾ ಪೃಥಿವೀ ವೇತ್ತು**

---

**ಅವಧೂತಮಿತ್ಯವ-ಧೂತಮ್ । ರಕ್ಷಃ । ಅವಧೂತಾ ಇತ್ಯವ-ಧೂತಾಃ ।**

**ಅರಾತಯಃ । ಅದಿತ್ಯಾಃ । ತ್ವಕ್ । ಅಸಿ । ಪ್ರತೀತಿ । ತ್ವಾ । ಪೃಥಿವೀ । ವೇತ್ತು ।**

---

ಐದನೆಯ ಅನುವಾಕದಲ್ಲಿ ಅವಘಾತಮಂತ್ರಗಳು ಹೇಳಲ್ಪಟ್ಟಿವೆ. ಆರನೆಯ ಈ ಅನುವಾಕದಲ್ಲಿ ಪೇಷಣ (ಅರೆಯುವುದು)ಕ್ಕೆ ಸಂಬಂಧಿಸಿದ ಮಂತ್ರಗಳು ಹೇಳಲ್ಪಟ್ಟಿವೆ.



| ಮಂತ್ರ | ವಿನಿಯೋಗ |
|---|---|
| ಅವಧೂತಮ್...ಅರಾತಯಃ । | ಊರ್ಧ್ವಗ್ರೀವವಾಗಿ ಕೃಷ್ಣಾಜಿನವನ್ನು ಕೊಡಹಲು |
| ಅದಿತ್ಯಾಃ........ವೇತ್ತು । | ಕೃಷ್ಣಾಜಿನವನ್ನು ಹಾಸಲು |

---

**ಅವಧೂತಂ ರಕ್ಷಃ** = ಯಜ್ಞವಿರೋಧಿ ರಾಕ್ಷಸರು ನಾಶವಾಗಲಿ; **ಅವಧೂತಾಃ ಅರಾತಯಃ** = ಯಜ್ಞಕಂಟಕರಾದ ಶತ್ರುಗಳೂ ನಾಶ ಹೊಂದಲಿ. (ಎಲೈ ಕೃಷ್ಣಾಜಿನವೇ! ನೀನು) **ಅದಿತ್ಯಾಃ** = ಪೃಥಿವೀದೇವಿಯ; **ತ್ವಕ್ ಅಸಿ** = ಚರ್ಮರೂಪವಾಗಿದ್ದೀಯೆ; **ಪೃಥಿವೀ** = ಭೂದೇವಿಯು; **ತ್ವಾ** = ನಿನ್ನನ್ನು; **ಪ್ರತಿ ವೇತ್ತು** = (ತನ್ನವನೆಂದು ತಿಳಿದು ತನ್ನ ಮೇಲೆ ಹಾಸುವುದನ್ನು) ಅನುಮತಿಸಲಿ.

---

ಈ ಮಂತ್ರವನ್ನು ಹೇಳಿ ಕೃಷ್ಣಾಜಿನವನ್ನು ಕೊಡಹುವುದರಿಂದ ಯಜ್ಞಕ್ಕೆ ತೊಂದರೆಯನ್ನುಂಟುಮಾಡುವ ರಾಕ್ಷಸರೂ, ಶತ್ರುಗಳೂ ನಾಶ ಹೊಂದಲಿ.

ಎಲೈ ಕೃಷ್ಣಾಜಿನವೇ! ನೀನು ಭೂದೇವಿಗೆ ಚರ್ಮರೂಪದಂತಿರುವೆ. ಭೂಮಿಯು ನಿನ್ನನ್ನು ತನ್ನವನೆಂದು ತಿಳಿಯಲಿ. ನಿನ್ನನ್ನು ಹಾಸುವುದಕ್ಕೆ ಅನುಮತಿಸಲಿ.

**ದಿವಃ ಸ್ಕಂಭನಿರಸಿ ಪ್ರತಿ ತ್ವಾಽದಿತ್ಯಾಸ್ತ್ವಗ್ವೇತ್ತು ಧಿಷಣಾಸಿ**
**ಪರ್ವತ್ಯಾ ಪ್ರತಿ ತ್ವಾ ದಿವಃ ಸ್ಕಂಭನಿರ್ವೇತ್ತು**

ದಿವಃ । ಸ್ತಂಭನಿಃ । ಅಸಿ । ಪ್ರತೀತಿ । ತ್ವಾ । ಅದಿತ್ಯಾಃ । ತ್ವಕ್ । ವೇತ್ತು ।
ಧಿಷಣಾ । ಅಸಿ । ಪರ್ವತ್ಯಾ । ಪ್ರತೀತಿ । ತ್ವಾ । ದಿವಃ । ಸ್ತಂಭನಿಃ । ವೇತ್ತು ।

| ಮಂತ್ರ | ವಿನಿಯೋಗ |
|---|---|
| ದಿವಃ......ವೇತ್ತು । | ಕೃಷ್ಣಾಜಿನದ ಮೇಲೆ ಶಮ್ಯೆ (ಜೊತಿಗೆ) ಯನ್ನು ಉತ್ತರದಿಕ್ಕಿಗೆ ಮೇಲ್ಭಾಗವು ಬರುವಂತೆ ಇಡಲು. |
| ಧಿಷಣಾ......ವೇತ್ತು । | ಶಮ್ಯೆಯ ಮೇಲೆ ಅರೆಯುವ ಕಲ್ಲನ್ನು ಇಡಲು. |

❖ (ಎಲೈ ಶಮ್ಯೆಯೇ! ನೀನು) ದಿವಃ=ಅಂತರಿಕ್ಷಲೋಕದ; ಸ್ಕಂಭನಿಃ=ಧಾರಕಳಾಗಿ; ಅಸಿ = ಇರುವೆ; ತ್ವಾ = ನಿನ್ನನ್ನು; ಅದಿತ್ಯಾಃ ತ್ವಕ್ = ಭೂಮಿಯ ಚರ್ಮದಂತಿರುವ (ಕೃಷ್ಣಾಜಿನವು); ಪ್ರತಿ ವೇತ್ತು = ತನ್ನ ಮೇಲಿಡಲು ಅನುಮತಿಸಲಿ. ❖ಎಲೈ ದೃಷದವೇ ! (ಅರೆಯುವ ಕಲ್ಲು) ನೀನು; ಧಿಷಣಾ = ಗಟ್ಟಿಯಾಗಿರುವುದೂ; ಪರ್ವತ್ಯಾ = ಪರ್ವತಕ್ಕೆ ಸಂಬಂಧಿಸಿದುದೂ; ಅಸಿ = ಆಗಿದ್ದೀಯೆ; ತ್ವಾ = ನಿನ್ನನ್ನು; ದಿವಃ ಸ್ಕಂಭನಿಃ = ದ್ಯುಲೋಕವನ್ನು ಧರಿಸಿರುವ ಶಮ್ಯೆಯು; ಪ್ರತಿ ವೇತ್ತು = (ತನ್ನ ಮೇಲಿಡಲು) ಅನುಮತಿಸಲಿ.

ಎಲೈ ಶಮ್ಯೆಯೇ! ಹಿಂದೆ ಒಂದಾಗಿದ್ದ ಭೂಲೋಕ-ದ್ಯುಲೋಕಗಳು ದಿನವೂ ನಿನ್ನ ಪ್ರಮಾಣದಷ್ಟು ಬೇರ್ಪಟ್ಟವು. ಆದುದರಿಂದ ನೀನು ದ್ಯುಲೋಕವನ್ನು ಧಾರಣ ಮಾಡಿ ಯಾಗಕ್ಕೆ ಅವಕಾಶವನ್ನು ಕಲ್ಪಿಸಿರುವೆ. ಭೂಮಿಯ ಚರ್ಮದಂತಿರುವ ಕೃಷ್ಣಾಜಿನವು ನಿನ್ನನ್ನು ತನ್ನ ಮೇಲಿಡಲು ಅನುಮತಿಸಲಿ.

ಎಲೈ ದೃಷದವೇ! ನೀನು ದೃಢವಾಗಿದ್ದು ಅಕ್ಕಿಯನ್ನು ಹಿಟ್ಟು ಮಾಡಲು ಸಮರ್ಥಳಾಗಿರುವೆ. ಪರ್ವತಕ್ಕೆ ಸಂಬಂಧಿಸಿರುವೆ. ನಿನ್ನನ್ನು ಶಮ್ಯೆಯು ತನ್ನವನೆಂದು ಭಾವಿಸಿ, ಮೇಲಿಡಲು ಅನುಮತಿಸಲಿ.

# ಧಿಷಣಾಸಿ ಪಾರ್ವತೇಯೀ ಪ್ರತಿ ತ್ವಾ ಪರ್ವತಿರ್ವೇತ್ತು

# ದೇವಸ್ಯ ತ್ವಾ ಸವಿತುಃ ಪ್ರಸವೇಽಶ್ವಿನೋರ್ಬಾಹುಭ್ಯಾಂ

---

ಧಿಷಣಾ । ಅಸಿ । ಪಾರ್ವತೇಯೀ । ಪ್ರತೀತಿ । ತ್ವಾ । ಪರ್ವತಿಃ । ವೇತ್ತು । ದೇವಸ್ಯ । ತ್ವಾ । ಸವಿತುಃ । ಪ್ರಸವ ಇತಿ ಪ್ರ-ಸವೇ । ಅಶ್ವಿನೋಃ । ಬಾಹುಭ್ಯಾಮಿತಿ ಬಾಹು- ಭ್ಯಾಮ್ ।

---

| ಮಂತ್ರ | ವಿನಿಯೋಗ |
|---|---|
| ಧಿಷಣಾ......ವೇತ್ತು । | ಅರೆಯುವ ಕಲ್ಲಿನ ಮೇಲೆ ಅರೆಯುವ ಗುಂಡನ್ನು ಇಡಲು. |
| ದೇವಸ್ಯ......ದೇವಾನ್ । | ಧಾನ್ಯವನ್ನು ಅರೆಯುವ ಕಲ್ಲಿನಲ್ಲಿ ಹಾಕಲು. (ಆಪಸ್ತಂಬ) |
| ೧) ದೇವಸ್ಯ......ಅಧಿವಪಾಮಿ । | ಧಾನ್ಯವನ್ನು ಅರೆಯುವ ಕಲ್ಲಿನಲ್ಲಿ ಹಾಕಲು. |



---

❖ (ಎಲೈ ಉಪಲವೇ! (ಅರೆಯುವ ಗುಂಡೇ) (ನೀನು) ಧಿಷಣಾ = ದೃಢವೂ; ಪಾರ್ವತೇಯೀ = ಪರ್ವತಿ (ಮಹಾಶಿಲೆ)ಯಿಂದ ಹುಟ್ಟಿದವಳೂ; ಅಸಿ = ಆಗಿರುವೆ; ತ್ವಾ = ನಿನ್ನನ್ನು; ಪರ್ವತಿಃ= ದೃಷದವು; ಪ್ರತಿ ವೇತ್ತು = ಮೇಲಿಡಲು ಅನುಮತಿ ಕೊಡಲಿ; ❖ (ಎಲೈ ಧಾನ್ಯವೇ!) ತ್ವಾ = ನಿನ್ನನ್ನು; ದೇವಸ್ಯ ಸವಿತುಃ ಪ್ರಸವೇ = ಸರ್ವಪ್ರೇರಕನಾದ ಸವಿತೃವಿನ ಅನುಮತಿಯನ್ನು ಪಡೆದು; ಅಶ್ವಿನೋಃ = ಅಶ್ವಿನೀ ದೇವತೆಗಳ ; ಬಾಹುಭ್ಯಾಮ್ = ತೋಳುಗಳಿಂದಲೂ; ಪೂಷ್ಣಃ = ಪೂಷದೇವನ;

---

ಉಪಲವೇ! ನೀನು ಗಟ್ಟಿಯಾಗಿದ್ದು ಅರೆಯಲು ಶಕ್ತನಾಗಿರುವೆ. ಮಹಾಶಿಲೆಯಿಂದ ಜನಿಸಿರುವೆ. ನಿನ್ನನ್ನು ಧರಿಸಲು ಪಾರ್ವತಿಯಾದ ದೃಷದವು ಒಪ್ಪಲಿ.

ಎಲೈ ಧಾನ್ಯವೇ! ಸವಿತೃದೇವನ ಪ್ರೇರಣೆಯಿಂದ ಅಶ್ವಿನೀದೇವತೆಗಳ ತೋಳುಗಳಿಂದಲೂ, ಪೋಷಕನಾದ ಪೂಷದೇವನ ಕೈಗಳಿಂದಲೂ ನಿನ್ನನ್ನು ಅಗ್ನ್ಯಾದಿದೇವತೆಗಳಿಗೆ ಪ್ರಿಯವಾದ ಹವ್ಯಗಳಿಗಾಗಿ ಅರೆಯುವ ಕಲ್ಲಿನಲ್ಲಿ ಹಾಕುತ್ತೇನೆ.

# ಪೂಷ್ಣೋ ಹಸ್ತಾಭ್ಯಾಮಧಿವಪಾಮಿ ಧಾನ್ಯಮಸಿ ಧಿನುಹಿ ದೇವಾನ್ಪ್ರಾಣಾಯ ತ್ವಾಪಾನಾಯ ತ್ವಾ

---

ಪೂಷ್ಣಃ । ಹಸ್ತಾಭ್ಯಾಮ್ । ಅಧೀತಿ । ವಪಾಮಿ । ಧಾನ್ಯಮ್ । ಅಸಿ । ಧಿನುಹಿ । ದೇವಾನ್ । ಪ್ರಾಣಾಯೇತಿ ಪ್ರ - ಅನಾಯ । ತ್ವಾ । ಅಪಾನಯೇತ್ಯಪ-ಅನಾಯ । ತ್ವಾ ।

---

| ಮಂತ್ರ | ವಿನಿಯೋಗ |
| --- | --- |
| ೨) ಧಾನ್ಯಮಸಿ...ದೇವಾನ್ । | ಧಾನ್ಯದ ಅಭಿಮಂತ್ರಣ ಮಾಡಲು. ಬೌಧಾಯನ |
| ಪ್ರಾಣಾಯ...ತ್ವಾ । | *ಧಾನ್ಯವನ್ನು ಆರೆಯುವುದಕ್ಕಾಗಿ |

---

ಹಸ್ತಾಭ್ಯಾಂ = ಕೈಗಳಿಂದಲೂ; (ಅಗ್ನಿಯೇ ಮೊದಲಾದ ದೇವತೆಗಳ ಇಷ್ಟವಾದ ಹವ್ಯಕ್ಕಾಗಿ) ಅಧಿವಪಾಮಿ = ಅರೆಯುವ ಕಲ್ಲಿನಲ್ಲಿ ಹಾಕುತ್ತೇನೆ. (ನೀನು) ಧಾನ್ಯಂ= ಪೋಷಕವಾದ ಅಥವಾ ವೃದ್ಧಿ ಹೊಂದುವ ಸ್ವಭಾವವುಳ್ಳ ಧಾನ್ಯವಾಗಿ; ಅಸಿ = ಇರುವೆ; (ಆದುದರಿಂದ) ದೇವಾನ್ = ದೇವತೆಗಳನ್ನು; ಧಿನುಹಿ = ಸಂತೋಷಪಡಿಸು (ತೃಪ್ತಿಪಡಿಸು.) + (ಎಲ್ಲೈ ಹವಿಸ್ಸೇ!) ತ್ವಾ = ನಿನ್ನನ್ನು; ಪ್ರಾಣಾಯ = ಪ್ರಾಣಕ್ಕಾಗಿ; (ಪೂರ್ವದಿಕ್ಕಿನೆಡೆಗೆ ಅರೆಯುತ್ತೇನೆ); ತ್ವಾ = ನಿನ್ನನ್ನು; ಅಪಾನಾಯ = ಅಪಾನಕ್ಕಾಗಿ

---

ಧಾನ್ಯವಾದ ನೀನು ಪೋಷಿಸುವ ಮತ್ತು ವೃದ್ಧಿ ಹೊಂದುವ ಸ್ವಭಾವವನ್ನು ಹೊಂದಿರುವೆ. ನೀನು ದೇವತೆಗಳನ್ನು ಸಂತೋಷಪಡಿಸು.

ಪ್ರಾಣ, ಅಪಾನ ಮತ್ತು ವ್ಯಾನಗಳು ಉಚ್ಛ್ವಾಸ, ನಿಃಶ್ವಾಸ ಮತ್ತು ಅವೆರಡರ ಸಂಧಿಯಲ್ಲಿರುವ ವಾಯುವಿನ ವೃತ್ತಿಗಳು. ಪ್ರಾಣಾಪಾನಗಳ ಸಂಧಿಯೇ ವ್ಯಾನವೆನಿಸುತ್ತದೆ. ಇವುಗಳನ್ನು ಯಜಮಾನನಲ್ಲಿ ಚಿರಕಾಲ ಸ್ಥಾಪಿಸುವುದಕ್ಕಾಗಿ ಹವ್ಯವಾದ ನಿನ್ನನ್ನು ಅರೆಯುತ್ತೇನೆ.

---

* ಅರೆಯುವಾಗ ಮೊದಲು ಪೂರ್ವಕ್ಕೆ. ನಂತರ ಪಶ್ಚಿಮಕ್ಕೆ, ಬಳಿಕ ಮಧ್ಯದಲ್ಲಿ ಎಂದು ಆಪಸ್ತಂಬರ ಮತ.

## ವ್ಯಾನಾಯ ತ್ವಾ ದೀರ್ಘಾಮನು ಪ್ರಸಿತಿಮಾಯುಷೇ ಧಾಂ ದೇವೋ ವಃ

---

ವ್ಯಾನಾಯೇತಿ ವಿ-ಅನಾಯ । ತ್ವಾ । ದೀರ್ಘಾಮ್ । ಅನ್ವಿತಿ । ಪ್ರಸಿತಿಮಿತಿ ಪ್ರ-ಸಿತಿಮ್ । ಆಯುಷೇ । ಧಾಮ್ । ದೇವಃ । ವಃ ।

---



| ಮಂತ್ರ | ವಿನಿಯೋಗ |
|---|---|
| ದೀರ್ಘಾಂ......ಧಾಮ್ । | ಬಾಹುಗಳ ಅನ್ವೀಕ್ಷಣೆಗಾಗಿ |
| | ಬೌಧಾಯನ |
| | ಅದರ ನಂತರ ಕಡೆಗೆ ಪೂರ್ವದಿಕ್ಕಿನಲ್ಲಿ ಅರೆಯುವ ಗುಂಡನ್ನು ಇಡಲು. |
| | ಆಪಸ್ತಂಬ |
| ದೇವಃ.......ಗೃಹ್ಣಾತು । | ಕೃಷ್ಣಾಜಿನದಲ್ಲಿ ಹಿಟ್ಟನ್ನು ಹಾಕಲು. |

---

(ಪಶ್ಚಿಮ ದಿಕ್ಕಿನೆಡೆಗೆ ಅರೆಯುತ್ತೇನೆ). ತ್ವಾ = ನಿನ್ನನ್ನು; ವ್ಯಾನಾಯ = ವ್ಯಾನಕ್ಕಾಗಿ (ಅಡ್ಡಲಾಗಿ ಅರೆಯುತ್ತೇನೆ). + ಆಯುಷೇ = ಯಜಮಾನನ ಆಯುರಭಿವೃದ್ಧಿಗಾಗಿ; ದೀರ್ಘಾಂ ಪ್ರಸಿತಿಮ್ = ಅವಿಚ್ಛಿನ್ನವಾದ ಪೇಷಣಕಾರ್ಯ ಸಂತತಿಗೆ ಕಾರಣವಾದ (ಈ ಅರೆಯುವ ಗುಂಡನ್ನು); ಅನು ಧಾಮ್ = ಧರಿಸಿದವನಾಗಿದ್ದೇನೆ;

---

ಯಜಮಾನನ ಆಯುಸ್ಸಿನ ಅಭಿವೃದ್ಧಿಗಾಗಿ ಸಂತತವಾಗಿ ಅರೆಯುವ ಕೆಲಸವನ್ನು ಮಾಡಿರುವ ಈ ಉಪಲೆಯನ್ನು ಧರಿಸಿರುತ್ತೇನೆ. ದೀರ್ಘಧಾರಣೆಯಿಂದ ದೀರ್ಘಾಯುಸ್ಸು ಉಂಟಾಗಲಿ.

**ಸವಿತಾ ಹಿರಣ್ಯಪಾಣಿಃ ಪ್ರತಿಗೃಹ್ಣಾತು ॥ ೬-೨ ॥**

**[ಪ್ರಾಣಾಯ ತ್ವಾ ಪಂಚದಶ ಚ ।]**

---

ಸವಿತಾ । ಹಿರಣ್ಯಪಾಣಿರಿತಿ ಹಿರಣ್ಯ-ಪಾಣಿಃ । ಪ್ರತೀತಿ । ಗೃಹ್ಣಾತು ॥ ೬ ॥

---

✢ ದೇವಃ ಸವಿತಾ ಹಿರಣ್ಯಪಾಣಿಃ = ಉಂಗುರವನ್ನು ಕೈಯಲ್ಲಿ ಧರಿಸಿರುವ ಸವಿತೃದೇವನು; ವಃ = ನಿಮ್ಮನ್ನು (ಪಿಷ್ಟಗಳನ್ನು); ಪ್ರತಿಗೃಹ್ಣಾತು = ಹಾರಿಹೋಗದಂತೆ ತಡೆದು ಸ್ವೀಕರಿಸಲಿ. (ಸರಿಯಾಗಿಡಲಿ).

---

ಹಿಟ್ಟುಗಳನ್ನು ಕೃಷ್ಣಾಜಿನದಲ್ಲಿ ಹಾಕುವಾಗ ಅತ್ತಿತ್ತ ಹಾರಿ ಹೋಗದಂತೆ ಹಿರಣ್ಯಾಭರಣಧಾರಿಯಾದ ಸವಿತೃದೇವನು ತಡೆದು ಸರಿಯಾಗಿಡಲಿ.



**ವಿನಿಯೋಗಸಂಗ್ರಹ**

ಆವೇತಿ[1,2] ಪೂರ್ವವತ್ತತ್ರ* ಶಮ್ಯಾಂ ಸ್ಥಾಪಯತೇ ದಿವಃ[3] ।
ಧಿಷಣಾ[4,5]ದ್ವೇ ತಥಾಶ್ಮಾನೌ [6]ದೇವೇತ್ಯಧಿವಪೇದ್ಧವಿಃ ॥
ಪ್ರಾಣಾಯ ತ್ವೇತಿ[7,8,9] ತ್ರಿಭಿಃ ಪಿಷ್ಟ್ವಾ [10]ದೀರ್ಘೇತ್ಯಂತ ಉಪೋಹತಿ ।
[11]ದೇವೋಽಜಿನೇ ಸ್ಕಂದಯೇತ ಪ್ರೋಕ್ತಾ ಏಕಾದಶ ತ್ವಿಹ ॥

ಅನುವಾಕದಲ್ಲಿರುವ ಮಂತ್ರಸಂಖ್ಯೆ — ಆಪಸ್ತಂಬ - 11
ಬೌಧಾಯನ - 12

---

* ಪೂರ್ವವತ್ = 'ಅದಿತ್ಯಾಃ-ವೇತ್ತು' ಎಂಬ ಮಂತ್ರದಿಂದ ಕೃಷ್ಣಾಜಿನವನ್ನು ಹಾಸುವುದು.

## ಅನುವಾಕದ ವಿಶೇಷ ವಿಷಯಗಳು

### ಅ) ಭ.ಭಾ. ಭಾಷ್ಯ

೧೦) ದೀರ್ಘಾಂ.......ಧಾಮ್ ।          ಏಕಪದಾ ತ್ರಿಷ್ಟುಪ್

### ಆ) ಮೀಮಾಂಸಾ

ಈ ಅನುವಾಕದಲ್ಲಿ ವಿಶೇಷವಿಚಾರಗಳು ಹೆಚ್ಚಾಗಿಲ್ಲ. ಹಿಂದೆ ಹೇಳಿದ ಸಾಮಾನ್ಯವಿಚಾರಗಳನ್ನು ಇಲ್ಲಿಯೂ ಅನ್ವಯಿಸಿಕೊಳ್ಳಬೇಕು. 'ಇಷೇ ತ್ವಾ' ಮೊದಲಾದ ಕಡೆಗಳಲ್ಲಿ 'ಛಿನದ್ಮಿ' ಮೊದಲಾಗಿ ಅಧ್ಯಾಹಾರವನ್ನು ಮಾಡಿ ವಾಕ್ಯವನ್ನು ಪೂರ್ತಿ



ಮಾಡುವಂತೆ 'ಅಧಿವಪಾಮಿ' ಎಂಬಲ್ಲಿ 'ಅಗ್ನಯೇ ಜುಷ್ಟಮ್' ಎಂದು ಅಧ್ಯಾಹಾರ ಮಾಡಿಕೊಳ್ಳಬೇಕು. ಅಧ್ಯಾಹೃತವಾದ ಭಾಗವು ಮಂತ್ರವಲ್ಲ. ಆದುದರಿಂದ ಊಹಾದಿಗಳಂತೆಯೇ ಇದಕ್ಕೂ ಸ್ವರನಿಯಮವಿಲ್ಲ.

೧) 'ಧಾನ್ಯಮಸಿ' ಎಂಬ ಮಂತ್ರದಲ್ಲಿ ಊಹವಿದೆಯೇ?

ವಿಕೃತಿವಿಶೇಷದಲ್ಲಿ 'ಧಾನ್ಯಮಸಿ' ಎಂಬಲ್ಲಿನ 'ಧಾನ್ಯಮ್' ಎಂಬುದಕ್ಕೆ ಊಹವಿದೆಯೇ? ಈ ವಿಷಯವನ್ನು ನವಮಾಧ್ಯಾಯದಲ್ಲಿ ಮೊದಲ ಪಾದದಲ್ಲಿ ಚರ್ಚಿಸಲಾಗಿದೆ.

ಇಲ್ಲಿಯ ಪೂರ್ವಪಕ್ಷ ಹೀಗಿದೆ; 'ಧಾನ್ಯಮಸಿ' ಎಂಬ ಮಂತ್ರವು ವಿಕೃತಿಯಾಗದಲ್ಲಿ ಅತಿದೇಶದಿಂದ ಬಂದಾಗ ಊಹವನ್ನು ಮಾಡಬೇಕಾಗಿಲ್ಲ. ಏಕೆಂದರೆ ಪ್ರಕೃತಿಯಾಗದಲ್ಲಿ 'ಧಾನ್ಯ' ಶಬ್ದವು ಮುಖ್ಯಾರ್ಥವನ್ನು ಹೇಳುವುದಿಲ್ಲ. ಧಾನ್ಯವೆಂದರೆ ಹೊಟ್ಟಿನಲ್ಲಿ ಕೂಡಿದ ಭತ್ತ. ಅಕ್ಕಿಯು ಧಾನ್ಯವಲ್ಲ. ಆದುದರಿಂದ ಸಮವೇತಾರ್ಥ (ಕರ್ಮಕ್ಕೆ ಸಂಬಂಧಿಸಿದ ಅರ್ಥ) ವನ್ನು ಹೇಳದ 'ದೇವಸ್ಯ ತ್ವಾ ಸವಿತುಃ' ಎಂಬಲ್ಲಿರುವ ಸವಿತೃ ಮೊದಲಾದ ಪದಗಳಂತೆ ಧಾನ್ಯ ಎಂಬ ಪದದ ಸ್ಥಾನದಲ್ಲಿಯೂ ಊಹವಿಲ್ಲ.

ಇಲ್ಲಿಯ ಸಿದ್ಧಾಂತವು ಹೀಗಿದೆ; ಪ್ರಕೃತಿಯಾಗದಲ್ಲಿ ಧಾನ್ಯಶಬ್ದವು ಲಕ್ಷಣಾವೃತ್ತಿಯಿಂದ ತಂಡುಲ (ಅಕ್ಕಿ) ವೆಂಬ ಅರ್ಥವನ್ನೇ ತಿಳಿಸುತ್ತದೆ. ಲೋಕದಲ್ಲಿ 'ಹಸುಗಳ ಹಾಲು ಕುಡಿಯಲ್ಪಡುತ್ತದೆ' ಎಂಬ ಅರ್ಥದಲ್ಲಿ 'ಗಾವಃ ಪೀಯಂತೇ' (ಹಸುಗಳೇ ಕುಡಿಯಲ್ಪಡುತ್ತವೆ) ಎಂಬ ವ್ಯವಹಾರವಿದೆ. ಅದರಿಂದ ಹಸುಗಳಿಗೆ ಸಂಬಂಧಿಸಿದ

ಹಾಲನ್ನೇ ಕುಡಿಯುವ ಕ್ರಿಯೆಯೊಡನೆ ಸಮವೇತ(ಸೇರಿಕೊಂಡುದು)ವನ್ನಾಗಿ ತಿಳಿಯುತ್ತಾರೆ. ಅಂತೆಯೇ ಧಾನ್ಯಶಬ್ದವಿದ್ದರೂ ತಂಡುಲ ಎಂಬ ಅರ್ಥವೇ ಸಮವೇತ ವಾದುದು. ಸಮವೇತಾರ್ಥವನ್ನು ತಿಳಿಸುವ ಪದಕ್ಕೆ ವಿಕೃತಿಯಲ್ಲಿ ಊಹವು ಉಚಿತವಾಗಿಯೇ ಇದೆ. 'ಶಾಕ್ಯಾಯನ' ವೆಂಬ ಸತ್ರದಲ್ಲಿ ಸವನೀಯಯಾಗದಲ್ಲಿ ಮಾಂಸದಿಂದ ಪಶು-ಪುರೋಡಾಶ ಯಾಗವನ್ನು ಮಾಡಬೇಕು. ಆಗ ದೃಷದದಲ್ಲಿ ಪೇಷಣಕ್ಕಾಗಿ ಮಾಂಸವನ್ನು ಹಾಕಿದಾಗ 'ಮಾಂಸಮಸಿ ಧಿನುಹಿ ದೇವಾನ್' ಎಂದೇ ಊಹವನ್ನು ಮಾಡಬೇಕು. ಪ್ರಕೃತಿಯಲ್ಲಿ ಧಾನ್ಯಶಬ್ದವು ಲಕ್ಷಣಾವೃತ್ತಿಯಿಂದ ಅಕ್ಕಿ ಎಂಬ ಅರ್ಥವನ್ನು ಕೊಡುವಂತೆ ಇಲ್ಲಿಯೂ 'ಮೃಗೋಽಸಿ' ಎಂಬುದಾಗಿ ಏಕೆ ಊಹ ಮಾಡಬಾರದು? ಎಂಬ ಶಂಕೆಯು ಬಂದರೆ, ಲಕ್ಷಣಾವೃತ್ತಿಯು ಅರ್ಥಕ್ಕೆ ಸಂಬಂಧಿಸಿದುದರಿಂದ ಅರ್ಥವನ್ನು ಅತಿದೇಶ ಮಾಡುವಂತಿಲ್ಲ. 'ಧಾನ್ಯ' ಎಂಬ ಶಬ್ದದ ಸ್ಥಾನದಲ್ಲಿ 'ಮಾಂಸಮ್' ಎಂಬ ಶಬ್ದದ ಊಹವನ್ನೇ ಮಾಡಬೇಕು. 'ಪದಾಂತರಪ್ರಕ್ಷೇಪಃ ಊಹಃ' ಎಂದು ಊಹದ ಲಕ್ಷಣ.



## ॥ ಸಪ್ತಮೋಽನುವಾಕಃ ॥

# ಧೃಷ್ಟಿರಸಿ ಬ್ರಹ್ಮ ಯಚ್ಛಾಪಾಗ್ನೇಽಗ್ನಿಮಾಮಾದಂ ಜಹಿ

ಧೃಷ್ಟಿಃ । ಅಸಿ । ಬ್ರಹ್ಮ । ಯಚ್ಛ । ಅಪೇತಿ । ಅಗ್ನೇ । ಅಗ್ನಿಮ್ । ಆಮಾದಮಿತ್ಯಾಮ-ಅದಮ್ । ಜಹಿ ।

---

ಈ ಅನುವಾಕದಲ್ಲಿ ಪುರೋಡಾಶನಿಷ್ಪತ್ತಿಗಾಗಿ ಕಪಾಲೋಪಧಾನವನ್ನು ಹೇಳಲಾಗಿದೆ.

| ಮಂತ್ರ | ವಿನಿಯೋಗ |
|---|---|
| ಧೃಷ್ಟಿ......ಯಚ್ಛ । | ಉಪವೇಷವನ್ನು ತೆಗೆದುಕೊಳ್ಳಲು. |
| ಅಪಾಗ್ನೇ....ಜಹಿ । | ಗಾರ್ಹಪತ್ಯಧ್ದ ಅಭಿಮಂತ್ರಣ. - ಬೌಧಾಯನ ಗಾರ್ಹಪತ್ಯದ ಪಶ್ಚಾದ್ಭಾಗದ ಎರಡು ಅಂಗಾರಗಳನ್ನು ಬೇರ್ಪಡಿಸಲು - ಆಪಸ್ತಂಬ |

---

(ಎಲೈ! *ಉಪವೇಷವೇ! ನೀನು) ಧೃಷ್ಟಿಃ= ಕೆಂಡಗಳನ್ನು ಎದುರಿಸಲು ಸಮರ್ಥನು; ಅಸಿ = ಆಗಿದ್ದೀಯೆ. (ನೀನು) ಬ್ರಹ್ಮ = ದೇವಾನ್ನರೂಪವಾದ ಪುರೋಡಾಶವನ್ನು; ಯಚ್ಛ = ಕೊಡು. ❖ ಅಗ್ನೇ= ಎಲೈ ಗಾರ್ಹಪತ್ಯಾಗ್ನಿಯೇ! ಆಮಾದಮ್= ಅಪಕ್ವವಾದುದನ್ನು ತಿಂದು ನಾಶಪಡಿಸುವ ; [ಪಾಕಮಾಡಲು ಇಟ್ಟ ವಸ್ತುಗಳನ್ನು ಚೆನ್ನಾಗಿ ಪಕ್ವ ಮಾಡದೆ] ಅಗ್ನಿಮ್ = ಅಗ್ನಿಯನ್ನು ; ಅಪ ಜಹಿ = ನಾಶಪಡಿಸು.

---

ಎಲೈ ಉಪವೇಷವೇ! ನೀನು ಕೆಂಡಗಳನ್ನು ಎದುರಿಸಬಲ್ಲವನು. ನೀನು ದೇವತೆಗಳ ಅನ್ನರೂಪವಾದ ಪುರೋಡಾಶವನ್ನು ಸಿದ್ಧಪಡಿಸಿಕೊಡು.

ಎಲೈ ಗಾರ್ಹಪತ್ಯಾಗ್ನಿಯೇ! ಪಕ್ವ ಮಾಡಲು ಇಟ್ಟ ಪುರೋಡಾಶವೇ ಮೊದಲಾದವುಗಳನ್ನು ಚೆನ್ನಾಗಿ ಪಕ್ವ ಮಾಡದೆ, ಅಪಕ್ವವಾಗಿಯೇ ತಿಂದು ಹಾಕುವ ಅಗ್ನಿಯನ್ನು ನೀನು ನಾಶಪಡಿಸು.

---

* ಸಂಪುಟ ೧, ಭಾಗ ೩, ಪುಟ ૩೧

**ನಿಷ್ಕ್ರವ್ಯಾದಗ್ಂ ಸೇಧಾಽಽದೇವಯಜಂ ವಹ**

**ನಿರ್ದಗ್ಧಗ್ಂ ರಕ್ಷೋ ನಿರ್ದಗ್ಧಾ ಅರಾತಯೋ**

---

ನಿರಿತಿ । ಕ್ರವ್ಯಾದಮಿತಿ ಕ್ರವ್ಯ-ಅದಮ್ । ಸೇಧ । ಏತಿ । ದೇವಯಜಮಿತಿ ದೇವ-ಯಜಮ್ । ವಹ । ನಿರ್ದಗ್ಧಮಿತಿ ನಿಃ-ದಗ್ಧಮ್ । ರಕ್ಷಃ । ನಿರ್ದಗ್ಧಾ ಇತಿ ನಿಃ-ದಗ್ಧಾಃ । ಅರಾತಯಃ ।

---

| ಮಂತ್ರ | ವಿನಿಯೋಗ |
|---|---|
| ನಿಷ್ಕ್ರವ್ಯಾದಗ್ಂ ಸೇಧ । | ಒಂದು ಅಂಗಾರವನ್ನು ಎಸೆಯಲು |
| ಆ............ ವಹ । | ಒಂದು ಅಂಗಾರವನ್ನು ಇಟ್ಟುಕೊಳ್ಳಲು |
| ನಿರ್ದಗ್ಧಗ್ಂ............ಅರಾತಯಃ । | ಕಪಾಲದ ಮೇಲೆ ಅಗ್ನಿಯನ್ನು ಇಡಲು* |

---

(ಎಲೈ ಗಾರ್ಹಪತ್ಯಾಗ್ನಿಯೇ!) ಕ್ರವ್ಯಾದಮ್ = ಲೌಕಿಕವಾದ ಮಾಂಸವನ್ನು ತಿನ್ನುವ ಅಗ್ನಿಯನ್ನು; ನಿಃ ಸೇಧ = ನಿಷೇಧಿಸು. + (ಎಲೈ ಗಾರ್ಹಪತ್ಯವೇ!) ದೇವಯಜಮ್ = (ಹವಿಸ್ಸನ್ನು ಸಿದ್ಧಪಡಿಸಿ) ದೇವತೆಗಳ ಯಾಗವನ್ನು ಸಂಪಾದಿಸಿಕೊಡುವ ಅಗ್ನಿಯನ್ನು; ಆ ವಹ = ಕರೆದುಕೊಂಡು ಬಾ; + ರಕ್ಷಃ = (ಕಪಾಲದಲ್ಲಿರುವ ಯಜ್ಞವಿರೋಧಿ) ರಾಕ್ಷಸರು; ನಿರ್ದಗ್ಧಮ್ = ಸುಟ್ಟುಹೋಗಲಿ; ಅರಾತಯಃ = ಯಜ್ಞಶತ್ರುಗಳೂ; ನಿರ್ದಗ್ಧಾಃ = ಸುಟ್ಟುಹೋಗಲಿ.

---

ಎಲೈ ಗಾರ್ಹಪತ್ಯನೇ! ಲೌಕಿಕಮಾಂಸವನ್ನು ತಿನ್ನುವ ಅಗ್ನಿಯನ್ನೂ ನಿಷೇಧಿಸು. ಪುರೋಡಾಶವನ್ನು ಸಿದ್ಧಪಡಿಸಿ ದೇವತೆಗಳ ಯಾಗವನ್ನು ನೆರವೇರಿಸಿಕೊಡುವ ಅಗ್ನಿಯನ್ನು ಆಹ್ವಾನಿಸು (ಕರೆದುಕೊಂಡು ಬಾ).

---

*ಕಪಾಲದ ಮೇಲೆ ಅಗ್ನಿಯನ್ನಿಡಬೇಕಾದುದರಿಂದ ಮೊದಲು ಕಪಾಲವನ್ನಿಡಬೇಕು. ಪಾಠಕ್ರಮದಲ್ಲಿ ಕಪಾಲವನ್ನಿಡುವ 'ಧ್ರುವಮಸಿ' ಎಂಬ ಮಂತ್ರವು ಬಳಿಕ ಇದೆ. ಅರ್ಥಕ್ರಮದಂತೆ ಶ್ರೌತಸೂತ್ರವಿದೆ.

ಧ್ರುವಮಸಿ ಪೃಥಿವೀಂ ದೃಗ್ಂಹಾಯುರ್ದೃಗ್ಂಹ ಪ್ರಜಾಂ

ದೃಗ್ಂಹ ಸಜಾತಾನಸ್ಮೈ ಯಜಮಾನಾಯ ಪರ್ಯೂಹ

ಧರ್ತ್ರಮಸ್ಯಂತರಿಕ್ಷಂ ದೃಗ್ಂಹ ಪ್ರಾಣಂ

---

ಧ್ರುವಮ್ । ಅಸಿ । ಪೃಥಿವೀಮ್ । ದೃಗ್ಂಹ । ಆಯುಃ । ದೃಗ್ಂಹ । ಪ್ರಜಾಮಿತಿ ಪ್ರ-ಜಾಮ್ । ದೃಗ್ಂಹ । ಸಜಾತಾನಿತಿ ಸ-ಜಾತಾನ್ । ಅಸ್ಮೈ । ಯಜಮಾನಾಯ। ಪರೀತಿ। ಊಹ। ಧರ್ತ್ರಮ್। ಅಸಿ। ಅಂತರಿಕ್ಷಮ್ । ದೃಗ್ಂಹ। ಪ್ರಾಣಮಿತಿ ಪ್ರ-ಅನಮ್।

---

| ಮಂತ್ರ | ವಿನಿಯೋಗ |
|---|---|
| ಧ್ರುವಮ್..........ಊಹ | ಮಧ್ಯಮ ಪುರೋಡಾಶಕಪಾಲವನ್ನಿಡಲು. |

---

(ಎಲ್ಯೆ ಕಪಾಲವೇ! ನೀನು) ಧ್ರುವಮ್ = ದೃಢವಾಗಿ; ಅಸಿ = ಇರುವೆ. (ನೀನು) ಪೃಥಿವೀಮ್ = ಭೂಮಿಯನ್ನು; ದೃಗ್ಂಹ = ದೃಢಪಡಿಸು; ಆಯುಃ = (ಯಜಮಾನನ) ಆಯುಸ್ಸನ್ನು; ದೃಗ್ಂಹ = ದೃಢಪಡಿಸು; ಪ್ರಜಾಮ್ = (ಯಜಮಾನನ) ಪ್ರಜೆಗಳನ್ನೂ (ಮಕ್ಕಳನ್ನೂ) ದೃಗ್ಂಹ = ದೃಢರಾಗಿರುವಂತೆ ಮಾಡು. ಅಸ್ಮೈ ಯಜಮಾನಾಯ = ಈ ಯಜಮಾನನ; ಸಜಾತಾನ್ = ಜ್ಞಾತಿಗಳನ್ನು; ಪರ್ಯೂಹ = ಸುತ್ತಲೂ ಇದ್ದು ಕೊಂಡು ಸೇವಿಸುವಂತೆ ಮಾಡು; +(ಎಲ್ಯೆ ಎರಡನೆಯ ಕಪಾಲವೇ! ನೀನು) ಧರ್ತ್ರಮ್ = ಧಾರಕನಾಗಿ; ಅಸಿ = ಇರುವೆ. (ನೀನು) ಅಂತರಿಕ್ಷಮ್ = ಅಂತರಿಕ್ಷವನ್ನು; ದೃಗ್ಂಹ = ದೃಢಪಡಿಸು; ಪ್ರಾಣಂ ದೃಗ್ಂಹ = ಯಜಮಾನನ ಪ್ರಾಣಗಳನ್ನು ದೃಢಪಡಿಸು;

---

ಕಪಾಲದಲ್ಲಿ ಅಗ್ನಿಯನ್ನಿಡುವುದರಿಂದ ಕಪಾಲಗಲ್ಲಿರುವ ರಾಕ್ಷಸರೂ, ಯಜ್ಞಶತ್ರುಗಳೂ ನಾಶವಾಗಲಿ(ಸುಟ್ಟುಹೋಗಲಿ).

ಎಲ್ಯೆ ಮಧ್ಯಮಕಪಾಲವೇ! ನೀನೂ ದೃಢವಾಗಿರುವೆ. ಯಜಮಾನನ ಆಯುಸ್ಸನ್ನು, ಮಕ್ಕಳನ್ನೂ ಗಟ್ಟಿಯಾಗಿ ಇರುವಂತೆ ಮಾಡು. ಯಜಮಾನನ ಜ್ಞಾತಿಗಳನ್ನು ಪ್ರೀತಿಯಿಂದ ಸುತ್ತುವರೆದು ಸೇವಿಸುವಂತೆ ಮಾಡು.

**ದೃಗ್ಂಹಾಪಾನಂ ದೃಗ್ಂಹ ಸಜಾತಾನಸ್ಮೈ ಯಜಮಾನಾಯ ಪರ್ಯೂಹ ಧರುಣಮಸಿ ದಿವಂ ದೃಗ್ಂಹ ಚಕ್ಷು [ಚಕ್ಷುಃ (೧) ದೃಗ್ಂಹ] ದೃಗ್ಂಹ**

---

ದೃಗ್ಂಹ । ಅಪಾನಮಿತ್ಯಪ-ಅನಮ್ । ದೃಗ್ಂಹ । ಸಜಾತಾನಿತಿ ಸ-ಜಾತಾನ್ । ಅಸ್ಮೈ। ಯಜಮಾನಾಯ । ಪರೀತಿ । ಊಹ । ಧರುಣಮ್ । ಅಸಿ । ದಿವಮ್ । ದೃಗ್ಂಹ। ಚಕ್ಷುಃ (೧)। ದೃಗ್ಂಹ ।

---

| ಮಂತ್ರ | ವಿನಿಯೋಗ |
|---|---|
| ಧರ್ತ್ರಮ್.......ಪರ್ಯೂಹ । | ಮಧ್ಯಮಕಪಾಲದ ಪೂರ್ವದಲ್ಲಿ ಎರಡನೆಯ ಕಪಾಲವನ್ನಿಡಲು. |
| ಧರುಣಮ್......ಪರ್ಯೂಹ । | ತೃತೀಯಕಪಾಲವನ್ನಿಡಲು. |

---

**ಅಪಾನಂ ದೃಗ್ಂಹ** = ಅಪಾನವನ್ನು ದೃಢಪಡಿಸು. **ಅಸ್ಮೈ** = ಈ; **ಯಜಮಾನಾಯ** = ಯಜಮಾನನ; **ಸಜಾತಾನ್** = ಜ್ಞಾತಿಗಳನ್ನು; **ಪರ್ಯೂಹ** = ಪ್ರೀತಿಯುಕ್ತರಾಗಿ ಸುತ್ತುವರೆದು ಸೇವಿಸುವಂತೆ ಮಾಡು. +ಎಲೈ ತೃತೀಯಕಪಾಲವೇ! (ನೀನು) **ಧರುಣಮ್ ಅಸಿ** = ಪುರೋಡಾಶಧಾರಕನೂ, ದೃಢನೂ ಆಗಿದ್ದೀಯೆ. (ನೀನು) **ದಿವಂ** = (ಯಜಮಾನನಿಗೆ) ದ್ಯುಲೋಕವನ್ನು; **ದೃಗ್ಂಹ** = ದೃಢಪಡಿಸು. **ಚಕ್ಷುಃ ದೃಗ್ಂಹ** = ಕಣ್ಣನ್ನು ದೃಢವಾಗಿರುವಂತೆ ಮಾಡು.

---

ಎಲೈ ದ್ವಿತೀಯಕಪಾಲವೇ! ನೀನು ಪುರೋಡಾಶವನ್ನು ಧರಿಸುವವನಾಗಿದ್ದೀಯೆ. ದೃಢನಾಗಿದ್ದೀಯೆ. ನೀನು ಯಜಮಾನನಲ್ಲಿ ಪ್ರಾಣಾಪಾನಗಳು ದೃಢವಾಗಿರುವಂತೆ ಮಾಡು. ಜ್ಞಾತಿಗಳೂ ಯಜಮಾನನ ಪರಿಚರರಾಗಿದ್ದು ಸೇವಿಸುವಂತೆ ಮಾಡು.

**ಶ್ರೋತ್ರಂ ದೃಗ್ಂಹ ಸಜಾತಾನಸ್ಮೈ ಯಜಮಾನಾಯ**

**ಪರ್ಯೂಹ ಧರ್ಮಾಸಿ ದಿಶೋ ದೃಗ್ಂಹ ಯೋನಿಂ ದೃಗ್ಂಹ**

---

ಶ್ರೋತ್ರಮ್ । ದೃಗ್ಂಹ । ಸಜಾತಾನಿತಿ ಸ-ಜಾತಾನ್ । ಅಸ್ಮೈ । ಯಜಮಾನಾಯ।

ಪರೀತಿ । ಊಹ । ಧರ್ಮಾ । ಅಸಿ । ದಿಶಃ । ದೃಗ್ಂಹ । ಯೋನಿಮ್ । ದೃಗ್ಂಹ।

---

| ಮಂತ್ರ | ವಿನಿಯೋಗ |
|---|---|
| ಧರ್ಮಾಸಿ.........ಪರ್ಯೂಹ । | ಸಪ್ತಮಕಪಾಲವನ್ನಿಡಲು.* |

---

ಶ್ರೋತ್ರಂ ದೃಗ್ಂಹ = ಕಿವಿಯನ್ನೂ ದೃಢಪಡಿಸು. ಸಜಾತಾನ್ ಅಸ್ಮೈ ಯಜಮಾನಾಯ ಪರ್ಯೂಹ = ಈ ಯಜಮಾನನ ಜ್ಞಾತಿಗಳು ಪ್ರೀತಿಯಿಂದ ಯಜಮಾನನ ಸುತ್ತಲೂ ಸೇವಿಸುತ್ತಾ ಇರುವಂತೆ ಮಾಡು. + (ಎಲೈ ಸಪ್ತಮಕಪಾಲವೇ!) ನೀನು ಧರ್ಮಾ ಅಸಿ = ಧಾರಕನೂ ದೃಢನೂ ಆಗಿರುವೆ; ದಿಶಃ ದೃಗ್ಂಹ = ದಿಕ್ಕುಗಳನ್ನು ದೃಢಪಡಿಸು. (ಯಾವ ದಿಕ್ಕಿನಲ್ಲಿಯೂ ತೊಂದರೆಯಾಗದಂತೆ ಮಾಡು). ಯೋನಿಮ್ = ಜನನೇಂದ್ರಿಯವನ್ನು; ದೃಗ್ಂಹ = ದೃಢಪಡಿಸು;

---

ಎಲೈ ತೃತೀಯಕಪಾಲವೇ! ಪುರೋಡಾಶಧಾರಕನಾಗಿರುವ ನೀನು ದೃಢನಾಗಿರುವೆ. ಯಜಮಾನನಿಗೆ ದ್ಯುಲೋಕವು ಸ್ಥಿರವಾಗುವಂತೆ ಮಾಡು. ಕಣ್ಣು, ಕಿವಿಗಳನ್ನೂ ದೃಢಪಡಿಸು. ಜ್ಞಾತಿಗಳನ್ನೂ ಯಜಮಾನನಿಗೆ ವಿಧೇಯರಾಗಿರುವಂತೆ ಮಾಡು.

(ಎಲೈ ಸಪ್ತಮಕಪಾಲವೇ!) ಪುರೋಡಾಶಧಾರಕನಾದ ನೀನು ದೃಢನಾಗಿ ಯಜಮಾನನಿಗೆ ದ್ಯುಲೋಕಸ್ಥಿತಿಯು ದೃಢವಾಗುವಂತೆ ಮಾಡು. ಯಜಮಾನನ ಜನನೇಂದ್ರಿಯವೂ, ಪ್ರಜೋತ್ಪಾದನಶಕ್ತಿಯೂ ಅಸ್ಖಲಿತವಾಗಿರುವಂತೆ ಮಾಡು. ಜ್ಞಾತಿ, ಬಾಂಧವರೂ ಯಜಮಾನನನ್ನು ಸೇವಿಸುತ್ತಾ ಸುತ್ತಲೂ ಇರುವಂತೆ ಮಾಡು.

ಎಲೈ ಅಷ್ಟಮಕಪಾಲವೇ! ನೀನು ವೃದ್ಧಿಗೊಳಿಸತಕ್ಕವನು. ಚಿತ್ತರೂಪನೂ ಆಗಿರುವೆ. ನೀನು ಯಜಮಾನನಿಗೆ ಪುತ್ರಸಂಪತ್ತನ್ನೂ, ಧನಸಂಪತ್ತನ್ನೂ ಕೊಡು.

---

*ಶ್ರೌತಸೂತ್ರದಲ್ಲಿ ಉಳಿದ ಕಪಾಲಗಳ ಉಪಧಾನಕ್ಕೆ ಶಾಖಾಂತರದ ಮಂತ್ರಗಳಿವೆ.

**ಪ್ರಜಾಂ ದೃಗ್ಂಹ ಸಜಾತಾನಸ್ಮೈ ಯಜಮಾನಾಯ ಪರ್ಯೂಹ ಚಿತಃ ಸ್ಥ ಪ್ರಜಾಮಸ್ಮೈ ರಯಿಮಸ್ಮೈ ಸಜಾತಾನಸ್ಮೈ ಯಜಮಾನಾಯ ಪರ್ಯೂಹ**

---

ಪ್ರಜಾಮಿತಿ ಪ್ರ-ಜಾಮ್ । ದೃಗ್ಂಹ । ಸಜಾತಾನಿತಿ ಸ-ಜಾತಾನ್ । ಅಸ್ಮೈ । ಯಜಮಾನಾಯ । ಪರೀತಿ । ಊಹ । ಚಿತಃ । ಸ್ಥ । ಪ್ರಜಾಮಿತಿ ಪ್ರ-ಜಾಮ್ । ಅಸ್ಮೈ। ರಯಿಮ್। ಅಸ್ಮೈ । ಸಜಾತಾನಿತಿ ಸ-ಜಾತಾನ್। ಅಸ್ಮೈ । ಯಜಮಾನಾಯ । ಪರೀತಿ। ಊಹ।

---

| ಮಂತ್ರ | ವಿನಿಯೋಗ |
|---|---|
| ಚಿತಃ ಸ್ಥ......ಪರ್ಯೂಹ। | ಎಂಟನೆಯ ಕಪಾಲವನ್ನು ಇಡಲು. |

---

ಪ್ರಜಾಮ್ ದೃಗ್ಂಹ = ಪ್ರಜೋತ್ಪಾದನಶಕ್ತಿಯನ್ನು ದೃಢಪಡಿಸು; ಸಜಾತಾನ್ ಅಸ್ಮೈ ಯಜಮಾನಾಯ ಪರ್ಯೂಹ = ಯಜಮಾನನ ಜ್ಞಾತಿ ಬಾಂಧವರು ಸುತ್ತುವರೆದು ದೃಢಪ್ರೀತಿಯಿಂದಿರುವಂತೆ ಮಾಡು; ❖ (ಎಲೈ ಅಷ್ಟಮಕಪಾಲವೇ!) (ನೀನು) ಚಿತಃ * ಸ್ಥ = ಚಿತ್ತ (ಮನಸ್ಸು)ಸ್ವರೂಪನಾಗಿರುವೆ. (ವೃದ್ಧಿಗೊಳಿಸುವವನಾಗಿರುವೆ.) (ನೀನು) ಅಸ್ಮೈ = ಈ; ಯಜಮಾನಾಯ = ಯಜಮಾನನಿಗೆ; ಪ್ರಜಾಮ್ = ಸಂತತಿಯನ್ನೂ; ಅಸ್ಮೈ = ಈ (ಯಜಮಾನನಿಗೆ); ರಯಿಮ್ = ಧನವನ್ನೂ; ಅಸ್ಮೈ = ಈ (ಯಜಮಾನನಿಗೆ); ಸಜಾತಾನ್ = ಜ್ಞಾತಿಬಾಂಧವರನ್ನೂ; ಪರ್ಯೂಹ = ಸುತ್ತುವರೆದಿರುವಂತೆ ಮಾಡು;

---

ಜ್ಞಾತಿಗಳು ಪ್ರೀತಿಯುಳ್ಳವರಾಗಿ ಯಜಮಾನನನ್ನು ಸುತ್ತುವರೆದಿರುವಂತೆ ಮಾಡು. ❖ಎಲೈಕಪಾಲಗಳೇ!ನೀವು ದೇವತೆಗಳ ತಪೋರೂಪವಾದ ಅಗ್ನಿಯಿಂದ ತಪ್ತರಾಗಿರಿ. ಭೃಗುವೇ ಮೊದಲಾದ ಮುನಿಗಳ ತಪೋರೂಪವಾದ ಅಗ್ನಿಯಿಂದ ತಪ್ತರಾಗಿರಿ. ನೀವು ತಪ್ತರಾಗಿ ಪುರೋಡಾಶವನ್ನು ಸಿದ್ಧಪಡಿಸಿರಿ.

---

*ಎಂಟನೆಯ ಕಪಾಲವು ಒಂದೇ. ಆದುದರಿಂದ 'ಚಿತಃ' ಎಂಬ ಬಹುವಚನವು ಆದರಾರ್ಥ.

ಭೃಗೂಣಾಮಂಗಿರಸಾಂ ತಪಸಾ ತಪ್ಯಧ್ವಂ ಯಾನಿ ಘರ್ಮೇ ಕಪಾಲಾನ್ಯುಪಚಿನ್ವಂತಿ ವೇಧಸಃ । ಪೂಷ್ಣಸ್ತಾನ್ಯಪಿ ವ್ರತ ಇಂದ್ರವಾಯೂ ವಿಮುಂಚತಾಮ್ ॥೭-11॥

[ಚಕ್ಷುರಷ್ಟಾಚತ್ವಾರಿಗ್‌ಂಶಚ್ಚ । ]

ಭೃಗೂಣಾಮ್ । ಅಂಗಿರಸಾಮ್ । ತಪಸಾ । ತಪ್ಯಧ್ವಮ್ । ಯಾನಿ । ಘರ್ಮೇ। ಕಪಾಲಾನಿ । ಉಪಚಿನ್ವಂತೀತ್ಯುಪ-ಚಿನ್ವಂತಿ । ವೇಧಸಃ ॥ ಪೂಷ್ಣಃ । ತಾನಿ । ಅಪೀತಿ। ವ್ರತೇ । ಇಂದ್ರವಾಯೂ ಇತೀಂದ್ರ-ವಾಯೂ । ವೀತಿ । ಮುಂಚತಾಮ್ ॥ ೭ ॥

| ಮಂತ್ರ | ವಿನಿಯೋಗ |
|---|---|
| ಭೃಗೂಣಾಂ.........ತಪ್ಯಧ್ವಮ್ । | ಕಪಾಲಗಳಲ್ಲಿ ಕೆಂಡಗಳನ್ನಿಡಲು. |
| ಯಾನಿ.........ಮುಂಚತಾಮ್ । | ಕಪಾಲಗಳನ್ನು ವಿಮೋಕ ಮಾಡಲು* |

+(ಎಲೈ ಕಪಾಲಗಳೇ!) ನೀವು ಭೃಗೂಣಾಮ್ ಅಂಗಿರಸಾಂ ತಪಸಾ = ದೇವತೆಗಳ ತಪೋರೂಪವಾದ ಅಗ್ನಿಯಿಂದ;(ಭೃಗುಗಳು, ಅಂಗಿರಸ್ಸುಗಳು ಮೊದಲಾದ ಮಹರ್ಷಿಗಳ ತಪೋರೂಪವಾದ) ತಪ್ಯಧ್ವಮ್ = ತಪ್ತರಾಗಿರಿ; (ಕಾಯಿಸಲ್ಪಟ್ಟವರಾಗಿರಿ) + ಇಂದ್ರವಾಯೂ = ಎಲೈ ಇಂದ್ರವಾಯುದೇವತೆಗಳೇ!; ವೇಧಸಃ = [ಯಾಗಕಾರ್ಯವಿಧಾಯಕರಾದ] ಅಧ್ವರ್ಯುಗಳು; ಯಾನಿ ಕಪಾಲಾನಿ = ಯಾವ ಕಪಾಲಗಳನ್ನು; ಘರ್ಮೇ = ಬಿಸಿಯಾದ ಅಂಗಾರದಲ್ಲಿ; ಉಪಚಿನ್ವಂತಿ = ಜೋಡಿಸಿದ್ದರೋ; ತಾನಿ ಅಪಿ=ಆ ಕಪಾಲಗಳನ್ನೂ; ಪೂಷ್ಣಃ=ಪೋಷಕನಾದ(ಯಜಮಾನನ); ವ್ರತೇ= ಯಾಗರೂಪವಾದ ವ್ರತವು (ಮುಗಿಯಲಾಗಿ); ವಿಮುಂಚತಾಮ್ = ಬೇರ್ಪಡಿಸಿರಿ (ತೆಗೆದುಹಾಕಿರಿ).

ಇಂದ್ರವಾಯು ದೇವತೆಗಳೇ! ಅಧ್ವರ್ಯುವು ಪುರೋಡಾಶಶ್ರಪಣಕ್ಕಾಗಿ ಕಪಾಲ

*ಇದು ಇಷ್ಟಿಯ ಸಮಾಪ್ತಿಯ ಸಮಯದಲ್ಲಿ ವಿನಿಯುಕ್ತವಾಗುವ ಮಂತ್ರ. ಕಪಾಲಗಳ ಪ್ರಸಂಗವಿದ್ದುದರಿಂದ ಇಲ್ಲಿಯೇ ಶ್ರುತಿಯು ತಿಳಿಸಿದೆ.

ಗಳನ್ನು ಮಂತ್ರಪೂರ್ವಕವಾಗಿ ಜೋಡಿಸಿರುವವನು. ಯಾಗವನ್ನು ಮಾಡಿ ದೇವತೆಗಳಿಗೆ ಪುಷ್ಟಿಯನ್ನುಂಟುಮಾಡುವ ಯಜಮಾನನ ಈ ಯಜ್ಞವು ಮುಗಿಯಿತು. ಈಗ ನೀವು ಆ ಕಪಾಲಗಳನ್ನು ವಿಮೋಚನಗೊಳಿಸಿರಿ.

## ವಿನಿಯೋಗಸಂಗ್ರಹ

[1]ಧೃಷ್ಟಿರಾದಾಯೋಪವೇಷಮಪಾ[2]ಂಗಾರೌ ವಿ.ರ್ಜಯೇತ್ ।
[3]ನಿಷ್ಕ್ರಾಪಸಾರಯೇದೇಕಮಾ ದೇವಾ[4]ನ್ಯಂ ತು ಶೇಷಯೇತ್ ॥
*ಧ್ರುವಂ[5] ಕಪಾಲಮಾಧಾಯ [6]ನಿರ್ದಾಂಗಾರಂ ತಥೋಪರಿ ।
ಧರ್ತ್ರಂ[7] ದ್ವಿತೀಯಂ ಧರುಣಂ[8] ತೃತೀಯಂ ಧರ್ಮ[9] ಸಪ್ತಮಮ್ ॥
[10]ಚಿತೋಽಷ್ಟಮಂ ಭೃಗೂ[11] ತೇಷು ಸರ್ವೇಷ್ವಂಗಾರರೋಪಣಮ್ ।
ಯಾನಿ[12] ಸ್ವಕಾಲೇ ಸಂಪ್ರಾಪ್ತೇ ಕಪಾಲಾನಿ ವಿಮುಂಚತಿ ।
ಅನುವಾಕೇ ಸಪ್ತಮೇಽಸ್ಮಿನ್ನುಕ್ತಾ ದ್ವಾದಶ ಮಂತ್ರಕಾಃ ॥

ಅನುವಾಕದಲ್ಲಿನ ಮಂತ್ರಗಳ ಸಂಖ್ಯೆ - 12

## ಅನುವಾಕದ ವಿಶೇಷ ವಿಷಯಗಳು

### ಅ) ಭ.ಭಾ. ಭಾಷ್ಯ

ಮಂತ್ರಸಂಖ್ಯೆ

೧) ಧೃಷ್ಟಿಃ = ಶತ್ರುಗಳನ್ನು ಎದುರಿಸಲು ಸಮರ್ಥವಾದುದು. (ಉಪವೇಷ)

೩) ಕ್ರವ್ಯಾದಮ್ = ಹಸಿಮಾಂಸಭಕ್ಷಕನಾದ ಚಿತಾಗ್ನಿಯನ್ನು; ನಿಃ ಸೇಧ = ನಿಷೇಧಿಸು.

೪) ದೇವಯಜಮ್ = ದೇವತೆಗಳಿಗೆ ಕೊಡಲು ಯೋಗ್ಯವಾದ ಹವಿಸ್ಸನ್ನು ಸಿದ್ಧಪಡಿಸುವ ಅಗ್ನಿಯನ್ನು; ಆವಹ = ಆಹ್ವಾನಿಸು.

೧೦) ಧ್ರುವಮ್ – ಮಧ್ಯಮಕಪಾಲ; ಧರ್ತ್ರಮ್ – ಮಧ್ಯಮದ ಪೂರ್ವಕ್ಕೆ ದ್ವಿತೀಯಕಪಾಲ; ಧರುಣಮ್ – ಮಧ್ಯಮದ ಪಶ್ಚಿಮಕ್ಕೆ ತೃತೀಯಕಪಾಲ; ಧರ್ಮ – ಮಧ್ಯಮದ ದಕ್ಷಿಣಕ್ಕೆ ಚತುರ್ಥಕಪಾಲ; ಚಿತಃ – ಉಳಿದ ಕಪಾಲಗಳು. ಹೀಗೆ ಉಪಧಾನಕ್ರಮವಿದೆ.

---

* ಕ್ರಿಯಾಕಲಾಪಕ್ಕೆ ಅನುಗುಣವಾಗಿ ಪೂರ್ವನಿರ್ದೇಶ.

೧೨) ಯಾನಿ...........ವಿಮುಂಚತಾಮ್। ಈ ಮಂತ್ರವು ಚತುಷ್ಪದಾನುಷ್ಟುಪ್ ಛಂದಸ್ಸಿನಲ್ಲಿದೆ. ಎಂಟು ಅಕ್ಷರಗಳ ನಾಲ್ಕು ಪಾದ.

ಪೂಷ್ಣಃ = ಪೋಷಕನಾದ ಅಗ್ನಿಯ; (ಸಾಯಣರ ಮತದಲ್ಲಿ ಯಜಮಾನನ ಎಂದರ್ಥ) ವ್ರತೇ = ಹವಿಃಶ್ರಪಣರೂಪವಾದ ಕಾರ್ಯವು; ಅಪೀತೇ = ಮುಗಿಯಲಾಗಿ; (ಶ್ರುತಿಯಲ್ಲಿ 'ಇತೇ' ಎಂಬ ಕ್ರಿಯಾಶಬ್ದವನ್ನು 'ಅಪಿ' ಎಂಬ ಉಪಸರ್ಗದಿಂದ ಅಧ್ಯಾಹಾರ ಮಾಡಿಕೊಳ್ಳಬೇಕು.)

### ಆ) ಮೀಮಾಂಸಾ

ಕಪಾಲಗಳನ್ನು ಇಡುವುದು ಏತಕ್ಕಾಗಿ?

'ಪುರೋಡಾಶಕಪಾಲೇನ ತುಷಾನುಪವಪತಿ' ಎಂಬ ವಾಕ್ಯದಿಂದ ಬತ್ತದ ಹೊಟ್ಟನ್ನೊಡನೆ ಕಪಾಲಗಳನ್ನು ಕೃಷ್ಣಾಜಿನದ ಕೆಳಗೆ ಇಡಬೇಕೆಂದು ತಿಳಿಯುತ್ತದೆ. 'ಕಪಾಲೇಷು ಶ್ರಪಯತಿ' ಎಂಬ ವಾಕ್ಯದಿಂದ ಪುರೋಡಾಶಶ್ರಪಣವನ್ನು ಕಪಾಲಗಳಲ್ಲಿ ಮಾಡಬೇಕೆಂದೂ ತಿಳಿಯುತ್ತದೆ. ಹೀಗಿರುವಾಗ ಕಪಾಲಗಳನ್ನು ಇಡುವುದು ಏತಕ್ಕಾಗಿ? ಪ್ರಯೋಜಕವಾದ(ಮುಖ್ಯ)ಕಾರ್ಯವು ಪುರೋಡಾಶಶ್ರಪಣವೇ? ಅಥವಾ ತುಷೋಪವಾಪವೇ? ಎರಡೂ ಪ್ರಯೋಜಕಕಾರ್ಯಗಳೆಂಬುದು ಇಲ್ಲಿನ ಪೂರ್ವಪಕ್ಷ.

ಸಿದ್ಧಾಂತವು ಹೀಗಿದೆ; ಪುರೋಡಾಶಶ್ರಪಣವೇ ಪ್ರಯೋಜಕವಾದ ಕಾರ್ಯ. 'ಪುರೋಡಾಶಕಪಾಲೇನ ತುಷಾನುಪವಪತಿ' ಎಂಬ ವಾಕ್ಯದಲ್ಲಿ ಪುರೋಡಾಶದ ಕಪಾಲದಿಂದ ಎಂಬ ಅರ್ಥವು ಸ್ವಾಭಾವಿಕವಾಗಿಯೇ ತೋರುವುದರಿಂದ ಪುರೋಡಾಶ ಶ್ರಪಣವೇ ಕಪಾಲೋಪಧಾನಕ್ಕೆ ಪ್ರಯೋಜಕ. ಪುರೋಡಾಶಶ್ರಪಣಕ್ಕಾಗಿ ಇರುವ ಕಪಾಲಗಳಿಂದ ಆಗುವ ತುಷೋಪವಾಪವು ಪ್ರಾಸಂಗಿಕವಾದುದು. ಆದುದರಿಂದ ಚರುತಂತ್ರದಲ್ಲಿ ತುಷೋಪವಾಪಕ್ಕಾಗಿ ಕಪಾಲವನ್ನು ತರಬೇಕಾಗಿಲ್ಲ. 'ಕಪಾಲೇನ' ಎಂಬ ತೃತೀಯಾಶ್ರುತಿಯು ಈ ರೀತಿಯ ಅಂಗತ್ವವನ್ನೇ ಬೋಧಿಸುತ್ತದೆ.

ಈ ಏಳನೆಯ ಅನುವಾಕದಲ್ಲಿ ಕಪಾಲೋಪಧಾನ (ಕಪಾಲಗಳನ್ನು ಇಡುವ ಕ್ರಮ, ಇತ್ಯಾದಿ)ವನ್ನು ವಿಸ್ತರವಾಗಿ ಹೇಳಿದ್ದಾಯಿತು. ಕಪಾಲಗಳನ್ನು ಇಟ್ಟ ನಂತರ ಕಪಾಲಗಳ ಮೇಲೆ ಪುರೋಡಾಶಶ್ರಪಣವನ್ನು ಮಾಡಬೇಕು. ಈ ಪುರೋಡಾಶಶ್ರಪಣಕ್ಕೆ ಸಂಬಂಧಿಸಿದ ಮಂತ್ರಗಳನ್ನು ಮುಂದಿನ ಎಂಟನೆಯ ಅನುವಾಕದಲ್ಲಿ ಶ್ರುತಿಯು ತಿಳಿಸುತ್ತದೆ.

## ॥ ಅಷ್ಟಮೋಽನುವಾಕಃ ॥

### ಸಂವಪಾಮಿ ಸಮಾಪೋ ಅದ್ಭಿರಗ್ಮತ ಸಮೋಷಧಯೋ
### ರಸೇನ ಸಗ್ಂ ರೇವತೀರ್ಜಗತೀಭಿರ್ಮಧುಮತೀ

---

ಸಮಿತಿ । ವಪಾಮಿ । ಸಮಿತಿ । ಆಪಃ । ಅದ್ಭಿರಿತ್ಯತ್-ಭಿಃ । ಅಗ್ಮತ । ಸಮಿತಿ । ಓಷಧಯಃ । ರಸೇನ । ಸಮಿತಿ । ರೇವತೀಃ । ಜಗತೀಭಿಃ । ಮಧುಮತೀರಿತಿ ಮಧು-ಮತೀಃ

---

| ಮಂತ್ರ | ವಿನಿಯೋಗ |
|---|---|
| ಸಂ ವಪಾಮಿ । ದೇವಸ್ಯ ತ್ವಾ ಸವಿತುಃ ಪ್ರಸವೇಽಶ್ವಿನೋರ್ಬಾಹುಭ್ಯಾಂ ಪೂಷ್ಣೋ ಹಸ್ತಾಭ್ಯಾಮಗ್ನಯೇ ಜುಷ್ಟಂ....ಎಂಬ ಮಂತ್ರವನ್ನು ಸೇರಿಸಿಕೊಳ್ಳಬೇಕು. [ದೇವಸ್ಯ....ಅಗ್ನೀಷೋಮಾಭ್ಯಾಂ....ಜುಷ್ಟಗ್ಂ ಸಂವಪಾಮಿ] | ಕೃಷ್ಣಾಜಿನದಿಂದ ಪಾತ್ರೆಗೆ ಹಿಟ್ಟನ್ನು ಹಾಕಲು |

---

[ದೇವಸ್ಯ......ಜುಷ್ಟಂ] ಸಂವಪಾಮಿ = [ಪಿಷ್ಟವನ್ನು ಪಾತ್ರೆಯಲ್ಲಿ] ಒಟ್ಟುಗೂಡಿಸಿ ಹಾಕುತ್ತೇನೆ. +ಆಪಃ = ಪ್ರಣೀತಾಪಾತ್ರದಲ್ಲಿರುವ(ಚಮಸ) ಜಲಗಳು ಅದ್ಭಿಃ = (ಮದಂತೀಪಾತ್ರೆಯಲ್ಲಿರುವ ಅಥವಾ ಕಾದಿರುವ] ನೀರುಗಳೊಡನೆ; ಸಮ್ ಅಗ್ಮತ = ಸೇರಲಿ; ಓಷಧಯಃ = ಪಿಷ್ಟರೂಪವಾದ ಓಷಧಿಗಳು; ರಸೇನ = [ಎರಡು ಬಗೆಯ] ನೀರಿನೊಡನೆ; ಸಮ್ [ಅಗ್ಮತ] = ಕೂಡಿಕೊಳ್ಳಲಿ. ರೇವತೀಃ = ಧನವತಿಯಾದ ನೀರುಗಳೇ! (ನೀವು) ಜಗತೀಭಿಃ = ಜಂಗಮಪಶ್ವಾದಿವೃದ್ಧಿಕಾರಣಗಳಾದ [ಓಷಧಿರೂಪವಾದ ಪಿಷ್ಟಗಳೊಡನೆ] ಸಂ ಪೃಚ್ಯಧ್ವಮ್ = ಚೆನ್ನಾಗಿ ಸೇರಿರಿ. ಮಧುಮತೀಃ = ಸಿಹಿಯಾಗಿರುವ

---

ಸವಿತೃದೇವನ ಅನುಮತಿಯನ್ನು ಪಡೆದು, ಅಶ್ವಿನೀದೇವತೆಗಳ ಬಾಹುಗಳಿಂದಲೂ, ಪೂಷದೇವನ ಕೈಗಳಿಂದಲೂ ಅಗ್ನಿಯೇ ಮೊದಲಾದ ದೇವತೆಗಳಿಗೆ ಪ್ರಿಯವಾಗುವಂತೆ,

## ಮಧುಮತೀಭಿಃ ಸೃಜ್ಯಧ್ವಮದ್ಭ್ಯಃ

## ಪರಿ ಪ್ರಜಾತಾಃ ಸ್ಥ ಸಮದ್ಭಿಃ ಪೃಚ್ಯಧ್ವಂ ಜನಯತ್ಯೈ ತ್ವಾ

---

ಮಧುಮತೀಭಿರಿತಿ ಮಧು-ಮತೀಭಿಃ । ಸೃಜ್ಯಧ್ವಮ್ । ಅದ್ಭ್ಯ ಇತ್ಯತ್-ಭ್ಯಃ । ಪರೀತಿ ಪ್ರಜಾತಾ ಇತಿ ಪ್ರ-ಜಾತಾಃ । ಸ್ಥ । ಸಮಿತಿ । ಅದ್ಭಿರಿತ್ಯತ್-ಭಿಃ । ಪೃಚ್ಯಧ್ವಮ್ । ಜನಯತ್ಯೈ । ತ್ವಾ ।

---

| ಮಂತ್ರ | ವಿನಿಯೋಗ |
|---|---|
| ಸಮಾಪೋ......ಸೃಜ್ಯಧ್ವಮ್ । | ಪ್ರಣೀತಾಜಲವನ್ನೂ, ಮದಂತೀಜಲವನ್ನೂ ಹಿಟ್ಟಿನಲ್ಲಿ ಹಾಕಲು—ಬೌಧಾಯನ<br>ಪ್ರಣೀತಾಜಲವನ್ನು ಹಿಟ್ಟಿನಲ್ಲಿ ಹಾಕಲು —ಆಪ. |
| ಅದ್ಭ್ಯಃ........ಪೃಚ್ಯಧ್ವಮ್ । | ನೀರಿನಿಂದ ಹಿಟ್ಟನ್ನು ಸುತ್ತಲೂ ನೆನೆಯಿಸಲು. |
| ಜನಯತ್ಯೈ......ಸಂಯೌಮಿ । | ಪಿಷ್ಟವನ್ನು ಮರ್ದಿಸಲು. |

---

ನೀರುಗಳೇ! ಮಧುಮತೀಭಿಃ = ರುಚಿಕರವಾದ ಓಷಧಿಪಿಷ್ಟಗಳೊಡನೆ; [ಸಂ ಸೃಜ್ಯಧ್ವಮ್ = ಚೆನ್ನಾಗಿ ಕೂಡಿಕೊಳ್ಳಿರಿ.] + ಪಿಷ್ಟರೂಪದಲ್ಲಿರುವ ಓಷಧಿಗಳೇ! (ನೀವು) ಅದ್ಭ್ಯಃ = ನೀರುಗಳ ದೆಸೆಯಿಂದಲೇ (ನೀರಿನಿಂದಲೇ) ಪರಿ ಪ್ರಜಾತಾಃ ಸ್ಥ = ಮೊದಲು ಹುಟ್ಟಿದವರಾಗಿರುವಿರಿ. (ನೀವು ಈಗ) ಅದ್ಭಿಃ = ನೀರುಗಳೊಡನೆ; ಸಂ ಪೃಚ್ಯಧ್ವಮ್ = ಚೆನ್ನಾಗಿ ಸಂಪರ್ಕವನ್ನು ಹೊಂದಿರಿ. + ಎಲೈ ಪಿಷ್ಟವೇ! ತ್ವಾ = ನಿನ್ನನ್ನು; ಜನಯತ್ಯೈ= ಯಜಮಾನನ ಪ್ರಜೋತ್ಪತ್ತಿಗಾಗಿ; ಸಂಯೌಮಿ = ಚೆನ್ನಾಗಿ ಮಿಶ್ರಿತವಾಗುವಂತೆ ಮಾಡುತ್ತೇನೆ.

---

ಪ್ರಿಯವಾದ ಹವ್ಯವನ್ನು ಒದಗಿಸಿಕೊಡುವ ಈ ಪಿಷ್ಟವನ್ನು ಕೃಷ್ಣಾಜಿನದಿಂದ ಪಾತ್ರೆಯಲ್ಲಿ ಹಾಕುತ್ತೇನೆ. ✿ ಪ್ರಣೀತಾಜಲವು ಮದಂತೀಜಲದೊಡನೆ ಸಂಗತವಾಗಲಿ. ಓಷಧಿ ಪಿಷ್ಟಗಳು ನೀರಿನೊಡನೆ ಮಿಶ್ರಿತವಾಗಲಿ. ಸರ್ವಧನಸಾಧನವಾದ ನೀರು ಜಂಗಮವಾದ ಪಶುವೇ ಮೊದಲಾದವುಗಳ ಅಭಿವೃದ್ಧಿಗೆ ಕಾರಣವಾದ ಓಷಧಿಪಿಷ್ಟದೊಡನೆ ಸೇರಲಿ. ಸಿಹಿಯಾದ ನೀರು ರುಚಿಕರವಾದ ಹಿಟ್ಟಿನೊಡನೆ ಸೇರಲಿ.

# ಸಂಯೌಮ್ಯಗ್ನಯೇತ್ವಾಗ್ನೀಷೋಮಾಭ್ಯಾಂ ಮಖಸ್ಯ ಶಿರೋಽಸಿ

ಸಮಿತಿ । ಯೌಮಿ । ಅಗ್ನಯೇ । ತ್ವಾ । ಅಗ್ನೀಷೋಮಾಭ್ಯಾಮಿತ್ಯಗ್ನೀ-ಸೋಮಾಭ್ಯಾಮ್।

ಮಖಸ್ಯ । ಶಿರಃ। ಅಸಿ ।

| ಮಂತ್ರ | ವಿನಿಯೋಗ |
| --- | --- |
| ಅಗ್ನಯೇ ತ್ವಾಗ್ನೀಷೋಮಾಭ್ಯಾಮ್ । | ಪಿಷ್ಟವನ್ನು ಅಭಿಮರ್ಶಿಸಲು(ಸ್ಪರ್ಶನ) |
| ಮಖಸ್ಯ ಶಿರೋಽಸಿ । | ಪಿಷ್ಟವನ್ನು ಉಂಡೆಯನ್ನಾಗಿ ಮಾಡಲು |

+ಎಲೈ ಪಿಷ್ಟವೇ! ತ್ವಾ = ನಿನ್ನನ್ನು; ಅಗ್ನಯೇ = ದೇವತೆಯಾದ ಅಗ್ನಿಗಾಗಿ; (ಸ್ಪೃಶಾಮಿ = ಸ್ಪರ್ಶಿಸುತ್ತೇನೆ) [ಹಾಗೆಯೇ]; ಅಗ್ನೀಷೋಮಾಭ್ಯಾಮ್ = ಅಗ್ನೀಷೋಮದೇವತೆಗಳಿಗಾಗಿ; (ತ್ವಾ ಸ್ಪೃಶಾಮಿ) =ನಿನ್ನನ್ನು ಸ್ಪರ್ಶಿಸುತ್ತೇನೆ. + [ಎಲೈ ಪಿಷ್ಟಪಿಂಡವೇ! ನೀನು] ಮಖಸ್ಯ = ಯಾಗದ; ಶಿರಃ = ತಲೆಯು(ಮುಖ್ಯಾಂಗವು) ಅಸಿ = ಆಗಿರುವೆ; +(ಎಲೈ ಪುರೋಡಾಶವೇ! ನೀನು)

ಓಷಧಿಗಳೇ! ನೀವು ಈಗ ಪಿಷ್ಟರೂಪದಲ್ಲಿದ್ದೀರಿ. ನೀವು ಮೊದಲು ನೀರಿನಿಂದಲೇ ಜನಿಸಿದವರು. ಈಗ ನೀರಿನೊಡನೆ ಚೆನ್ನಾಗಿ ಬೆರೆತುಕೊಳ್ಳಿರಿ.

ಎಲೈ ಪಿಷ್ಟವೇ! ನಾನು ನಿನ್ನನ್ನು ಚೆನ್ನಾಗಿ ನಾದುತ್ತೇನೆ. ಶುಕ್ರಶೋಣಿತ ಸಂಯೋಗದಂತೆ ಚೆನ್ನಾಗಿ ನಾದಿದುದರಿಂದ ನೀರಿನೊಡನೆ ಸೇರಿದ ನೀನು ಯಜಮಾನನ ಪ್ರಜೋತ್ಪತ್ತಿಗೆ ಕಾರಣನಾಗುವೆ. ದೇವತೆಗಳ ಅನುಗ್ರಹವನ್ನು ಸಂಪಾದಿಸಲು ಕಾರಣನಾಗುವ ನೀನು ಆ ಅನುಗ್ರಹದಿಂದಾಗುವ ಪ್ರಜೋತ್ಪತ್ತಿಗೂ ಕಾರಣನಾಗುವೆ.

ಎಲೈ ಪಿಷ್ಟವೇ! ಅಗ್ನಿ ಮತ್ತು ಅಗ್ನೀಷೋಮದೇವತೆಗಳಿಗಾಗಿ ನಿನ್ನನ್ನು ಸ್ಪರ್ಶಿಸುತ್ತೇನೆ. ಈ ಸ್ಪರ್ಶದಿಂದ ಈ ಯಾಗದ ದೇವತೆಗಳನ್ನು ಬೇರೆ ದೇವತೆಗಳಿಂದ ಪ್ರತ್ಯೇಕಿಸಿದಂತೆ ಆಗುತ್ತದೆ.

ಎಲೈ ಪಿಷ್ಟಪಿಂಡವೇ! ದೇವತೋದ್ದೇಶ್ಯಕದ್ರವ್ಯತ್ಯಾಗರೂಪ(ದೇವತೆಗಳನ್ನು ಉದ್ದೇಶಿಸಿ ಹವಿಸ್ಸಿನ ಅರ್ಪಣೆ)ವಾದ ಯಾಗದಲ್ಲಿ ನೀನು ತಲೆಯಂತೆ ಮುಖ್ಯಾಂಗನಾಗಿರುವೆ.

**ಘರ್ಮೋಽಸಿ ವಿಶ್ವಾಯುರುರು ಪ್ರಥಸ್ವೋರು ತೇ**

**ಯಜ್ಞಪತಿಃ ಪ್ರಥತಾಂ ತ್ವಚಂ ಗೃಹ್ಣೀಷ್ವಾಂತರಿತಗ್ಂ**

---

ಘರ್ಮಃ । ಅಸಿ । ವಿಶ್ವಾಯುರಿತಿ ವಿಶ್ವ-ಆಯುಃ । ಉರು । ಪ್ರಥಸ್ವ । ಉರು । ತೇ । ಯಜ್ಞಪತಿರಿತಿ ಯಜ್ಞ-ಪತಿಃ । ಪ್ರಥತಾಮ್ । ತ್ವಚಮ್ । ಗೃಹ್ಣೀಷ್ವ । ಅಂತರಿತಮಿತ್ಯಂತಃ - ಇತಮ್ ।

---

| ಮಂತ್ರ | ವಿನಿಯೋಗ |
|---|---|
| ಘರ್ಮಃ........ವಿಶ್ವಾಯುಃ । | ಹಿಟ್ಟಿನ ಉಂಡೆಯನ್ನು ಕಪಾಲಗಳಲ್ಲಿ ಬೇಯಲು ಇಡಲು. |
| ಉರು.........ಪ್ರಥತಾಮ್ । | ಕಪಾಲಗಳಲ್ಲಿ ಪುರೋಡಾಶವನ್ನು ತಟ್ಟಿ ಹರಡಲು. |
| ತ್ವಚಂ ಗೃಹ್ಣೀಷ್ವ । | ಹಿಟ್ಟಿನ ಮೇಲೆ ನೀರನ್ನು ಹಾಕಲು |

---

ಘರ್ಮಃ = (ಕಾದಿರುವ ಕಪಾಲಗಳಲ್ಲಿ ಇಡುವುದರಿಂದ) ತಪ್ತನಾಗಿ, ದೇವತಾಯೋಗ್ಯನಾಗಿ; ವಿಶ್ವಾಯುಃ = ಸಂಪೂರ್ಣ ಆಯುಸ್ಸನ್ನು ಕೊಡುವವನೂ; ಅಸಿ = ಆಗಿರುವೆ; +[ಎಲೈ ಪುರೋಡಾಶವೇ! ನೀನು] ಉರು = ಚೆನ್ನಾಗಿ; ಪ್ರಥಸ್ವ = ಹರಡಿಕೋ; ತೇ = ನಿನ್ನ; ಯಜ್ಞಪತಿಃ = ಯಜ್ಞದ ಒಡೆಯನಾದ ಯಜಮಾನನು; ಉರು = ಚೆನ್ನಾಗಿ; ಪ್ರಥತಾಮ್ = ಪ್ರಜೆ(ಮಕ್ಕಳು) ಪಶು ಮೊದಲಾದವುಗಳಿಂದ ಹರಡಿಕೊಳ್ಳಲಿ. (ಪೂರ್ಣನಾಗಲಿ). +(ಎಲೈ ಪುರೋಡಾಶವೇ! ನೀನು) ತ್ವಚಂ = (ನೀರುಗಳಿಂದ) ಚರ್ಮವನ್ನು (ಹಳ್ಳ ತಿಟ್ಟುಗಳಿಲ್ಲದೆ ಸಮನಾಗಿರುವಿಕೆಯನ್ನು) ಗೃಹ್ಣೀಷ್ವ = ಸ್ವೀಕರಿಸು; +[ಪ್ರದೀಪ್ತವಾದ ಈ ದರ್ಭೆಗಳಿಂದ ಮಾಡಲ್ಪಡುವ ಈ ಪರ್ಯಗ್ನಿಕರಣದಿಂದ]

---

ಎಲೈ ಪುರೋಡಾಶವೇ! ನೀನು ಕಾದಿರುವ ಕಪಾಲಗಳಲ್ಲಿ ತಪ್ತನಾಗಿ ದೇವತಾಯೋಗ್ಯನಾಗಿರುವೆ. ದೇವತೆಗಳನ್ನು ತೃಪ್ತಿಪಡಿಸಿ ಅವರ ಅನುಗ್ರಹದಿಂದ ಯಜಮಾನನು ಪೂರ್ಣಾಯುಸ್ಸನ್ನು ಪಡೆಯುವಂತೆಯೂ ಮಾಡುತ್ತೀಯೆ. ✿ ಎಲೈ ಪುರೋಡಾಶವೇ! ನೀನು ಎಲ್ಲ ಕಪಾಲಗಳಲ್ಲಿಯೂ ವಿಸ್ತರಿಸು. ನಿನ್ನ ಯಜಮಾನನು ಪ್ರಜೆಗಳಿಂದಲೂ, ಪಶುಗಳಿಂದಲೂ ಪೂರ್ಣನಾಗಿ ಪ್ರಕಾಶಿಸಲಿ.

**ರಕ್ಷೋಽಂತರಿತಾ ಅರಾತಯೋ ದೇವಸ್ತ್ವಾ ಸವಿತಾ ಶ್ರಪಯತು**
**ವರ್ಷಿಷ್ಠೇ ಅಧಿ ನಾಕೇಽಗ್ನಿಸ್ತೇ ತನುವಂ ಮಾತಿಧಾಗಗ್ನೇ**

---

ರಕ್ಷಃ । ಅಂತರಿತಾ ᳚ಇತ್ಯಂತಃ-ಇತಾಃ । ಅರಾತಯಃ । ದೇವಃ । ತ್ವಾ । ಸವಿತಾ । ಶ್ರಪಯತು। ವರ್ಷಿಷ್ಠೇ । ಅಧೀತಿ । ನಾಕೇ । *ಅಗ್ನಿಃ । ತೇ । ತನುವಮ್ । ಮಾ । ಅತೀತಿ। ಧಾಕ್* । ಅಗ್ನೇ ।

---

| ಮಂತ್ರ | ವಿನಿಯೋಗ |
|---|---|
| ಅಂತರಿತಗ್‌ಂ.....ಅರಾತಯಃ । | ಹವಿಸ್ಸುಗಳ ಪರ್ಯಗ್ನಿಕರಣಕ್ಕಾಗಿ |
| ದೇವಃ...........ಧಾಕ್ । | ಪುರೋಡಾಶವನ್ನು ಶ್ರಪಣ(ಬೇಯಿಸುವುದು) ಮಾಡಲು —ಬೌಧಾಯನ |
| ೧) ದೇವಃ.........ನಾಕೇ । | ಪುರೋಡಾಶದ ಮೇಲೆ ಕೆಂಡವನ್ನು ಹಾಕಿ ಬೇಯಿಸಲು. |
| ೨) ಅಗ್ನಿಃ.........ಧಾಕ್ । | ಪುರೋಡಾಶದ ಮೇಲೆ ದರ್ಭೆಗಳ ಜ್ವಲನ-ಆಪ. |

---

**ರಕ್ಷಃ** = ರಾಕ್ಷಸರು; **ಅಂತರಿತಮ್** = ಕಣ್ಣಿಗೆ ಕಾಣದಂತೆ ಮಾಡಲ್ಪಡಲಿ; **ಅರಾತಯಃ** = ಶತ್ರುಗಳೂ; **ಅಂತರಿತಾಃ** = ಅಡಗಿಸಲ್ಪಡಲಿ; +[ಎಲೈ ಪುರೋಡಾಶವೇ!] **ವರ್ಷಿಷ್ಠೇ** = ಚೆನ್ನಾಗಿ ವೃದ್ಧಿಹೊಂದಿದ; **ನಾಕೇ** = ನಾಕವೆಂಬ ಹೆಸರುಳ್ಳ ಅಗ್ನಿಯಲ್ಲಿ; **ತ್ವಾ ಅಧಿ** = ನಿನ್ನನ್ನು ಮೇಲಿಟ್ಟು; **ಸವಿತಾ ದೇವಃ** = ಸರ್ವಪ್ರೇರಕನಾದ ಸವಿತೃದೇವನು; **ಶ್ರಪಯತು** = ಪಕ್ವಮಾಡಲಿ; **ಅಗ್ನಿಃ** = ಅಗ್ನಿದೇವನು; **ತೇ** = ನಿನ್ನ; **ತನುವಮ್** = ಮೈಯನ್ನು; **ಮಾ ಅತಿಧಾಕ್** = ಅತ್ಯಂತವಾಗಿ ಸುಡದಿರಲಿ; +**ಅಗ್ನೇ!** = ಹೇ ಗಾರ್ಹಪತ್ಯಾಗ್ನಿಯೇ!;

---

ಲೋಕದಲ್ಲಿ ಮಾಂಸವು ಚರ್ಮದಿಂದ ಆವೃತವಾಗಿರುವಂತೆ ನೀನು ನೀರಿನಿಂದ ಒಂದೇ ಸಮನಾಗಿ ಮಾಡಲ್ಪಟ್ಟವನಾಗಿ ಚರ್ಮಾವೃತನಂತಿರು.

ಮೂರು ಬಾರಿ ದರ್ಭೆಗಳಿಂದ ಪರ್ಯಗ್ನಿಕರಣವನ್ನು ಮಾಡುವುದರಿಂದ ಯಜ್ಞವಿಘಾತಕರಾದ ರಾಕ್ಷಸರೂ, ಶತ್ರುಗಳೂ ಅಡಗಿಹೋಗಲಿ.

**ಹವ್ಯಗ್ಂ ರಕ್ಷಸ್ವ ಸಂ ಬ್ರಹ್ಮಣಾ ಪೃಚ್ಯಸ್ವೈಕತಾಯ ಸ್ವಾಹಾ ದ್ವಿತಾಯ ಸ್ವಾಹಾ ತ್ರಿತಾಯ ಸ್ವಾಹಾ ||೮-12||**

**[ಸವಿತಾ ದ್ವಾವಿಗ್ಂಶತಿಶ್ಚ | ]**

---

ಹವ್ಯಮ್ | ರಕ್ಷಸ್ವ | ಸಮಿತಿ | ಬ್ರಹ್ಮಣಾ | ಪೃಚ್ಯಸ್ವ | ಏಕತಾಯ | ಸ್ವಾಹಾ | ದ್ವಿತಾಯ | ಸ್ವಾಹಾ | ತ್ರಿತಾಯ | ಸ್ವಾಹಾ || ೮ ||

---

| ಮಂತ್ರ | ವಿನಿಯೋಗ |
|---|---|
| ಅಗ್ನೇ ಹವ್ಯಗ್ಂ ರಕ್ಷಸ್ವ \| | ಗಾರ್ಹಪತ್ಯಾಗ್ನಿಯ ಅಭಿಮಂತ್ರಣವನ್ನು ಮಾಡಲು —ಬೌಧಾಯನ<br>ಅಗ್ನಿಃ.....ಧಾಕ್ ಎಂಬ ಹಿಂದಿನ ಮಂತ್ರದ ಶೇಷ —ಆಪಸ್ತಂಬ |
| ಸಂ ಬ್ರಹ್ಮಣಾ ಪೃಚ್ಯಸ್ವ \| | ಕೆಂಡದಿಂದ ಕೂಡಿದ ಭಸ್ಮವನ್ನು ಪುರೋಡಾಶದ ಮೇಲಿಡಲು. |
| ಏಕತಾಯ...ತ್ರಿತಾಯ ಸ್ವಾಹಾ \| | ಪಾತ್ರೆಯನ್ನು ತೊಳೆದ ನೀರನ್ನು ವೇದಿಯ ಒಳಗಿನ ಮೂರು ರೇಖೆಗಳಲ್ಲಿ ಬಿಡಲು. |

---

ಹವ್ಯಮ್ =[ದೇವತೆಗಳಿಗೆ ಕೊಡುವ ಈ ಪುರೋಡಾಶ] ಹವ್ಯವನ್ನು; ರಕ್ಷಸ್ವ = ಕಾಪಾಡು; +[ಎಲೈ ಪುರೋಡಾಶವೇ! ನೀನು] ಬ್ರಹ್ಮಣಾ= ಮಂತ್ರದಿಂದ; ಸಂ ಪೃಚ್ಯಸ್ವ = ಕೂಡಿದವನಾಗು; [ಬ್ರಹ್ಮಣಾ=ಬೃಹತ್ತಾದ ಭಸ್ಮದಿಂದ; ಸಂ ಪೃಚ್ಯಸ್ವ=ಕೂಡಿದವನಾಗು] +[ಈಪಿಷ್ಟ ಪಾತ್ರೀಪ್ರಕ್ಷಾಲನೋದಕವು] ಏಕತಾಯ=ಏಕತನಿಗೆ; ಸ್ವಾಹಾ = ಹುತವಾಗಲಿ, +ದ್ವಿತಾಯ = ದ್ವಿತನಿಗೆ; ಸ್ವಾಹಾ = ಹುತವಾಗಲಿ; +ತ್ರಿತಾಯ = ತ್ರಿತನಿಗೆ; ಸ್ವಾಹಾ = ಹುತವಾಗಲಿ.

---

[ಎಲೈ ಪುರೋಡಾಃ ವೇ!] ಸವಿತೃದೇವನು ದೇವಲೋಕದಲ್ಲಿರುವ ನಾಕವೆಂಬ ಹೆಸರಿನ ಅಗ್ನಿಯಲ್ಲಿ ನಿನ್ನನ್ನು ಬೇಯಿಸಿ ಪಕ್ವಮಾಡಲಿ. ಅಗ್ನಿದೇವನು ನಿನ್ನನ್ನು ಹೆಚ್ಚಾಗಿ ಸುಡದಿರಲಿ. [ದಗ್ಧವಾಗ ಃ:ತೆ ಮಾಡದಿಗಲಿ].

ಹೇ ಗಾರ್ಹಪತ್ಯಾಗ್ನಿಯೇ! ನೀನು ಈ ಪುರೋಡಾಶದ ಹವಿಸ್ಸನ್ನು ರಕ್ಷಿಸು.

ಎಲೈ ಪುರೋಡಾಶವೇ! ನೀನು ಮಂತ್ರಯುಕ್ತನಾಗಿರು. ಇದರಿಂದ ಯಜಮಾನನ ಪಶುಗಳಿಗೆ ತೊಂದರೆಯಾಗದಿರಲಿ. ಭಸ್ಮದಿಂದ ಯುಕ್ತನಾಗಿ ಯಜಮಾನನು ಪ್ರಜೆಗಳಿಂದಲೂ, ಪಶುಗಳಿಂದಲೂ ಕೂಡಿಕೊಂಡಿರುವಂತೆ ಆಗಲಿ.

ದೇವತೆಗಳು ತನ್ನಲ್ಲಿಟ್ಟ ವೀರ್ಯವನ್ನು ಅಗ್ನಿಯು ನೀರಿನಲ್ಲಿ ಒಂದು ಬಾರಿ ತ್ಯಜಿಸಿದಾಗ ಏಕತನು ಜನಿಸಿದನು. ಎರಡನೆಯ ಬಾರಿ ತ್ಯಜಿಸಿದಾಗ ದ್ವಿತನು ಜನಿಸಿದನು. ಮೂರನೆಯ ಬಾರಿ ತ್ಯಜಿಸಿದಾಗ ತ್ರಿತನು ಜನಿಸಿದನು. ಅವರಿಗೆ ಈ ಪಾತ್ರ-ಪ್ರಕ್ಷಾಲನೋದಕವು ಹುತವಾಗಲಿ. [ಸಮರ್ಪಿತವಾಗಲಿ.]

## ವಿನಿಯೋಗ ಸಂಗ್ರಹ

ಸಂವಪಾಮಿ[1] ಹವಿರ್ವಾಪಃ ಸಮಾ[2] ತತ್ರ ಜಲಂ ಕ್ಷಿಪೇತ್ ।
ಅದ್ಭ್ಯಃ[3] ಸಂಪ್ಲಾವ್ಯ ತಪ್ತಾಭಿರ್ಜಾನ[4] ಸಂಯೌತ್ಯಶೇಷತಃ ॥
ಆಗ್ನ್ಯಾಗ್ನೀ[5,6] ನಿರ್ದಿಶೇದ್ಭಾಗೌ ಮಖ[7] ಪಿಂಡಂ ಕರೋತಿ ಹಿ ।
ಘರ್ಮಃ[8] ಕಪಾಲೇ ನಿಕ್ಷಿಪ್ಯ ಪ್ರಥಯೇದುರು[9] ಮಂತ್ರತಃ ॥
ತ್ವಚಂ[10] ಶ್ಲಕ್ಷ್ಣೀಕರೋತ್ಯದ್ಭಿರಂತಃ[11] ಪರ್ಯಗ್ನ್ಯಯೋ ಕೃತಿಃ ।
ಶ್ರಪಯತ್ಯುಲ್ಮುಕೈರ್ದೇವೋ[12] ಹ್ಯಗ್ನಿಸ್ತೇ[13] ಜ್ವಾಲ್ಯತೇ ಕುಶೈಃ ॥
ಸಂ[14] ವೇದೇನ ಚ ಸಾಂಗಾರಭಸ್ಮನಾಚ್ಛಾದಯೇದ್ಧವಿಃ ।
[15,16,17]ಏಕಾಂತರ್ವೇದಿ ಲೇಖಾಸು ಕ್ಷಾಲನಂ ನಿನಯೇತ್ತ್ರಿಭಿಃ ।
ಅನುವಾಕೇಽಷ್ಟಮೇ ಸಪ್ತದಶ ಮಂತ್ರಾಃ ಪ್ರಕೀರ್ತಿತಾಃ ।

ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ ಆಪಸ್ತಂಬ - 17
ಬೌಧಾಯನ - 17

## ಅನುವಾಕದ ವಿಶೇಷ ವಿಷಯಗಳು

## ಅ) ಭ.ಭಾ. ಭಾಷ್ಯ

ಮಂತ್ರಸಂಖ್ಯೆ

೧) ಸಂವಪಾಮಿ = ಸಹ ಪ್ರಕ್ಷಿಪಾಮಿ = ಜೊತೆಯಲ್ಲಿ ಹಾಕುತ್ತೇನೆ. 'ಸಮ್' ಎಂಬ ಉಪಸರ್ಗಕ್ಕೆ ಇಲ್ಲಿ ಒಗ್ಗೂಡಿಸುವಿಕೆ ಎಂದು ಅರ್ಥ.

೨) ಸಮಾಪೋ........ಸೃಜ್ಯಧ್ವಮ್. ಇದು 'ಉಪರಿಷ್ಟಾದ್ಬೃಹತೀ' ಛಂದಸ್ಸು.

ಅಕ್ಷರ ಸಂಖ್ಯೆ— ವಸು ಅಷ್ಟ ವಸು ಆದಿತ್ಯ

8 8 8 12 = 36

ಓಷಧಯಃ = ಓಷಾಃ ಧೀಯಂತೇ ಆಸು ಇತಿ = ಪಾಕ ಅಥವಾ ದಾಹವು ಯಾವುದರಲ್ಲಿ ಇಡಲ್ಪಡುತ್ತದೆಯೋ ಅದು ಓಷಧಿ. (ಬೇಯಿಸಲ್ಪಡತಕ್ಕದ್ದು)

೩) ಅದ್ಭ್ಯಃ.........ಪೃಚ್ಯಧ್ವಮ್ । ಏಕಪದಾ ಗಾಯತ್ರೀ ಛಂದಸ್ಸು. ಕಡೆಯಲ್ಲಿ ಯಜುಸ್ಸು ಇದೆ.

೧೧) ಅಂತರಿತಂ.......ಅರಾತಯಃ । ಯಜುರಾದಿಕಾ ಏಕಪದಾ ಗಾಯತ್ರೀ ಛಂದಸ್ಸು.

೧೨) ವರ್ಷಿಷ್ಠೇ ಅಧಿ ನಾಕೇ = ಅತ್ಯಂತ ವೃದ್ಧಿಯುಳ್ಳ ಸುಖಸ್ವರೂಪದ ಸ್ವರ್ಗನಿಮಿತ್ತವಾಗಿ(ಸ್ವರ್ಗಕ್ಕಾಗಿ) ಎಂದರ್ಥ. ವರ್ಷಿಷ್ಠೇ ನಾಕೇ ಎಂದು ಅನ್ವಯ ಮಾಡಿರುತ್ತಾರೆ. 'ಅಧಿ' ಎಂಬುದು ಸಪ್ತಮ್ಯರ್ಥದ್ಯೋತಕ ಅಥವಾ ನಾಕೇ ಅಧಿ = ಈಶ್ವರನಾದ ನಾಕನೆಂಬ ಅಗ್ನಿಯಿಂದ ರಕ್ಷಿಸಲ್ಪಡುವ ನಿನ್ನನ್ನು, ಶ್ರಪಯತು = ಬೇಯಿಸಲಿ.

೧೫) ಏಕತ, ದ್ವಿತ ಮತ್ತು ತ್ರಿತರು ಅಗ್ನಿಷ್ವಾತ್ತನೇ ಮೊದಲಾದ ಪಿತೃಗಳು. (ಸಾಯಣರು ದೇವವಿಶೇಷಗಳೆಂದು ವಿವರಿಸಿರುತ್ತಾರೆ.)

ಆ) ಮೀಮಾಂಸಾ

ಚಾತುರ್ಮಾಸ್ಯಪ್ರಕರಣದಲ್ಲಿ

'ಯತ್ಪರುಷಿ ದಿನಮ್ । ತದ್ದೇವಾನಾಮ್ । ಯದಂತರಾ । ತನ್ಮನುಷ್ಯಾಣಾಮ್ ।

ಯತ್ಸಮೂಲಮ್ । ತತ್ಪಿತೃಣಾಮ್ । ಸಮೂಲಂ ಬರ್ಹಿರ್ಭವತಿ ವ್ಯಾವೃತ್ತ್ಯೈ ॥

ಎಂಬುದಾಗಿ ಮಹಾಪಿತೃಯಜ್ಞದ ದರ್ಭೆಯು ಮೂಲಸಹಿತವಾಗಿ ಇರಬೇಕೆಂದು ತಿಳಿಸಲಾಗಿದೆ.

ಅಂತೆಯೇ ಜ್ಯೋತಿಷ್ಟೋಮಯಾಗದ ಪ್ರಕರಣದಲ್ಲಿ

'ಘೃತಂ ದೇವಾನಾಂ ಮಸ್ತು ಪಿತೃಣಾಂ ನಿಷ್ಪಕ್ವಂ ಮನುಷ್ಯಾಣಾಂ ತದ್ವ,

ಏತತ್ಸರ್ವದೇವತ್ಯಂ ಯನ್ನವನೀತಂ ಯನ್ನವನೀತೇನಾಭ್ಯಙ್ಕ್ತೇ ಸರ್ವಾ ಏವ

ದೇವತಾಃ ಪ್ರೀಣಾತಿ'

ಎಂಬುದಾಗಿ ದೀಕ್ಷೆಯ ಅಂಗವಾದ ಅಭ್ಯಂಗದಲ್ಲಿ ನವನೀತವನ್ನು ಬಳಸಬೇಕೆಂದು ತಿಳಿಸಲಾಗಿದೆ.

ದರ್ಶ-ಪೂರ್ಣಮಾಸೇಷ್ಟಿಯಲ್ಲಿ

'ಯೋ ವಿದಗ್ಧಃ ಸ ನೈರ್‌ಋತೋ ಯೋಽಶೃತಃ ಸ ರೌದ್ರೋ ಯಃ ಶೃತಃ

ಸ ಸದೇವಸ್ತಸ್ಮಾದವಿದಹತಾ ಶೃತಂಕೃತ್ಯಃ ಸದೇವತ್ವಾಯ'



ಎಂಬುದಾಗಿ ಹವಿಸ್ಸು ಅತಿಪಕ್ವವೂ, ಅಪಕ್ವವೂ ಆಗಿರದೆ ದೇವತೆಗಳಿಗೆ ಸರಿಯಾಗಿ ಪಕ್ವವಾಗಿರಬೇಕೆಂದು ತಿಳಿಸಲಾಗಿದೆ.

ಪ್ರೈಷವಾಕ್ಯದಲ್ಲಿ 'ಅವಿದಹಂತಃ ಶ್ರಪಯತ । ಎಂಬ ಮಂತ್ರವೂ 'ಶೃತಕಾಮಾ ಇವ ಹಿ ದೇವಾಃ । ಎಂಬ ಬ್ರಾಹ್ಮಣವಾಕ್ಯವೂ ಇದೆ.

ಈ ಮೇಲಿನ ಚಾತುರ್ಮಾಸ್ಯ, ಜ್ಯೋತಿಷ್ಟೋಮ ಮತ್ತು ದರ್ಶ-ಪೂರ್ಣಮಾಸ ಗಳಲ್ಲಿ ಯಾವುದು ವಿಧಿವಾಕ್ಯ ಯಾವುದು ಅರ್ಥವಾದವೆಂಬುದನ್ನು ಸಾಯಣರು ವಿವರಿಸಿರುತ್ತಾರೆ.

'ನಿವೀತಂ ಮನುಷ್ಯಾಣಾಂ ಪ್ರಾಚೀನವೀತಂ ಪಿತೃಣಾಮುಪವೀತಂ ದೇವಾನಾಮುಪ ವ್ಯಯತೇ' ಎಂಬಲ್ಲಿ 'ಉಪವೀತಂ ದೇವಾನಾಮುಪವ್ಯಯತೇ' ಎಂಬುದು ವಿಧಿವಾಕ್ಯವೆಂದೂ, ಉಳಿದ ವಾಕ್ಯಸಮೂಹವು ಅರ್ಥವಾದವೆಂದು ತಿಳಿಸಿರುವಂತೆ ಮೇಲಿನ ಮೂರು ಸಂದರ್ಭಗಳಲ್ಲಿ 'ಸಮೂಲಂ ಬರ್‌ಹಿರ್ಭವತಿ' 'ನವನೀತೇನಾಭ್ಯಙ್ಕ್ತೇ' 'ಅವಿದಹತಾ ಶೃತಂಕೃತ್ಯಃ' ಇವು ವಿಧಿವಾಕ್ಯಗಳು. ಉಳಿದ ವಾಕ್ಯಗಳು ಆ ವಿಧಿಯನ್ನು ಪ್ರಶಂಸೆ ಮಾಡುವ ಸ್ತಾವಕವಾದ ಅರ್ಥವಾದಗಳು.

ಈ ಎಂಟನೆಯ ಅನುವಾಕದಲ್ಲಿ ಪುರೋಡಾಶಶ್ರಪಣವು ಹೇಳಲ್ಪಟ್ಟಿದೆ. ಸಿದ್ಧವಾದ ಪುರೋಡಾಶವನ್ನು ವೇದಿಯಲ್ಲಿ ಇಡಬೇಕಾದುದರಿಂದ ಮುಂದಿನ ಒಂಬತ್ತನೆಯ ಅನುವಾಕದಲ್ಲಿ ವೇದಿಕರಣವನ್ನು ಹೇಳಲಾಗಿದೆ.

## ॥ ನವಮೋಽನುವಾಕಃ ॥

ಆದದ ಇಂದ್ರಸ್ಯ ಬಾಹುರಸಿ ದಕ್ಷಿಣಃ ಸಹಸ್ರಭೃಷ್ಟಿಃ

ಶತತೇಜಾ ವಾಯುರಸಿ ತಿಗ್ಮತೇಜಾಃ

ಏತಿ । ದದೇ । ಇಂದ್ರಸ್ಯ । ಬಾಹುಃ । ಅಸಿ । ದಕ್ಷಿಣಃ । ಸಹಸ್ರಭೃಷ್ಟಿರಿತಿ ಸಹಸ್ರ-ಭೃಷ್ಟಿಃ।
ಶತತೇಜಾ ಇತಿ ಶತ-ತೇಜಾಃ । *ವಾಯುಃ । ಅಸಿ । ತಿಗ್ಮತೇಜಾ ಇತಿ ತಿಗ್ಮ-ತೇಜಾಃ।*

| ಮಂತ್ರ | ವಿನಿಯೋಗ |
|---|---|
| ಆದದೇ । [ದೇವಸ್ಯ...ಹಸ್ತಾಭ್ಯಾಮ್] | ಸ್ಫ್ಯವನ್ನು ತೆಗೆದುಕೊಳ್ಳಲು ಎಂಬ ಮಂತ್ರವನ್ನು ಸೇರಿಸಿಕೊಳ್ಳಬೇಕು. |
| ಇಂದ್ರಸ್ಯ..........ತಿಗ್ಮತೇಜಾಃ । | ಸ್ಫ್ಯವನ್ನು ಅಭಿಮಂತ್ರಿಸಲು —ಆಪಸ್ತಂಬ |
| ೧) ಇಂದ್ರಸ್ಯ......ಶತತೇಜಾಃ । | ಸ್ಫ್ಯವನ್ನು ಅಭಿಮಂತ್ರಿಸಲು. |
| ೨) ವಾಯುಃ....ತಿಗ್ಮತೇಜಾಃ । | ಸ್ಫ್ಯತನೂಕರಣಕ್ಕಾಗಿ(ದರ್ಭೆಯಿಂದ ತೀಡುವುದು)-ಬೌ |

[ಸವಿತೃದೇವನ ಅನುಮತಿಯಾಗಲು ಅಶ್ವಿನೀದೇವತೆಗಳ ತೋಳುಗಳಿಂದ ಮತ್ತು ಪೂಷದೇವನ ಕೈಗಳಿಂದ ನಿನ್ನನ್ನು] ಆದದೇ = ತೆಗೆದುಕೊಳ್ಳುತ್ತೇನೆ. +[ಎಲೈ ಸ್ಫ್ಯವೇ! ನೀನು] ಇಂದ್ರಸ್ಯ = ಇಂದ್ರನ; ದಕ್ಷಿಣಃ ಬಾಹುಃ = ಬಲತೋಳಾಗಿ (ಬಲತೋಳಿನಂತೆ ಸಮರ್ಥನಾಗಿ); ಅಸಿ = ಇದ್ದೀಯೆ. ಸಹಸ್ರಭೃಷ್ಟಿಃ= ಸಹಸ್ರಸಂಖ್ಯೆಯ ಶತ್ರುಗಳಿಗೆ ಮಾರಕನಾದ (ಬಾಹುವಾಗಿರುವೆ); ಶತತೇಜಾಃ = ತೇಜೋಯುಕ್ತವಾದ ಶತಸಂಖ್ಯೆಯ ಆಯುಧಗಳುಳ್ಳ (ಬಾಹುವಾಗಿರುವೆ)+ತಿಗ್ಮತೇಜಾಃ=ತೀಕ್ಷ್ಣವಾದ ಅಗ್ನಿಜ್ವಾಲೆಯನ್ನುಂಟು ಮಾಡುವ; ವಾಯುಃ ಅಸಿ = ವಾಯುವಾಗಿರುವೆ. [ಸ್ತಂಬಚ್ಛೇದಾದಿ (ದರ್ಭೆಯನ್ನು

ಎಲೈ ಸ್ಫ್ಯವೇ! ಸವಿತೃದೇವನ ಅನುಮತಿಯನ್ನು ಪಡೆದು, ಅಶ್ವಿನೀದೇವತೆಗಳ ಬಾಹುಗಳಿಂದ, ಪೂಷದೇವನ ಹಸ್ತಗಳಿಂದ ನಿನ್ನನ್ನು ತೆಗೆದುಕೊಳ್ಳುತ್ತೇನೆ.

ಪೃಥಿವಿ ದೇವಯಜನ್ಯೋಷಧ್ಯಾಸ್ತೇ ಮೂಲಂ
ಮಾ ಹಿಗ್ಂಸಿಷಮಪಹತೋಽರರುಃ ಪೃಥಿವ್ಯೈ

ಪೃಥಿವಿ । ದೇವಯಜನೀತಿ ದೇವ-ಯಜನಿ । ಓಷಧ್ಯಾಃ । ತೇ । ಮೂಲಮ್ । ಮಾ। ಹಿಗ್ಂಸಿಷಮ್ । ಅಪಹತ ಇತ್ಯಪ-ಹತಃ । ಅರರುಃ । ಪೃಥಿವ್ಯೈ ।

| ಮಂತ್ರ | ವಿನಿಯೋಗ |
|---|---|
| ಪೃಥಿವಿ........ಹಿಗ್ಂಸಿಷಮ್ । | ವೇದಿಯ ಒಳಗಡೆ ದರ್ಭೆಯನ್ನಿಟ್ಟು ಸ್ಫ್ಯದಿಂದ ಪ್ರಹರಿಸಲು. |
| ಅಪಹತ..........ಪೃಥಿವ್ಯೈ । | ಹುಲ್ಲಿನಿಂದ ಕೂಡಿದ ಧೂಳನ್ನು ಸ್ಫ್ಯದಿಂದ ಎತ್ತಿಕೊಳ್ಳಲು. |

ಕತ್ತರಿಸುವುದು) ತೀಕ್ಷ್ಣಕಾರ್ಯಗಳನ್ನು ಮಾಡುವುದರಿಂದ ವಾಯುಸದೃಶನಾಗಿರುವೆ.]
+ದೇವಯಜನಿ = ದೇವಯಾಗಕ್ಕೆ ಆಶ್ರಯಳಾಗಿರುವ; ಪೃಥಿವಿ = ಭೂಮಿಯೇ! ತೇ = ನಿನ್ನ ಓಷಧ್ಯಾಃ = ಓಷಧಿಗಳ (ಸಸ್ಯಾದಿಗಳ) ಮೂಲಂ = ಬೇರನ್ನು; ಮಾ ಹಿಗ್ಂಸಿಷಮ್ = ನಾನು ನಾಶಪಡಿಸುವುದಿಲ್ಲ; +ಅರರುಃ = ಅರರುವೆಂಬ ಅಸುರನು; ಪೃಥಿವ್ಯೈ = ಭೂಮಿಯ ದೆಸೆಯಿಂದ; ಅಪಹತಃ = ದೂರ ಮಾಡಲ್ಪಟ್ಟನು. [ಈ ಧೂಳಿನ

ಎಲೈ ಸ್ಫ್ಯವೇ! ನೀನು ಸಹಸ್ರಸಂಖ್ಯೆಯ ದಾನವರನ್ನು ಸಂಹರಿಸುವ, ಉಗ್ರವಾದ ತೇಜೋಯುಕ್ತವಾದ ಶತಸಂಖ್ಯೆಯ ಆಯುಧಗಳನ್ನು ಪ್ರಯೋಗಿಸುವ ಇಂದ್ರನ ದಕ್ಷಿಣ ಭುಜವಾಗಿದ್ದೀಯೆ. ಅಗ್ನಿಯ ಜ್ವಾಲೆಯನ್ನು ವೃದ್ಧಿಗೊಳಿಸುವ ವಾಯುವಿಗೆ ಸದೃಶನೂ ಆಗಿರುವೆ.

ಈ ಮಂತ್ರದಿಂದ ಪರಿಶುದ್ಧಳಾಗಿ ದೇವತೆಗಳ ಯಾಗಕ್ಕೆ ಆಶ್ರಯವಾಗಲು ಯೋಗ್ಯಳಾಗಿರುವ ಭೂದೇವಿಯೇ! ನಾನು ನಿನ್ನಲ್ಲಿ ಬೆಳೆಯುವ ಓಷಧಿಗಳ ಬೇರನ್ನು ನಾಶಪಡಿಸುವುದಿಲ್ಲ.

ದೇವತೆಗಳು ಪೃಥಿವಿಯಲ್ಲಿ ಅಡಗಿಕೊಂಡಿದ್ದ ಅರರುವೆಂಬ ಅಸುರನನ್ನು ಈ ಮಂತ್ರದಿಂದ ಹೊರಹಾಕಿದರು. ಈಗ ಈ ಮಂತ್ರವನ್ನು ಹೇಳಿ ಹುಲ್ಲಿನಿಂದ ಕೂಡಿದ

ವ್ರಜಂ ಗಚ್ಛ ಗೋಸ್ಥಾನಂ ವರ್ಷತು ತೇ ದ್ಯೌರ್ಬಧಾನ ದೇವ

---

ವ್ರಜಮ್ । ಗಚ್ಛ । ಗೋಸ್ಥಾನಮಿತಿ ಗೋ-ಸ್ಥಾನಮ್ । ವರ್ಷತು । ತೇ । ದ್ಯೌಃ । ಬಧಾನ । ದೇವ ।

---

| ಮಂತ್ರ | ವಿನಿಯೋಗ |
|---|---|
| ವ್ರಜಂ......ಗೋಸ್ಥಾನಮ್ । | ಧೂಳನ್ನು ತೆಗೆದುಕೊಂಡು ಹೋಗಲು |
| ವರ್ಷತು ತೇ ದ್ಯೌಃ । | ವೇದಿಯನ್ನು ತಿರುಗಿ ನೋಡಲು. |

---

ತೆಗೆಯುವಿಕೆಯಿಂದ ದೂರ ಮಾಡಲ್ಪಟ್ಟನು). + (ಎಲೈ ತೃಣಸಹಿತಪಾಂಸುವೇ!) ಗೋಸ್ಥಾನಮ್ = ಗೋವಿನ ಸ್ಥಾನವಾದ (ಗೋವಿಗೆ =ಆಗ್ನೀಧ್ರನು ಹೇಳುವ ಪ್ರತ್ಯಾಶ್ರಾವಣವೆಂಬ ಗೋವಿಗೆ = ಶಬ್ದಕ್ಕೆ, ಸ್ಥಾನ = (ಪ್ರತ್ಯಾಶ್ರಾವಣವನ್ನು ಹೇಳುವ) ಸ್ಥಾನವಾಗಿರುವ) ವ್ರಜಮ್ = ಉತ್ಕರಪ್ರದೇಶವನ್ನು; ಗಚ್ಛ = ಹೊಂದು; + ಎಲೈ ವೇದಿಯೇ! ತೇ = ನಿನ್ನ ಶಾಂತಿಗಾಗಿ(ಸಮಾಧಾನಪಡಿಸುವುದಕ್ಕಾಗಿ) ದ್ಯೌಃ = (ದ್ಯುಶಬ್ದದಿಂದ ಲಾಕ್ಷಣಿಕವಾಗಿ ತಿಳಿಸಲ್ಪಡುವ) ಪರ್ಜನ್ಯನು; ವರ್ಷತು = ಮಳೆಗರೆಯಲಿ.

---

ಧೂಳನ್ನು ಎತ್ತಿಹಾಕುವುದರಿಂದ ಯಜ್ಞಶತ್ರುವಾದ ಅರರುವು ದೂರಕ್ಕೆ ತಳ್ಳಲ್ಪಟ್ಟನು.

ಇಲ್ಲಿ ಗೋವೆಂದರೆ ಮಾತು. ಆಗ್ನೀಧ್ರನು ಪ್ರತ್ಯಾಶ್ರಾವಣವೆಂಬ ವಚನವನ್ನು ಉತ್ಕರದಲ್ಲಿ ನಿಂತು ಹೇಳುತ್ತಾನೆ. ಆದುದರಿಂದ ಉತ್ಕರವು ಗೋಸ್ಥಾನವಾಯಿತು. ಎಲೈ ಹುಲ್ಲಿನಿಂದ ಕೂಡಿದ ಧೂಳಿಯೇ! ನೀನು ಗೋಸ್ಥಾನವಾದ ಉತ್ಕರಪ್ರದೇಶವನ್ನು ಹೊಂದು. ✽ ಎಲೈ ವೇದಿಯೇ! ನೀನು ಸ್ಫ್ಯದಿಂದ ಪ್ರಹರಿಸಲ್ಪಟ್ಟಿರುವೆ. ಪರ್ಜನ್ಯನು ಮಳೆಗರೆದು ನಿನ್ನನ್ನು ಸಮಾಧಾನಪಡಿಸಲಿ.

ಹೇ ಸವಿತೃದೇವನೇ! ನಮ್ಮನ್ನು ದ್ವೇಷಿಸುವ ಶತ್ರುವನ್ನೂ, ನಾವು ದ್ವೇಷಿಸುವ ಹಗೆಯನ್ನೂ ಸತೃಣಪಾಂಸುರೂಪದಿಂದ ಈ ಉತ್ಕರಪ್ರದೇಶದಲ್ಲಿ ಹಾಕುತ್ತೇನೆ. ಅವರಿಬ್ಬರನ್ನೂ ನೀನು ನೂರು ಪಾಶಗಳಿಂದ ಅತ್ಯಂತ ದೂರವಾದ ಪ್ರದೇಶದಲ್ಲಿ ಬಂಧಿಸಿಡು. ಅವರಿಬ್ಬರನ್ನೂ ಈ ಬಂಧನದಿಂದ ಬಿಡಬೇಡ.

**ಸವಿತಃ ಪರಮಸ್ಯಾಂ ಪರಾವತಿ ಶತೇನ ಪಾಶೈರ್ಯೋಽಸ್ಮಾ ನ್ದ್ವೇಷ್ಟಿ ಯಂ ಚ ವಯಂ ದ್ವಿಷ್ಮಸ್ತಮತೋ ಮಾ ಮೌಗಪಹ ತೋಽರರುಃ ಪೃಥಿವ್ಯೈ ದೇವಯಜನ್ಯೈ ವ್ರಜಂ [(೧)ಗಚ್ಛ]ಗಚ್ಛ**

ಸವಿತಃ । ಪರಮಸ್ಯಾಮ್ । ಪರಾವತೀತಿ ಪರಾ-ವತಿ । ಶತೇನ । ಪಾಶೈಃ । ಯಃ । ಅಸ್ಮಾನ್ । ದ್ವೇಷ್ಟಿ । ಯಮ್ । ಚ । ವಯಮ್ । ದ್ವಿಷ್ಮಃ । ತಮ್ । ಅತಃ। ಮಾ । ಮೌಕ್ । ಅಪಹತ ಇತ್ಯಪ-ಹತಃ । ಅರರುಃ । ಪೃಥಿವ್ಯೈ । ದೇವಯಜನ್ಯಾ ಇತಿ ದೇವ-ಯಜನ್ಯೈ । ವ್ರಜಮ್ । ಗಚ್ಛ।

| ಮಂತ್ರ | ವಿನಿಯೋಗ |
|---|---|
| ಬಧಾನ..........ಮೌಕ್ । | ಉತ್ಕರದಲ್ಲಿ ಧೂಳನ್ನು ಹಾಕಲು. |

[ಪೃಥಿವಿ....ಮಾ ಹಿಗ್ಂಸಿಷಮ್] ಅಪಹತೋ.....ದೇವಯಜನ್ಯೈ । ದರ್ಭಪ್ರಹರಣ ಮತ್ತು ಹುಲ್ಲಿನಿಂದ ಕೂಡಿದ ಧೂಳನ್ನು ಸ್ಫ್ಯದಿಂದ ಎತ್ತಿಕೊಳ್ಳಲು. ಪರ್ಯಾಯ-೨

+(ಹೇ) **ದೇವ ಸವಿತಃ** = ಸರ್ವಪ್ರೇರಕನಾದ ಸವಿತೃದೇವನೇ! **ಯಃ** = ಯಾವನು; **ಅಸ್ಮಾನ್** = ನಮ್ಮನ್ನು; **ದ್ವೇಷ್ಟಿ** = ದ್ವೇಷಿಸುತ್ತಾನೆಯೋ; **ಚ** = ಮತ್ತು; **ಯಮ್** = ಯಾವನನ್ನು; **ವಯಮ್** = ನಾವು; **ದ್ವಿಷ್ಮಃ** = ದ್ವೇಷಿಸುತ್ತೇವೆಯೋ; (ಸತೃಣಪಾಂಸುರೂಪದಲ್ಲಿರುವ ಆ ಇಬ್ಬರನ್ನೂ) **ಶತೇನ ಪಾಶೈಃ**= ನೂರು ಹಗ್ಗಗಳಿಂದ; **ಪರಮಸ್ಯಾಂ ಪರಾವತಿ** = ಅತ್ಯಂತ ದೂರದೇಶದಲ್ಲಿ; **ಬಧಾನ** = ಬಂಧಿಸು; **ತಮ್** = ಆ ಪುರುಷದ್ವಯವನ್ನು; **ಅತಃ**=ಈ ಬಂಧನದ ದೆಸೆಯಿಂದ; **ಮಾ ಮೌಕ್**= ಬಿಡಬೇಡ. [ಎರಡನೆಯ ಪರ್ಯಾಯ] ಪೃಥಿವಿ...ಹಿಗ್ಂಸಿಷಮ್ [ಹಿಂದಿನಂತೆಯೇ ಅರ್ಥ] +**ಅರರುಃ** = ಅಸುರನಾದ ಅರರುವು; **ದೇವಯಜನ್ಯೈ** = ದೇವಯಾಗಕ್ಕೆ ಆಶ್ರಯವಾಗಿರುವ; **ಪೃಥಿವ್ಯೈ** = ಭೂಪ್ರದೇಶದ

[ಎರಡನೆಯ ಪರ್ಯಾಯ] ಪೃಥಿವಿ....= ಪ್ರಥಮಪರ್ಯಾಯದಂತೆಯೇ. ಹುಲ್ಲಿನಲ್ಲಿ ಕೂಡಿದ ಧೂಳನ್ನು ಎರಡನೆಯ ಬಾರಿ ತೆಗೆಯುವುದರಿಂದ ದೇವಯಾಗಾರ್ಹವಾದ

## ಗೋಸ್ಥಾನಂ ವರ್‌ಷತು ತೇ ದ್ಯೌರ್ಬಧಾನ ದೇವ ಸವಿತಃ ಪರಮಸ್ಯಾಂ ಪರಾವತಿ ಶತೇನ ಪಾಶೈರ್ಯೋಽಸ್ಮಾನ್ದ್ವೇಷ್ಟಿ ಯಂ ಚ ವಯಂ

---

ಗೋಸ್ಥಾನಮಿತಿ ಗೋ-ಸ್ಥಾನಮ್ । ವರ್‌ಷತು । ತೇ । ದ್ಯೌಃ । ಬಧಾನ । ದೇವ। ಸವಿತಃ । ಪರಮಸ್ಯಾಮ್ । ಪರಾವತೀತಿ ಪರಾ-ವತಿ । ಶತೇನ । ಪಾಶೈಃ । ಯಃ । ಅಸ್ಮಾನ್ । ದ್ವೇಷ್ಟಿ । ಯಮ್ । ಚ । ವಯಮ್ ।

---



| ಮಂತ್ರ | ವಿನಿಯೋಗ |
|---|---|
| ವ್ರಜಂ............ಗೋಸ್ಥಾನಮ್ । | ಧೂಳನ್ನು ತೆಗೆದುಕೊಂಡು ಹೋಗಲು |
| ವರ್‌ಷತು.............ದ್ಯೌಃ । | ವೇದಿಯನ್ನು ತಿರುಗಿ ನೋಡಲು |
| ಬಧಾನ.............ಮೌಕ್ । | ಉತ್ಕರದಲ್ಲಿ ಪಾಂಸುನಿರಸನ. |

---

ದೆಸೆಯಿಂದ; ಅಪಹತಃ = ತೆಗೆದುಹಾಕಲ್ಪಟ್ಟನು; +ವ್ರಜಂ.....ಗೋಸ್ಥಾನಮ್ (ಪ್ರಥಮ ಪರ್ಯಾಯದಂತೆಯೇ) + ವರ್‌ಷತು....ದ್ಯೌಃ [ಪ್ರಥಮಪರ್ಯಾಯದಂತೆಯೇ] +ಬಧಾನ....ಮೌಕ್ = [ಪ್ರಥಮಪರ್ಯಾಯದಂತೆಯೇ] [ಮೂರನೆಯ ಪರ್ಯಾಯ] ಪೃಥಿವಿ......ಹಿಗ್‌ಂಸಿಷಮ್ [ಹಿಂದಿನಂತೆಯೇ ಅರ್ಥ] +[ಹಲ್ಲಿನಿಂದ ಕೂಡಿದ ಧೂಳನ್ನು ತೆಗೆದುಕೊಳ್ಳುವುದರಿಂದ] ಅದೇವಯಜನಃ = ದೇವಯಾಗಭೂಮಿಯಲ್ಲಿ ಆಶ್ರಯ ವಿಲ್ಲದ; ಅರರುಃ =ಅರರು ರಾಕ್ಷಸನು; ಪೃಥಿವ್ಯಾಃ = ಯಾಗಭೂಮಿಯ ದೆಸೆಯಿಂದ;

---

ಭೂಮಿಯಿಂದ ಅಸುರನಾದ ಅರರುವನ್ನು ತೆಗೆದುಹಾಕಿದಂತಾಯಿತು. ✿[ವ್ರಜಂ....... ಗೋಸ್ಥಾನಮ್]. ಹಿಂದಿನಂತೆಯೇ ತಾತ್ಪರ್ಯ. ✿ [ವರ್‌ಷತು....ದ್ಯೌಃ] ಹಿಂದಿನಂತೆಯೇ ತಾತ್ಪರ್ಯ.

# ದ್ವಿಷ್ಮಸ್ತಮತೋ ಮಾ ಮೌಗಪಹತೋಽರರುಃ ಪೃಥಿವ್ಯಾ ಅದೇವಯಜನೋ ವ್ರಜಂ ಗಚ್ಛ ಗೋಸ್ಥಾನಂ ವರ್ಷತು ತೇ ದ್ಯೌರ್ಬಧಾನ ದೇವ ಸವಿತಃ ಪರಮಸ್ಯಾಂ ಪರಾವತಿ ಶತೇನ ಪಾಶೈರ್ಯೋಽಸ್ಮಾ-

ದ್ವಿಷ್ಮಃ । ತಮ್ । ಅತಃ । ಮಾ । ಮೌಕ್ । ಅಪಹತ ಇತ್ಯಪ-ಹತಃ । ಅರರುಃ। ಪೃಥಿವ್ಯಾಃ । ಅದೇವಯಜನ ಇತ್ಯದೇವ-ಯಜನಃ । ವ್ರಜಮ್ । ಗಚ್ಛ । ಗೋಸ್ಥಾನಮಿತಿ ಗೋ-ಸ್ಥಾನಮ್ । ವರ್ಷತು । ತೇ । ದ್ಯೌಃ । ಬಧಾನ । ದೇವ । ಸವಿತಃ । ಪರಮಸ್ಯಾಮ್। ಪರಾವತೀತಿ ಪರಾ-ವತಿ । ಶತೇನ । ಪಾಶೈಃ । ಯಃ । ಅಸ್ಮಾನ್ ।

| ಮಂತ್ರ | [ಪರ್ಯಾಯ ೩] | ವಿನಿಯೋಗ |
|---|---|---|
| [ಪೃಥಿವಿ.....ಮಾ ಹಿಗ್ಂಸಿಷಮ್] | | ದರ್ಭ ಪ್ರಹರಣ |
| ಅಪಹತ.............ಅದೇವಯಜನಃ । | | ಸತೃಣಪಾಂಸುವಿನ ಆದಾನ. |
| ವ್ರಜಂ..........ಗೋಸ್ಥಾನಮ್ । | | ಧೂಳಿಹರಣ |
| ವರ್ಷತು............ದ್ಯೌಃ । | | ವೇದಿಪ್ರತ್ಯವೇಕ್ಷಣ. |
| ಬಧಾನ..............ಮೌಕ್ । | | ಉತ್ಕರದಲ್ಲಿ ಪಾಂಸುನಿರಸನ. |

**ಅಪಹತಃ** = ದೂರೀಕರಿಸಲ್ಪಟ್ಟನು. +ವ್ರಜಂ...........**ಗೋಸ್ಥಾನಮ್** [ದ್ವಿತೀಯ ಪರ್ಯಾಯದಂತೆಯೇ] + **ವರ್ಷತು ತೇ ದ್ಯೌಃ** [ದ್ವಿತೀಯಪರ್ಯಾಯದಂತೆಯೇ]

❁[ಬಧಾನ........ಮೌಕ್] ಹಿಂದಿನಂತೆಯೇ ತಾತ್ಪರ್ಯ. ❁ [ಮೂರನೆಯ ಪರ್ಯಾಯ] ಪೃಥಿವಿ........ಮಾ ಹಿಗ್ಂಸಿಷಮ್ [ಹಿಂದಿನಂತೆಯೇ ತಾತ್ಪರ್ಯ]

ನ್ದ್ವೇಷ್ಟಿ ಯಂ ಚವಯಂ ದ್ವಿಷ್ಮಸ್ತಮತೋಮಾ(೨)[ಮೌಗ ರರುಸ್ತೇ] ಮೌಗರರುಸ್ತೇ ದಿವಂ ಮಾಸ್ಕಾನ್ ವಸವಸ್ತ್ವಾ

---

ದ್ವೇಷ್ಟಿ । ಯಮ್। ಚ । ವಯಮ್ । ದ್ವಿಷ್ಮಃ । ತಮ್ । ಅತಃ । ಮಾ । ಮೌಕ್। ಅರರುಃ । ತೇ । ದಿವಮ್ । ಮಾ । ಸ್ಕಾನ್ । ವಸವಃ । ತ್ವಾ ।

---

| ಮಂತ್ರ | ವಿನಿಯೋಗ |
|---|---|
| ಅರರುಃ............ಸ್ಕಾನ್ । | ಆಗ್ನೀಧ್ರನು ಸತೃಣಪಾಂಸುಗಳನ್ನು ಬೊಗಸೆಯಲ್ಲಿ ತೆಗೆಯುಕೊಳ್ಳಲು. |



---

+ಬಧಾನ..........ಮೌಕ್ [ದ್ವಿತೀಯಪರ್ಯಾಯದಂತೆಯೇ] +[ಎಲೈ ಸತೃಣಪಾಂಸು ಸಮೂಹವೇ!] ತೇ= ನಿನ್ನ [ನಿನ್ನಲ್ಲಿ ಬದ್ಧನಾದ] ಅರರುಃ = ಅಸುರನಾದ ಅರರುವು; ದಿವಮ್ = ಸ್ವರ್ಗವನ್ನು; ಮಾ ಸ್ಕಾನ್ = ಹೊಂದದಿರಲಿ +ವಸವಃ = ಅಷ್ಟವಸುಗಳು; (ತನ್ನಲ್ಲಿ ವಸುಭಾವನೆಯನ್ನು ಹೊಂದಿದ್ದ ಅಷ್ಟಯೀಯರವು) ತ್ವಾ = ನಿನ್ನನ್ನು;

---

ಈ ಮೂರನೆಯ ಧೂಳಿಯ ಆದಾನ(ತೆಗೆದುಕೊಳ್ಳುವಿಕೆ)ದಿಂದ ಯಾಗಭೂಮಿಯಲ್ಲಿ ಆಶ್ರಯವಿಲ್ಲದ ಅರರುವು ದೇವಯಾಗಾಧಾರವಾದ ಭೂಪ್ರದೇಶದಿಂದ ಹೊರದೂಡಲ್ಪಟ್ಟನು.

[ವ್ರಜಂ..........ಗೋಸ್ಥಾನಮ್] ಹಿಂದಿನಂತೆಯೇ ತಾತ್ಪರ್ಯ. ✿[ವರ್‌ಷತು ತೇ ದ್ಯಾಃ] ಹಿಂದಿನಂತೆಯೇ ತಾತ್ಪರ್ಯ. ✿[ಬಧಾನ..........ಮೌಕ್] ಹಿಂದಿನಂತೆಯೇ ತಾತ್ಪರ್ಯ.

ಹುಲ್ಲಿನಿಂದ ಕೂಡಿದ ಧೂಳುಗಳೇ! ಅರರುವು ನಿಮ್ಮಲ್ಲಿ ಬಂಧಿತನಾಗಿದ್ದಾನೆ. ಅವನು ತಪ್ಪಿಸಿಕೊಂಡು ಸ್ವರ್ಗಕ್ಕೆ ಹೋಗದಿರಲಿ. ದೃಢಬಂಧನದಲ್ಲಿಯೇ ಇರಲಿ. [ಈ ಧೂಳನ್ನು ಹಾಕುವ ಪ್ರದೇಶಕ್ಕೆ 'ಉತ್ಕರ' ಎಂದು ಹೆಸರು.

**ಪರಿಗೃಹ್ಣಂತು ಗಾಯತ್ರೇಣ ಛಂದಸಾ ರುದ್ರಾಸ್ತ್ವಾ**

**ಪರಿಗೃಹ್ಣಂತು ತ್ರೈಷ್ಟುಭೇನ ಛಂದಸಾದಿತ್ಯಾಸ್ತ್ವಾ**

**ಪರಿಗೃಹ್ಣಂತು ಜಾಗತೇನ ಛಂದಸಾ**

---

ಪರೀತಿ । ಗೃಹ್ಣಂತು । ಗಾಯತ್ರೇಣ । ಛಂದಸಾ । ರುದ್ರಾಃ । ತ್ವಾ । ಪರೀತಿ । ಗೃಹ್ಣಂತು । ತ್ರೈಷ್ಟುಭೇನ । ಛಂದಸಾ । ಆದಿತ್ಯಾಃ । ತ್ವಾ । ಪರೀತಿ । ಗೃಹ್ಣಂತು। ಜಾಗತೇನ । ಛಂದಸಾ ।

---

| ಮಂತ್ರ | ವಿನಿಯೋಗ |
|---|---|
| ವಸವಃ............ಛಂದಸಾ । | ಪೂರ್ವವೇದಿಪರಿಗ್ರಾಹಕ್ಕಾಗಿ. |

ಆಹವನೀಯ ಗಾರ್ಹಪತ್ಯಾಗ್ನಿಗಳ ಮಧ್ಯದಲ್ಲಿ ವೇದಿಯನ್ನು ಅಗೆಯುವುದಕ್ಕೆ ವೇದಿಯ ಎಲ್ಲೆಯನ್ನು ತಿಳಿಯಬೇಕು. ಅದಕ್ಕಾಗಿ ಅಧ್ವರ್ಯುವು ಸ್ಫ್ಯದಿಂದ ಮೂರು ದಿಕ್ಕುಗಳಲ್ಲಿ ಮೂರು ಗೆರೆಗಳನ್ನು ಮಾಡಬೇಕು. ಇದೇ ವೇದಿಯ ಪರಿಗ್ರಾಹ. ಮೊದಲಿನ ಪರಿಗ್ರಾಹವೇ ಪೂರ್ವಪರಿಗ್ರಾಹ.

---

(ವೇದಿಯನ್ನು) **ಗಾಯತ್ರೇಣ ಛಂದಸಾ** = ಅಷ್ಟಾಕ್ಷರಗಳುಳ್ಳ ಗಾಯತ್ರೀಛಂದಸ್ಸಿನಿಂದ (ಸ್ಫ್ಯದಿಂದ); **ಪರಿಗೃಹ್ಣಂತು** = (ದಕ್ಷಿಣದಿಕ್ಕಿನಲ್ಲಿ) ಸ್ವೀಕರಿಸಲಿ. +**ರುದ್ರಾಃ** = ಏಕಾದಶ ರುದ್ರರು(ರುದ್ರಭಾವನೆಯನ್ನು ಹೊಂದಿದ ಅಧ್ವರ್ಯುವು) **ತ್ವಾ** = ನಿನ್ನನ್ನು; **ತ್ರೈಷ್ಟುಭೇನ ಛಂದಸಾ** = ಏಕಾದಶ ಅಕ್ಷರಗಳುಳ್ಳ ತ್ರಿಷ್ಟುಪ್ ಛಂದಸ್ಸಿನಿಂದ (ತದ್ರೂಪವಾದ ಸ್ಫ್ಯದಿಂದ) **ಪರಿಗೃಹ್ಣಂತು** = (ಪಶ್ಚಿಮದಿಕ್ಕಿನಲ್ಲಿ) ಸ್ವೀಕರಿಸಲಿ; +**ಆದಿತ್ಯಾಃ** = ದ್ವಾದಶ ಆದಿತ್ಯರು (ಆದಿತ್ಯಭಾವನೆಯನ್ನು ಹೊಂದಿದ ಅಧ್ವರ್ಯುವು) **ತ್ವಾ** = ನಿನ್ನನ್ನು; **ಜಾಗತೇನ ಛಂದಸಾ** = ದ್ವಾದಶಾಕ್ಷರಗಳುಳ್ಳ ಜಗತೀಛಂದಸ್ಸಿನಿಂದ (ತದ್ರೂಪವಾದ ಸ್ಫ್ಯದಿಂದ) **ಪರಿಗೃಹ್ಣಂತು** = (ಉತ್ತರದಿಕ್ಕಿನಲ್ಲಿ) ಸ್ವೀಕರಿಸಲಿ.

---

ವೇದಿಯ ಎಲ್ಲೆಯನ್ನು ಗುರುತಿಸಲು ಅಧ್ವರ್ಯುವು ಸ್ಫ್ಯದಿಂದ ಗಾರ್ಹಪತ್ಯ ಆಹವನೀಯಗಳ ಮಧ್ಯದಲ್ಲಿ ದಕ್ಷಿಣ, ಪಶ್ಚಿಮ ಮತ್ತು ಉತ್ತರ ದಿಕ್ಕುಗಳಲ್ಲಿ ರೇಖೆ

## ದೇವಸ್ಯ ಸವಿತುಃ ಸವೇ ಕರ್ಮ ಕೃಣ್ವಂತಿ ವೇಧಸ ಋತಮ- ಸ್ಯೃತಸದನಮಸ್ಯೃತಶ್ರೀರಸಿ ಧಾ ಅಸಿ ಸ್ವಧಾ ಅಸ್ಯುರ್ವೀ

---

ದೇವಸ್ಯ । ಸವಿತುಃ । ಸವೇ । ಕರ್ಮ । ಕೃಣ್ವಂತಿ । ವೇಧಸಃ । ಋತಮ್ । ಅಸಿ । ಋತಸದನಮಿತ್ಯೃತ-ಸದನಮ್ । ಅಸಿ । ಋತಶ್ರೀರಿತ್ಯೃತ-ಶ್ರೀಃ । ಅಸಿ । ಧಾಃ । ಅಸಿ । ಸ್ವಧೇತಿ ಸ್ವ-ಧಾ । ಅಸಿ । ಉರ್ವೀ ।

---

| ಮಂತ್ರ | ವಿನಿಯೋಗ |
|---|---|
| ದೇವಸ್ಯ............ವೇಧಸಃ । | ಉದ್ಧನನಕ್ಕಾಗಿ (ಮೇಲಿನ ಭಾಗವನ್ನು ಕೆತ್ತುವುದು) —ಬೌಧಾಯನ<br>ವೇದಿಖನನ (ಅಗೆಯುವುದು) —ಆಪಸ್ತಂಬ. |
| ಋತಮ್...........ಶ್ರೀರಸಿ । | ವೇದಿಯ ಉತ್ತರಪರಿಗ್ರಾಹಕ್ಕಾಗಿ |
| ಧಾ ಅಸಿ..........ಯಜಂತೇ । | ವೇದಿಯ ಸಮೀಕರಣ —ಬೌಧಾಯನ |



---

+ವೇಧಸಃ = ಬ್ರಹ್ಮಸಮಾನರಾದ (ಕಾರ್ಯವಿಧಾಯಕರಾದ) ಅಧ್ವರ್ಯುಗಳು ಸವಿತುಃ = ಸರ್ವಪ್ರೇರಕನಾದ ದೇವಸ್ಯ = ಪರಮೇಶ್ವರನ; ಸವೇ (ಸತಿ) = ಅನುಜ್ಞೆಯು ಇರಲಾಗಿ; ಕರ್ಮ = [ಈ ಉದ್ಧನನ ಅಥವಾ ಖನನರೂಪವಾದ] ಕಾರ್ಯವನ್ನು; ಕೃಣ್ವಂತಿ = ಮಾಡುತ್ತಾರೆ. +(ಎಲೈ ವೇದಿಯೇ! ನೀನು) ಋತಮ್ = ಸತ್ಯವಾಗಿ; ಅಸಿ = ಇರುವೆ (ಸತ್ಯವಾದ ದೇವಯಜನವಾಗಿದ್ದೀಯೆ). ಋತಸದನಮ್ = ಸತ್ಯವಾಗಿ ಫಲಹೇತುವಾದ ಹವಿಸ್ಸಿಗೆ ಆಧಾರವಾಗಿ ಅಸಿ = ಇದ್ದೀಯೆ; ಋತಶ್ರೀಃ = ಸತ್ಯವಾದ ಫಲಕ್ಕೆ ಹವಿಸ್ಸಿನ ದ್ವಾರಾ ಸಾಧನವಾಗಿ ಅಸಿ = ಇರುವೆ.

---

ಗಳನ್ನು ಮಾಡುತ್ತಾ 'ಅಷ್ಟವಸುಗಳು ವೇದಿಯನ್ನು ಗಾಯತ್ರೀಛಂದಸ್ಸಿನಿಂದ ದಕ್ಷಿಣದಲ್ಲಿ ಸ್ವೀಕರಿಸಲಿ' 'ಏಕಾದಶರುದ್ರರು ತ್ರಿಷ್ಟುಪ್ ಛಂದಸ್ಸಿನಿಂದ ಪಶ್ಚಿಮದಿಕ್ಕಿನಲ್ಲಿ ಸ್ವೀಕರಿಸಲಿ' 'ದ್ವಾದಶಾದಿತ್ಯರು ಜಗತೀಛಂದಸ್ಸಿನಿಂದ ಉತ್ತರದಿಕ್ಕಿನಲ್ಲಿ ಸ್ವೀಕರಿಸಲಿ' ಎಂದು

## ಚಾಸಿ ವಸ್ವೀ ಚಾಸಿ ಪುರಾ ಕ್ರೂರಸ್ಯ ವಿಸೃಪೋ ವಿರಪ್ಶಿನ್ನು

ಚ । ಅಸಿ । ವಸ್ವೀ । ಚ । ಅಸಿ । ಪುರಾ । ಕ್ರೂರಸ್ಯ । ವಿಸೃಪ ಇತಿ ವಿ-ಸೃಪಃ। ವಿರಪ್ಶಿನ್ನಿತಿ ವಿ-ರಪ್ಶಿನ್ ।

| ಮಂತ್ರ | ವಿನಿಯೋಗ (ಆಪಸ್ತಂಬ) |
|---|---|
| ೧) ಧಾ ಅಸಿ............ವಿರಪ್ಶಿನ್ । | ವೇದಿಯ ಸಮೀಕರಣ |
| ೨) ಉದಾದಾಯ........ಯಜಂತೇ । | ವೇದಿಯ ಅನುವೀಕ್ಷಣಕ್ಕಾಗಿ. |



ವಿರಪ್ಶಿನ್ = ವಿವಿಧವಾದ ಮಂತ್ರೋಚ್ಚಾರಣೆಯನ್ನು ಮಾಡುವ ಋತ್ವಿಜರುಳ್ಳ ವೇದಿಯೇ!; ಕ್ರೂರಸ್ಯ= ಕ್ರೂರನಾದವನು, (ಉತ್ತರಪ್ರದೇಶದಲ್ಲಿ ಪಾಶಬದ್ಧನಾಗಿರುವ ಅರರುವೆಂಬ ರಾಕ್ಷಸನು) ವಿಸೃಪಃ = ಹೊರಟುಹೋಗುವುದಕ್ಕಿಂತ; ಪುರಾ = ಮೊದಲು ಧಾಃ = ದೇವಹವಿಸ್ಸನ್ನು ಧಾರಣೆ ಮಾಡಿದವಳಾಗಿ; ಅಸಿ = ಇದ್ದೀಯೆ; ಸ್ವಧಾ = ಪಿತೃಗಳಿಗೆ ಕೊಡುವ ಕವ್ಯಾದಿಗಳನ್ನು ಧರಿಸಿದವಳೂ; ಅಸಿ = ಆಗಿರುವೆ; ಉರ್ವೀ = ವಿಸ್ತೀರ್ಣಳಾದಳು; ಅಸಿ = ಆಗಿರುವೆ; ಚ = ಮತ್ತು; ವಸ್ವೀ ಚ = ಪುರೋಡಾಶಾದಿ ದ್ರವ್ಯವತಿಯೂ ಅಸಿ = ಆಗಿರುವೆ.

ಹೇಳುತ್ತಾನೆ. (ಪೂರ್ವದಲ್ಲಿ ಆಹವನೀಯಾಗ್ನಿಯು ರಕ್ಷಕನಾಗಿರುತ್ತಾನೆ) ಪರಿಗ್ರಾಹವನ್ನು ಮಾಡುವ ಅಧ್ವರ್ಯುವು ವಸ್ವಾದಿಸ್ವರೂಪನು. ಸಾಧನವಾದ ಸ್ಫ್ಯವೇ ಗಾಯತ್ರಾದಿ ಛಂದೋರೂಪವಾದುದು.

ಅಧ್ವರ್ಯುಗಳು ಪರಮಾತ್ಮನ ಅನುಜ್ಞೆಯನ್ನು ಪಡೆದು ಈ ಉದ್ಧನನವನ್ನು ಅಥವಾ ಖನನವನ್ನು ಮಾಡುತ್ತಾರೆ. ಯಾಗಕ್ಕಾಗಿ ಈ ಕಾರ್ಯವನ್ನು ಮಾಡುತ್ತಾರೆ. ಆದುದರಿಂದ ಇದು ಅಪರಾಧವಲ್ಲ (ಹಿಂಸೆಯಲ್ಲ).

ಎಲೈ ವೇದಿಯೇ! ದೇವಪರಿಗೃಹೀತಳಾದ ನೀನು ಸತ್ಯವಾದ ದೇವಯಾಗಭೂಮಿ ಯಾಗಿದ್ದೀಯೆ. ಸತ್ಯವಾಗಿ ಫಲಸಾಧನವಾದ ಹವಿಸ್ಸಿಗೆ ಆಶ್ರಯಳೂ ಆಗಿದ್ದೀಯೆ. ಸತ್ಯವಾದ ಫಲಕ್ಕೂ ಹವಿರ್ಯಾಗಾಶ್ರಯಳಾಗಿ ಸಾಧನವಾಗಿರುವೆ.

ದಾದಾಯ ಪೃಥಿವೀಂ ಜೀರದಾನುರ್ಯಾಮೈರಯಞ್ಚಂದ್ರ

ಮಸಿ ಸ್ವಧಾಭಿಸ್ತಾಂ ಧೀರಾಸೋ ಅನುದೃಶ್ಯ ಯಜಂತೇ॥೯-15॥

[ದೇವಯಜನ್ಯೈ ವ್ರಜಂ ತಮತೋ ಮಾ ಐರಪ್ಸೈನ್ನೇಕಾದಶ ಚ ॥]

---

*ಉದಾದಾಯೇತ್ಯುತ್-ಆದಾಯ । ಪೃಥಿವೀಮ್ । ಜೀರದಾನುರಿತಿ ಜೀರ-ದಾನುಃ । ಯಾಮ್ । ಐರಯನ್ । ಚಂದ್ರಮಸಿ । ಸ್ವಧಾಭಿರಿತಿ ಸ್ವ-ಧಾಭಿಃ । ತಾಮ್ । ಧೀರಾಸಃ। ಅನುದೃಶ್ಯೇತ್ಯನು-ದೃಶ್ಯ । ಯಜಂತೇ* । ೯ ॥

---

+ಜೀರದಾನುಃ = ಜೀವನಶೀಲರೂ, ಹವಿರ್ದಾನಶೀಲರೂ ಆದ ಯಜಮಾನರುಗಳುಳ್ಳ; ಯಾಮ್ ಪೃಥಿವೀಮ್ = ಯಾವ ಭೂಮಿಯನ್ನು; ಅಥವಾ [ಜೀರದಾನುಃ = ಜೀವನಶೀಲರೂ, ಹವಿರ್ದಾನಶೀಲರೂ ಆದ ಯಜಮಾನರು, ಯಾಮ್ = ಯಾವ ಭೂಮಿಯನ್ನು;] ಉದಾದಾಯ = ಮೇಲಕ್ಕೆ ತೆಗೆದು [ರಾಕ್ಷಸಭೂಮಿಯಿಂದ ಬೇರ್ಪಡಿಸಿ] ಚಂದ್ರಮಸಿ = ಚಂದ್ರನಲ್ಲಿ, ಸ್ವಧಾಭಿಃ = ಅಮೃತಕಿರಣಗಳೊಡನೆ; ಐರಯನ್ = ಸ್ಥಾಪಿಸಿದರೋ; ತಾಮ್ = ಅಂತಹ ಈ ವೇದಿಯನ್ನು; ಅನುದೃಶ್ಯ = [ಸುಸಂಸ್ಕೃತವಾದ ವೇದಿಯೆಂದು] ತಿಳಿದು; ಧೀರಾಸಃ =ಬುದ್ಧಿವಂತರಾದ ಯಜಮಾನರು; ಯಜಂತೇ = ಯಾಗ ಮಾಡುತ್ತಾರೆ. [ನಾವೂ ಹಾಗೆಯೇ ಯಾಗವನ್ನು ಮಾಡುತ್ತೇವೆ.]

---

ಎಲೈ ವೇದಿಯೇ! ಋತ್ವಿಜರು ನಿನ್ನಲ್ಲಿ ಆಶ್ರಯ ಪಡೆದು ವಿವಿಧ ಮಂತ್ರೋಚ್ಚಾರಣೆ ಮಾಡುತ್ತಾರೆ. ಉತ್ಕರದೇಶದಲ್ಲಿ ಬದ್ಧನಾಗಿರುವ ಅರರು ರಾಕ್ಷಸನ ನಿರ್ಗಮನಕ್ಕಿಂತ ಮೊದಲು ನೀನು ದೇವತೆಗಳ ಹವಿಸ್ಸನ್ನು ಧರಿಸಿರುವೆ. ಪಿತೃಗಳ ಕವ್ಯವನ್ನೂ ಧರಿಸಿರುವೆ. ವಿಸ್ತೀರ್ಣಳಾದ ನೀನು ಪುರೋಡಾಶಾದಿ ವಸ್ತುಗಳಿಂದಲೂ ಕೂಡಿರುವೆ. ಯಾವಷ್ಟೀವವೂ ದೇವತೆಗಳಿಗೆ ಹವಿಸ್ಸನ್ನು ಕೊಡುವ ಯಜಮಾನರುಳ್ಳವಳು ನೀನು. ಹಿಂದಿನ ಯಜಮಾನರು ಯಾವ ನಿನ್ನನ್ನು ರಾಕ್ಷಸಾಧೀನವಾದ ಭೂಮಿಯಿಂದ ಬೇರ್ಪಡಿಸಿ, ಚಂದ್ರನಲ್ಲಿ ಅಮೃತಕಿರಣಗಳೊಡನೆ ಸೇರಿಸಿದರೋ, ಅಂತಹ ನಿನ್ನನ್ನು ಆಶ್ರಯಿಸಿ (ನಿನ್ನನ್ನು ಚೆನ್ನಾಗಿ ತಿಳಿದು) ಬುದ್ಧಿಮಂತರಾದ ಇಂದಿನ ಯಜಮಾನರೂ

ಯಾಗಗಳನ್ನು ಮಾಡುತ್ತಾರೆ. ನಾವೂ ಹಾಗೆಯೇ ಯಾಗ ಮಾಡುತ್ತೇವೆ.

## ವಿನಿಯೋಗಸಂಗ್ರಹ

ಆದದೇ[1] ಸ್ಫ್ಯಂ ಸಮಾದತ್ತೇ [2]ಇಂದ್ರಸ್ಯೇತ್ಯಭಿಮಂತ್ರಯೇತ್ ।
ಪೃಥಿವಿ[3] ಸ್ತಂಬಯಜುಶ್ಛಿತ್ವಾ ಹ್ಯಪ[4] ಗೃಹ್ಣಾತಿ ಭೂರಜಃ ॥
ವ್ರಜಂ[5] ಗಚ್ಛೇದುದಗ್ದೇಶಂ ವರ್ಷ[6] ವೇದಿಂ ಸಮೀಕ್ಷತೇ ।
ಬಧಾ[7] ಧೂಲಿಂ ಕ್ಷಿಪೇದೇವಂ ಪುನಃ ಸ್ತಂಬಹೃತಿದ್ವಯಮ್ ॥
ಅಥಾತ್ರ ಪೂರ್ವವನ್ಮಂತ್ರಾ[8-17] [18]ಅರಾಗ್ನೀಧ್ರೋಽಂಜಲೌ ಧರೇತ್।
ವಸ[19,20,21] ತ್ರಿಭಿರ್ಗ್ರಹೋ ವೇದೇರ್ದೇವ[22] ವೇದಿಂ ಖನೇದಮೂಮ್ ॥
[23]ಖತೋತ್ತರಪರಿಗ್ರಾಹೋ ಧಾ ಅಸೀತಿ[24] ಸಮೀಕ್ಷತಿಃ ।
[25]ಉದಾದಾಯೇತೀಕ್ಷತೇ ತಾಂ ಮಂತ್ರೋಕ್ತಾಃ ಪಂಚವಿಂಶತಿಃ ॥

ಅನುವಾಕದ ಮಂತ್ರಗಳ ಸಂಖ್ಯೆ - 25

ಎರಡನೆಯ ಮತ್ತು ಇಪ್ಪತ್ತೆರಡನೆಯ ಮಂತ್ರಗಳಲ್ಲಿ ಮೊದಲನೆಯದನ್ನು ಬೌಧಾಯನರೂ, ಕಡೆಯದನ್ನು ಆಪಸ್ತಂಬರೂ ಸಂಗಡಿಸಿದ್ದಾರೆ.



### ಅನುವಾಕದ ವಿಶೇಷ ವಿಷಯಗಳು

ಅ) ಭ.ಭಾ.ಭಾಷ್ಯ

ಮಂತ್ರಸಂಖ್ಯೆ

೨) ಸಹಸ್ರಭೃಷ್ಟಿಃ = ಅನೇಕಪರಿಪಾಕಃ = ಅನೇಕ ಪ್ರಕಾರವಾಗಿ ಶತ್ರುಗಳನ್ನು ಪೀಡಿಸುವವನು; ಶತತೇಜಾಃ= ಬಹ್ವವಧಾನಃ = ಹಲವು ಕಡೆಗಳಲ್ಲಿ ಗಮನವುಳ್ಳವನು. ವಾಯುಃ ಅಸಿ = ವಾಯುವಿನಂತೆ ಬೇಗ ಕಾರ್ಯ ಮಾಡುವವನು.

೪) ಅರರುಃ = ಅರಣಶೀಲಃ = ಗೂಢವಾಗಿ ಸಂಚರಿಸುವವನು.

೫) ವ್ರಜಂತಿ ಅಸ್ಮಿನ್ ಇತಿ ವ್ರಜಃ = ಧೂಳುಗಳು ಯಾವ ಪ್ರದೇಶವನ್ನು ಹೊಂದುತ್ತವೆಯೋ ಆ ಪ್ರದೇಶ ವ್ರಜ. (ಉತ್ಕರ)

೬) ದ್ಯೌಃ ವರ್ಷತು = ದ್ಯುಲೋಕವು ಪರ್ಜನ್ಯದ್ವಾರಾ ಮಳೆಗರೆಯಲಿ. (ಸಾಯಣರು ದ್ಯುಶಬ್ದಕ್ಕೆ ಲಾಕ್ಷಣಿಕವಾಗಿ ಪರ್ಜನ್ಯ ಎಂದು ಅರ್ಥವನ್ನು ತಿಳಿಸಿದ್ದಾರೆ.)

೭) ಬಧಾನ.........ಮಾ ಮೌಕ್ । ಯಜುಸ್ಸನ್ನು ಕಡೆಯಲ್ಲಿ ಹೊಂದಿರುವ ದ್ವಿಪದಾ ಗಾಯತ್ರೀ ಛಂದಸ್ಸು - ೮ + ೮ + ಯಜುಃ ।

ಪರಮಸ್ಯಾಂ ಪರಾವತಿ = ಸುದೂರೇಽಪಿ ದೇಶೇ ಸ್ಥಿತಮ್ = ಬಹುದೂರ ದಲ್ಲಿರುವ ಪ್ರದೇಶದಲ್ಲಿ ಇದ್ದರೂ ಕೂಡ (ಆ ಶತ್ರುವನ್ನು ಬಧಾನ = ಕಟ್ಟಿಹಾಕು.) ಎರಡನೆಯ ರೀತಿಯಲ್ಲಿಯೂ ಅರ್ಥವನ್ನು ವಿವರಿಸಿರುತ್ತಾರೆ. ಪರಮಸ್ಯಾಂ ಪರಾವತಿ = ಸೋಲುಂಟಾಗಲು; ಬಧಾನ = ಕಟ್ಟಿ ಹಾಕು. (ಆ ಇಬ್ಬರನ್ನು) ಮಾ ಮೌಕ್ = ಈ ಪರಾಜಯದಿಂದ ಬಿಡಬೇಡ (ತಪ್ಪಿಸಿಕೊಳ್ಳಲು ಬಿಡಬೇಡ.) ಮೂರನೆಯ ರೀತಿ ಯಲ್ಲಿಯೂ ತಿಳಿಸಿರುತ್ತಾರೆ. ಪರಮಸ್ಯಾಂ ಪರಾವತಿ = ಪರಾಜಯೇ = ಪರಾಜಯಾರ್ಥಂ = ಸೋಲಿಸುವುದಕ್ಕಾಗಿ (ಉತ್ಕರೇ) ಬಧಾನ = ಉತ್ಕರದಲ್ಲಿ ಕಟ್ಟಿಹಾಕು. ಮಾ ಮೌಕ್ = ಉತ್ಕರದಿಂದ ಬಿಡಬೇಡ.



೧೪) ಅದೇವಯಜನಃ ಅರರುಃ = ವೇದಿದೇಶದಲ್ಲಿ ಗೂಢವಾಗಿ ಸಂಚರಿಸುವ ಅರರುವು ಮಲಗಿದ್ದರೆ ಆ ಪ್ರದೇಶವು ಯಾಗಯೋಗ್ಯವಲ್ಲ. ಆದುದರಿಂದ ಅರರುವು ಅದೇವಯಜನ.

ದೇವಯಜನದಲ್ಲಿ ಆಶ್ರಯವನ್ನು ಪಡೆಯದ್ದುದರಿಂದ ಅರರುವು ಅದೇವಯಜನ ಎಂದು ಸಾಯಣರ ಮತ. 'ಯಾರು ಇದ್ದರೆ ದೇವಯಜನವೆನಿಸಲಾರದೋ' ಎಂಬ ಅರ್ಥವನ್ನಿಟ್ಟುಕೊಂಡು ಅರರುವು ಅದೇವಯಜನ ಎಂದು ಮಿಶ್ರರ ಅಭಿಪ್ರಾಯ.

೨೨) ದೇವಸ್ಯ...........ವೇಧಸಃ । ದ್ವಿಪದಾ ಗಾಯತ್ರೀ ಛಂದಸ್ಸು ೮ + ೮. ವೇಧಸಃ = ವಿಧಾಯಕರಾದ ಋತ್ವಿಜರು (ಬ್ರಹ್ಮಸಮಾನರು ಎಂದು ಸಾಯಣಮತ)

ದೇವಸ್ಯ ಸವಿತುಃ ಸವೇ ಕರ್ಮ ಕೃಣ್ವಂತಿ = ಋತ್ವಿಜರು ಸವಿತೃದೇವನ ಅನುಜ್ಞೆಯಂತೆ ವೇದಿಖನನವನ್ನು ಮಾಡುತ್ತಾರೆ. ಅಂತೆಯೇ ನಾನೂ ಋತ್ವಿಜರಂತೆಯೇ ಈ ಕರ್ಮವನ್ನು ಮಾಡುತ್ತೇನೆ. ಆದುದರಿಂದ ನನ್ನ ಈ ಕಾರ್ಯವು ಅಪರಾಧವಲ್ಲ.

೨೩) ಋತಮ್..........ಶ್ರೀರಸಿ ॥

ಋತಮ್ = ಸತ್ಯಮ್, ಯಜ್ಞೋ ವಾ ತದಾಧಾರತ್ವಾತ್ = ಎಲೈ ವೇದಿಯೇ! ನೀನು ಸತ್ಯದೇವಯಜನವಾಗಿರುವೆ. ಅಥವಾ ಆಧಾರಭೂತಳಾದ ನೀನು ಯಜ್ಞವಾಗಿರುವೆ.

ಋತಸದನಮ್ = ಸತ್ಯಕ್ಕೆ ಮನೆಯಾಗಿದ್ದೀಯೆ. ಅಥವಾ ಋತವಾದಿಯಾದ ಋತ್ವಿಜನೂ, ಯಜಮಾನನೂ ಇರುವ ಪ್ರದೇಶವಾಗಿರುವೆ. ಋತವಾದ ಯಜ್ಞಕ್ಕೆ ಗೃಹವಾಗಿರುವೆ.

ಋತಶ್ರೀಃ = ಋತಂ ಶ್ರಯತಿ ಸಾಧನತ್ವೇನ. ಋತಕ್ಕೆ ಸಾಧನವಾಗಿದ್ದೀಯೆ.

೨೪) ಧಾ ಅಸಿ........ಯಜಂತೇ। [ಬೌಧಾಯನ ಮತಾನುಸಾರವಾಗಿ) ಯಜುಸ್ಸನ್ನು (ಧಾ..........ಚಾಸಿ) ಮೊದಲಲ್ಲಿ ಹೊಂದಿರುವ ನಾಲ್ಕು ಪಾದಗಳುಳ್ಳ ತ್ರಿಷ್ಟುಪ್ ಛಂದಸ್ಸು. ಪುರಾ........ಯಜಂತೇ । ೧೧ + ೧೧ + ೧೧ + ೧೧.

ಧಾ ಅಸಿ = ಹವಿಸ್ಸುಗಳಿಗೆ ಆಧಾರವಾಗಿದ್ದೀಯೆ; ಸ್ವಧಾ ಅಸಿ = ಸ್ವಂ = ಪುರುಷಂ ದಧಾತಿ ಇತಿ ಸ್ವಧಾ = ಅನ್ನಮ್. [ಸ್ವಧಾ ಎಂಬ ಶಬ್ದಕ್ಕೆ ಪೈತೃಕವಾದ ಕವ್ಯವೆಂದು ಸಾಯಣರ ಮತ] ಅನ್ನಸಾಧನವಾಗಿರುವುದರಿಂದ ಸ್ವಧಾರೂಪಳೂ ಆಗಿದ್ದೀಯೆ. ಉರ್ವೀ ಚಾಸಿ = ಮಹತೀ ಚಾಸಿ = ದೊಡ್ಡದಾಗಿದ್ದೀಯೆ; ವಸ್ವೀ = ವಾಸಹೇತುಃ = ಪುರೋಡಾ-ಶಾದಿಧನವಿರುವುದರಿಂದ ಅದರ ಸ್ವೀಕಾರಕ್ಕೆ ಬರುವ ದೇವತೆಗಳಿಗೆ ಆಧಾರವಾಗಿದ್ದೀಯೆ. (ವಸ್ವೀ = ಪುರೋಡಾಶಾದಿದ್ರವ್ಯವುಳ್ಳವಳು ಎಂದು ಸಾಯಣರ ವಿವರಣೆ)

ಮಿಶ್ರರು 'ಪುರಾ ಕ್ರೂರಸ್ಯ....ಎಂಬಲ್ಲಿಂದ ಹೀಗೆ ಅನ್ವಯವನ್ನು ಮಾಡಿರುತ್ತಾರೆ. 'ಕ್ರೂರಸ್ಯ ವಿಸೃಪಃ ಪುರಾ ಪೃಥಿವೀಂ ಜೀರದಾನುಃ ಸ್ವಧಾಭಿಃ ಯಾಮ್ ಉದಾದಾಯ ಚಂದ್ರಮಸಿ ಐರಯನ್, ಏರತ್ನಿನ್। ತಾಮ್ ಅನುದೃಶ್ಯ ಧೀರಾಸೋ ಯಜಂತೇ॥'

ಪೃಥಿವೀಮ್ = ಪ್ರಸಿದ್ಧಳಾದ; ಜೀರದಾನುಃ = ಅಗ್ನಿಯನ್ನು ಅಥವಾ ಬುದ್ಧಿಯನ್ನು ಕೊಡುವ; [ಜೀರಃ= ಅಗ್ನಿಃ, ಬುದ್ಧಿಃ ವಾ] [ಅನ್ವಯಕ್ಕಾಗಿ ಜೀರದಾನುಂ ಎಂಬುದರ ಸ್ಥಾನದಲ್ಲಿ ಶ್ರುತಿಯಲ್ಲಿ ಜೀರದಾನುಃ ಎಂದು ಪ್ರಥಮಾವಿಭಕ್ತಿಯೇ ಇದೆ]; ಸ್ವಧಾಭಿಃ = ಅನ್ನೈಃ ಓಷಧಿವಿಕಾರ್ಯೈಃ (ಸಹಿತಾಂ).

ಅರ್ಥ:- ಕ್ರೂರನಾದವನ [ಅರರುವಿನ] ಸಂಚಾರಕ್ಕೆ ಮೊದಲೇ ಪ್ರಸಿದ್ಧಳೂ, ಅಗ್ನಿಯನ್ನಾಗಲೀ, ಬುದ್ಧಿಯನ್ನಾಗಲೀ ನೀಡುವವಳೂ, ಧಾನ್ಯಗಳಿಂದ ನಿಷ್ಪನ್ನವಾದ ಅನ್ನಗಳಿಂದ ಕೂಡಿರುವವಳೂ ಆದ ಯಾವ ನಿನ್ನನ್ನು (ವೇದಿಯನ್ನು) ಎತ್ತಿ (ಓಷಧೀಶ ನಾದ) ಚಂದ್ರನಲ್ಲಿ (ಯಾಗಶೀಲರಾದ ಯಜಮಾನರು) ಸ್ಥಾಪಿಸಿದರೋ, ಎಲೈ! ನಾನಾ ಬಗೆಯಿಂದ ಮಂತ್ರೋಚ್ಚಾರಣ ಮಾಡುವ ಋತ್ವಿಜರುಳ್ಳ ವೇದಿಯೇ! ಅಂತಹ ನಿನ್ನನ್ನು

(ಚಂದ್ರನಲ್ಲಿ ಸ್ಥಾಪಿತವಾದ ದೇವಯಾಗಭೂಮಿಯೆಂದು) ತಿಳಿದು ಪ್ರಜ್ಞಾವಂತರಾದ ಯಜಮಾನರು (ನಿನ್ನಲ್ಲಿ ) ಯಾಗ ಮಾಡುತ್ತಾರೆ.

'ವಿರಪ್ಶಿನ್!' ಎಂಬ ಶಬ್ದದ ವಿವರಣೆ ಹೀಗಿದೆ. ವಿವಿಧಂ ರಪಣಂ = ಶಬ್ದನಂ, ವಿರಪ್ = ಉಪಾಂಶ್ವಾದಿಭೇದೇನ ಮಂತ್ರಾಣಾಮುಚ್ಚಾರಣಮ್ (ಮೆಲ್ಲಗೆ, ಗಟ್ಟಿಯಾಗಿ ಮೊದಲಾಗಿ ಮಂತ್ರಗಳ ಉಚ್ಚಾರಣೆ); ವಿರಪ್ ಏಷಾಮ್ ಅಸ್ತೀತಿ ವಿರಪ್ಶಾಃ = ಋತ್ವಿಜಃ , ವಿರಪ್ಶಾಃ ಅಸ್ಯಾಂ ಸಂತೀತಿ= ವಿರಪ್ಶೀ. ಅದರ ಸಂಬೋಧನೆ 'ವಿರಪ್ಶಿನ್!'= ನಾನಾ ರೀತಿಯಾಗಿ ಮಂತ್ರಗಳನ್ನು ಉಚ್ಚರಿಸುವ ಋತ್ವಿಜರುಳ್ಳದ್ದು.

ಅಥವಾ 'ಪೃಥಿವೀಂ' ಎಂಬುದಕ್ಕೆ ಭೂಮಿಗೆ ಎಂಬ ಪ್ರಸಿದ್ಧ ಅರ್ಥವನ್ನಿಟ್ಟುಕೊಂಡು ಮಿಶ್ರರು ಎರಡನೆಯ ಅರ್ಥವನ್ನೂ ತಿಳಿಸಿರುತ್ತಾರೆ.

ಯಾಗಶೀಲರು ಕ್ರೂರನಾದ ಅರರುವಿನ ಸಂಚಾರಕ್ಕೆ ಮೊದಲೇ ಯಾವ ನಿನ್ನನ್ನು ಎತ್ತಿ, ಚಂದ್ರನಲ್ಲಿರುವ ಅಮೃತಗಳಿಂದ ಜೀರದಾನುವಾಗಿರುವ ಭೂಮಿಗೆ ಸೇರಿಸಿದರೋ ಅಂತಹ ನಿನ್ನಲ್ಲಿ ಯಾಗ ಮಾಡುತ್ತೇನೆ.

(ಜೀರದಾನುಃ) ಹವಿರ್ದಾನಶೀಲರಾದ ಯಜಮಾನರು ಯಾವ ನಿನ್ನನ್ನು ರಾಕ್ಷಸಾಧೀನವಾದ ಭೂಮಿಯಿಂದ ಬೇರ್ಪಡಿಸಿ, ಚಂದ್ರನಲ್ಲಿ ಅಮೃತಕಿರಣಗಳೊಡನೆ ಸೇರಿಸಿದರೋ ಅಂತಹ ನಿನ್ನಲ್ಲಿ ಯಾಗ ಮಾಡುತ್ತೇನೆ ಎಂಬುದು ಸಾಯಣಾಚಾರ್ಯರು ತಿಳಿಸುವ ಅರ್ಥ.

### ಆ) ಮೀಮಾಂಸಾ

ಜೈಮಿನಿಮಹರ್ಷಿಯ ಪೂರ್ವಮೀಮಾಂಸಾಸೂತ್ರಗಳಲ್ಲಿ ಮೂರನೆಯ ಅಧ್ಯಾಯದ ಏಳನೆಯ ಪಾದದಲ್ಲಿ ಹೀಗೆ ವಿಚಾರ ಮಾಡಿದ್ದಾರೆ.

**ವೇದಿ ಬರ್ಹಿಸ್ಸುಗಳು ಯಾವ ಹವಿಸ್ಸಿನ ಅಂಗಗಳು?**

೧) ದರ್ಶ-ಪೂರ್ಣಮಾಸಪ್ರಕರಣದಲ್ಲಿ 'ವೇದ್ಯಾಂ ಹವೀಂಷ್ಯಾಸಾದಯತಿ' (ವೇದಿಕೆಯಲ್ಲಿ ಹವಿಸ್ಸುಗಳನ್ನು ಇಡುತ್ತಾನೆ) 'ಬರ್ಹಿಷಿ ಹವೀಂಷ್ಯಾಸಾದಯತಿ' (ದರ್ಭೆಯಲ್ಲಿ ಹವಿಸ್ಸುಗಳನ್ನು ಇಡುತ್ತಾನೆ) 'ಎಂಬ ವಾಕ್ಯಗಳಿವೆ. ಅಲ್ಲದೆ ವೇದಿಖನನಾದಿ ಧರ್ಮಗಳನ್ನೂ ಹೇಳಿದ್ದಾರೆ. ವೇದಿಯಲ್ಲಿ ಮುಖ್ಯ ಹವಿಸ್ಸಾದ ಆಗ್ನೇಯ ಪುರೋಡಾಶಾದಿಗಳನ್ನು ಆಸಾದನೆ ಮಾಡುವಂತೆಯೇ ಪ್ರಯಾಜಾದಿಹೋಮಗಳಿಗೆ ಬೇಕಾಗುವ ಆಜ್ಯಾಸಾದನೆಯನ್ನೂ ಮಾಡುವುದರಿಂದ, ವೇದಿ, ಬರ್ಹಿಸ್ಸುಗಳು ಮುಖ್ಯ

ಹವಿಸ್ಸಾದ ಪುರೋಡಾಶಾದಿಗಳಿಗೆ ಅಂಗವೇ ಹೊರತು ಪ್ರಯಾಜಾದಿಹೋಮಕ್ಕೆ ಬೇಕಾಗುವ ಅಂಗಹವಿಸ್ಸುಗಳಿಗಲ್ಲ ಎಂಬುದು ಇಲ್ಲಿನ ಪೂರ್ವಪಕ್ಷ.

ಇಲ್ಲಿಯ ಸಿದ್ಧಾಂತ ಹೀಗಿದೆ : ಪ್ರಕೃತಾಪೂರ್ವಸಾಧನವಾದ ಹವಿಸ್ಸುಗಳನ್ನು ವೇದಿಯಲ್ಲಿ ಇಡಬೇಕು. ಪ್ರಯಾಜಾದಿ ಅಂಗಗಳೂ ತಮ್ಮ ತಮ್ಮ ಅಪೂರ್ವಗಳಿಂದ ಪ್ರಧಾನಾಪೂರ್ವಕ್ಕೆ ಸಹಕಾರಿಗಳಾಗುತ್ತವೆ. ಆದುದರಿಂದ ವೇದಿ, ಬರ್ಹಿಸ್ಸು ಮುಂತಾದವುಗಳು ಪ್ರಯಾಜಾದಿಹೋಮಕ್ಕೆ ಬೇಕಾಗುವ ಅಂಗಹವಿಸ್ಸುಗಳಿಗೂ ಅಂಗಗಳೇ ಆಗುತ್ತವೆ. ಹವಿಸ್ಸುಗಳನ್ನು ವೇದಿಯಲ್ಲಿ ಆಸಾದನ ಮಾಡುವುದರಿಂದ ಆಸಾದನದ ಮೂಲಕ ಇವು ಅಂಗಗಳು.

೨) ದರ್ಶಯಾಗದಲ್ಲಿ ತದಂತಾಪಕರ್ಷವಿದೆಯೇ?

ಐದನೆಯ ಅಧ್ಯಾಯದ ಮೊದಲನೆಯ ಪಾದದಲ್ಲಿ ಹೀಗೆ ವಿಚಾರವಿದೆ. ದರ್ಶಪೂರ್ಣಮಾಸಪ್ರಕರಣದಲ್ಲಿ ಕಪಾಲಗಳಲ್ಲಿ ಪುರೋಡಾಶವನ್ನು ಶ್ರಪಣ ಮಾಡಿದ ನಂತರ ಪುರೋಡಾಶವನ್ನು ಭಸ್ಮದಿಂದ ಆಚ್ಛಾದಿಸಬೇಕೆಂದು ಹೇಳಿದೆ. ಭಸ್ಮಾಚ್ಛಾದನೆಯ ನಂತರ ವೇದಿಯ ನಿರ್ಮಾಣವನ್ನು ಹೇಳಿದೆ. ಪೂರ್ಣಮಾಸೇಷ್ಟಿಯಲ್ಲಿ ಪ್ರತಿಪದೆಯಂದು ಇದೇ ರೀತಿ ಅನುಷ್ಠಿಸಲಾಗುತ್ತದೆ. ದರ್ಶೇಷ್ಟಿಯಲ್ಲಿ ಮೊದಲಿನ ದಿನವೇ ವೇದಿಕರಣವನ್ನು ಹೇಳಲಾಗಿದೆ. 'ಪೂರ್ವೇದ್ಯುರಮಾವಾಸ್ಯಾಯಾಂ ವೇದಿಂ ಕರೋತಿ' ಎಂಬ ವಾಕ್ಯವಿದೆ. ಹೀಗಿರುವಾಗ 'ತದಾದ್ಯುತ್ಕರ್ಷಃ' 'ತದಂತಾಪಕರ್ಷಃ' ಎಂಬ ನ್ಯಾಯಗಳನ್ನು ಅನ್ವಯಿಸಿಕೊಳ್ಳಬೇಕು. ಉತ್ಕರ್ಷವನ್ನು ಹೇಳಿದಾಗ ಯಾವ ಕಾರ್ಯಕ್ಕೆ ಉತ್ಕರ್ಷವನ್ನು ಹೇಳುತ್ತಾರೆಯೋ ಆ ಕಾರ್ಯದಿಂದ ಮೊದಲು ಮಾಡಿ ಮುಂದಿನ ಕಾರ್ಯಗಳನ್ನು ಮುಂದೆ ಮಾಡಬೇಕೆಂದರ್ಥ. ಅಪಕರ್ಷ (ಹಿಂದೆ ಮಾಡಬೇಕು)ವನ್ನು ಹೇಳಿದಾಗ ಯಾವ ಕಾರ್ಯಕ್ಕೆ ಅಪಕರ್ಷವನ್ನು ಹೇಳುತ್ತಾರೆಯೋ, ಆ ಕಾರ್ಯದವರೆಗಿನ ಕಾರ್ಯಗಳನ್ನು ಹಿಂದೆ ಮಾಡಬೇಕೆಂದರ್ಥ. ಹೀಗಿರುವಾಗ ದರ್ಶೇಷ್ಟಿಯಲ್ಲಿ ವೇದಿಯ ನಿರ್ಮಾಣದವರೆಗಿನ ಕಾರ್ಯಗಳಿಗೆ ಅಪಕರ್ಷವನ್ನು ತಿಳಿಸಿದಂತಾಗಿ, ಪುರೋಡಾಶಶ್ರಪಣ, ಭಸ್ಮಾಚ್ಛಾದನೆಯವರೆಗಿನ ಕಾರ್ಯಗಳನ್ನು ಪೂರ್ವದಿನವೇ ಅನುಷ್ಠಿಸಬೇಕೆಂಬುದು ಇಲ್ಲಿನ ಪೂರ್ವಪಕ್ಷ.

ಇಲ್ಲಿನ ಸಿದ್ಧಾಂತವು ಹೀಗಿದೆ : ದರ್ಶೇಷ್ಟಿಯು ಪೂರ್ಣಮಾಸೇಷ್ಟಿಯ ವಿಕೃತಿಯಾದರೆ, 'ಪ್ರಕೃತಿವತ್ ವಿಕೃತಿಃ ಕರ್ತವ್ಯಾ' ಎಂಬ ನ್ಯಾಯದಂತೆಯೂ, ತದಂತಾಪಕರ್ಷ-ನ್ಯಾಯವೂ ಅನ್ವಯವಾದೀತು. ಅತಿದೇಶದಿಂದ ಧರ್ಮಗಳು ಇನ್ನೊಂದೆಡೆ ಅನ್ವಯ

ವಾಗುತ್ತವೆ. ದರ್ಶ-ಪೂರ್ಣಮಾಸಗಳೆರಡಕ್ಕೂ ಸಂಬಂಧಿಸಿದಂತೆ ಭಸ್ಮಾಭಿವಾಸವನ್ನು ಹೇಳಿದ ನಂತರ ವೇದಿಕರಣವನ್ನು ತಿಳಿಸಿರುತ್ತಾರೆ. ವಿಶೇಷವಾಗಿ ದರ್ಶೇಷ್ಟಿಗೆ ಮಾತ್ರ ವೇದಿಕರಣವನ್ನು ಪೂರ್ವದಿನವೇ ಮಾಡಬೇಕೆಂಬುದಾಗಿ ತಿಳಿಸಿರುತ್ತಾರೆ. ಹೀಗಿರುವಾಗ ಪಾಠ ಮಾಡಿರುವ ಕ್ರಮದಲ್ಲಿ ಮಾಡಬೇಕಾಗಿರುವ ಕಾರ್ಯಗಳನ್ನು ತಿಳಿಯುವ ಮೊದಲೇ ದಾರ್ಶಿಕವೇದಿಗೆ (ದರ್ಶದಲ್ಲಿ ಮಾಡಬೇಕಾದ ವೇದಿ) ಪೂರ್ವದಿನದ ಸಂಬಂಧವು ತಿಳಿಯುವುದರಿಂದ ಇಲ್ಲಿ ವೇದಿಗೇ ಅಪಕರ್ಷವಿಲ್ಲ. ದರ್ಶದಲ್ಲಿ ವೇದಿಯನ್ನು ನಿರ್ಮಿಸಬೇಕಾದದ್ದು ಪೂರ್ವದಿನದಲ್ಲಿಯೇ ಎಂಬುದು ತಿಳಿದ ನಂತರ ವೇದಿಯ ಅಪಕರ್ಷಕ್ಕೇ ಪ್ರಸಕ್ತಿಯಿಲ್ಲದಿರುವಾಗ ವೇದಿಯವರೆಗಿನ ಕಲಾಪಗಳಿಗೆ ಅಪಕರ್ಷವೆಲ್ಲಿಂದ ಬಂದೀತು?

**೩) ಪ್ರೋಕ್ಷಣೀ ಶಬ್ದದ ಅರ್ಥವೇನು?**

ಮೊದಲನೆಯ ಅಧ್ಯಾಯದ ನಾಲ್ಕನೆಯ ಪಾದದಲ್ಲಿ ಈ ವಿಚಾರವಿದೆ. ದರ್ಶ-ಪೂರ್ಣಮಾಸ ಪ್ರಕರಣದಲ್ಲಿ

**'ಪ್ರೋಕ್ಷಣೀರಾಸಾದಯತಿ।' [ತೈ.ಬ್ರಾ. 3.2.9)**

ಎಂದು ಹೇಳಿದೆ. ಪ್ರೋಕ್ಷಣೀ ಎಂಬ ಶಬ್ದಕ್ಕೆ 'ಅಭಿಮಂತ್ರಣಾದಿಗಳಿಂದ ಸಂಸ್ಕೃತವಾದ ನೀರು' ಎಂದು ಅರ್ಥ. ಜಲಕ್ರೀಡೆಯ ಸಮಯದಲ್ಲಿ ಬಳಸುವ 'ಪ್ರೋಕ್ಷಣೀಭಿರುದ್ವೇಜಿತಾಃ ಸ್ಮಃ [ನೀರಿನಿಂದ ಉದ್ವಿಗ್ನರಾಗಿದ್ದೇವೆ.] ಎಂಬ ವಾಕ್ಯಕ್ಕೆ ಅನುಸಾರವಾಗಿ ಪ್ರೋಕ್ಷಣೀ ಶಬ್ದಕ್ಕೆ ನೀರು ಎಂದೂ ಅರ್ಥ. ಇದು ಇಲ್ಲಿನ ಪೂರ್ವಪಕ್ಷ.

ಇಲ್ಲಿಯ ಸಿದ್ಧಾಂತವು ಹೀಗಿದೆ : ಆಸಾದನ, ಅಭಿಮಂತ್ರಣ ಮುತಾದ ಸಂಸ್ಕಾರಗಳ ನಂತರವೇ ಪ್ರೋಕ್ಷಣೀಶಬ್ದವನ್ನು 'ಸಂಸ್ಕರಿಸಲ್ಪಟ್ಟ ಜಲ' ಎಂಬ ಅರ್ಥದಲ್ಲಿ ಬಳಸಬೇಕಾಗುವುದರಿಂದ ಸಂಸ್ಕಾರಗಳಿಗೆ ಮೊದಲೇ 'ಪ್ರೋಕ್ಷಣೀರಾಸಾದಯತಿ' ಎಂದು ಹೇಳಲು ಬರುವುದಿಲ್ಲ. ಕೆಲವೆಡೆ ಪ್ರಯೋಗ ಇರುವುದರಿಂದ ಜಾತಿವಾಚಕ ಎಂದು ಹೇಳಲು ಬರುವುದಿಲ್ಲ. ಆದುದರಿಂದ ಪ್ರೋಕ್ಷಣೀ ಎಂಬ ಶಬ್ದಕ್ಕೆ ಪ್ರೋಕ್ಷಿಸಲು ಸಾಧನವಾದ ವಸ್ತು ಎಂದಷ್ಟೇ ಅರ್ಥವನ್ನು ಹೇಳಬೇಕು. ಇದು ಒಂದು ಯೌಗಿಕಶಬ್ದವೇ ಹೊರತು ರೂಢಶಬ್ದವಲ್ಲ. ಹೀಗೆ ಯೌಗಿಕಾರ್ಥವು ಇರುವುದರಿಂದ 'ಆಜ್ಯಂ ಪ್ರೋಕ್ಷಣಂ' ಎಂಬಲ್ಲಿ ಆಜ್ಯಕ್ಕೂ ಕೂಡ ಆಸಾದನ ಮೊದಲಾದ ಸಂಸ್ಕಾರಗಳುಂಟು ಎಂಬುದು ಸಿದ್ಧವಾಗುತ್ತದೆ.

### ೪) ನಿಗದಗಳ ಸ್ವರೂಪವೇನು?

ಎರಡನೆಯ ಅಧ್ಯಾಯದ ಮೊದಲ ಪಾದದಲ್ಲಿ ಹೀಗೆ ವಿಚಾರವಿದೆ; 'ಪ್ರೋಕ್ಷಣೀರಾಸಾದಯ' ಮೊದಲಾದ— ಇನ್ನೊಬ್ಬರನ್ನು ಕುರಿತು ಸಂಬೋಧಿಸಿ ತಿಳಿಸಿ ಹೇಳುವ— ಮಂತ್ರಗಳು ನಿಗದಗಳು. ಋಕ್, ಯಜುಸ್, ಸಾಮ ಎಂಬ ಮೂರೇ ಮಂತ್ರಭೇದಗಳಿವೆ. ನಿಗದಗಳು ಯಜುಸ್ಸುಗಳೇ ಆದರೂ 'ಉಪಾಂಶು ಯಜುಷಾ ಕ್ರಿಯತೇ' (ಯಜುಸ್ಸುಗಳನ್ನು ಮೆಲ್ಲಗೆ ಹೇಳಬೇಕು) ಉಚ್ಚೈರ್ನಿಗಾದೇನ (ನಿಗದಗಳನ್ನು ಗಟ್ಟಿಯಾಗಿ ಹೇಳಬೇಕು) ಎಂಬುದಾಗಿ ಧರ್ಮಭೇದವಿರುವುದರಿಂದ ನಿಗದಗಳು ಯಜುಸ್ಸುಗಳಿಗಿಂತ ಬೇರೆಯ ಪ್ರಕಾರದವುಗಳು ಎಂಬುದು ಇಲ್ಲಿನ ಪೂರ್ವಪಕ್ಷ.

ಇಲ್ಲಿಯ ಸಿದ್ಧಾಂತವು ಹೀಗಿದೆ : ನಿಗದಗಳು ಯಜುರ್ಮಂತ್ರಗಳೇ. ಬಹಿರ್ಬ್ರಾಹ್ಮಣಾ ಭೋಜ್ಯಂತಾಮ್ (ಬ್ರಾಹ್ಮಣರಿಗೆ ಹೊರಗಡೆ ಬಡಿಸಿರಿ) ಪರಿವ್ರಾಜಕಸ್ತ್ವಂತಃ (ಯತಿಗಳಿಗೆ ಒಳಗಡೆ ಬಡಿಸಿರಿ) ಎಂಬಲ್ಲಿ ಪರಿವ್ರಾಜಕನು ಬ್ರಾಹ್ಮಣನೇ ಆದರೂ ಪೂಜಾರ್ಥವಾಗಿ ಅವನಿಗೆ ವಿಶೇಷಧರ್ಮ (ಒಳಗಡೆ ಭೋಜನ)ವನ್ನು ಹೇಳಲಾಗಿದೆ. ಹೀಗೆಯೇ ನಿಗದಗಳೂ ಯಜುರ್ಮಂತ್ರಗಳೇ ಆದರೂ ಬೇರೆಯವರನ್ನು ಸಂಬೋಧಿಸಿ ಹೇಳುವಾಗ ಉಪಾಂಶು(ಮೆಲ್ಲಗೆ)ವಾಗಿ ಹೇಳಲಾಗುವುದಿಲ್ಲ. ಆದ್ದರಿಂದ ಯಜುರ್ಮಂತ್ರಗಳಿಗೇ ಉಚ್ಚೈರ್ಧರ್ಮವನ್ನು ಹೇಳಿದ್ದಾರೆ. ಆದರಿಂದ ನಿಗದಗಳು ಯಜುಸ್ಸುಗಳಿಗಿಂತ ಬೇರೆಯಾಗುವುದಿಲ್ಲ. ಮಂತ್ರಗಳ ಭೇದಗಳು ಮೂರೇ, ಋಕ್, ಯಜುಸ್ ಮತ್ತು ಸಾಮ.

ಈ ಒಂಬತ್ತನೆಯ ಅನುವಾಕದಲ್ಲಿ ವೇದಿಯ ನಿರ್ಮಾಣವನ್ನು ಹೇಳಿದ್ದಾಯಿತು. ಮುಂದಿನ ಹತ್ತನೆಯ ಅನುವಾಕದಲ್ಲಿ ವೇದಿಯಲ್ಲಿ ಆಸಾದನೆ ಮಾಡಬೇಕಾಗಿರುವ ಆಜ್ಯವೇ ಮೊದಲಾದ ಹವಿಸ್ಸುಗಳ ಗ್ರಹಣವನ್ನು ಹೇಳಿರುತ್ತಾರೆ. ಪ್ರಾರಂಭದಲ್ಲಿ ಸ್ರುಕ್, ಸ್ರುವ ಮುಂತಾದ ಯಜ್ಞಪಾತ್ರೆಗಳ ಸಂಸ್ಕಾರವೂ ಅದರಲ್ಲಿ ಹೇಳಲ್ಪಟ್ಟಿದೆ.

## ॥ ದಶಮೋಽನುವಾಕಃ ॥

# ಪ್ರತ್ಯುಷ್ಟಗ್ಂ ರಕ್ಷಃ ಪ್ರತ್ಯುಷ್ಟಾ ಅರಾತಯೋಗ್ನೇರ್ವ ಸ್ತೇಜಿಷ್ಠೇನ ತೇಜಸಾ ನಿಷ್ಟಪಾಮಿ

---

ಪ್ರತ್ಯುಷ್ಟಮಿತಿ ಪ್ರತಿ-ಉಷ್ಟಮ್ । ರಕ್ಷಃ । ಪ್ರತ್ಯುಷ್ಟಾ ಇತಿ ಪ್ರತಿ-ಉಷ್ಟಾಃ । ಅರಾತಯಃ।* ಅಗ್ನೇಃ । ವಃ । ತೇಜಿಷ್ಠೇನ । ತೇಜಸಾ । ನಿರಿತಿ । ತಪಾಮಿ *।

---



| ಮಂತ್ರ | ವಿನಿಯೋಗ (ಬೌಧಾಯನ) |
| --- | --- |
| ಪ್ರತ್ಯುಷ್ಟಂ......ನಿಷ್ಟಪಾಮಿ । | ಸ್ರುಕ್, ಸ್ರುವಾದಿಗಳನ್ನು ಗಾರ್ಹಪತ್ಯಾಗ್ನಿಯಲ್ಲಿ ಪ್ರತಿತಪನ ಮಾಡಲು. |
| | ಆಪಸ್ತಂಬ |
| ೧) ಪ್ರತ್ಯುಷ್ಟಂ....ಅರಾತಯಃ । | ಸಂಮಾರ್ಜನಕ್ಕೆ ಮೊದಲಿನ ಪ್ರತಿತಪನಕ್ಕಾಗಿ. |
| ೨) ಅಗ್ನೇಃ...... ನಿಷ್ಟಪಾಮಿ । | ಸಂಮಾರ್ಜನದ ಅನಂತರದ ಪ್ರತಿತಪನಕ್ಕಾಗಿ. |

---

(ಈ ಪ್ರತಿತಪನದಿಂದ) ರಕ್ಷಃ = ರಾಕ್ಷಸರು; ಪ್ರತ್ಯುಷ್ಟಮ್ = ಅತ್ಯಂತವಾಗಿ ಸುಟ್ಟುಹೋಗಲಿ; ಅರಾತಯಃ = (ಯಜ್ಞಕಂಟಕರಾದ) ಶತ್ರುಗಳು; ಪ್ರತ್ಯುಷ್ಟಾಃ= ಅತ್ಯಂತವಾಗಿ ಸುಟ್ಟುಹೋಗಲಿ; ❖ (ಸ್ರುಕ್, ಸ್ರುವಾದಿಗಳೇ!) ತೇಜಿಷ್ಠೇನ = ಅತ್ಯಂತ ತೀಕ್ಷ್ಣವಾದ;ಅಗ್ನೇಃ = ಅಗ್ನಿಯ; ತೇಜಸಾ = ತೇಜಸ್ಸಿನಿಂದ; ವಃ = ನಿಮ್ಮನ್ನು ; ನಿಷ್ಟಪಾಮಿ = ಸಂಪೂರ್ಣವಾಗಿ ಕಾಯಿಸುತ್ತೇನೆ. ❖ [ಎಲೈ ಸ್ರುವವೇ!]

---

ಈ ಕಾಯಿಸುವಿಕೆಯಿಂದ ಯಜ್ಞಕಂಟಕರಾದ ರಾಕ್ಷಸರೂ, ಶತ್ರುಗಳೂ ದಗ್ಧರಾಗಲಿ. ❀ಎಲೈ ಸ್ರುಕ್-ಸ್ರುವಾದಿಗಳೇ! ಅತ್ಯಂತ ತೀಕ್ಷ್ಣವಾದ ಅಗ್ನಿತೇಜಸ್ಸಿನಿಂದ ನಿಮ್ಮನ್ನು ಚೆನ್ನಾಗಿ ಕಾಯಿಸುತ್ತೇನೆ. ❀ಯಾಗದಿಂದ ವೃಷ್ಟಿಯಾಗಿ ಸಸ್ಯಸಮೃದ್ಧಿಯಾಗಿ ಪಶುಸಮೃದ್ಧಿಯೂ, ಅನ್ನಸಮೃದ್ಧಿಯೂ ಆಗುತ್ತದೆ. ಎಲೈ ಸ್ರುವವೇ! ಆದುದರಿಂದ ಯಜಮಾನನ ದನಗಳ ಕೊಟ್ಟಿಗೆಯು ನಾಶವಾಗದೆ ಗೋವುಗಳಿಂದ ತುಂಬಿರಲೆಂದು ಅನ್ನಸಾಧನವಾದ ಮತ್ತು ಶತ್ರುನಾಶಕನಾದ ನಿನ್ನನ್ನು ಶುದ್ಧಿಗೊಳಿಸುತ್ತೇನೆ.

**ಗೋಷ್ಠಂ ಮಾ ನಿರ್ಮೃಕ್ಷಂ ವಾಜಿನಂ ತ್ವಾ ಸಪತ್ನಸಾಹಗ್ಂ ಸಂಮಾರ್ಜ್ಮಿ ವಾಚಂ ಪ್ರಾಣಂ ಚಕ್ಷುಃ ಶ್ರೋತ್ರಂ ಪ್ರಜಾಂ**

ಗೋಷ್ಠಮಿತಿ ಗೋ-ಸ್ಥಮ್ । ಮಾ । ನಿರಿತಿ । ಮೃಕ್ಷಮ್ । ವಾಜಿನಮ್ । ತ್ವಾ। ಸಪತ್ನಸಾಹಮಿತಿ ಸಪತ್ನ-ಸಾಹಮ್ । ಸಮಿತಿ । ಮಾರ್ಜ್ಮಿ । ವಾಚಮ್ । ಪ್ರಾಣಮಿತಿ ಪ್ರ-ಅನಮ್ । ಚಕ್ಷುಃ । ಶ್ರೋತ್ರಮ್ । ಪ್ರಜಾಮಿತಿ ಪ್ರ-ಜಾಮ್ ।

| ಮಂತ್ರ | ವಿನಿಯೋಗ |
|---|---|
| ಗೋಷ್ಠಂ.............ಸಂಮಾರ್ಜ್ಮಿ । | ಸ್ರುವದ ಸಮ್ಮಾರ್ಜನೆ |
| ವಾಚಂ ಪ್ರಾಣಂ ಮಾ ನಿರ್ಮೃಕ್ಷಂ ವಾಜಿನೀಂ ತ್ವಾ ಸಪತ್ನಸಾಹೀಗ್ಂ ಸಂಮಾರ್ಜ್ಮಿ । | ಜುಹೂವಿನ ಸಮ್ಮಾರ್ಜನೆ |
| ಚಕ್ಷುಃ ಶ್ರೋತ್ರಂ......ವಾಜಿನೀಂ......ಸಂಮಾರ್ಜ್ಮಿ । | ಉಪಭೃತ್ತಿನ ಸಂಮಾರ್ಜನೆ |
| ಪ್ರಜಾಂ ಯೋನಿಂ....ವಾಜಿನೀಂ....ಸಂಮಾರ್ಜ್ಮಿ । | ಧ್ರುವೆಯ ಸಂಮಾರ್ಜನೆ. |

ಗೋಷ್ಠಂ = ಹಸುಗಳ ಕೊಟ್ಟಿಗೆಯನ್ನು; ಮಾ ನಿರ್ಮೃಕ್ಷಮ್ = ನಾಶ ಮಾಡಬಾರದೆಂದು; ವಾಜಿನಮ್ = ಅನ್ನವುಳ್ಳ ; ಸಪತ್ನಸಾಹಮ್ = ಶತ್ರುಗಳನ್ನು ಸೋಲಿಸುವ; ತ್ವಾ= ನಿನ್ನನ್ನು; ಸಂಮಾರ್ಜ್ಮಿ = ಚೆನ್ನಾಗಿ ಶುದ್ಧಿಮಾಡುತ್ತೇನೆ. +[ಎಲೈ ಜುಹುವೇ!] ವಾಚಮ್ =ಮಾತನ್ನೂ; ಪ್ರಾಣಮ್=ಪ್ರಾಣವನ್ನೂ; ಮಾ ನಿರ್ಮೃಕ್ಷಮ್=ನಾಶಮಾಡಬಾರದೆಂದು; ವಾಜಿನೀಂ= ಅನ್ನವುಳ್ಳ; ಸಪತ್ನಸಾಹೀಂ = ಶತ್ರುಗಳನ್ನು ಪರಾಜಯಗೊಳಿಸುವ; ತ್ವಾ= ನಿನ್ನನ್ನು; ಸಂಮಾರ್ಜ್ಮಿ=ಚೆನ್ನಾಗಿ ಒರೆಸುವೆನು;+[ಎಲೈ ಉಪಭೃತವೇ!] ಚಕ್ಷುಃ=ಕಣ್ಣನ್ನೂ; ಶ್ರೋತ್ರಮ್ = ಕಿವಿಯನ್ನೂ; ಮಾ ನಿರ್ಮೃಕ್ಷಮ್ = ನಾಶಮಾಡಬಾರದೆಂದು; ವಾಜಿನೀಂ = ಅನ್ನವುಳ್ಳ; ಸಪತ್ನಸಾಹೀಮ್ = ಶತ್ರುಗಳನ್ನು ಪರಾಜಯಗೊಳಿಸುವ; ತ್ವಾ = ನಿನ್ನನ್ನು; ಸಂಮಾರ್ಜ್ಮಿ = ಚೆನ್ನಾಗಿ ಒರೆಸುತ್ತೇನೆ; +[ಎಲೈ ಧ್ರುವವೇ!] ಪ್ರಜಾಂ = ಮಕ್ಕಳನ್ನೂ;

ಎಲೈ ಜುಹುವೇ! ಯಜಮಾನನ ಮಾತು ಮತ್ತು ಪ್ರಾಣಕ್ಕೆ ಹಾನಿಯಾಗದಿರಲೆಂದು

ಯೋನಿಂ ಮಾ ನಿರ್ಮೃಕ್ಷಂ ವಾಜಿನೀಂ ತ್ವಾ ಸಪತ್ನಸಾಹೀಗ್ಂ

ಸಂಮಾಜ್ಮ್ಯಾಶಾಸಾನಾ ಸೌಮನಸಂ ಪ್ರಜಾಗ್ಂ ಸೌಭಾಗ್ಯಂ

ತನೂಮ್। ಅಗ್ನೇರನುವ್ರತಾ ಭೂತ್ವಾ ಸಂನಹ್ಯೇ ಸುಕೃತಾಯ

---

ಯೋನಿಮ್। ಮಾ । ನಿರಿತಿ । ಮೃಕ್ಷಮ್ । ವಾಜಿನೀಮ್ । ತ್ವಾ । ಸಪತ್ನಸಾಹೀಮಿತಿ ಸಪತ್ನ-ಸಾಹೀಮ್ । ಸಮಿತಿ । ಮಾರ್ಜ್ಮಿ । ಆಶಾಸಾನೇತ್ಯಾ-ಶಾಸಾನಾ । ಸೌಮನಸಮ್। ಪ್ರಜಾಮಿತಿ ಪ್ರ-ಜಾಮ್ । ಸೌಭಾಗ್ಯಮ್ । ತನೂಮ್ ॥ ಅಗ್ನೇಃ । ಅನುವ್ರತೇತ್ಯನು-ವ್ರತಾ । ಭೂತ್ವಾ । ಸಮಿತಿ । ನಹ್ಯೇ । ಸುಕೃತಾಯೇತಿ ಸು-ಕೃತಾಯ ।

---

| ಮಂತ್ರ | ವಿನಿಯೋಗ |
|---|---|
| ಆಶಾಸಾನಾ.............ಕಮ್ । | ಪತ್ನಿಯ ಯೋಕ್ತ್ರಬಂಧನಕ್ಕಾಗಿ |

---

ಯೋನಿಮ್ = ಪ್ರಜೋತ್ಪತ್ತಿಸ್ಥಾನವನ್ನು; ಮಾ ನಿರ್ಮೃಕ್ಷಂ = ನಾಶ ಮಾಡಬಾರದೆಂದು; ವಾಜಿನೀಂ = ಅನ್ನವುಳ್ಳ; ಸಪತ್ನಸಾಹೀಂ = ಶತ್ರುಗಳನ್ನು ಪರಾಜಯಗೊಳಿಸುವ; ತ್ವಾ = ನಿನ್ನನ್ನು; ಸಂಮಾರ್ಜ್ಮಿ = ಚೆನ್ನಾಗಿ ಒರೆಸುತ್ತೇನೆ; +[ಯಾವ ಯಜಮಾನಪತ್ನಿಯು;] ಅಗ್ನೇಃ = ಅಗ್ನಿಯ; ಅನುವ್ರತಾ ಭೂತ್ವಾ = ಅನುಸಾರಿಣಿಯಾಗಿ; ಸೌಮನಸಮ್ = ಒಳ್ಳೆಯ ಮನಸ್ಸಿರುವಿಕೆಯನ್ನೂ; ಪ್ರಜಾಮ್ = ಒಳ್ಳೆಯ ಮಕ್ಕಳನ್ನೂ; ಸೌಭಾಗ್ಯಮ್ = ಒಳ್ಳೆಯ ಭಾಗ್ಯವತಿಯಾಗಿರುವಿಕೆಯನ್ನೂ; ತನೂಮ್ = (ದೃಢವಾದ) ದೇಹವನ್ನೂ; ಆಶಾಸಾನಾ=ಹಾರೈಸುವವಳಾಗಿದ್ದಾಳೆಯೋ; (ತಾಮ್=ಆಕೆಯನ್ನು); ಸುಕೃತಾಯ= ಯಾಗವೆಂಬ ಒಳ್ಳೆಯ ಕಾರ್ಯಕ್ಕಾಗಿ;

---

ಅನ್ನಸಾಧನವಾದ ಮತ್ತು ಶತ್ರುನಾಶಕವಾದ ನಿನ್ನನ್ನು ಸಂಮಾರ್ಜನೆ ಮಾಡುತ್ತೇನೆ.

ಎಲೈ ಉಪಭೃತ್ತೇ! ಯಜಮಾನನ ಕಣ್ಣು ಕಿವಿಗೆ ನಾಶವಾಗದಿರಲೆಂದು ಅನ್ನಸಾಧನವಾದ ಮತ್ತು ಶತ್ರುನಾಶಕವಾದ ನಿನ್ನನ್ನು ಶುದ್ಧಿಗೊಳಿಸುತ್ತೇನೆ.

**ಕಮ್॥ ಸುಪ್ರಜಸಸ್ತ್ವಾ ವಯಗ್ಂ ಸುಪತ್ನೀರುಪ[೧ ಸೇದಿಮ]**

**ಸೇದಿಮ। ಅಗ್ನೇ ಸಪತ್ನದಂಭನಮದಬ್ಧಾಸೋ ಅದಾಭ್ಯಮ್ ।**

---

ಕಮ್ ॥ ಸುಪ್ರಜಸ ಇತಿ-ಸು-ಪ್ರಜಸಃ । ತ್ವಾ । ವಯಮ್ । ಸುಪತ್ನೀರಿತಿ ಸು-ಪತ್ನೀಃ ಉಪೇತಿ । ಸೇದಿಮ ॥ ಅಗ್ನೇ । ಸಪತ್ನದಂಭನಮಿತಿ ಸಪತ್ನ-ದಂಭನಮ್ । ಅದಬ್ಧಾಸಃ। ಅದಾಭ್ಯಮ್ ॥

---

| ಮಂತ್ರ | ವಿನಿಯೋಗ |
|---|---|
| ಸುಪ್ರಜಸಃ......ಅದಾಭ್ಯಮ್ । | ಗಾರ್ಹಪತ್ಯದ ಸಮೀಪದಲ್ಲಿ ಪತ್ನಿಯು ಕುಳಿತುಕೊಳ್ಳಲು. ಬೊಗಸೆಯಲ್ಲಿ ಪೂರ್ಣಪಾತ್ರ ಜಲವನ್ನು ಹಾಕುವಾಗ ಪತ್ನಿಯು ಜಪಿಸಲು. |

---

ಕಮ್ = ಸುಖವಾಗಿರುವಂತೆ; ಸನ್ನಹ್ಯೇ = ಕಟ್ಟುತ್ತೇನೆ; +ಅಗ್ನೇ! = ಎಲೈ ಅಗ್ನಿಯೇ; ಸುಪ್ರಜಸಃ =[ನಿನ್ನ ಅನುಗ್ರಹದಿಂದ] ಒಳ್ಳೆಯ ಮಕ್ಕಳುಳ್ಳವರಾಗಿ; ಸುಪತ್ನೀಃ = ಒಳ್ಳೆಯ ಪತಿಯುಳ್ಳವರಾದ; ವಯಮ್ = ನಾವು; ಅದಬ್ಧಾಸಃ = ಯಾರಿಂದಲೂ ತಿರಸ್ಕರಿಸಲ್ಪಡದವರಾಗಿ; ಸಪತ್ನದಂಭನಮ್ = ಶತ್ರುಗಳ ನಾಶಕನಾದ; ಅದಾಭ್ಯಮ್ = ಯಾರಿಂದಲೂ ತಿರಸ್ಕರಿಸಲು ಸಾಧ್ಯನಲ್ಲದ; ತ್ವಾ = ನಿನ್ನನ್ನು; ಉಪಸೇದಿಮ = ಸಮೀಪಿಸಿ ಕುಳಿತುಕೊಳ್ಳುತ್ತೇವೆ.

---

ಎಲೈ ಧ್ರುವೆಯೇ! ಯಜಮಾನನ ಪ್ರಜೆ ಮತ್ತು ಪ್ರಜೋತ್ಪಾದನಗಳಿಗೆ ಹಾನಿಯಾಗದಿರಲೆಂದು ಅನ್ನಸಾಧನ ಮತ್ತು ಶತ್ರುನಾಶಕವಾದ ನಿನ್ನನ್ನು ಶೋಧಿಸುತ್ತೇನೆ. ✿ ಈ ಯಜಮಾನಪತ್ನಿಯು ಅಗ್ನಿಪರಿಚರ್ಯಾದಿವ್ರತನಿಷ್ಠಳಾಗಿ ಒಳ್ಳೆಯ ಮನಸ್ಸು, ಮಕ್ಕಳು, ಒಳ್ಳೆಯ ಭಾಗ್ಯ, ಸುದೃಢದೇಹ ಮೊದಲಾದ ಯಜ್ಞಫಲಗಳನ್ನು ಆಶಿಸುತ್ತಿರುತ್ತಾಳೆ. ಈ ಯಾಗವೆಂಬ ಒಳ್ಳೆಯ ಕಾರ್ಯಕ್ಕಾಗಿ ಆಕೆಗೆ ಸುಖವಾಗಿರುವಂತೆ ಆಕೆಯನ್ನು (ಅಗ್ನೀಧ್ರನಾದ ನಾನು) ಈ ಯೋಕ್ತ್ರದಿಂದ ಕಟ್ಟುತ್ತೇನೆ.

ಹೇ ಅಗ್ನಿಯೇ! ಒಳ್ಳೆಯ ಪತಿಯನ್ನು ಹೊಂದಿರುವ ನಾವು ನಿನ್ನ ಅನುಗ್ರಹದಿಂದ

ಇಮಂ ವಿಷ್ಯಾಮಿ ವರುಣಸ್ಯ ಪಾಶಂ ಯಮಬಧ್ನೀತ ಸವಿತಾ ಸುಕೇತಃ । ಧಾತುಶ್ಚ ಯೋನೌ ಸುಕೃತಸ್ಯ ಲೋಕೇ ಸ್ಯೋನಂ

---

ಇಮಮ್। ವೀತಿ। ಸ್ಯಾಮಿ । ವರುಣಸ್ಯ । ಪಾಶಮ್। ಯಮ್। ಅಬಧ್ನೀತ। ಸವಿತಾ। ಸುಕೇತ ಇತಿ ಸು-ಕೇತಃ ॥ ಧಾತುಃ । ಚ । ಯೋನೌ । ಸುಕೃತಸ್ಯೇತಿ ಸು-ಕೃತಸ್ಯ। ಲೋಕೇ । ಸ್ಯೋನಮ್ ।

---

| ಮಂತ್ರ | ವಿನಿಯೋಗ |
|---|---|
| ಇಮಂ.........ಕರೋಮಿ । | ಪತ್ನಿಯ ಯೋಕ್ತ್ರವಿಮುಂಚನದಲ್ಲಿ* |

---

+ಸುಕೇತಃ = ಒಳ್ಳೆಯ ಜ್ಞಾನವುಳ್ಳ; ಸವಿತಾ = ಪ್ರೇರಕನಾದ ಸವಿತೃದೇವನು; ಯಮ್ = ಯಾವ; ವರುಣಸ್ಯ ಪಾಶಮ್ = ವರುಣನ ಪಾಶದಂತಿರುವ ಯೋಕ್ತ್ರವನ್ನು; ಅಬಧ್ನೀತ = ಕಟ್ಟಿದನೋ; ಇಮಮ್ = ಈ ವರುಣಪಾಶವನ್ನು; ವಿಷ್ಯಾಮಿ = ಬಿಚ್ಚುತ್ತೇನೆ. ಚ = ಮತ್ತು; ಧಾತುಃ = ಬ್ರಹ್ಮನ; ಯೋನೌ = ಸ್ಥಾನವಾದ; ಸುಕೃತಸ್ಯ = ಅನುಷ್ಠಿತವಾದ ಯಾಗದ ಫಲಭೂತವಾದ; ಲೋಕೇ = ಸ್ವರ್ಗಲೋಕದಲ್ಲಿ; ಪತ್ಯಾ ಸಹ = ಪತಿಯೊಡನೆ; ಮೇ = ನನಗೆ; ಸ್ಯೋನಮ್ = ಸುಖವನ್ನು

---

ಒಳ್ಳೆಯ ಮಕ್ಕಳನ್ನೂ ಪಡೆದವರಾಗಿ, ಬೇರೆಯವರ ತಿರಸ್ಕಾರಕ್ಕೆ ಗುರಿಯಾಗದವರಾಗಿ, ಶತ್ರುನಾಶಕನೂ ಬೇರೆಯವರಿಂದ ತಿರಸ್ಕರಿಸಲು ಅಸಾಧ್ಯನೂ ಆಗಿರುವ ನಿನ್ನ ಸಮೀಪದಲ್ಲಿ ಕುಳಿತುಕೊಳ್ಳುತ್ತೇವೆ.

ಸುಜ್ಞಾನಿಯೂ, ಸರ್ವಪ್ರೇರಕನೂ ಆದ ಸವಿತೃದೇವನು ಈ ಯೋಕ್ತ್ರವನ್ನು ಕಟ್ಟಿರುತ್ತಾನೆ. ವರುಣಪಾಶದಂತೆ ಇರುವ ಈ ಯೋಕ್ತ್ರವನ್ನು ಬಿಚ್ಚುತ್ತೇನೆ. ಬ್ರಹ್ಮನ ಸ್ಥಾನದಲ್ಲಿ ಯಾಗದ ಅನುಷ್ಠಾನದಿಂದ ಲಭ್ಯವಾಗುವ ಪುಣ್ಯಲೋಕದಲ್ಲಿ ಪತಿಯೊಡನೆ ನನಗೆ ಸುಖವಾಗುವಂತೆ ಮಾಡುತ್ತೇನೆ.

---

* ಇದು ಮುಂದೆ ಮಾಡಬೇಕಾದ ಕಾರ್ಯವಾದರೂ ಯೋಕ್ತ್ರದ ಪ್ರಸಂಗವಿದ್ದುದರಿಂದ ಶ್ರುತಿಯು ಇಲ್ಲಿಯೇ ತಿಳಿಸಿದೆ.

ಮೇ ಸಹ ಪತ್ಯಾ ಕರೋಮಿ॥ ಸಮಾಯುಷಾ ಸಂ ಪ್ರಜಯಾ ಸಮಗ್ನೇ ವರ್ಚಸಾ ಪುನಃ । ಸಂ ಪತ್ನೀ ಪತ್ಯಾಹಂ ಗಚ್ಛೇ ಸಮಾತ್ಮಾ ತನುವಾ ಮಮ ॥

ಮೇ । ಸಹ । ಪತ್ಯಾ। ಕರೋಮಿ ॥ ಸಮಿತಿ । ಆಯುಷಾ । ಸಮಿತಿ । ಪ್ರಜಯೇತಿ ಪ್ರ-ಜಯಾ । ಸಮಿತಿ। ಅಗ್ನೇ । ವರ್ಚಸಾ । ಪುನಃ ॥ ಸಮಿತಿ । ಪತ್ನೀ । ಪತ್ಯಾ। ಆಹಮ್ । ಗಚ್ಛೇ। ಸಮಿತಿ । ಆತ್ಮಾ । ತನುವಾ । ಮಮ ॥

| ಮಂತ್ರ | ವಿನಿಯೋಗ (ಬೌಧಾಯನ) |
|---|---|
| ಸಮಾಯುಷಾ...ಮಮ । | ಪತ್ನಿಯು ಮಾಡುವ ಗಾರ್ಹಪತ್ಯದ ಉಪಸ್ಥಾನ |
| | ಪೂರ್ಣಪಾತ್ರವನ್ನು ತರುವಾಗ ಪತ್ನಿಯ ಜಪವಿಲ್ಲಿ — ಆಪಸ್ತಂಬ |

ಕರೋಮಿ = ಮಾಡುತ್ತೇನೆ; ಅಗ್ನೇ = ಹೇ ಅಗ್ನಿಯೇ! ಅಹಂ = ನಾನು; ಆಯುಷಾ = ದೀರ್ಘಾಯುಸ್ಸಿನಿಂದ; ಸಂ ಗಚ್ಛೇ = ಕೂಡಿದವಳಾಗುವೆನು; ಪ್ರಜಯಾ = ಸುಪುತ್ರರಿಂದ; ಸಂ (ಗಚ್ಛೇ) = ಯುಕ್ತಳಾಗುವೆನು; [ಪುನಃ = ಮತ್ತೆ]; ವರ್ಚಸಾ = (ಪಾತಿವ್ರತ್ಯರೂಪವಾದ)ವರ್ಚಸ್ಸಿನಿಂದ; ಸಂ (ಗಚ್ಛೇ) = ಕೂಡಿದವಳಾಗುವೆನು; ಪತ್ಯಾ = ಈ ಪತಿಯೊಡನೆ; ಪುನಃ= ಮತ್ತೆ ಮತ್ತೆ; ಸಂ (ಗಚ್ಛೇ) = ಕೂಡಿಕೊಂಡಿರುವೆನು. [ವಿಯೋಗವುಂಟಾಗದಿರಲಿ); ಆತ್ಮಾ = [ನನ್ನ] ಆತ್ಮವು; ಮಮ = ನನ್ನ; ತನುವಾ = ಶರೀರದೊಡನೆ; ಸಂ (ಗಚ್ಛತಾಮ್) =[ಬಹುಕಾಲ] ಸೇರಿರಲಿ.

ಎಲೈ ಗಾರ್ಹಪತ್ಯಾಗ್ನಿಯೇ! ಈ ಯಾಗದಿಂದ ಸುಪ್ರೀತನಾದ ನಿನ್ನ ಅನುಗ್ರಹದಿಂದ ನಾನು ದೀರ್ಘವಾದ ಆಯುಸ್ಸಿನಿಂದಲೂ ಉತ್ತಮ ಪುತ್ರೀ-ಪುತ್ರರಿಂದಲೂ ಕೂಡಿರುವಂತಾಗಲಿ. ಮತ್ತೆ ಪಾತಿವ್ರತ್ಯರೂಪವಾದ ವರ್ಚಸ್ಸು ಪ್ರಾಪ್ತವಾಗಲಿ. ಈ ಪತಿಯೊಡನೆ ಮತ್ತೆ ಮತ್ತೆ ಸಂಯೋಗವುಂಟಾಗಲಿ. ಜನ್ಮಾಂತರದಲ್ಲಿಯೂ ವಿಯೋಗವು ಉಂಟಾಗದಿರಲಿ. ನನ್ನ ಆತ್ಮವು ನನ್ನ ಈ ದೇಹದೊಡನೆ ಬಹುಕಾಲ ಕೂಡಿಕೊಂಡಿರಲಿ.

ಮಹೀನಾಂ ಪಯೋಽಸ್ಯೋಷಧೀನಾಗ್ಂ ರಸಸ್ತಸ್ಯ ತೇಽಕ್ಷೀಯಮಾಣಸ್ಯ ನಿ[ನಿಃ(೧)ವಪಾಮಿ]ರ್ವಪಾಮಿಮಹೀನಾಂ ಪಯೋಽಸ್ಯೋಷಧೀನಾಗ್ಂ ರಸೋಽದಬ್ಧೇನ ತ್ವಾ ಚಕ್ಷುಷಾವೇಕ್ಷೇ ಸುಪ್ರಜಾಸ್ತ್ವಾಯ

ಮಹೀನಾಮ್। ಪಯಃ । ಅಸಿ । ಓಷಧೀನಾಮ್ । ರಸಃ । ತಸ್ಯ । ತೇ । ಅಕ್ಷೀಯಮಾಣಸ್ಯ। ನಿರಿತಿ। ವಪಾಮಿ। ಮಹೀನಾಮ್ । ಪಯಃ । ಅಸಿ । ಓಷಧೀನಾಮ್ । ರಸಃ । ಅದಬ್ಧೇನ। ತ್ವಾ । ಚಕ್ಷುಷಾ । ಅವೇತಿ । ಈಕ್ಷೇ । ಸುಪ್ರಜಾಸ್ತ್ವಾಯೇತಿ ಸುಪ್ರಜಾಃ-ತ್ವಾಯ ।

| ಮಂತ್ರ | ವಿನಿಯೋಗ |
|---|---|
| ಮಹೀನಾಮ್.........ನಿರ್ವಪಾಮಿ | ಆಜ್ಯಸ್ಥಾಲಿಯಲ್ಲಿ ಆಜ್ಯವನ್ನು ಹಾಕಲು |
| ಮಹೀನಾಮ್......ಸುಪ್ರಜಾಸ್ತ್ವಾಯ | ಪತ್ನಿಯು ಆಜ್ಯಾವೇಕ್ಷಣವನ್ನು ಮಾಡಲು |

+(ಎಲೈ ಆಜ್ಯವೇ! ನೀನು) ಮಹೀನಾಮ್ = ಹಸುಗಳ; ಪಯಃ = ಹಾಲು; ಅಸಿ = ಆಗಿದ್ದೀಯೆ; (ಹಾಲಿನಿಂದ ಉಂಟಾಗಿದ್ದೀಯೆ) ಓಷಧೀನಾಮ್ = [ಹಸುವು ಭಕ್ಷಿಸಿದ] ತೃಣಾದಿಗಳ; ರಸಃ = ರಸವಾಗಿ; (ಅಸಿ = ಇರುವೆ) ತಸ್ಯ = ಅಂತಹ; ಅಕ್ಷೀಯಮಾಣಸ್ಯ = ಕ್ಷಯವಿಲ್ಲದ; ತೇ = ನಿನ್ನ [ಸ್ವರೂಪವನ್ನು] [ದೇವಯಜ್ಯಾಯೈ* = ದೇವತೆಗಳ ಯಾಗಕ್ಕೋಸ್ಕರ;] ನಿರ್ವಪಾಮಿ = [ಆಜ್ಯಸ್ಥಾಲಿಯಲ್ಲಿ] ಹಾಕುತ್ತೇನೆ. +[ಎಲೈ ಆಜ್ಯವೇ!] [ನೀನು] ಮಹೀನಾಂ ಪಯಃ ಅಸಿ=ಹಸುಗಳ ಹಾಲಾಗಿರುವೆ; ಓಷಧೀನಾಂ ರಸಃ=ತೃಣಾದಿಗಳ ರಸಪರಿಣಾಮವಾಗಿರುವೆ; ತ್ವಾ = ನಿನ್ನನ್ನು; ಸುಪ್ರಜಾಸ್ತ್ವಾಯ = ಒಳ್ಳೆಯ ಮಕ್ಕಳಿಗಾಗಿ; ಅದಬ್ಧೇನ = ರೋಗರಹಿತವಾದ; ಚಕ್ಷುಷಾ = ಕಣ್ಣಿನಿಂದ; ಅವೇಕ್ಷೇ = ನೋಡುತ್ತೇನೆ;

ಎಲೈ ಆಜ್ಯವೇ! ನೀನು ಹಸುಗಳ ಹಾಲಿನಿಂದಾದವನು. ಹಸುಗಳು ಭಕ್ಷಿಸಿದ ಹುಲ್ಲು ಮೊದಲಾದ ಓಷಧಿಗಳ ರಸದಿಂದ ನಿಷ್ಪನ್ನನಾಗಿರುವೆ. ಅಂತಹ ಕ್ಷಯರಹಿತನಾದ ನಿನ್ನನ್ನು ಯಾಗಾರ್ಥವಾಗಿ ಆಜ್ಯಸ್ಥಾಲಿಯಲ್ಲಿ ಹಾಕುತ್ತೇನೆ.

*ಮಂತ್ರದಲ್ಲಿ ಈ ಪದವಿಲ್ಲದಿದ್ದರೂ ವಿನಿಯೋಗದ ಬ್ರಾಹ್ಮಣವಾಕ್ಯದಲ್ಲಿರುವುದರಿಂದ ಕಲ್ಪಸೂತ್ರಕಾರರು ಪದವನ್ನು ಸೇರಿಸಿ ವಿನಿಯೋಗ ಹೇಳಿದ್ದಾರೆ.

**ತೇಜೋಽಸಿ ತೇಜೋಽನು ಪ್ರೇಹ್ಯಗ್ನಿಸ್ತೇ ತೇಜೋ ಮಾ ವಿನ್ಯೈದಗ್ನೇರ್ಜಿಹ್ವಾಸಿ ಸುಭೂರ್ದೇವಾನಾಂ ಧಾಮ್ನೇಧಾಮ್ನೇ**

**ತೇಜಃ । ಅಸಿ । ತೇಜಃ । ಅನು । ಪ್ರೇತಿ । ಇಹಿ । ಅಗ್ನಿಃ । ತೇ । ತೇಜಃ । ಮಾ । ವೀತಿ । ನೈತ್ । ಅಗ್ನೇಃ । ಜಿಹ್ವಾ । ಅಸಿ । ಸುಭೂರಿತಿ ಸು-ಭೂಃ । ದೇವಾನಾಮ್। ಧಾಮ್ನೇಧಾಮ್ನ ಇತಿ ಧಾಮ್ನೇ-ಧಾಮ್ನೇ ।**

| ಮಂತ್ರ | ವಿನಿಯೋಗ |
|---|---|
| ತೇಜೋಽಸಿ । | ಗಾರ್ಹಪತ್ಯದಲ್ಲಿ ಆಜ್ಯವನ್ನು ಕಾಯಿಸಲು |
| ತೇಜೋಽನುಪ್ರೇಹಿ । | ಆಹವನೀಯದ ಬಳಿ ಆಜ್ಯವನ್ನು ಒಯ್ಯಲು |
| ಅಗ್ನಿಸ್ತೇ ತೇಜೋ ಮಾ ವಿ ನೈತ್ । | ಆಹವನೀಯದಲ್ಲಿ ಆಜ್ಯವನ್ನು ಕಾಯಿಸಲು |



+(ಎಲೈ ಆಜ್ಯವೇ! ನೀನು) ತೇಜಃ ಅಸಿ = ತೇಜೋರೂಪನಾಗಿದ್ದೀಯೆ; +(ನೀನು) ತೇಜಃ = ತೇಜೋರೂಪವಾದ ಆಹವನೀಯವನ್ನು; ಅನು ಪ್ರೇಹಿ = ಸಮೀಪಿಸಿ ಪ್ರವೇಶಿಸುವುದಕ್ಕೆ ಹೋಗು; ಅಗ್ನಿಃ = ಈ ಆಹವನೀಯಾಗ್ನಿಯು; ತೇ = ನಿನ್ನ; ತೇಜಃ = ತೇಜಸ್ಸನ್ನು; ಮಾ ವಿ ನೈತ್ = ಹೋಗಲಾಡಿಸದಿರಲಿ. +(ಎಲೈ ಆಜ್ಯವೇ! ನೀನು) ಅಗ್ನೇಃ = ಅಗ್ನಿಯ; ಜಿಹ್ವಾ ಅಸಿ = [ಜ್ವಾಲಾರೂಪವಾದ] ನಾಲಿಗೆಯೇ ಆಗಿದ್ದೀಯೆ; ದೇವಾನಾಮ್ = ದೇವತೆಗಳ; ಸುಭೂಃ = ಸುಖಕ್ಕಾಗಿ ಹುಟ್ಟಿದವನೂ (ಆಗಿರುವೆ). (ನೀನು) ದೇವೇಭ್ಯಃ = ದೇವತೆಗಳ; ಧಾಮ್ನೇ ಧಾಮ್ನೇ [ಭವ] = ಆಹುತಿಗಳ ಸ್ಥಾನಗಳಿಗೆಲ್ಲಾ ಸಾಕಾದಷ್ಟಾಗು;

---

ಎಲೈ ಆಜ್ಯವೇ! ನೀನು ಹಸುಗಳ ಹಾಲಿನಿಂದ ಉಂಟಾಗಿರುವೆ. ಹಸುಗಳು ಭಕ್ಷಿಸಿದ ತೃಣಾದಿರಸಗಳ ಪರಿಣಾಮವಾಗಿರುವೆ. ನಿನ್ನನ್ನು ಒಳ್ಳೆಯ ಮಕ್ಕಳಿಗಾಗಿ ರೋಗವಿಲ್ಲದ ಕಣ್ಣಿನಿಂದ ನೋಡುತ್ತೇನೆ. ❁ ಎಲೈ ಆಜ್ಯವೇ! ನೀನು ತೇಜಃಸ್ವರೂಪನು. ❁ ಎಲೈ ಆಜ್ಯವೇ! ನೀನು ಕಾಯುವುದಕ್ಕಾಗಿ ತೇಜೋರೂಪನಾದ ಆಹವನೀಯಾಗ್ನಿಯ ಸಮೀಪಕ್ಕೆ ಹೋಗು. ❁ ಎಲೈ ಆಜ್ಯವೇ! ಆಹವನೀಯಾಗ್ನಿಯು ನಿನ್ನನ್ನು ತುಂಬ ಕಾಯಿಸಿ ನಿನ್ನ ತೇಜಸ್ಸನ್ನು ಹೋಗಲಾಡಿಸದಿರಲಿ.

# ದೇವೇಭ್ಯೋ ಯಜುಷೇಯಜುಷೇ ಭವ ಶುಕ್ರಮಸಿ

# ಜ್ಯೋತಿರಸಿ ತೇಜೋಽಸಿ

---

ದೇವೇಭ್ಯಃ । ಯಜುಷೇಯಜುಷ ಇತಿ ಯಜುಷೇ-ಯಜುಷೇ । ಭವ । ಶುಕ್ರಮ್।

ಅಸಿ । ಜ್ಯೋತಿಃ । ಅಸಿ । ತೇಜಃ । ಅಸಿ ।

---

| ಮಂತ್ರ | ವಿನಿಯೋಗ (ಬೌಧಾಯನ) |
|---|---|
| ಅಗ್ನೇಃ.........ಭವ । | ಅಧ್ವರ್ಯುವು ಮಾಡಬೇಕಾದ ಆಜ್ಯಾವೇಕ್ಷಣೆಗೆ (ಆಪಸ್ತಂಬ) |
| | ಆಹವನೀಯದ ಉತ್ತರಭಾಗದಲ್ಲಿ ಸ್ಫ್ಯದಿಂದ ಮಾಡಿದ ರೇಖೆಯಲ್ಲಿ ಆಜ್ಯವನ್ನು ಸ್ಥಾಪಿಸಲು. |
| ಶುಕ್ರಮಸಿ । | ಆಜ್ಯದ ಉತ್ಪವನಕ್ಕಾಗಿ |
| ಜ್ಯೋತಿರಸಿ । | ಆಜ್ಯದ ಉತ್ಪವನಕ್ಕಾಗಿ |
| ತೇಜೋಽಸಿ । | ಆಜ್ಯದ ಉತ್ಪವನಕ್ಕಾಗಿ |



---

ಯಜುಷೇಯಜುಷೇ ಭವ = ಯಜುರ್ಮಂತ್ರಪೂರ್ವಕಗ್ರಹಣಕ್ಕೆ ಪರ್ಯಾಪ್ತವಾಗು. +[ಎಲೈ ಆಜ್ಯವೇ! ನೀನು] ಶುಕ್ರಮ್ ಅಸಿ = ಪ್ರಕಾಶಮಾನನಾಗಿದ್ದೀಯೆ; +ಜ್ಯೋತಿಃ ಅಸಿ = ಜ್ಯೋತಿಸ್ವರೂಪನೂ ಆಗಿದ್ದೀಯೆ; +ತೇಜಃ ಅಸಿ = ತೇಜೋರೂಪನೂ ಆಗಿದ್ದೀಯೆ.

---

ಎಲೈ ಆಜ್ಯವೇ! ಜ್ವಾಲೆಯನ್ನು ಉತ್ಪಾದಿಸುವ ನೀನು ಅಗ್ನಿಯ ನಾಲಿಗೆಯೇ ಆಗಿದ್ದೀಯೆ. ದೇವತೆಗಳಿಗೆ ತೃಪ್ತಿಯನ್ನುಂಟುಮಾಡುವವನೂ ಆಗಿದ್ದೀಯೆ. ದೇವತೆಗಳ ಆಹುತಿಸ್ಥಾನಗಳಿಗೂ ಸಾಕಾದಷ್ಟಾಗು. ಮಂತ್ರಗಳಿಂದ ಮತ್ತೆ ಮತ್ತೆ ಗ್ರಹಣ ಮಾಡುವುದಕ್ಕೂ ಸಾಕಾದಷ್ಟಾಗು. ✤ಎಲೈ ಆಜ್ಯವೇ! ನೀನು ಪ್ರಕಾಶಮಾನನೂ ✤ಜ್ಯೋತಿಸ್ವರೂಪನೂ ✤ತೇಜೋರೂಪನೂ ಆಗಿದ್ದೀಯೆ.

**ದೇವೋ ವಃ ಸವಿತೋತ್ಪುನಾತ್ವಚ್ಛಿದ್ರೇಣ ಪವಿತ್ರೇಣ**

**ವಸೋಃ ಸೂರ್ಯಸ್ಯ ರಶ್ಮಿಭಿಃ ಶುಕ್ರಂ ತ್ವಾ ಶುಕ್ರಾಯಾಂ**

**ಧಾಮ್ನೇಧಾಮ್ನೇ**

---

ದೇವಃ । ವಃ । ಸವಿತಾ । ಉದಿತಿ । ಪುನಾತು । ಅಚ್ಛಿದ್ರೇಣ । ಪವಿತ್ರೇಣ । ವಸೋಃ। ಸೂರ್ಯಸ್ಯ । ರಶ್ಮಿಭಿರಿತಿ ರಶ್ಮಿ-ಭಿಃ । ಶುಕ್ರಮ್ । ತ್ವಾ । ಶುಕ್ರಾಯಾಮ್ । ಧಾಮ್ನೇ-ಧಾಮ್ನ ಇತಿ ಧಾಮ್ನೇ-ಧಾಮ್ನೇ ।

---

| ಮಂತ್ರ | ವಿನಿಯೋಗ |
|---|---|
| ದೇವೋ ವಃ.........ರಶ್ಮಿಭಿಃ । | ಪ್ರೋಕ್ಷಣೀಜಲದ ಉತ್ಪವನಕ್ಕಾಗಿ |
| ಶುಕ್ರಂ...........ಗೃಹ್ಣಾಮಿ । | ಜುಹೂವಿನಲ್ಲಿ ಆಜ್ಯಗ್ರಹಣವನ್ನು ಮಾಡಲು. |

---

+[ಎಲೈ ಪ್ರೋಕ್ಷಣಿಗಳೇ!] ವಃ = ನಿಮ್ಮನ್ನು; ದೇವಃ ಸವಿತಾ = ಸವಿತೃದೇವನು; ಉತ್ಪುನಾತು = ಮೇಲೆ ಶುದ್ಧಗೊಳಿಸಲಿ; ಅಚ್ಛಿದ್ರೇಣ ಪವಿತ್ರೇಣ = ಆದಿತ್ಯರೂಪವಾದ ಛಿದ್ರರಹಿತವಾದ ದರ್ಭದ್ವಯವುಳ್ಳ ಪವಿತ್ರದಿಂದ; [ಉತ್ಪುನಾತು = ಶುದ್ಧಿಗೊಳಿಸಲಿ;] ವಸೋಃ ಸೂರ್ಯಸ್ಯ ರಶ್ಮಿಭಿಃ = ಜಗನ್ನಿವಾಸಭೂತನಾದ ಸೂರ್ಯನ ಕಿರಣಗಳಂತಿರುವ ದರ್ಭೆಗಳಿಂದ; (ಉತ್ಪುನಾತು=ಶುದ್ಧಿಗೊಳಿಸಲಿ.) +(ಎಲೈ ಆಜ್ಯವೇ!) ಶುಕ್ರಮ್=ಪ್ರಕಾಶಮಾನನಾದ; ತ್ವಾ = ನಿನ್ನನ್ನು; ಶುಕ್ರಾಯಾಮ್ = ದೀಪ್ತವಾಗಿರುವ ಜುಹುವಿನಲ್ಲಿ;

---

ಪ್ರೋಕ್ಷಣೀಜಲವೇ! ಅಧ್ವರ್ಯುವಿನ ಹೃದಯದಲ್ಲಿರುವ ಸರ್ವಾಂತರ್ಯಾಮಿಯಾದ, ಸರ್ವಪ್ರೇರಕನಾದ ಪರಮಾತ್ಮನು ನಿನ್ನನ್ನು ಮೇಲೆತ್ತಿ ಶುದ್ಧಗೊಳಿಸಲಿ. ಆ ಸವಿತೃದೇವನು ಲೋಕನಿವಾಸಕಾರಣನಾದ ಪೂರ್ಣಸೂರ್ಯನಂತಿರುವ ದರ್ಭದ್ವಯ ಪವಿತ್ರದಿಂದ ನಿನ್ನನ್ನು ಪವಿತ್ರಗೊಳಿಸಲಿ. ಸವಿತೃದೇವನು ಪ್ರಾಣರೂಪವಾದ ನಿನ್ನನ್ನು ಪ್ರಾಣರೂಪ(ಇಂದ್ರಿಯರೂಪ)ವಸುಗಳ ವ್ಯವಹಾರಕ್ಕೆ ಕಾರಣಭೂತನಾದ ಸೂರ್ಯನ ಪ್ರಾಣರೂಪವಾದ ಕಿರಣಗಳಂತಿರುವ ದರ್ಭದ್ವಯದಿಂದ ಪಾವನ ಮಾಡಲಿ.

ದೇವೇಭ್ಯೋ ಯಜುಷೇಯಜುಷೇ ಗೃಹ್ಣಾಮಿ ಜ್ಯೋತಿಸ್ತ್ವಾ

ಜ್ಯೋತಿಷ್ಯರ್ಚಿಸ್ತ್ವಾರ್ಚಿಷಿ ಧಾಮ್ನೇಧಾಮ್ನೇ ದೇವೇಭ್ಯೋ

ದೇವೇಭ್ಯಃ । ಯಜುಷೇಯಜುಷ ಇತಿ ಯಜುಷೇ-ಯಜುಷೇ । ಗೃಹ್ಣಾಮಿ । ಜ್ಯೋತಿಃ।

ತ್ವಾ । ಜ್ಯೋತಿಷಿ । ಅರ್ಚಿಃ । ತ್ವಾ । ಅರ್ಚಿಷಿ । ಧಾಮ್ನೇಧಾಮ್ನ ಇತಿ ಧಾಮ್ನೇ-ಧಾಮ್ನೇ।

ದೇವೇಭ್ಯಃ ।

| ಮಂತ್ರ | ವಿನಿಯೋಗ |
| --- | --- |
| ಜ್ಯೋತಿಃ.....ಜ್ಯೋತಿಷಿ ಧಾಮ್ನೇ.....ಗೃಹ್ಣಾಮಿ । | ಉಪಭೃತ್‌ನಲ್ಲಿ ಆಜ್ಯಗ್ರಹಣ. |
| ಅರ್ಚಿಃ.......ಅರ್ಚಿಷಿ ಧಾಮ್ನೇ.......ಗೃಹ್ಣಾಮಿ । | ಧ್ರುವೆಯಲ್ಲಿ ಆಜ್ಯಗ್ರಹಣ |

ಶುಕ್ರಂ.......ಗೃಹ್ಣಾಮಿ ಎಂಬ ಮಂತ್ರದಿಂದ ಜುಹೂವಿನಲ್ಲಿ ಪ್ರಯಾಜಗಳಿಗಾಗಿ, ಜ್ಯೋತಿಃ......ಗೃಹ್ಣಾಮಿ । ಎಂಬ ಮಂತ್ರದಿಂದ ಉಪಭೃತ್‌ನಲ್ಲಿ ಅನೂಯಾಜಕ್ಕಾಗಿ ಮತ್ತು ಯಜ್ಞದ ಎಲ್ಲ ಕಲಾಪಗಳಿಗಾಗಿ ಧ್ರುವೆಯಲ್ಲಿ ಅರ್ಚಿಃ..........ಗೃಹ್ಣಾಮಿ । ಎಂಬ ಮಂತ್ರದಿಂದ ಗ್ರಹಣ ಮಾಡಬೇಕು. ಅಲ್ಲದೆ ಜುಹೂವಿನಲ್ಲಿ ಚತುರ್ಗೃಹೀತ, (ನಾಲ್ಕು ಬಾರಿ ಹಾಕಿಕೊಂಡದ್ದು) ಉಪಭೃತ್‌ನಲ್ಲಿ ಅಷ್ಟಗೃಹೀತ, ಧ್ರುವಾದಲ್ಲಿ ಚತುರ್ಗೃಹೀತವಾಗಿ ಆಜ್ಯವನ್ನು ಗ್ರಹಣ ಮಾಡಬೇಕು.

ದೇವೇಭ್ಯಃ = ದೇವತೆಗಳ; ಧಾಮ್ನೇಧಾಮ್ನೇ = ಆಹುತಿಯ ಸ್ಥಾನಗಳಿಗೂ; ಯಜುಷೇ ಯಜುಷೇ = ಮಂತ್ರಪೂರ್ವಕಗ್ರಹಣಗಳಿಗೂ; ಗೃಹ್ಣಾಮಿ = [ಸಾಕಾಗುವಷ್ಟನ್ನು] ಗ್ರಹಣ ಮಾಡುತ್ತೇನೆ; +ಜ್ಯೋತಿಃ = ಜ್ಯೋತೀರೂಪನಾದ; ತ್ವಾ = ನಿನ್ನನ್ನು; ಜ್ಯೋತಿಷಿ = ಜ್ಯೋತೀರೂಪವಾದ ಉಪಭೃತ್‌ನಲ್ಲಿ; ಧಾಮ್ನೇ......ಗೃಹ್ಣಾಮಿ = ದೇವತೆಗಳ ಆಹುತಿ ಸ್ಥಾನಗಳಿಗೂ, ಮಂತ್ರಪೂರ್ವಕಗ್ರಹಣಗಳಿಗೂ ಸಾಕಾಗುವಷ್ಟನ್ನು ಗ್ರಹಣ ಮಾಡುತ್ತೇನೆ. ಅರ್ಚಿಃ=ಜ್ವಾಲಾರೂಪನಾದ; ತ್ವಾ=ನಿನ್ನನ್ನು; ಅರ್ಚಿಷಿ=ಜ್ವಾಲಾರೂಪವಾದ ಧ್ರುವೆಯಲ್ಲಿ;

ಎಲೈ ಆಜ್ಯವೇ! ನೀನು ದೀಪ್ತಸ್ವರೂಪನು. ನಿನ್ನನ್ನು ಪ್ರಕಾಶಮಾನವಾದ ಜುಹೂವಿನಲ್ಲಿ ದೇವತೆಗಳ ಆಹುತಿಸ್ಥಾನಗಳಿಗೆ ಸಾಕಾಗುವಂತೆಯೂ, ಮಂತ್ರಪೂರ್ವಕ ಗ್ರಹಣಗಳಿಗೆ ಸಾಕಾಗುವಂತೆಯೂ ಗ್ರಹಣ ಮಾಡುತ್ತೇನೆ.

## ಯಜುಷೇಯಜುಷೇ ಗೃಹ್ಣಾಮಿ ॥ ೧೦-18 ॥

[ಉಪ ನೀ ರಶ್ಮಿಭಿಃ ಶುಕ್ರಗ್ಂ ಷೋಡಶ ಚ । ]

---

ಯಜುಷೇಯಜುಷ ಇತಿ ಯಜುಷೇ-ಯಜುಷೇ । ಗೃಹ್ಣಾಮಿ ॥ ೧೦ ॥

---

ಧಾಮ್ನೇ........ಗೃಹ್ಣಾಮಿ = ದೇವತೆಗಳ ಆಹುತಿಸ್ಥಾನಗಳಿಗೂ, ಮಂತ್ರಪೂರ್ವಕ ಗ್ರಹಣಗಳಿಗೂ ಸಾಕಾಗುವಷ್ಟನ್ನು ಗ್ರಹಣ ಮಾಡುತ್ತೇನೆ.

---



ಎಲೈ ಆಜ್ಯವೇ! ನೀನೂ ಜ್ಯೋತಿಸ್ಸ್ವರೂಪನು. ಉಪಭೃತ್ತೂ ಜ್ಯೋತೀರೂಪವಾಗಿದೆ. ನಿನ್ನನ್ನು ದೇವತೆಗಳ ಆಹುತಿಸ್ಥಾನಗಳಿಗೆ ಸಾಕಾಗುವಂತೆಯೂ, ಮಂತ್ರಪೂರ್ವಕ ಗ್ರಹಣಗಳಿಗೆ ಸಾಕಾಗುವಂತೆಯೂ ಉಪಭೃತ್‌ನಲ್ಲಿ ಗ್ರಹಣ ಮಾಡುತ್ತೇನೆ.

ಎಲೈ ಆಜ್ಯವೇ! ನೀನು ಅಗ್ನಿಜ್ವಾಲಾಸ್ವರೂಪನು. ಧ್ರುವೆಯೂ ಜ್ವಾಲಾರೂಪವಾಗಿದೆ. ಆ ಧ್ರುವೆಯಲ್ಲಿ ನಿನ್ನನ್ನು ದೇವತೆಗಳ ಆಹುತಿಸ್ಥಾನಗಳಿಗೆ ಸಾಕಾಗುವಂತೆಯೂ ಮಂತ್ರಪೂರ್ವಕಗ್ರಹಣಗಳಿಗೆ ಸಾಕಾಗುವಂತೆಯೂ ಗ್ರಹಣ ಮಾಡುತ್ತೇನೆ.

### ವಿನಿಯೋಗ ಸಂಗ್ರಹ

ಪ್ರತ್ಯು[1] ಸ್ರುಚಸ್ತ್ರಪೇದಗ್ನೇ[2]ರ್ಮೃಷ್ಟ್ವೇರೂರ್ಧ್ವಂ ಪುನಸ್ತ್ರಪೇತ್ ।
ಗೋಷ್ಠಂ[3] ವಾಚಂ[4] ತಥಾ ಚಕ್ಷುಃ[5] ಪ್ರಜಾಂ[6] ಮಾರ್ಷ್ಟಿ ಕ್ರಮಾತ್ ಸ್ರುಚಃ ॥
ಜುಹೂಪಭೃದ್ಧ್ರುವಾಃ, ಆಶಾ[7] ಪತ್ನೀಂ ಯೋಕ್ತ್ರೇಣ ಸಹ್ಯತಿ ।
[8]ಸುಪ್ರೇತಿ ಪತ್ನ್ಯುಪವಿಶೇದಿಮಂ[9] ಕಾಲೇ ವಿಮೋಚನಮ್ ॥
ಸಮಾ[10] ಪತ್ನೀ ಪೂರ್ಣಪಾತ್ರಂ ಜಪೇದಥ ಮಹೀದ್ವಯಾತ್ ।[11] [12]
ಘೃತಂ ವಿರುಷ್ಯ ವೀಕ್ಷೇತ [13]ತೇಜೋಽಧಿಶ್ರಿತ್ಯ ಪಶ್ಚಿಮೇ ॥
ಅಗ್ನೌ, ತೇಜೋ[14] ಹರೇದಗ್ನಿಃ[15] ಪೂರ್ವಾಗ್ನಾವಧಿಸಂಶ್ರಯೇತ್ ।
ಅಗ್ನೇಃ[16] ಸ್ಥವತ್ರ್ಯಾಣಿ ಕ್ಷಿಪ್ತ್ವಾ ಶು[17] ಜ್ಯೋ[18] ತೇ[19] ತ್ರಿಭರಾಜ್ಯಕಮ್ ॥

ಉತ್ಪೂಯ ,ದೇವೋ[20] ಜಲಮುತ್ಪುನಾತ್ಯಾಜ್ಯಪವಿತ್ರತಃ ।
[21-23]ಶು ಜ್ಯೋಽರ್ಚಿಸ್ತ್ರಿಭಿರಾಜ್ಯಸ್ಯ ಗ್ರಹೋ ಜುಹ್ವಾದಿಕೇ ತ್ರಯೇ ।
ದಶಮೇ ತ್ವನುವಾಕೇಽಸ್ಮಿಂಸ್ತ್ರಯೋವಿಂಶತಿರೀರಿತಾಃ ॥

ಅನುವಾಕದ ಮಂತ್ರ ಸಂಖ್ಯೆ - 23

ಮೊದಲನೆಯ ಮಂತ್ರವನ್ನೂ ಎರಡನೆಯ ಮಂತ್ರವನ್ನೂ ಕೂಡಿಸಿ ಒಂದು ಮಂತ್ರವೆಂಬುದು ಬೌಧಾಯನಮತ.

ಅನುವಾಕದ ವಿಶೇಷ ವಿಷಯಗಳು

ಅ) ಭ.ಭಾ. ಭಾಷ್ಯ



ಮಂತ್ರ ಸಂಖ್ಯೆ

I

೧) ಪ್ರತ್ಯುಷ್ಟಂ.......ನಿರ್ವಪಾಮಿ ಎಂಬಲ್ಲಿಯವರೆಗೆ ಒಂದೇ ಮಂತ್ರವೆಂಬ ಬೌಧಾಯನರ ಮತವನ್ನು ಅನುಸರಿಸಿರುತ್ತಾರೆ. ನಿಷ್ಟಪಾಮಿ= ದೋಷೇಭ್ಯಃ ನಿಷ್ಕೃಷ್ಯ ತಪಾಮಿ= ದೋಷಗಳಿಲ್ಲದಂತೆ ಮಾಡಿ ಅಗ್ನಿಯಲ್ಲಿ ಕಾಯಿಸುತ್ತೇನೆ.

II

೩) ಗೋಷ್ಠಂ.......ಸಂಮಾರ್ಜ್ಮಿ। ಎಲೈ ಸ್ರುವವೇ!ನಾನು ಗೋಷ್ಠ (ಗೋಸ್ಥಾನ = ಕೊಟ್ಟಿಗೆ)ವನ್ನು ನಾಶ ಮಾಡಬಾರದೆಂದು ನೀನು ಬಯಸುತ್ತೀಯೆ. ಆದುದರಿಂದ ಅನ್ನಸಾಧನನೂ, ಶತ್ರುನಾಶಕನೂ ಆದ ನಿನ್ನನ್ನು ಚೆನ್ನಾಗಿ ಒರೆಸುತ್ತೇನೆ.(ನೀನು ಯಾಗಕ್ಕೆ ಸಾಧನವಾಗಿರುವೆ.ಯಾಗವು ವೃಷ್ಟಿಗೆ ಸಾಧನ .ವೃಷ್ಟಿಯು ಸಸ್ಯವೃದ್ಧಿಗೆ ಕಾರಣ. ಸಸ್ಯವೃದ್ಧಿಯು ಗೋವೃದ್ಧಿಗೆ ಸಾಧನ ಎಂದು ತಾತ್ಪರ್ಯ.)

೭) ಈ ಮಂತ್ರದಲ್ಲಿ, ಸಂನಹ್ಯೇ, ಎಂದು ಆತ್ಮನೇಪದಪ್ರತ್ಯಯವೂ ಉತ್ತಮ ಪುರುಷವೂ ಇರುವುದರಿಂದ ,ಆಶಾಸಾನಾ,ಎಂಬ ನಾಲ್ಕು ಪಾದಗಳುಳ್ಳ ಅನುಷ್ಟುಪ್ ಛಂದಸ್ಸಿನ ಈ ಮಂತ್ರವನ್ನು ಪತ್ನಿಯು ಹೇಳಬೇಕೆಂದು ಮಿಶ್ರರ ಅಭಿಪ್ರಾಯ.

ಒಳ್ಳೆಯ ಮನಸ್ಸನ್ನೂ, ಮಕ್ಕಳನ್ನೂ, ಗಂಡನಿಗೆ ಇಷ್ಟಳಾಗಿರುವಿಕೆಯನ್ನೂ, ದೃಢಶರೀರವನ್ನೂ ಪ್ರಾರ್ಥಿಸುತ್ತಾ, ಅಗ್ನಿಪರಿಚರಣಾದಿವ್ರತಗಳಿಂದ ಅನುಗತಳಾಗಿ ಶುಭವಾದ ಯಾಗಕರ್ಮಕ್ಕಾಗಿ ಸುಖವಾಗಿರುವಂತೆ ಯೋಕ್ತ್ರದಿಂದ ಕಟ್ಟಲ್ಪಡುತ್ತೇನೆ. ಅಥವಾ ನನ್ನನ್ನು ಕಟ್ಟಿಕೊಳ್ಳುತ್ತೇನೆ.

೯) ಇಮಂ.........ಕರೋಮಿ । ವೃಣೋತಿ = ಛಾದಯತಿ ಇತಿ ವರುಣಮ್ = ವಸ್ತ್ರಮ್ । ವರುಣಸ್ಯ ಪಾಶಂ ವಿಷ್ಯಾಮಿ = ವಸ್ತ್ರದ ಪಾಶವನ್ನು (ಹಗ್ಗವನ್ನು) ಬಿಚ್ಚುತ್ತೇನೆ. ಅಥವಾ ಈ ಯೋಕ್ತ್ರವನ್ನು ಬಿಚ್ಚುವುದರಿಂದ ಈಶ್ವರನಿಂದ ಕಟ್ಟಲ್ಪಟ್ಟು ನನ್ನನ್ನು ಆವರಿಸಿರುವ ಅಜ್ಞಾನರೂಪವಾದ ವರುಣಪಾಶವನ್ನು ದೂರ ಮಾಡುತ್ತೇನೆ.

೧೦) ಸಮಾಯುಷಾ........ಮಮ । ಅಗ್ನಿಯೇ! ಕೈಬೊಗಸೆಯಲ್ಲಿರುವ ಯೋಕ್ತ್ರದೊಡನೆ ಉದಪಾತ್ರವು ಸೇರುವುದರಿಂದ ನಾನು ಪೂರ್ಣಾಯುಸ್ಸಿನೊಡನೆ ಸೇರುವಂತಾಗಲಿ. ಪತಿಯೊಡನೆ ಮತ್ತೆ ಮತ್ತೆ ಸೇರುವಂತಾಗಲಿ. ಕ್ಷೇತ್ರಜ್ಞನಾದ ನನ್ನ ಆತ್ಮನು ವೈಕಲ್ಯವಿಲ್ಲದೆ ದೃಢವಾದ ಶರೀರದೊಡನೆ ಕೂಡಿರುವಂತಾಗಲಿ.

೧೧) ಮಹೀನಾಂ.........ನಿರ್ವಪಾಮಿ । 'ಅಕ್ಷೀಯಮಾಣಸ್ಯ ನಿರ್ವಪಾಮಿ' = ಆಜ್ಯವೇ! ನೀನು ಹಸುಗಳ ಕ್ಷೀರವಾಗಿರುವೆ (ಅದರಿಂದ ಉಂಟಾಗಿರುವೆ). ತೃಣವೇ ಮೊದಲಾದ ಓಷಧಿಗಳ ರಸವಾಗಿರುವೆ(ರಸಗಳ ಪರಿಣಾಮವಾಗಿರುವೆ). ಇಂತಹ ನಿನ್ನನ್ನು ಅಕ್ಷಯವಾಗಿರುವುದಕ್ಕಾಗಿ ಆಜ್ಯರಾಶಿಯಿಂದ ಬೇರ್ಪಡಿಸಿ ಸ್ಥಾಲಿಯಲ್ಲಿ ಹಾಕುತ್ತೇನೆ. (ಯಜ್ಞಕ್ಕೆ ಉಪಯೋಗಿಸುವ ದ್ರವ್ಯವಾದ ಆಜ್ಯವು ಅಕ್ಷಯಫಲದಾಯಕವಾಗುತ್ತದೆ.)



೧೩) ತೇಜೋಽಸಿ = ಎಲೈ ಆಜ್ಯವೇ! ನೀನು ಕಾಯಿಸುವುದರಿಂದ ಪ್ರಕಾಶಮಾನವಾಗು.

೧೬) ಅಗ್ನೇಃ.........ಭವ । ಸುಭೂಃ = ಸುಷ್ಠು ಭೂತಮ್ = ಸರ್ವೋತ್ಕರ್ಷದಿಂದ ಉತ್ಪನ್ನನಾದವನು ಅಥವಾ ದೇವತೆಗಳ ಸ್ವತ್ತಾದವನು ಅಥವಾ ದೇವತೆಗಳಿಗಾಗಿ ಹುಟ್ಟಿದವನು. ದೇವೇಭ್ಯಃ ಧಾಮ್ನೇಧಾಮ್ನೇ = ದೇವತೆಗಳ ಸರ್ವಧಾರಣಕ್ಕಾಗಿ; ಯಜುಷೇಯಜುಷೇ ಭವ = ಎಲ್ಲ ಯಜುರ್ಮಂತ್ರಗಳಿಂದಲೂ ಗ್ರಹಣ ಮಾಡಲು ಸಾಕಾಗುವಷ್ಟು ಆಗು.

ಈ ಅನುವಾಕದಲ್ಲಿ ಆಜ್ಯಹವಿರ್ಗ್ರಹಣವನ್ನು ಶ್ರುತಿಯು ತಿಳಿಸಿದೆ. ಮುಂದಿನ ಅನುವಾಕದಲ್ಲಿ ಇಧ್ಮವೇ ಮೊದಲಾದವುಗಳ ಪ್ರೋಕ್ಷಣೆಯನ್ನು ತಿಳಿಸುತ್ತದೆ. **'ಕೃಷ್ಣೋಽಸಿ'** ಎಂಬುದು ಮೊದಲನೆಯ ಮಂತ್ರ. ಅದಕ್ಕೆ ಮೊದಲು ಐದನೆಯ ಅನುವಾಕದ **'ಆಪೋದೇವೀಃ.......ಪ್ರೋಕ್ಷಿತಾಃಸ್ಥ'** ಎಂಬ ಮಂತ್ರದಿಂದ ಉದಕಾಭಿಮಂತ್ರಣವನ್ನು ಮಾಡಬೇಕು. ಇದನ್ನು ಬ್ರಾಹ್ಮಣದಲ್ಲಿ ಹೇಳಿರುತ್ತಾರೆ.

---

## ॥ ಏಕಾದಶೋಽನುವಾಕಃ ॥

# ಕೃಷ್ಣೋಽಸ್ಯಾಖರೇಷ್ಠೋಽಗ್ನಯೇ ತ್ವಾ ಸ್ವಾಹಾ ವೇದಿರಸಿ ಬರ್‌ಹಿಷೇ ತ್ವಾ ಸ್ವಾಹಾ

---

ಕೃಷ್ಣಃ। ಅಸಿ । ಆಖರೇಷ್ಠ ಇತ್ಯಾಖರೇ-ಸ್ಥಃ । ಅಗ್ನಯೇ । ತ್ವಾ । ಸ್ವಾಹಾ । ವೇದಿಃ। ಅಸಿ । ಬರ್‌ಹಿಷೇ । ತ್ವಾ । ಸ್ವಾಹಾ ।

---

| ಮಂತ್ರ | ವಿನಿಯೋಗ |
| --- | --- |
| ಕೃಷ್ಣಃ ..........ಸ್ವಾಹಾ। | ಕಟ್ಟು ಬಿಚ್ಚಿರುವ ಇಧ್ಮವನ್ನು ಪ್ರೋಕ್ಷಿಸಲು |
| ವೇದಿಃ..........ಸ್ವಾಹಾ। | ವೇದಿಯನ್ನು ಪ್ರೋಕ್ಷಿಸಲು |

---

[ಎಲೈ ಇಧ್ಮವೇ!] [ನೀನು] ಕೃಷ್ಣಃ = [ಅಗ್ನಿಗೆ ಪ್ರಿಯನಾಗಿರುವುದರಿಂದ] ಕೃಷ್ಣಮೃಗರೂಪನಾದ [ಅಗ್ನಿಯೇ] ; ಅಸಿ = ಆಗಿರುವೆ. [ಹಾಗೆಯೇ] ಆಖರೇಷ್ಠಃ = [ಬೇರುಗಳಿಂದ ಭೂಮಿಯನ್ನು ಭೇದಿಸುವ] ವನಸ್ಪತಿಗಳಲ್ಲಿ ಇರುವವನೂ [ಆಗಿದ್ದೀಯೆ] [ಆದುದರಿಂದ;] ಅಗ್ನಯೇ ತ್ವಾ= [ಅಗ್ನಿಗೆ ಪ್ರಿಯನಾದ] ನಿನ್ನನ್ನು ಅಗ್ನಿಗಾಗಿ [ಪ್ರೋಕ್ಷಿಸುತ್ತೇನೆ]. ಸ್ವಾಹಾ=ಹೀಗೆ ಮಾಡಬೇಕೆಂದು ಸರಸ್ವತಿಯು ತಾನೇ ಹೇಳುತ್ತಾಳೆ.* ❖ಎಲೈ ವೇದಿಯೇ !ನೀನು] ವೇದಿಃ = ದೇವತೆಗಳಿಂದ ಪಡೆಯಲ್ಪಟ್ಟವಳಾಗಿ; ಅಸಿ =ಇದ್ದೀಯೆ. [ಆದುದರಿಂದ] ತ್ವಾ = ನಿನ್ನನ್ನು; ಬರ್‌ಹಿಷೇ = ಬರ್ಹಿರ್ದರ್ಭೆಗಳನ್ನು (ಧರಿಸುವುದಕ್ಕಾಗಿ) ಸ್ವಾಹಾ = ಪ್ರೋಕ್ಷಿಸುತ್ತೇನೆ.* (ಹೀಗೆ ವಾಗ್ದೇವಿಯು ಹೇಳುತ್ತಾಳೆ.)

---

ಎಲೈ ಇಧ್ಮವೇ! ದೇವತೆಗಳಿಗೆ ಮರೆಯಾಗಿ ಕೃಷ್ಣಮೃಗರೂಪವನ್ನು ಧರಿಸಿ ವನಸ್ಪತಿಗಳನ್ನು ಪ್ರವೇಶಿಸಿದ ಅಗ್ನಿಯೇ ನೀನಾಗಿರುವೆ. ನೀನು ವನಸ್ಪತಿಗಳಲ್ಲಿ ಇರತಕ್ಕವನು.

---

*ಇಲ್ಲಿ ಹೋಮವಿಲ್ಲದುದರಿಂದ ಅಗ್ನಿಹೋತ್ರಪ್ರಕರಣದಲ್ಲಿ ಹೇಳಿರುವಂತೆ, 'ಸ್ವೀಯಾ ವಾಕ್ ಆಹ=ಸ್ವಾಹಾ। ' ಎಂಬ ಅರ್ಥವನ್ನಿಟ್ಟುಕೊಂಡು ಹೀಗೆ ವ್ಯಾಖ್ಯಾನ ಮಾಡಿರುತ್ತಾರೆ.

*ಅವ್ಯಯಾನಾಮನೇಕಾರ್ಥತ್ವಮ್ ಎಂಬಂತೆ ಅವ್ಯಯಗಳಿಗೆ ನಾನಾರ್ಥವಿರುವುದರಿಂದ, 'ಸ್ವಾಹಾ', ಎಂಬ ಶಬ್ದಕ್ಕೆ 'ಪ್ರೋಕ್ಷಿಸುತ್ತೇನೆ' ಎಂಬ ಅರ್ಥವನ್ನೂ ಹೇಳಬಹುದೆಂದು ಸಾಯಣರು ಅಭಿಪ್ರಾಯಪಟ್ಟಿರುತ್ತಾರೆ.

## ಬರ್ಹಿರಸಿ ಸ್ರುಗ್ಭ್ಯಸ್ತ್ವಾ ಸ್ವಾಹಾ ದಿವೇ ತ್ವಾಂತರಿಕ್ಷಾಯ ತ್ವಾ ಪೃಥಿವ್ಯೈ ತ್ವಾ ಸ್ವಧಾ ಪಿತೃಭ್ಯ

ಬರ್ಹಿಃ । ಅಸಿ । ಸ್ರುಗ್ಭ್ಯ ಇತಿ ಸ್ರುಕ್-ಭ್ಯಃ । ತ್ವಾ । ಸ್ವಾಹಾ । ದಿವೇ । ತ್ವಾ । ಅಂತರಿಕ್ಷಾಯ । ತ್ವಾ । ಪೃಥಿವ್ಯೈ । ತ್ವಾ । ಸ್ವಧೇತಿ ಸ್ವ-ಧಾ । ಪಿತೃಭ್ಯ ಇತಿ ಪಿತೃ-ಭ್ಯಃ ।

| ಮಂತ್ರ | ವಿನಿಯೋಗ |
|---|---|
| ಬರ್ಹಿಃ.......ಸ್ವಾಹಾ । | ಬರ್ಹಿಃಪ್ರೋಕ್ಷಣವನ್ನು ಮಾಡಲು [ಬರ್ಹಿಸ್ಸನ್ನು ಊರ್ಧ್ವಾಗ್ರವಾಗಿ ಹರಡಿ] |
| ದಿವೇ ತ್ವಾ । | ಬರ್ಹಿಸ್ಸಿನ ಅಗ್ರವನ್ನು ಪ್ರೋಕ್ಷಿಸಲು |
| ಅಂತರಿಕ್ಷಾಯ ತ್ವಾ । | ಬರ್ಹಿಸ್ಸಿನ ಮಧ್ಯವನ್ನು ಪ್ರೋಕ್ಷಿಸಲು |
| ಪೃಥಿವ್ಯೈ ತ್ವಾ । | ಬರ್ಹಿಸ್ಸಿನ ಮೂಲವನ್ನು ಪ್ರೋಕ್ಷಿಸಲು |



+(ಎಲೈ ದರ್ಭವೇ! ನೀನು) ಬರ್ಹಿಃ = ವೇದಿಯನ್ನು ವ್ಯಾಪಿಸುವವನು (ವೇದಿಯಲ್ಲಿ ಹಾಕುವುದಕ್ಕೆ ಸಾಕಾದವನು) ಅಸಿ = ಆಗಿದ್ದೀಯೆ. (ಆದುದರಿಂದ) ತ್ವಾ = ನಿನ್ನನ್ನು; ಸ್ರುಗ್ಭ್ಯಃ = ಸ್ರುಕ್‌ಗಳನ್ನು (ವ್ಯಾಪಿಸುವುದಕ್ಕಾಗಿ) (ಪ್ರೋಕ್ಷಿಸುತ್ತೇನೆ). ಸ್ವಾಹಾ = ಹೀಗೆ ಮಾಡಬೇಕೆಂದು ವಾಗ್ದೇವಿಯು ಹೇಳುತ್ತಾಳೆ. +[ಎಲೈ ಬರ್ಹಿಸ್ಸಿನ ಅಗ್ರಭಾಗವೇ!] ದಿವೇ = ಸ್ವರ್ಗಲೋಕಕ್ಕಾಗಿ; ತ್ವಾ = ನಿನ್ನನ್ನು [ಪ್ರೋಕ್ಷಿಸುತ್ತೇನೆ.] +[ಬರ್ಹಿಸ್ಸಿನ ಮಧ್ಯ ಭಾಗವೇ!] ಅಂತರಿಕ್ಷಾಯ = ಅಂತರಿಕ್ಷಲೋಕಕ್ಕಾಗಿ; ತ್ವಾ = ನಿನ್ನನ್ನು; (ಪ್ರೋಕ್ಷಿಸುತ್ತೇನೆ) +[ಎಲೈ ಬರ್ಹಿಸ್ಸಿನ ಆದಿಭಾಗವೇ!] ಪೃಥಿವ್ಯೈ = ಭೂಲೋಕಕ್ಕಾಗಿ; ತ್ವಾ = ನಿನ್ನನ್ನು; (ಪ್ರೋಕ್ಷಿಸುತ್ತೇನೆ) +(ಎಲೈ! ಪ್ರೋಕ್ಷಣೀಜಲವೇ!) ಪಿತೃಭ್ಯಃ = ಪಿತೃಗಳಿಗೆ;

ನಿನ್ನನ್ನು ಪ್ರೋಕ್ಷಿಸಿ ಅಗ್ನಿಗೆ ಪ್ರಿಯನಾಗುವಂತೆ ಅಂದರೆ ಸೇವಿಸಲು ಯೋಗ್ಯನಾಗುವಂತೆ ಮಾಡುತ್ತೇನೆ. ಹೀಗೆ ಮಾಡಬೇಕೆಂದು ವಾಗ್ದೇವಿಯು ಹೇಳುತ್ತಾಳೆ. ✿ ಎಲೈ ವೇದಿಯೇ! ಅಸುರರ ವಶಳಾಗಿದ್ದ ನಿನ್ನನ್ನು ದೇವತೆಗಳು ಇಂದ್ರನ ಚಾತುರ್ಯದಿಂದ ಪಡೆದುಕೊಂಡರು. ನಿನ್ನನ್ನು ಬರ್ಹಿರ್ಧಾರಣಕ್ಕಾಗಿ ಪ್ರೋಕ್ಷಿಸುತ್ತೇನೆ. ಹೀಗೆ ವಾಗ್ದೇವಿಯು ಹೇಳುತ್ತಾಳೆ.

ಎಲೈ ದರ್ಭವೇ! ನೀನು ವೇದಿಯನ್ನು ಸಂಪೂರ್ಣವಾಗಿ ವ್ಯಾಪಿಸಲು ಸಮರ್ಥನಾಗಿದ್ದೀಯೆ. ನಿನ್ನನ್ನು ಸ್ರುಕ್‌ಗಳ ಧಾರಣೆಗಾಗಿ ಪ್ರೋಕ್ಷಿಸುತ್ತೇನೆ. ಹೀಗೆ ಮಾಡೆಂದು

## ಊರ್ಗ್ಭವ ಬರ್ಹಿಷದ್ಭ್ಯ ಊರ್ಜಾ ಪೃಥಿವೀಂ ಗಚ್ಛತ ವಿಷ್ಣೋಃ ಸ್ತೂಪೋಽಸ್ಯೂರ್ಣಾಮ್ರದಸಂ ತ್ವಾ ಸ್ತೃಣಾಮಿ

ಊರ್ಕ್ । ಭವ । ಬರ್ಹಿಷದ್ಭ್ಯ ಇತಿ ಬರ್ಹಿಷತ್ - ಭ್ಯಃ । ಊರ್ಜಾ । ಪೃಥಿವೀಮ್। ಗಚ್ಛತ । ವಿಷ್ಣೋಃ । ಸ್ತೂಪಃ । ಅಸಿ । ಊರ್ಣಾಮ್ರದಸಮಿತ್ಯೂರ್ಣಾ-ಮ್ರದಸಮ್। ತ್ವಾ । ಸ್ತೃಣಾಮಿ ।

---

| ಮಂತ್ರ | ವಿನಿಯೋಗ |
|---|---|
| ಸ್ವಧಾ........ಗಚ್ಛತ । | ಪ್ರೋಕ್ಷಣೀಜಲದ ಶೇಷವನ್ನು ವೇದಿಯ ದಕ್ಷಿಣ ಶ್ರೋಣಿಯ ಭಾಗದಿಂದ ಉತ್ತರಶ್ರೋಣಿಯ ಭಾಗದವರೆಗೆ ಪಿತೃಗಳಿಗಾಗಿ ಹಾಕಲು. |
| ವಿಷ್ಣೋಃ...........ಅಸಿ । | ಪ್ರಸ್ತರಗ್ರಹಣವನ್ನು ಮಾಡಲು |

---

ಸ್ವಧಾ = ಕೊಡಲ್ಪಟ್ಟದ್ದೀಯೆ. ಬರ್ಹಿಷದ್ಭ್ಯಃ = ಬರ್ಹಿಸ್ಸಿನಲ್ಲಿ ಬಂದು ಕುಳಿತುಕೊಳ್ಳುವ ಪಿತೃಗಳಿಗೆ; ಊರ್ಕ್= ರಸರೂಪವಾಗಿ; ಭವ = ಆಗು; [ಎಲೈ! ಜಲಾವಯವಗಳೇ!] ಊರ್ಜಾ = ನಿಮ್ಮಿಂದ ಉಂಟಾದ ರಸರೂಪದಿಂದ, ಪೃಥಿವೀಂ = ಭೂಮಿಯನ್ನು; ಗಚ್ಛತ = ಹೊಂದಿರಿ. +[ಎಲೈ ಪ್ರಸ್ತರವೇ!] (ನೀನು) ವಿಷ್ಣೋಃ = ಯಜ್ಞರೂಪವಾದ ವಿಷ್ಣುವಿನ; ಸ್ತೂಪಃ = ಸಂಘಾತರೂಪವಾದ ಧಾರಕನಾಗಿ; ಅಸಿ = ಇದ್ದೀಯೆ. +[ಎಲೈ ದೇವಬರ್ಹಿಸ್ಸೇ!] ಊರ್ಣಾಮ್ರದಸಂ = ಉಣ್ಣೆಯಂತೆ ಮೃದುಸ್ವರೂಪನಾದ;

---

ವಾಗ್ದೇವಿಯು ಹೇಳುತ್ತಾಳೆ. ❁ವೇದಿಯಲ್ಲಿ ಆಸ್ತೃತವಾದ ಬರ್ಹಿಸ್ಸೇ! ನಿನ್ನ ಅಗ್ರ, ಮಧ್ಯ, ಮೂಲಗಳು ಕ್ರಮವಾಗಿ ಸ್ವರ್ಗ, ಅಂತರಿಕ್ಷ, ಭೂಲೋಕರೂಪವಾಗಿವೆ. ನಿನ್ನನ್ನು ಪ್ರೋಕ್ಷಿಸುವುದರಿಂದ ಲೋಕತ್ರಯಕ್ಕಾಗಿ ನಿನ್ನನ್ನು ಪ್ರೋಕ್ಷಿಸಿದಂತೆ ಆಗುತ್ತದೆ. ನೀನು ಯಾಗನಿಷ್ಪತ್ತಿಗೆ ಕಾರಣನಾದುದರಿಂದ ನಿಷ್ಪನ್ನವಾದ ಯಾಗದ ಮೂಲಕ ಲೋಕತ್ರಯ ಧಾರಣವನ್ನು ಮಾಡುವುದಕ್ಕಾಗಿ ನಿನ್ನನ್ನು ಪ್ರೋಕ್ಷಿಸುತ್ತೇನೆ.

ಎಲೈ ಪ್ರೋಕ್ಷಣೀಶೇಷಜಲವೇ! ನಿನ್ನನ್ನು ಮಾಸರೂಪರಾದ ಬರ್ಹಿಷದರೆಂಬ ಪಿತೃಗಳಿಗೆ ಕೊಡುತ್ತೇನೆ. ಅವರಿಗೆ ನೀನು ರಸರೂಪನಾಗು. ಮಾಸರೂಪರಾದ ಆ ಪಿತೃಗಳು

**ಸ್ವಾಸಸ್ಥಂ ದೇವೇಭ್ಯೋ ಗಂಧರ್ವೋಽಸಿ ವಿಶ್ವಾವಸು**
**ರ್ವಿಶ್ವಸ್ಮಾದೀಷತೋ ಯಜಮಾನಸ್ಯ ಪರಿಧಿರಿಡ ಈಡಿತ**

ಸ್ವಾಸಸ್ಥಮಿತಿ ಸು-ಆಸಸ್ಥಮ್ । ದೇವೇಭ್ಯಃ । ಗಂಧರ್ವಃ । ಅಸಿ । ವಿಶ್ವಾವಸುರಿತಿ ವಿಶ್ವ-ವಸುಃ । ವಿಶ್ವಸ್ಮಾತ್ । ಈಷತಃ । ಯಜಮಾನಸ್ಯ । ಪರಿಧಿರಿತಿ ಪರಿ-ಧಿಃ । ಇಡಃ । ಈಡಿತಃ ।

| ಮಂತ್ರ | ವಿನಿಯೋಗ |
|---|---|
| *ಊರ್ಣಾ............ದೇವೇಭ್ಯಃ । | ವೇದಿಯಲ್ಲಿ ಬರ್ಹಿಸ್ಸನ್ನು ಹರಡಲು |
| ಗಂಧರ್ವಃ..........ಈಡಿತಃ । | ಮಧ್ಯಮಪರಿಧಿಯನ್ನು ಇಡಲು |

ದೇವೇಭ್ಯಃ ಸ್ವಾಸಸ್ಥಮ್ = ದೇವತೆಗಳು ಸುಖವಾಗಿ ಕುಳಿತುಕೊಳ್ಳಲು ತಕ್ಕ ಸ್ಥಾನರೂಪನಾದ; ತ್ವಾ =ನಿನ್ನನ್ನು; ಸ್ತೃಣಾಮಿ = [ವೇದಿಯಲ್ಲಿ] ಹರಡುತ್ತೇನೆ. +[ಎಲೈ ಮಧ್ಯಮ ಪರಿಧಿಯೇ!] ನೀನು ವಿಶ್ವಾವಸುಃ = ವಿಶ್ವಾವಸುವೆಂಬ; ಗಂಧರ್ವಃ = ಗಂಧರ್ವರೂಪನು (ರಕ್ಷಕನಾಗಿರುವುದರಿಂದ) ಅಸಿ = ಆಗಿರುತ್ತೀಯೆ. ವಿಶ್ವಸ್ಮಾತ್ = ಸಮಸ್ತವಾದ; ಈಷತಃ = ಹಿಂಸಕಗಳ ದೆಸೆಯಿಂದ; ಯಜಮಾನಸ್ಯ ಪರಿಧಿಃ = ಯಜಮಾನನನ್ನು ರಕ್ಷಿಸಿ ಪೋಷಿಸುವವನೂ; ಇಡಃ = ಅನ್ನರೂಪನೂ; (ಅನ್ನಪಶುರೂಪನೂ) ಈಡಿತಃ = ಸರ್ವರಿಂದ ಸ್ತುತಿಸಲ್ಪಡುವವನೂ [ಆಗು.]

---

ತೃಪ್ತರಾಗಿ ವೃಷ್ಟಿ ಸಸ್ಯಾದಿಗಳಿಗೆ ಕಾರಣರಾಗಲಿ. ಎಲೈ ಜಲಗಳೇ! ನೀವು ಬಲಾದಿಗಳನ್ನು ಸಮೃದ್ಧಿಗೊಳಿಸುವ ರಸರೂಪದಿಂದ ಭೂಮಿಯನ್ನು ಪ್ರವೇಶಿಸಿರಿ. ಅಲ್ಲಿ ಬೆಳೆಯುವ ಸಸ್ಯಗಳು ರಸಭರಿತವಾಗಲಿ.

ಎಲೈ ಪ್ರಸ್ತರವೇ!* ದರ್ಭಸಂಘಾತರೂಪನಾದ ನೀನು ವ್ಯಾಪಕವಾಗಿರುವುದರಿಂದ ವಿಷ್ಣುಸ್ವರೂಪವಾಗಿರುವ ಯಜ್ಞದ ಧಾರಣ ಮಾಡುವ ಸಂಘಾತ(ರಾಶಿ)ರೂಪನಾಗಿ

---

*ಕಲ್ಪಸೂತ್ರಕಾರರು 'ದೇವಬರ್ಹಿಃ' ಎಂಬ ಶಾಖಾಂತರದ ಮಂತ್ರವನ್ನು ಇದರೊಡನೆ ಸೇರಿಸಿರುತ್ತಾರೆ.[ಬೌ.ಶ್ರೌ. ಸೂ.೧.೧೩] *ಪ್ರಥಮಲೂನಃ ದರ್ಭಮುಷ್ಟಿಃ ಪ್ರಸ್ತರಃ = ಮೊದಲು ಕತ್ತರಿಸಿದ ದರ್ಭಮುಷ್ಟಿಯೇ ಪ್ರಸ್ತರ.

# ಇಂದ್ರಸ್ಯ ಬಾಹುರಸಿ [ಬಾಹುರಸಿ(೧)] ದಕ್ಷಿಣೋ ಯಜಮಾನಸ್ಯ ಪರಿಧಿರಿಡ ಈಡಿತೋ

ಇಂದ್ರಸ್ಯ । ಬಾಹುಃ । ಅಸಿ । ದಕ್ಷಿಣಃ । ಯಜಮಾನಸ್ಯ । ಪರಿಧಿರಿತಿ ಪರಿ-ಧಿಃ। ಇಡಃ । ಈಡಿತಃ ।

| ಮಂತ್ರ | ವಿನಿಯೋಗ |
|---|---|
| ಇಂದ್ರಸ್ಯ.........ಈಡಿತಃ । | ದಕ್ಷಿಣಪರಿಧಿಯನ್ನಿಡಲು |

+[ಎಲೈ ದಕ್ಷಿಣಪರಿಧಿಯೇ!] ನೀನು; ಇಂದ್ರಸ್ಯ = ದೇವೇಂದ್ರನ; ದಕ್ಷಿಣಃ ಬಾಹುಃ = ಬಲತೋಳು; ಅಸಿ = ಆಗಿರುವೆ; ಯಜಮಾನಸ್ಯ = ಯಜಮಾನನ; ಪರಿಧಿಃ = ರಕ್ಷಕನೂ, ಪೋಷಕನೂ; ಇಡಃ = ಪಶು, ಅನ್ನಾದಿಗಳನ್ನೂ ಕೊಡುವವನೂ [ಆಗಿ] ಈಡಿತಃ = ಸ್ತುತಿಸಲ್ಪಡುವವನೂ [ಆಗು].



ದ್ದೀಯೆ. ನಿನ್ನನ್ನು ಗ್ರಹಣ ಮಾಡುತ್ತೇನೆ.

ಎಲೈ ದೇವಬರ್ಹಿಸ್ಸೇ! ನೀನು ಉಣ್ಣೆಯಂತೆ ಮೃದುವಾಗಿರುವವನು. ದೇವತೆಗಳು ಸುಖವಾಗಿ ಕುಳ್ಳಿರಲು ತಕ್ಕ ಸ್ಥಾನವಾಗಿರುವೆ. ನಿನ್ನನ್ನು ವೇದಿಯಲ್ಲಿ ದಟ್ಟವಾಗಿ ಹರಡುತ್ತೇನೆ. (ಸುಖವಾಗಿ ಕುಳಿತುಕೊಳ್ಳಲು ತಕ್ಕವನಾದ ನಿನ್ನನ್ನು ದೇವತೆಗಳಿಗಾಗಿ ವೇದಿಯಲ್ಲಿ ಹರಡುತ್ತೇನೆ.)

ಎಲೈ ಮಧ್ಯಮಪರಿಧಿಯೇ! ರಕ್ಷಕನಾದ ನೀನು ರಕ್ಷಕನಾದ ವಿಶ್ವಾವಸು ಗಂಧರ್ವನೇ ಆಗಿದ್ದೀಯೆ. ನೀನು ಯಜಮಾನನನ್ನು ಹಿಂಸಿಸುವ ಎಲ್ಲಾ ಜಂತುಗಳಿಂದಲೂ ರಕ್ಷಿಸಿ ಪೋಷಿಸು. ಅನ್ನ, ಪಶು ಮುಂತಾದವುಗಳನ್ನು ಕೊಟ್ಟು ಪೋಷಿಸು. ಹೀಗೆ ಮಾಡಿ ಎಲ್ಲರಿಂದಲೂ ಸ್ತುತಿಸಲ್ಪಡುವವನಾಗು.

ಎಲೈ ದಕ್ಷಿಣಪರಿಧಿಯೇ! ನೀನು ಅಸುರಸಂಹಾರಕನಾದ ಇಂದ್ರನ ಬಲತೋಳಿನಂತೆ

## ಮಿತ್ರಾವರುಣೌ ತ್ವೋತ್ತರತಃ ಪರಿಧತ್ತಾಂ ಧ್ರುವೇಣ ಧರ್ಮಣಾ ಯಜಮಾನಸ್ಯ ಪರಿಧಿರಿಡ ಈಡಿತಃ

---

ಮಿತ್ರಾವರುಣಾವಿತಿ ಮಿತ್ರಾ-ವರುಣೌ । ತ್ವಾ । ಉತ್ತರತ ಇತ್ಯುತ್-ತರತಃ । ಪರೀತಿ। ಧತ್ತಾಮ್ । ಧ್ರುವೇಣ । ಧರ್ಮಣಾ । ಯಜಮಾನಸ್ಯ । ಪರಿಧಿರಿತಿ ಪರಿ-ಧಿಃ । ಇಡಃ। ಈಡಿತಃ ।

---

| ಮಂತ್ರ | ವಿನಿಯೋಗ |
|---|---|
| ಮಿತ್ರಾ........ಈಡಿತಃ । | ಉತ್ತರಪರಿಧಿಯ ನಿಧಾನ (ಇಡುವಿಕೆ) |

---

+(ಎಲೈ ಉತ್ತರಪರಿಧಿಯೇ!) ಮಿತ್ರಾವರುಣೌ = ಪ್ರಾಣಾಪಾನಸ್ವರೂಪರಾದ ಮಿತ್ರಾವರುಣರು; ತ್ವಾ = ನಿನ್ನನ್ನು; ಧ್ರುವೇಣ ಧರ್ಮಣಾ = [ಅನುಷ್ಠಾನ ಮಾಡಲ್ಪಡುತ್ತಿರುವ] ನಿತ್ಯಕರ್ಮವಾದ ಯಜ್ಞನಿಮಿತ್ತವಾಗಿ; ಉತ್ತರತಃ = ಅಗ್ನಿಯ ಉತ್ತರಭಾಗದಲ್ಲಿ; ಪರಿಧತ್ತಾಮ್ = ಇಡಲಿ; [ನೀನು] ಯಜಮಾನಸ್ಯ ಪರಿಧಿಃ = ಯಜಮಾನನ ಪರಿಪೋಷಕನಾಗಿ; ಇಡಃ = ಅನ್ನ-ಪಶ್ವಾದಿಗಳನ್ನು ಕೊಡುವವನಾಗು; ಈಡಿತಃ = ಸ್ತುತನಾಗು.

---

ರುವೆ. ನೀನು ಯಜಮಾನನಿಗೆ ಶತ್ರುಗಳಿಂದೊದಗುವ ಹಿಂಸೆಯನ್ನು ದೂರ ಮಾಡಿ ರಕ್ಷಿಸು. ಅನ್ನಾದಿಗಳನ್ನು ಕೊಟ್ಟು ಪೋಷಿಸು. ಹೀಗೆ ಮಾಡಿ ಪ್ರಶಂಸೆಗೆ ಪಾತ್ರನಾಗು.

ಎಲೈ ಉತ್ತರಪರಿಧಿಯೇ! ಪ್ರಾಣಾಪಾನಸ್ವರೂಪರಾದ ಮಿತ್ರಾವರುಣರು ನಿನ್ನನ್ನು ಯಜ್ಞಕರ್ಮಾರ್ಥವಾಗಿ ಯಜ್ಞೇಶ್ವರನ ಉತ್ತರಭಾಗದಲ್ಲಿಡಲಿ. ಇದರಿಂದ ಯಜಮಾನನಲ್ಲಿ ಪ್ರಾಣಾಪಾನಗಳನ್ನು ಸ್ಥಾಪಿಸಿದಂತೆ ಆಗುತ್ತದೆ. ನೀನು ಯಜಮಾನನನ್ನು ರಕ್ಷಿಸಿ ಪೋಷಿಸು. ಅನ್ನ, ಪಶುಗಳನ್ನಿತ್ತು ಹೊಗಳಿಕೆಗೆ ಪಾತ್ರನಾಗು.

## ಸೂರ್ಯಸ್ತ್ವಾ ಪುರಸ್ತಾತ್ಪಾತು ಕಸ್ಯಾಶ್ಚಿದಭಿಶಸ್ತ್ಯಾ

## ವೀತಿಹೋತ್ರಂ ತ್ವಾ ಕವೇ ದ್ಯುಮಂತಗ್ಂ ಸಮಿಧೀಮಹ್ಯಗ್ನೇ

---

ಸೂರ್ಯಃ । ತ್ವಾ । ಪುರಸ್ತಾತ್ । ಪಾತು । ಕಸ್ಯಾಃ । ಚಿತ್ । ಅಭಿಶಸ್ತ್ಯಾ ಇತ್ಯಭಿ-ಶಸ್ತ್ಯಾಃ।
ವೀತಿಹೋತ್ರಮಿತಿ ವೀತಿ-ಹೋತ್ರಮ್ । ತ್ವಾ । ಕವೇ । ದ್ಯುಮಂತಮಿತಿ ದ್ಯು-ಮಂತಮ್।
ಸಮಿತಿ । ಇಧೀಮಹಿ । ಅಗ್ನೇ ।

---

| ಮಂತ್ರ | ವಿನಿಯೋಗ |
|---|---|
| ಸೂರ್ಯಃ.......ಅಭಿಶಸ್ತ್ಯಾಃ । | ಪೂರ್ವದಲ್ಲಿ ಸೂರ್ಯನನ್ನೇ ಪರಿಧಿಯನ್ನಾಗಿ ಮಾಡಲು —ಬೌಧಾಯನ. |
| | ಆಹವನೀಯವನ್ನು ಅಭಿಮಂತ್ರಣ ಮಾಡಲು —ಆಪಸ್ತಂಬ. |



---

+[ಎಲೈ ಅಗ್ನಿಯೇ!] ಸೂರ್ಯಃ = ಸೂರ್ಯನು; ತ್ವಾ = ನಿನ್ನನ್ನು; ಕಸ್ಯಾಶ್ಚಿತ್ ಅಭಿಶಸ್ತ್ಯಾಃ = ಯಾವುದೊಂದು ಹಿಂಸೆಯಿಂದಲೂ; ಪುರಸ್ತಾತ್=ಪೂರ್ವಭಾಗದಲ್ಲಿ; ಪಾತು=ರಕ್ಷಿಸಲಿ. +ಕವೇ! = ವಿದ್ವಾಂಸನಾದ (ಮೇಧಾವಿಯಾದ); ಅಗ್ನೇ = ಅಗ್ನಿಯೇ!; ವೀತಿಹೋತ್ರಂ = ಇಷ್ಟವಾದ ಸ್ತೋತ್ರವುಳ್ಳ (ಸ್ತೋತ್ರಪ್ರಿಯನಾದ) ಅಥವಾ ಸಮೃದ್ಧಿಗಾಗಿ ಮಾಡುವ ಹೋಮಕ್ಕೆ ಆಶ್ರಯನಾದ(ಹೋಮಪ್ರಿಯನಾದ); ದ್ಯುಮಂತಮ್ = ದೀಪ್ತಿಮಂತನಾದ;

---

ಎಲೈ ಅಗ್ನಿಯೇ! ನೀನು ಮೂರು ಕಡೆಗಳಲ್ಲಿ ಪರಿಧಿಗಳಿಂದ ರಕ್ಷಿತನಾಗಿರುವೆ. ಪೂರ್ವದಿಕ್ಕಿನಲ್ಲಿ ಉದಯಿಸುವ ಸೂರ್ಯನೇ ಪೂರ್ವಭಾಗದಲ್ಲಿ ರಕ್ಷಸ್ಸು ಮೊದಲಾದವರಿಂದ ಒದಗಬಹುದಾದ ಸರ್ವವಿಧವಾದ ಹಿಂಸೆಗಳಿಂದಲೂ ನಿನ್ನನ್ನು ರಕ್ಷಿಸಲಿ.

ಎಲೈ ಅಗ್ನಿಯೇ! ನೀನು ವಿದ್ವಾಂಸನಾಗಿರುವೆ. ಸ್ತೋತ್ರಪ್ರಿಯನೂ, ಸ್ತೋತ್ರಪಾತ್ರನೂ ಆಗಿರುವೆ. ಅಂತೆಯೇ ಹೋಮಪ್ರಿಯನೂ, ಹೋಮಾಶ್ರಯನೂ ಆಗಿರುವೆ. ಅಲ್ಲದೆ ನೀನು ಜ್ವಾಲಾಯುಕ್ತನೂ, ಮಹಾಂತನೂ ಆಗಿರುವೆ. ನಿನ್ನನ್ನು ಯಾಗನಿಮಿತ್ತವಾಗಿ ಜ್ವಲಿಸುವಂತೆ ಮಾಡುತ್ತೇವೆ.

## ಬೃಹಂತಮಧ್ವರೇ ವಿಶೋ ಯಂತ್ರೀ ಸ್ಥೋ ವಸೂನಾಗ್‍ಂ ರುದ್ರಾಣಾಮಾದಿತ್ಯಾನಾಗ್‍ಂ ಸದಸಿ ಸೀದ

ಬೃಹಂತಮ್ । ಅಧ್ವರೇ । ವಿಶಃ । ಯಂತ್ರೀ ಇತಿ । ಸ್ಥಃ । ವಸೂನಾಮ್ । ರುದ್ರಾಣಾಮ್। ಆದಿತ್ಯಾನಾಮ್ । ಸದಸಿ । ಸೀದ ।

| ಮಂತ್ರ | ವಿನಿಯೋಗ |
|---|---|
| ವೀತಿಹೋತ್ರಂ......ಅಧ್ವರೇ । | ಆಘಾರಸಮಿತ್ತುಗಳನ್ನು ಆಧಾನ ಮಾಡಲು |
| ವಿಶೋ.........ಸ್ಥಃ । | ವಿಧೃತಿ(ದರ್ಭದ್ವಯ)ಗಳನ್ನು ಉತ್ತರಾಗ್ರವಾಗಿ ಅಡ್ಡವಾಗಿ ಆಸಾದನ ಮಾಡಲು. |
| ವಸೂನಾಮ್.........ಸೀದ । | ವಿಧೃತಿಗಳ ಮೇಲೆ ಪ್ರಸ್ತರವನ್ನು ಹಾಕಲು. |

ಬೃಹಂತಮ್ = ಮಹಾಂತನಾದ; ತ್ವಾ = ನಿನ್ನನ್ನು; ಅಧ್ವರೇ = ಯಾಗನಿಮಿತ್ತವಾಗಿ; ಸಮಿಧೀಮಹಿ = ಚೆನ್ನಾಗಿ ಪ್ರಜ್ವಲಿಸುವಂತೆ ಮಾಡುತ್ತೇವೆ. +[ಎಲೈ ವಿಧೃತಿಗಳೇ] ನೀವಿಬ್ಬರು; ವಿಶಃ = ಪ್ರಜೆಗಳ; ಯಂತ್ರೀ = ನಿಯಾಮಕರಾಗಿ; ಸ್ಥಃ = ಇದ್ದೀರಿ. +[ಎಲೈ ಪ್ರಸ್ತರವೇ] ನೀನು; ವಸೂನಾಮ್ = ಅಷ್ಟವಸುಗಳ; ರುದ್ರಾಣಾಮ್ = ಏಕಾದಶ ರುದ್ರರ; ಆದಿತ್ಯಾನಾಮ್ = ದ್ವಾದಶಾದಿತ್ಯರ; ಸದಸಿ = ಮನೆಯಲ್ಲಿ (ಆಶ್ರಯದಲ್ಲಿ) (ಈ ವಿಧೃತಿದ್ವಯದಲ್ಲಿ); ಸೀದ = ಕುಳಿತುಕೋ (ಇರು).

ಎಲೈ ವಿಧೃತಿಗಳೇ! ಯಜಮಾನಸ್ವರೂಪವಾದ ಪ್ರಸ್ತರಕ್ಕೆ ಆಧಾರವಾದ ನೀವು ಪ್ರಜೆಗಳ ನಿಯಾಮಕರೂ ಧಾರಕರೂ ಆಗಿರುತ್ತೀರಿ.

ಎಲೈ ಪ್ರಸ್ತರವೇ! ಈ ವಿಧೃತಿದ್ವಯವು ವಸುಗಳು, ರುದ್ರರು ಮತ್ತು ಆದಿತ್ಯರೆಂಬ ದೇವತೆಗಳ ವಾಸಸ್ಥಾನವಾಗಿದೆ. ಆದರಲ್ಲಿ ನೀನು ಆಸನ್ನನಾಗು. (ಇರು)

ಹೋಮಸಾಧನವಾದ ನೀನು ಜುಹೂ. ಜುಹೂವಿನ ಸಮೀಪದಲ್ಲಿದ್ದು ಆಜ್ಯವನ್ನು ಧರಿಸುವ ನೀನು ಉಪಭೃತ್ತು. ಸಮಿಷ್ಟಯಜುರ್ಹೋಮಪರ್ಯಂತವಾಗಿ ಚಾಲನೆ ಯಿಲ್ಲದೆ ನಿಶ್ಚಲಳಾದ ನೀನು ಧ್ರುವೆ.

## ಜುಹೂರುಪಭೃದ್ಧ್ರುವಾಸಿ ಘೃತಾಚೀ ನಾಮ್ನಾ ಪ್ರಿಯೇಣ

ಜುಹೂಃ। ಉಪಭೃದಿತ್ಯುಪ-ಭೃತ್। ಧ್ರುವಾ । ಅಸಿ । ಘೃತಾಚೀ । ನಾಮ್ನೆ । ಪ್ರಿಯೇಣ।

| ಮಂತ್ರ | ವಿನಿಯೋಗ |
|---|---|
| ಜುಹೂರಸಿ ಘೃತಾಚೀ ನಾಮ್ನಾ..ಸೀದ । | ಜುಹೂವನ್ನು ಆಸಾದನ ಮಾಡಲು |
| ಉಪಭೃದಸಿ.......ನಾಮ್ನಾ.......ಸೀದ । | ಉಪಭೃತ್ ಅನ್ನು ಆಸಾದನ ಮಾಡಲು |
| ಧ್ರುವಾಸಿ.......ನಾಮ್ನಾ.........ಸೀದ । | ಧ್ರುವೆಯನ್ನು ಆಸಾದನ ಮಾಡಲು |

+[ನೀನು] ಜುಹೂಃ ಅಸಿ = ಹೋಮಸಾಧನಪಾತ್ರವಾದ ಜುಹೂವಾಗಿರುವೆ. ಪ್ರಿಯೇಣ ನಾಮ್ನಾ = [ಘೃತಸಂಬಂಧವಿರುವುದರಿಂದ] ಎಲ್ಲರಿಗೂ ಪ್ರಿಯವಾದ ಹೆಸರಾದ; ಘೃತಾಚೀ = (ಘೃತಧಾರಕಳಾದ) 'ಘೃತಾಚೀ' ಆಗಿ; [ಅಸಿ = ಇದ್ದೀಯೆ]. [ಇಂತಹ] ನಾಮ್ನಾ =[ಪ್ರಿಯವಾದ] ಹೆಸರಿನಿಂದ [ಕೂಡಿದವಳಾಗಿ] ಪ್ರಿಯೇ ಸದಸಿ = [ಯಜಮಾನ ಸ್ವರೂಪವಾದುದರಿಂದ] ಪ್ರಿಯವಾದ [ಪ್ರಸ್ತರವೆಂಬ] ಆಶ್ರಯದಲ್ಲಿ; ಸೀದ = ಇರು; +[ನೀನು] ಉಪಭೃತ್ ಅಸಿ = [ಜುಹೂವಿನ ಸಮೀಪದಲ್ಲಿದ್ದು ಆಜ್ಯವನ್ನು] ಧರಿಸುವ ಉಪಭೃತ್ ಆಗಿರುವೆ; ಪ್ರಿಯೇಣ ನಾಮ್ನಾ =[ಘೃತಸಂಬಂಧವಿರುವುದರಿಂದ] ಎಲ್ಲರಿಗೂ ಪ್ರಿಯವಾದ ಹೆಸರಿನಿಂದ; ಘೃತಾಚೀ = [ಘೃತಧಾರಕಳಾದ] 'ಘೃತಾಚೀ' ಆಗಿ; [ಅಸಿ = ಇದ್ದೀಯೆ]; [ಇಂತಹ] ನಾಮ್ನಾ =[ಪ್ರಿಯವಾದ] ಹೆಸರಿನಿಂದ ಕೂಡಿದವಳಾಗಿ; ಪ್ರಿಯೇ ಸದಸಿ = [ಯಜಮಾನಸ್ವರೂಪವಾದುದರಿಂದ] ಪ್ರಿಯವಾದ [ಪ್ರಸ್ತರವೆಂಬ] ಆಶ್ರಯದಲ್ಲಿ; ಸೀದ = ಇರು; +[ನೀನು] ಧ್ರುವಾ =[ಸಮಿಷ್ಟಯಜುರ್ಯಾಗ (ಹೋಮ) ಪರ್ಯಂತವಾಗಿ ಚಾಲನೆಯಿಲ್ಲದೆ] ನಿಶ್ಚಲವಾಗಿರುವ ಧ್ರುವೆಯು; ಅಸಿ = ಆಗಿರುವೆ.

ನೀವು ಘೃತಧಾರಕರಾದುದರಿಂದ ಸರ್ವರಿಗೂ ಪ್ರಿಯವಾದ ಘೃತದ ಸಂಬಂಧವನ್ನು ಹೇಳುವ 'ಘೃತಾಚೀ' ಎಂಬ ಹೆಸರಿನಿಂದ ಪ್ರಸಿದ್ಧರಾಗಿದ್ದೀರಿ. ನೀವು ಇಂತಹ ಹೆಸರಿನಿಂದ ಕೂಡಿ ಯಜಮಾನಸ್ವರೂಪನೆಂದು ಸ್ತುತವಾಗಿ ಸರ್ವಪ್ರಿಯವಾಗಿರುವ ಪ್ರಸ್ತರವೆಂಬ ಆಶ್ರಯದಲ್ಲಿ ಸ್ಥಿತರಾಗಿರಿ.

ಈ ಜುಹೂ, ಉಪಭೃತ್ ಮತ್ತು ಧ್ರುವೆಗಳು ಪುಣ್ಯಕರ್ಮವಾದ, ಅವಶ್ಯಫಲ ದಾಯಕವಾದ ಯಾಗದ ವೇದಿಯಲ್ಲಿರುವ ಪ್ರಸ್ತರದಲ್ಲಿ ಆಸಾದಿತವಾಗಿವೆ. ಎಲ್ಲೆ ಸರ್ವ

**ನಾಮ್ನಾ ಪ್ರಿಯೇ ಸದಸಿ ಸೀದ್ವೈತಾ ಅಸದನ್ತ್ಸುಕೃತಸ್ಯ ಲೋಕೇ ತಾ ವಿಷ್ಣೋ ಪಾಹಿ ಪಾಹಿ ಯಜ್ಞಂ ಪಾಹಿ ಯಜ್ಞಪತಿಂ ಪಾಹಿ ಮಾಂ ಯಜ್ಞನಿಯಮ್ ॥ ೧೧-20 ॥**

[ಬಾಹುರಸಿ ಪ್ರಿಯೇ ಸದಸಿ ಪಂಚದಶ ಚ॥]

ನಾಮ್ನಾ । ಪ್ರಿಯೇ । ಸದಸಿ । ಸೀದ । ಏತಾಃ । ಅಸದನ್ । ಸುಕೃತಸ್ಯೇತಿ ಸು-ಕೃತಸ್ಯ। ಲೋಕೇ । ತಾಃ । ವಿಷ್ಣೋ ಇತಿ । ಪಾಹಿ । ಪಾಹಿ । ಯಜ್ಞಮ್ । ಪಾಹಿ । ಯಜ್ಞಪತಿಮಿತಿ ಯಜ್ಞ-ಪತಿಮ್ । ಪಾಹಿ । ಮಾಮ್ । ಯಜ್ಞನಿಯಮಿತಿ ಯಜ್ಞ-ನಿಯಮ್ ॥೧೧॥

| ಮಂತ್ರ | ವಿನಿಯೋಗ |
|---|---|
| ಏತಾಃ............ಯಜ್ಞನಿಯಮ್ | ಸ್ರುಕ್‌ಗಳನ್ನು ಅಭಿಮರ್ಶನ ಮಾಡಲು |

ಪ್ರಿಯೇಣ ನಾಮ್ನಾ = [ಘೃತಸಂಬಂಧವಿರುವುದರಿಂದ] ಎಲ್ಲರಿಗೂ ಪ್ರಿಯವಾದ ಹೆಸರಿನಿಂದ; ಘೃತಾಚೀ = [ಘೃತಧಾರಕಳಾದ] 'ಘೃತಾಚೀ' ಆಗಿ; [ಅಸಿ = ಇದ್ದೀಯೆ]; [ಇಂತಹ] ನಾಮ್ನಾ = [ಪ್ರಿಯವಾದ] ಹೆಸರಿನಿಂದ ಕೂಡಿದವಳಾಗಿ; ಪ್ರಿಯೇ ಸದಸಿ = [ಯಜಮಾನ ಸ್ವರೂಪವಾದುದರಿಂದ] ಪ್ರಿಯವಾದ[ಪ್ರಸ್ತರವೆಂಬ] ಆಶ್ರಯದಲ್ಲಿ; ಸೀದ = ಇರು; ಏತಾಃ = ಈ ಸ್ರುಕ್ಕುಗಳು; ಸುಕೃತಸ್ಯ ಲೋಕೇ = ಪುಣ್ಯಕರ್ಮವಾದ, [ಫಲದಾಯಕವಾದ] ಯಾಗದ ವೇದಿಯಲ್ಲಿರುವ ಪ್ರಸ್ತರದಲ್ಲಿ; ಅಸದನ್ = ಸ್ಥಿತವಾಗಿವೆ. ವಿಷ್ಣೋ = ಸರ್ವಪಾಲಕನಾದ ವಿಷ್ಣುವೇ! ತಾಃ = ಆ ಸ್ರುಕ್ಕುಗಳನ್ನು; ಪಾಹಿ = ರಕ್ಷಿಸು; ಯಜ್ಞಮ್ = ಈ ಯಜ್ಞವನ್ನು (ದರ್ಶ - ಪೂರ್ಣಮಾಸಯಾಗವನ್ನು) ಪಾಹಿ = ಕಾಪಾಡು; ಯಜ್ಞಪತಿಮ್ = ಯಜಮಾನನನ್ನು; ಪಾಹಿ = ರಕ್ಷಣೆ ಮಾಡು; ಯಜ್ಞನಿಯಮ್ = ಯಜ್ಞದ ನಿರ್ವಾಹಕನಾದ; ಮಾಂ = ನನ್ನನ್ನೂ; ಪಾಹಿ = ಪೊರೆ.

ಪಾಲಕನಾದ ವಿಷ್ಣುವೇ! ಈ ಯಾಗಪಾತ್ರೆಗಳನ್ನು ಕಾಪಾಡು. ಈ ಯಜ್ಞವನ್ನೂ, ಯಜಮಾನನನ್ನೂ, ಯಜ್ಞದ ನೇತಾರನಾದ ನನ್ನನ್ನೂ(ಅಧ್ವರ್ಯುವನ್ನೂ) ರಕ್ಷಿಸು.

## ವಿನಿಯೋಗಸಂಗ್ರಹ

ಕೃಷ್ಣ[1] ಇಧ್ಮಂ [2]ವೇದಿರ್ವೇದಿಂ [3]ಬರ್‌ಹಿರ್ಬರ್ಹಿಃ ಸಮುಕ್ಷತಿ ।
ದಿವೇ[4,5,6] ತ್ರಿಭಿರ್ಬರ್‌ಹಿಷೋಽಗ್ರಮಧ್ಯಮೂಲಾನಿ ಚೋಕ್ಷತಿ ॥
ಸ್ವಧಾ[7] ಶೇಷಂ ಕ್ಷಿಪೇದ್ಭೂಮೌ ವಿಷ್ಣೋಃ[8] ಪ್ರಸ್ತರಮುನ್ನಯೇತ್ ।
ಊರ್ಣಾ[9] ಬರ್‌ಹಿಸ್ಸ್ತೃತಿರ್ಗಂಧ [10,11,12] ತ್ರಿಭಿಸ್ತ್ರೀನ್ ಪರಿಧೀನ್ ಕ್ಷಿಪೇತ್ ॥
[13]ಸೂರ್ಯೋಽಭಿಮಂತ್ರ್ಯ ಪೂರ್ವಾಗ್ನಿಂ [14]ವೀತ್ಯಾಘಾರಸಮಿತ್ಸ್ಥಿತಿಃ ।
ವಿಶೋ[15] ಆಧಾಯ ವಿಧೃತೀ ವಸೂ[16] ಪ್ರಸ್ತರಸಾದನಮ್ ॥
[17-19]ಜುಹೂ ಪ ಧ್ರುಭಿರಾಸಾದ್ಯ ಸ್ರುಚ [20]ಏತಾಸ್ತು ಮಂತ್ರಯೇತ್ ।
ಏಕಾದಶಾನುವಾಕೇಽಸ್ಮಿನ್ನೀರಿತಾ ಮಂತ್ರವಿಂಶತಿಃ ॥

ಅನುವಾಕದ ಮಂತ್ರಗಳ ಸಂಖ್ಯೆ - 20



### ಅನುವಾಕದ ವಿಶೇಷ ವಿಷಯಗಳು

ಅ. ಭ. ಭಾ. ಭಾಷ್ಯ

ಮಂತ್ರಸಂಖ್ಯೆ

೧. ಕೃಷ್ಣೋಽಸಿ........ಸ್ವಾಹಾ ।

ಈ ಮಂತ್ರದಲ್ಲಿ ಸ್ವಾಹಾ ಎಂಬ ಶಬ್ದಕ್ಕೆ ಸ್ವಾ + ಆಹ ಎಂದು ಪದಗಳನ್ನು ಬಿಡಿಸಬೇಕು. ಪ್ರಜಾಪತಿಗೂ ವಾಗ್ದೇವತೆಗೂ ನಡೆದ ಸಂಭಾಷಣೆಯಲ್ಲಿ

'ಕಸ್ತ್ವಮಸೀತಿ ಸ್ವೈವ ತೇ ವಾಗಿತ್ಯಬ್ರವೀತ್ ।'

ಎಂಬ ವಾಕ್ಯಗಳಿವೆ. ವಾಗ್ದೇವಿಯು ಪ್ರಜಾಪತಿಗೆ ಅವನ ವಾಣಿಯೇ ತಾನೆಂದು ಹೇಳುತ್ತಾಳೆ. ಇದರಿಂದ ಸ್ವಾಹಾ ಶಬ್ದವು ಹುಟ್ಟಿತು. ಇದು ವಿಭಕ್ತ್ಯಂತಸಮುದಾಯ ರೂಪವಾದ ನಿಪಾತ (ಅವ್ಯಯ).

೨. ವೇದಿಃ.............ಸ್ವಾಹಾ ।

ವೇದಿಃ = ವೇದಯಿತ್ರೀ, ಹವಿಷಾಮಾಧಾರತ್ವೇನ ಪ್ರಕಾಶಯಿತ್ರೀ = ಹವಿಸ್ಸುಗಳಿಗೆ

ಆಧಾರವಾದುದು ವೇದಿ.

೩. ಬರ್ಹಿಃ = ಬೃಹತ್ = ಪರ್ಯಾಪ್ತಮ್ = ಸಾಕಾಗುವಷ್ಟು.

೭. ಸ್ವಧಾ.............ಗಚ್ಛತ । ಸ್ವಧಾ = ಅನ್ನಮ್ = ಅನ್ನ; ಊರ್ಕ್ = ಬಲಪ್ರಾಣಯೋರುದ್ದೀಪಕಮ್ = ಬಲ ಮತ್ತು ಪ್ರಾಣಗಳ ಉದ್ದೀಪಕ.

೯. ಊರ್ಣಾ...........ದೇವೇಭ್ಯಃ ।

ಸ್ವಾಸಸ್ಥಮ್ = ಶೋಭನಾಃ ಆಸಾಃ ಸ್ಥಾಶ್ಚ ಯಸ್ಮಿನ್ ತತ್ । ಆಸಾಃ = ಆಸಿತಾರಃ = ಕುಳಿತುಕೊಳ್ಳುವವರು; ಸ್ಥಾಃ = ನಿಂತುಕೊಳ್ಳುವವರು. [ಇದರಲ್ಲಿ ದೇವತೆಗಳು ಸುಖವಾಗಿ ಕುಳಿತುಕೊಳ್ಳುವರು ಮತ್ತು ಸುಖವಾಗಿ ನಿಂತುಕೊಳ್ಳುವರು]; ಸ್ವಾಸಸ್ಥಮ್ = ಸುಖಾಸನಮ್ ।

೧೦. ಗಂಧರ್ವೋಽಸಿ..........ಈಡಿತಃ ।

ಇಡಃ = ಅನ್ನಂ ಪಶವಶ್ಚ, ತದ್ವಾನ್ ಇಡಃ = ಅನ್ನ ಮತ್ತು ಪಶುಗಳನ್ನುಳ್ಳವನು.

೧೭. ಜುಹೂ.........ಸೀದ ।

ಹೂಯತೇ ಅನಯಾ ಇತಿ ಜುಹೂಃ = ಯಾವುದರಿಂದ ಆಹುತಿಯು ಸಮರ್ಪಿತವಾಗುವುದೋ ಆ ಹೋಮಸಾಧನ.

ಜುಹೂಮ್ ಉಪೇತ್ಯ ಬಿಭರ್ತಿ ಇತಿ = ಉಪಭೃತ್ = ಜುಹೂವಿನ ಧಾರಕವಾದದ್ದು ಉಪಭೃತ್. ಧ್ರುವಾ= ನಿಶ್ಚಲಾ - ಯತ್ರೈವ ಸಾದ್ಯತೇ, ತತ್ರೈವ ಧಾರ್ಯತೇ, ನ ಚಾಲ್ಯತೇ ಪ್ರಾಕ್ ಸಮಿಷ್ಟಯಜುಷಃ ಇತಿ ಧ್ರುವಾ = ಎಲ್ಲಿ ಆಸಾದಿತವಾಗಿದೆಯೋ ಅಲ್ಲಿಯೇ ಸಮಿಷ್ಟಯಜುರ್ಹೋಮದವರೆಗೆ ನಿಶ್ಚಲವಾಗಿ ಇರುವುದರಿಂದ ಧ್ರುವಾ.

## ಆ) ಮೀಮಾಂಸಾ

### 'ಯಜಮಾನಃ ಪ್ರಸ್ತರಃ' ಎಂಬಲ್ಲಿಯ ಪ್ರಸ್ತರಶಬ್ದವಿಚಾರ

ಶ್ರುತಿಯಲ್ಲಿ 'ಯಜಮಾನಃ ಪ್ರಸ್ತರಃ' (ತೈ.ಬ್ರಾ. 3.3.6.) ಎಂಬ ವಾಕ್ಯವಿದೆ.

ಈ ವಾಕ್ಯದಲ್ಲಿರುವ ಪ್ರಸ್ತರ ಎಂಬುದು ನಾಮಧೇಯವೇ? ಅಥವಾ ಪ್ರಸ್ತರಕಾರ್ಯದಲ್ಲಿ ಯಜಮಾನವಿಧಿಯೇ? ಅಥವಾ ಪ್ರಸ್ತರಸ್ತುತಿಯೇ? ಎಂಬ ಸಂಶಯ.

'ಉದ್ಭಿದಾ ಯಾಗೇನ ಯಜೇತ' ಎಂಬಲ್ಲಿಯಂತೆ ಒಂದೇ ವಿಭಕ್ತಿಯಿಂದ ನಿರ್ದೇಶವಿರುವುದರಿಂದ ಯಜಮಾನನಿಗೆ ಪ್ರಸ್ತರವೆಂಬ, ಅಥವಾ ಪ್ರಸ್ತರಕ್ಕೆ ಯಜಮಾನನೆಂಬ ನಾಮಧೇಯವು ಆಗಬಹುದು. ಅಥವಾ ಯಜಮಾನನ ಕಾರ್ಯವಾದ ಜಪಾದಿಗಳನ್ನು ಅಚೇತನವಾದ ಪ್ರಸ್ತರವು ಮಾಡಲಾರದ ಕಾರಣ, ಪ್ರಸ್ತರದ ಕಾರ್ಯವಾದ ಸ್ರುಕ್‌ಗಳನ್ನು ಧರಿಸುವುದು ಮುಂತಾದವುಗಳನ್ನು ಯಜಮಾನನಿಗೆ ವಿಧಿಸುವ ಗುಣವಿಧಿಯಾಗಬಹುದು. ಎಂಬುದು ಇಲ್ಲಿಯ ಪೂರ್ವಪಕ್ಷ.

ಇಲ್ಲಿಯ ಸಿದ್ಧಾಂತವು ಹೀಗಿದೆ: ಇದು ಗುಣವಿಧಿಯಾಗಲಾರದು. ಹಾಗಾದರೆ 'ಪ್ರಸ್ತರಂ ಪ್ರಹರತಿ' ಎಂಬ ವಿಧಿಗನುಸಾರವಾಗಿ ಯಜಮಾನನನ್ನೇ ಅಗ್ನಿಯಲ್ಲಿ ಹಾಕಬೇಕಾಗಿ ಬರುವುದರಿಂದ ಗುಣವಿಧಿಯಲ್ಲ. ಯಜಮಾನನಿಗೂ ಪ್ರಸ್ತರಕ್ಕೂ ಅತ್ಯಂತ ಭೇದವಿರುವುದರಿಂದ ನಾಮಧೇಯವೂ ಅಲ್ಲ. ಆದುದರಿಂದ 'ಸಿಂಹೋ ದೇವದತ್ತಃ' ಎಂದು ದೇವದತ್ತನನ್ನು ಸಿಂಹನೆಂದು ಹೊಗಳುವಂತೆ ಪ್ರಸ್ತರವೇ ಯಜಮಾನನೆಂದು ಪ್ರಶಂಸೆ ಮಾಡುವುದಕ್ಕಾಗಿ 'ಯಜಮಾನಃ ಪ್ರಸ್ತರಃ' ಎಂದು ಹೇಳಲಾಗಿದೆ.



ಈ ಅನುವಾಕದಲ್ಲಿ ಇಧ್ಮ, ಬರ್ಹಿಸ್ಸು ಮೊದಲಾದವುಗಳ ಪ್ರೋಕ್ಷಣ ಇತ್ಯಾದಿಗಳನ್ನು ಹೇಳಿ, ಆಜ್ಯಪೂರ್ಣವಾದ ಸ್ರುಗಾದಿಗಳ ಆಸಾದನವನ್ನೂ ಹೇಳಲಾಯಿತು. ಪುರೋಡಾಶಾದಿಹವಿರಾಸಾದನಮಂತ್ರಗಳು ಅನ್ಯಕಾಂಡಾದಿಗಳಲ್ಲಿವೆ. ಹವಿರಾಸಾದನದ ಬಳಿಕ ಮಾಡುವ ಆಘಾರಹೋಮಾದಿಗಳನ್ನು ಮುಂದಿನ ಅನುವಾಕದಲ್ಲಿ ಹೇಳಲಾಗಿದೆ.

---

## ॥ ದ್ವಾದಶೋಽನುವಾಕಃ ॥

**ಭುವನಮಸಿ ವಿಪ್ರಥಸ್ವಾಗ್ನೇ ಯಷ್ಟರಿದಂ ನಮಃ ।**
**ಜುಹ್ವೇಹ್ಯಗ್ನಿಸ್ತ್ವಾ ಹ್ವಯತಿ ದೇವಯಜ್ಯಾಯಾ ಉಪಭೃದೇಹಿ**

ಭುವನಮ್ । ಅಸಿ । ವೀತಿ । ಪ್ರಥಸ್ವ । ಅಗ್ನೇ । ಯಷ್ಟಃ । ಇದಮ್ । ನಮಃ॥

ಜುಹು । ಏತಿ । ಇಹಿ । ಅಗ್ನಿಃ । ತ್ವಾ । ಹ್ವಯತಿ । ದೇವಯಜ್ಯಾಯಾ ಇತಿ ದೇವ-ಯಜ್ಯಾಯೈ । ಉಪಭೃದಿತ್ಯುಪ-ಭೃತ್ । ಏತಿ । ಇಹಿ ।

| ಮಂತ್ರ | ವಿನಿಯೋಗ |
|---|---|
| ಭುವನಮ್..........ನಮಃ । | ಆಹವನೀಯಾಗ್ನಿಗೆ ಕೈ ಜೋಡಿಸಲು |
| ಜುಹು.........ದೇವಯಜ್ಯಾಯೈ । | ಜುಹೂವನ್ನು ತೆಗೆದುಕೊಳ್ಳಲು |

[ಎಲೈ] ಯಷ್ಟಃ = ಯಾಗನಿಷ್ಪಾದಕನಾದ; ಅಗ್ನೇ = ಅಗ್ನಿಯೇ! [ನೀನು] ಭುವನಮ್ = ಸಮಸ್ತಭೂತಗಳಿಗೂ ಉತ್ಪತ್ತಿಯ ಕಾರಣನಾಗಿ; ಅಸಿ = ಇರುವೆ; ವಿಪ್ರಥಸ್ವ = ಚೆನ್ನಾಗಿ ಹರಡಿಕೋ; [ವೃದ್ಧಿಹೊಂದು]. [ನಿನಗೆ] ಇದಂ ನಮಃ = ಈ ಕೈ ಜೋಡಿಸುವಿಕೆಯು; [ನಮಸ್ಕಾರವು] [ನನ್ನಿಂದ ಮಾಡಲ್ಪಡುತ್ತದೆ] +ಜುಹು! = ಎಲೈ ಜುಹುವೇ!; ಏಹಿ = [ನನ್ನ ಕೈಗೆ] ಬಾ; ಅಗ್ನಿಃ = ಅಗ್ನಿಯು; ತ್ವಾ = ನಿನ್ನನ್ನು; ದೇವಯಜ್ಯಾಯೈ = ದೇವತೆಗಳ ಯಾಗಕ್ಕಾಗಿ; ಹ್ವಯತಿ = ಆಹ್ವಾನಿಸುತ್ತಿದ್ದಾನೆ; +ಉಪಭೃತ್ = ಎಲೈ ಉಪಭೃತ್ತೇ! ಏಹಿ = [ನನ್ನ ಎಡಗೈಗೆ] ಬಾ.

ಎಲೈ ಅಗ್ನಿಯೇ! ನೀನು ಯಾಗನಿಷ್ಪಾದಕನಾಗಿ ಇದ್ದೀಯೆ. ನೀನು ಸಕಲ ಭೂತಗಳ ಉತ್ಪತ್ತಿಗೆ ಕಾರಣನಾಗಿಯೂ ಇರುವೆ. ನೀನು ನಾವು ನೀಡುವ ಹವಿಸ್ಸುಗಳ ಸ್ವೀಕಾರಕ್ಕಾಗಿ ವಿಸ್ತೃತನಾಗಿ ವೃದ್ಧಿಯನ್ನು ಹೊಂದು. ಚೆನ್ನಾಗಿ ಪ್ರಜ್ವಲಿಸು. ನಿನಗೆ (ಆಹವನೀಯಾಗ್ನಿಗೆ) ನಾನು ಕೈಗಳನ್ನು ಜೋಡಿಸಿ ಪ್ರಣಾಮವನ್ನು ಸಲ್ಲಿಸುತ್ತಿರುವೆನು.

ಎಲೈ ಜುಹುವೇ! ನೀನು ನನ್ನ ಬಲಗೈಗೆ ಬಾ. ನಿನ್ನ ಅಭಿಮಾನಿದೇವತೆಯಾದ

ದೇವಸ್ತ್ವಾ ಸವಿತಾ ಹ್ವಯತಿ ದೇವಯಜ್ಯಾಯಾ
ಅಗ್ನಾವಿಷ್ಣೂ ಮಾ ವಾಮವಕ್ರಮಿಷಂ ವಿಜಿಹಾಥಾಂ ಮಾ
ಮಾ ಸಂತಾಪ್ತಂ ಲೋಕಂ ಮೇ ಲೋಕಕೃತೌ ಕೃಣುತಂ

---

ದೇವಃ । ತ್ವಾ । ಸವಿತಾ । ಹ್ವಯತಿ । ದೇವಯಜ್ಯಾಯಾ ಇತಿ ದೇವ-ಯಜ್ಯಾಯೈ। ಅಗ್ನಾವಿಷ್ಣೂ ಇತ್ಯಗ್ನಾ -ವಿಷ್ಣೂ । ಮಾ । ವಾಮ್ । ಅವೇತಿ । ಕ್ರಮಿಷಮ್ । ವೀತಿ। ಜಿಹಾಥಾಮ್ । ಮಾ । ಮಾ। ಸಮಿತಿ । ತಾಪ್ತಮ್ । ಲೋಕಮ್ । ಮೇ । ಲೋಕಕೃತಾವಿತಿ ಲೋಕ-ಕೃತೌ । ಕೃಣುತಮ್ ।

| ಮಂತ್ರ | ವಿನಿಯೋಗ |
|---|---|
| ಉಪಭೃತ್............ದೇವಯಜ್ಯಾಯೈ । | ಉಪಭೃತ್ ಅನ್ನು ತೆಗೆದುಕೊಳ್ಳಲು |
| ಅಗ್ನಾವಿಷ್ಣೂ...............ಕೃಣುತಮ್ । | ಅಗ್ನಿಯ ದಕ್ಷಿಣಭಾಗಕ್ಕೆ ಹೋಗುವಾಗ ಅಧ್ವರ್ಯುವು ಜಪಿಸಲು |

---

**ಸವಿತಾ ದೇವಃ** = ಸರ್ವಪ್ರೇರಕನಾದ ಸವಿತೃದೇವನು; **ದೇವಯಜ್ಯಾಯೈ** = ದೇವ ಯಾಗಾರ್ಥವಾಗಿ; **ತ್ವಾ** = ನಿನ್ನನ್ನು; **ಹ್ವಯತಿ**=ಕರೆಯುತ್ತಿದ್ದಾನೆ; ❖**ಅಗ್ನಾವಿಷ್ಣೂ** =ಎಲೈ ಅಗ್ನಿ ಮತ್ತು ವಿಷ್ಣುದೇವತೆಗಳೇ! [ನಾನು]; **ವಾಮ್**=ನಿಮ್ಮಿಬ್ಬರನ್ನು; **ಮಾ ಅವಕ್ರಮಿಷಮ್** = ಕಾಲಿನಿಂದ ತುಳಿದು ಮುಂದೆ ಹೋಗುವುದಿಲ್ಲ; **ವಿಜಿಹಾಥಾಮ್** = ನೀವು ಪರಸ್ಪರ ವಿಯುಕ್ತರಾಗಿರಿ. [ನನಗೆ ಮಧ್ಯದಲ್ಲಿ ಹೋಗಲು ಅವಕಾಶವನ್ನು ನೀಡಿರಿ]; **ಮಾ** =ನನ್ನನ್ನು; **ಮಾ ಸಂತಾಪ್ತಮ್** = ಸಂತಾಪಗೊಳಿಸದಿರಿ. (ನನ್ನ ವಿಷಯದಲ್ಲಿ ಸಂತಾಪ ಗೊಳ್ಳದಿರಿ); **ಲೋಕಕೃತೌ**=ಉತ್ತಮಸ್ಥಾನವನ್ನು ಮಾಡಿ ಕೊಡುವ ಅಗ್ನಾವಿಷ್ಣುಗಳೇ!; **ಮೇ**= ನನಗೆ; **ಲೋಕಮ್**=ಮಧ್ಯದಲ್ಲಿಹೋಗಲು ಸ್ಥಾನವನ್ನು;**ಕೃಣುತಮ್**=ಮಾಡಿಕೊಡಿರಿ.

---

ಅಗ್ನಿಯು ದೇವತೆಗಳ ಯಾಗಾರ್ಥವಾಗಿ ನಿನ್ನನ್ನು ಆಹ್ವಾನಿಸುತ್ತಿದ್ದಾನೆ. ಯಾಗ ನಿಷ್ಪತ್ತಿಗಾಗಿ ನನ್ನ ಕೈಗೆ ಬಾ. ● ಎಲೈ ಉಪಭೃತ್ತೇ! ನೀನು ನನ್ನ ಎಡಗೈಗೆ ಬಾ.

**ವಿಷ್ಣೋಃ ಸ್ಥಾನಮಸೀತ ಇಂದ್ರೋ ಅಕೃಣೋದ್ವೀರ್ಯಾಣಿ ಸಮಾರಭ್ಯೋರ್ಧ್ವೋ ಅಧ್ವರೋ ದಿವಿಸ್ಪೃಶಮಹ್ರುತೋ ಯಜ್ಞೋ ಯಜ್ಞಪತೇರಿಂದ್ರಾವಾನ್ಸ್ವಾಹಾ**

ವಿಷ್ಣೋಃ । ಸ್ಥಾನಮ್ । ಅಸಿ *। ಇತಃ । ಇಂದ್ರಃ । ಅಕೃಣೋತ್ । ವೀರ್ಯಾಣಿ।* ಸಮಾರಭ್ಯೇತಿ ಸಮ್-ಆರಭ್ಯ । ಊರ್ಧ್ವಃ । ಅಧ್ವರಃ । ದಿವಿಸ್ಪೃಶಮಿತಿ ದಿವಿ-ಸ್ಪೃಶಮ್। ಅಹ್ರುತಃ। ಯಜ್ಞಃ। ಯಜ್ಞಪತೇರಿತಿ ಯಜ್ಞ-ಪತೇಃ। ಇಂದ್ರಾವಾನಿತೀಂದ್ರ-ವಾನ್ । ಸ್ವಾಹಾ।



| ಮಂತ್ರ | ವಿನಿಯೋಗ |
|---|---|
| ವಿಷ್ಣೋಃ............ಅಸಿ । | ಅಧ್ವರ್ಯುವಿನ ಸ್ಥಾನವನ್ನು ಕಲ್ಪಿಸಲು—ಬೌಧಾಯನ |
| ವಿಷ್ಣೋಃ.....ವೀರ್ಯಾಣಿ । | ಅಧ್ವರ್ಯುವಿನ ಸ್ಥಾನವನ್ನು ಕಲ್ಪಿಸಲು—ಆಪಸ್ತಂಬ |
| ಇತ..............ಸ್ವಾಹಾ । | ದ್ವಿತೀಯಾಘಾರಹೋಮವನ್ನು ಮಾಡಲು—ಬೌ. |
| ಸಮಾರಭ್ಯೋ.....ಸ್ವಾಹಾ । | ದ್ವಿತೀಯಾಘಾರಹೋಮವನ್ನು ಮಾಡಲು—ಆಪ. |

+[ಎಲೈ ಯಜ್ಞಭೂಮಿಪ್ರದೇಶವೇ! ನೀನು] **ವಿಷ್ಣೋಃ** = [ಯಜ್ಞಾತ್ಮಕನಾದ] ವಿಷ್ಣುವಿನ; **ಸ್ಥಾನಮ್** = ಸ್ಥಾನವಾಗಿ; **ಅಸಿ** = ಇದ್ದೀಯೆ; +**ಇತಃ** = ಈ ದೇವಯಜನಸ್ಥಾನದ ಬಲಗಿದ; **ಇಂದ್ರಃ** = ದೇವೇಂದ್ರನು; **ವೀರ್ಯಾಣಿ** = ಅಸುರವಧರೂಪವಾದ ಸಾಹಸ ಕಾರ್ಯಗಳನ್ನು; **ಅಕೃಣೋತ್** = ಮಾಡಿದನು; +**ಸಮಾರಭ್ಯ** = ನೈರ್ಋತ್ಯದಿಕ್ಕಿನಿಂದ ಆರಂಭಿಸಿ; **ಊರ್ಧ್ವಃ** = ಉದ್ದ(ದೀರ್ಘ)ವಾಗಿರುವ; **ಅಧ್ವರಃ** = ಹಿಂಸೆಯಿಲ್ಲದ (ಮಧ್ಯದಲ್ಲಿ ವಿಚ್ಛಿತ್ತಿಯಿಲ್ಲದೆ ಸಂತತವಾಗಿರುವ) **ದಿವಿಸ್ಪೃಶಮ್** = ದೈವೀ ದಿಕ್ಕಾದ ಈಶಾನ್ಯಸ್ಪರ್ಶಿಯಾಗುವಂತೆ; **ಅಹ್ರುತಃ** = ಕುಟಿಲವಲ್ಲದ (ನೇರವಾಗಿರುವ); **ಇಂದ್ರಾವಾನ್** = ಇಂದ್ರನನ್ನು ದೇವತೆಯನ್ನಾಗಿ ಹೊಂದಿರುವ; **ಯಜ್ಞಪತೇಃ** = ಯಜಮಾನನ; **ಯಜ್ಞಃ** = ಆಘಾರರೂಪವಾದ ಯಜ್ಞವು; **ಸ್ವಾಹಾ** = ದೇವತೆಗೆ ಕೊಡಲ್ಪಟ್ಟಿದೆ.

ನಿನ್ನ ಅಭಿಮಾನಿದೇವತೆಯಾದ ಸರ್ವಪ್ರೇರಕನಾದ ಸವಿತೃದೇವನು ದೇವತೆಗಳ ಯಾಗ

# ಬೃಹದ್ಭಾಃ ಪಾಹಿ ಮಾಗ್ನೇ ದುಶ್ಚರಿತಾದಾಮಾ ಸುಚರಿತೇ ಭಜ

ಬೃಹತ್ । ಭಾಃ । ಪಾಹಿ । ಮಾ । ಅಗ್ನೇ । ದುಶ್ಚರಿತಾದಿತಿ ದುಃ-ಚರಿತಾತ್ । ಆ ।
ಮಾ । ಸುಚರಿತ ಇತಿ ಸು-ಚರಿತೇ । ಭಜ ।

| ಮಂತ್ರ | ವಿನಿಯೋಗ |
|---|---|
| ಬೃಹದ್ಭಾಃ। | ಸ್ರುಕ್ ಅನ್ನು ಮೇಲೆತ್ತಿ ಹಿಡಿಯಲು. |
| ಪಾಹಿ........ಭಜ। | ಅಧ್ವರ್ಯುವು ಮತ್ತೆ ಉತ್ತರಕ್ಕೆ ತಿರುಗುವಾಗ ಜಪಿಸಲು. |

❖**ಬೃಹತ್** = ಆಘಾರಹೋಮದಿಂದ ಜ್ವಾಲೆಯು ಅಧಿಕವಾಗಿರುವಂತೆ; **ಭಾಃ** = [ಅಗ್ನಿಯು] ಪ್ರಕಾಶಿಸುತ್ತಿದ್ದಾನೆ. ❖**ಅಗ್ನೇ!** = ಎಲೈ ಅಗ್ನಿದೇವನೇ! **ಮಾ** = ನನ್ನನ್ನು; **ದುಶ್ಚರಿತಾತ್** = ಪ್ರಮಾದದಿಂದ ಮಾಡಿದ ಕರ್ಮಾಪರಾಧದಿಂದ; **ಪಾಹಿ** = ರಕ್ಷಿಸು. (ನಿಷಿದ್ಧಾಚರಣೆಯಿಂದ ರಕ್ಷಿಸು); **ಮಾ** = ನನ್ನನ್ನು, **ಸುಚರಿತೇ** = ವಿಹಿತಾಚರಣೆಯಲ್ಲಿ (ಚೆನ್ನಾಗಿ ಮಾಡಿದ ಯಜ್ಞಫಲದಲ್ಲಿ), **ಆ ಭಜ** = ಸ್ಥಾಪಿಸು. [ನಿರತನನ್ನಾಗಿ ಮಾಡು]

ಯಾಗಕ್ಕೋಸ್ಕರ ನಿನ್ನನ್ನು ಆಹ್ವಾನಿಸುತ್ತಿದ್ದಾನೆ.
ಮಧ್ಯಮಪರಿಧಿಯ ಪೂರ್ವಭಾಗದಲ್ಲಿರುವ ಅಗ್ನಿದೇವನೇ! ಮತ್ತು ಅಗ್ನಿಯ ಪಶ್ಚಾದ್ಭಾಗದಲ್ಲಿ ಸ್ರುಕ್ಕುಗಳ ಮುಂಭಾಗದಲ್ಲಿರುವ ಯಜ್ಞರೂಪನಾದ ವಿಷ್ಣುವೇ! ನಾನು ನಿಮ್ಮನ್ನು ಕಾಲಿನಿಂದ ತುಳಿದು ಹೋಗಲಾರೆನು. ನನಗೆ ಮಧ್ಯದಲ್ಲಿ ಹೋಗಲು ಅವಕಾಶ ಮಾಡಿಕೊಡಲು ನೀವು ಬೇರೆ ಬೇರೆಯಾಗಿರಿ. ನನಗೆ ಸಂತಾಪವನ್ನು ಉಂಟುಮಾಡದಿರಿ. (ನನ್ನ ವಿಷಯದಲ್ಲಿ ನೀವು ಕೋಪಗೊಳ್ಳದಿರಿ). ನೀವು ಸ್ಥಾನವನ್ನು ಕಲ್ಪಿಸಿಕೊಡತಕ್ಕವರು. ನನಗೂ ನಿಮ್ಮ ಮಧ್ಯದಲ್ಲಿ ಹೋಗಲು ಸ್ಥಾನವನ್ನು ಕಲ್ಪಿಸಿಕೊಡಿರಿ.

ದೇವಾಯತನವಾದ ಯಜ್ಞಭೂಮಿಯೇ! ನೀನು ಯಜ್ಞಸ್ವರೂಪನಾದ ವಿಷ್ಣುವಿನ ಸ್ಥಾನವಾಗಿರುವೆ. ನಿನ್ನಲ್ಲಿ ನಿಂತು ನಾನು ಯಾಗಗಳನ್ನು ನೆರವೇರಿಸುವೆನು.

ಮಖಸ್ಯ ಶಿರೋऽಸಿ ಸಂ ಜ್ಯೋತಿಷಾ ಜ್ಯೋತಿರಜ್ಯಾ್ತಮ್ ॥

॥೧೨-21॥

[ಆಹುತ ಏಕವಿಗ್ಂಶತಿಶ್ಚ । ]

ಮಖಸ್ಯ । ಶಿರಃ । ಅಸಿ । ಸಮಿತಿ । ಜ್ಯೋತಿಷಾ । ಜ್ಯೋತಿಃ । ಅಜ್ಯಾ್ತಮ್ ॥೧೨॥

| ಮಂತ್ರ | ವಿನಿಯೋಗ |
|---|---|
| ಮಖಸ್ಯ........ಅಜ್ಯಾ್ತಮ್ । | ಜುಹೂವಿನಿಂದ ಧ್ರುವಾವನ್ನು ಸಮಂಜನ ಮಾಡಲು (ಸ್ಪರ್ಶ ಮಾಡಿಸಲು) |

+[ಎಲೈ ಆಘಾರಶೇಷವೇ! ನೀನು] ಮಖಸ್ಯ = ಯಜ್ಞದ; ಶಿರಃ = ಉತ್ತಮಾಂಗರೂಪನು; ಅಸಿ = ಆಗಿದ್ದೀಯೆ; ಜ್ಯೋತಿಷಾ = ಜ್ಯೋತೀರೂಪನಾದ ನಿನ್ನಿಂದ; ಜ್ಯೋತಿಃ= ಧ್ರುವೆಯಲ್ಲಿರುವ ಆಜ್ಯರೂಪವಾದ ಜ್ಯೋತಿಯು; ಸಮ್ ಅಜ್ಯಾ್ತಮ್ = ಚೆನ್ನಾಗಿ ಸೇರಲಿ.

ಇಂದ್ರನು ಯಾಗಭೂಮಿಯ ಸ್ಥಾನಬಲದಿಂದಲೇ ಅಸುರವಧಾದಿಮಹಾಕಾರ್ಯಗಳನ್ನು ಸಾಧಿಸಿದನು. ಅಂತಹ ಇಂದ್ರನೇ ದೇವತೆಯಾಗಿರುವ ಈ ಆಘಾರಹೋಮವು ನೈರ್ಋತ್ಯದಿಂದ ಆರಂಭವಾಗಿ ಪೂರ್ವೋತ್ತರ ದಿಕ್ಕಾದ ಈಶಾನ್ಯದವರೆಗೆ ಉದ್ದವಾಗಿ, ನೇರವಾಗಿ, ತಡೆಯಿಲ್ಲದೆ ಅಗ್ನಿಯಲ್ಲಿ ಸಮರ್ಪಿಸಲ್ಪಡುತ್ತದೆ. ಯಜಮಾನನ ಆಘಾರರೂಪವಾದ ಈ ಯಜ್ಞವು ದೇವತೆಗೆ (ಇಂದ್ರನಿಗೆ) ಕೊಡಲ್ಪಟ್ಟಿದೆ (ಕೊಡಲ್ಪಡಲಿ).

ಅಗ್ನಿಯು ಆಘಾರಹೋಮದಿಂದ ಹೆಚ್ಚಾಗಿ ಜ್ವಲಿಸಿ ಪ್ರಕಾಶಿಸುತ್ತಿದ್ದಾನೆ. [ಆದುದರಿಂದ ಸ್ರುಕ್ಕು ಸುಡದಂತೆ ಮೇಲಕ್ಕೆ ಎತ್ತಿ ಹಿಡಿಯುತ್ತೇನೆ.]

ಎಲೈ ಪವಿತ್ರನಾದ ಅಗ್ನಿದೇವನೇ! ನನ್ನನ್ನು ಪ್ರಮಾದದಿಂದ ಸಂಭವಿಸಬಹುದಾದ ನಿಷಿದ್ಧಾಚರಣೆಯಿಂದ ಕಾಪಾಡು. ವಿಹಿತಕರ್ಮಗಳಲ್ಲಿ ನಿರತನನ್ನಾಗಿ ಮಾಡು.

ಆಘಾರವು ಯಜ್ಞದ ಶಿರಃಸ್ವರೂಪವಾಗಿದೆ. ಅದರ ಜ್ಯೋತೀರೂಪ ಆಜ್ಯದಿಂದ (ಆಜ್ಯರೂಪಜ್ಯೋತಿಯಿಂದ) ಧ್ರುವೆಯಲ್ಲಿರುವ ಜ್ಯೋತೀರೂಪಆಜ್ಯವು (ಆಜ್ಯರೂಪ ಜ್ಯೋತಿಯು) ಚೆನ್ನಾಗಿ ಸಂಯೋಗ ಹೊಂದಲಿ.

## ವಿನಿಯೋಗಸಂಗ್ರಹ

[1]ಭುವಾಗ್ನೇರಂಜಲಿಂ ಕೃತ್ವಾ[2,3]ಜೂಹ ದ್ವಾಭ್ಯಾಂ ತಯೋರ್ಗ್ರಹಃ ।
ಅಗ್ನಾ[4] ದಕ್ಷಿಣದಿಗ್ಗಾಮೀ ವಿಷ್ಣೋಃ[5] ಸ್ಥಿತ್ವಾ [6]ಸಮಾಹೃತಿಃ ॥
ಬೃಹದ್ಭಾಃ[7] ಸ್ರುಚಮುದ್ಗೃಹ್ಯ ಪಾಹಿ[8] ಪ್ರತಿನಿವರ್ತತೇ ।
ಮಖ[9] ಧ್ರುವಾಮನಕ್ತಿ ತ್ರಿಃ ನವ ಮಂತ್ರಾ ಇಹೇರಿತಾಃ ॥

ಅನುವಾಕದ ಮಂತ್ರಗಳ ಸಂಖ್ಯೆ - 9

ಐದನೆಯ ಮಂತ್ರದಲ್ಲಿ ಬೌಧಾಯನ-ಆಪಸ್ತಂಬರಲ್ಲಿ ಎರಡು ಮತಗಳಿವೆ.

## ಅನುವಾಕದ ವಿಶೇಷ ವಿಷಯಗಳು

### ಅ) ಭ.ಭಾ. ಭಾಷ್ಯ

**ಮಂತ್ರಸಂಖ್ಯೆ**

೧) ಭುವನಮ್.........ನಮಃ । ಭುವನಮ್ ಅಸಿ = ಲೋಕ(ಸಮಸ್ತಭೂತ ಸಮೂಹ)ವೆಲ್ಲವೂ ನಿನ್ನ ಅಧೀನವಾಗಿರುವುದರಿಂದ ನೀನು ಭುವನವೇ ಆಗಿದ್ದೀಯೆ. ವಿಪ್ರಥಸ್ವ = ಭುವನದಂತೆಯೇ ವಿಸ್ತೀರ್ಣನಾಗು.

೪) ಅಗ್ನಾ...........ಕೃಣುತಮ್ । ಲೋಕಕೃತಾ = ಸ್ಥಾನಪ್ರದೌ = ಸ್ಥಾನವನ್ನು ಕೊಡತಕ್ಕ ಅಗ್ನಾವಿಷ್ಣುಗಳೇ! ಮೇ = ನನಗೆ; ಲೋಕಮ್ = ಸ್ಥಾನವನ್ನು; ಕೃಣುತಮ್ = ಕಲ್ಪಿಸಿಕೊಡಿರಿ.

೫) ವಿಷ್ಣೋಃ.......ವೀರ್ಯಾಣಿ । ಇತಃ = ಈ ಆಘಾರಹೋಮದಿಂದ; ಸಮಾರಭ್ಯ = ಆರಂಭಿಸಿ; ಇಂದ್ರಃ = ದೇವೇಂದ್ರನು; ವೀರ್ಯಾಣಿ = ವೃತ್ರವಧೆಯೇ ಮೊದಲಾದ ಮಹಾಸಾಹಸಕಾರ್ಯಗಳನ್ನು; ಅಕೃಣೋತ್ = ಮಾಡಿದನು. ಈ ಆಘಾರವು; ಊರ್ಧ್ವಃ = ಊರ್ಧ್ವಲೋಕಗಾಮಿಯಾಗಿ; ಅಧ್ವರಃ = ಹಿಂಸಾರಹಿತವಾಗಿ, ಯಾರಿಂದಲೂ ಹಿಂಸಿಸಲ್ಪಡದೇ (ತಡೆಯಿಲ್ಲದೆ) (ಆ ಇಂದ್ರನನ್ನು) ದಿವಿಸ್ಪೃಶಮ್= ಸ್ವರ್ಗಸ್ಪರ್ಶಿಯನ್ನಾಗಿ [ಮಾಡಿತು]. ಇಂದ್ರಾವಾನ್ = ಇಂದ್ರದೇವತಾಕವಾದ; ಯಜ್ಞಪತೇಃ = ಯಜಮಾನನ; ಯಜ್ಞಃ = ಆಘಾರರೂಪವಾದ ಯಜ್ಞವು; ಅಹ್ರುತಃ = ಅಕುಟಿಲವಾದುದು; ನಿಶ್ಚಿತಫಲಸಾಧಕವಾದುದು. ಹೀಗೆಂದು ಸ್ತ್ರೀಯ ವಾಗ್ದೇವತೆಯು ಹೇಳುತ್ತಾಳೆ. ಅಥವಾ:-ಸ್ವಾಹಾ = ದೇವತೆಗಾಗಿ ಅಗ್ನಿಯಲ್ಲಿ ಪ್ರಕ್ಷಿಪ್ತವಾಗಲಿ.

೯) ಮಖಸ್ಯ.........ಅಜ್ಯಾ_ತಮ್ । [ಎಲೈ ಜುಹುವೇ! ನೀನು] ಮಖಸ್ಯ ಶಿರೋಽಸಿ = ಯಜ್ಞದ ಉತ್ತಮಾಂಗವಾಗಿರುವೆ. ಜ್ಯೋತಿಷಾ = ನಿನ್ನಲ್ಲಿರುವ ಆಜ್ಯರೂಪವಾದ ಜ್ಯೋತಿಸ್ಸಿನಿಂದ; ಜ್ಯೋತಿಃ = ಧ್ರುವೆಯಲ್ಲಿರುವ ಆಜ್ಯರೂಪಜ್ಯೋತಿಯು; ಸಮಜ್ಯಾ_ತಮ್ = ಸೇರಲಿ.

## ಆ) ಮೀಮಾಂಸಾ

### ೧) ದೇವತೆಗಳಿಗೆ ಯಾಗಾಧಿಕಾರವಿದೆಯೇ? ಇಲ್ಲವೇ?

ಅಗ್ನೇ ಯಷ್ಟರಿದಂ ನಮಃ । ಅಗ್ನಿರ್ವೈ ದೇವಾನಾಂ ಯಷ್ಟಾ । ಎಂಬ ಈ ಮಂತ್ರ-ಬ್ರಾಹ್ಮಣವಾಕ್ಯಗಳಿಂದ ಅಗ್ನಿಯು ಯಾಗಕರ್ತನೆಂದು ತಿಳಿಯುತ್ತದೆ. ಇಂತಹ ವಾಕ್ಯಗಳಿಗೆ ಸಂಬಂಧಿಸಿದಂತೆ ಪೂರ್ವಮೀಮಾಂಸಾ - ಉತ್ತರಮೀಮಾಂಸಾಗಳ ದೇವತಾಧಿಕರಣಗಳಲ್ಲಿ ವಿಚಾರ ಮಾಡಲಾಗಿದೆ. ಆ ಎರಡೂ ವಿಚಾರಗಳನ್ನು ಸಾಯಣ ಭಾಷ್ಯದಲ್ಲಿ ಹೇಳಲಾಗಿದೆ.

ದೇವತೆಗಳಿಗೆ ಯಾಗಾಧಿಕಾರವು ಇದೆಯೇ ಇಲ್ಲವೇ ಎಂಬುದರ ಮೊದಲು ದೇವತೆಗಳಿಗೆ ವಿಗ್ರಹ (ಆಕೃತಿ) ವಿದೆಯೇ ಎಂಬುದು ನಿರ್ಣಯವಾಗಬೇಕಿದೆ. ಆದುದರಿಂದ ದೇವತೆಗಳಿಗೆ ವಿಗ್ರಹವುಂಟೇ ಇಲ್ಲವೇ ಎಂಬ ವಿಚಾರವನ್ನು ತಿಳಿಸಲಾಗುತ್ತದೆ.

ವಿಗ್ರಹೋ ಹವಿಷಾಂ ಭೋಗ ಐಶ್ವರ್ಯಂ ಚ ಪ್ರಸನ್ನತಾ ।
ಫಲದಾತೃತ್ವಮಿತ್ಯೇತತ್ಪಂಚಕಂ ವಿಗ್ರಹಾದಿಕಮ್ ॥

ದೇವತೆಗಳಿಗೆ ವಿಗ್ರಹವಿದೆ. ಹವಿಸ್ಸನ್ನು ಅವರು ಸ್ವೀಕರಿಸಿ, ಸೇವಿಸುತ್ತಾರೆ. ಅವರಿಗೆ ಒಡೆತನ ಇದೆ. ದೇವತೆಗಳು ಪ್ರಸನ್ನರಾಗುತ್ತಾರೆ. ನಾವು ಮಾಡಿದ ಕರ್ಮಗಳಿಗೆ ಫಲವನ್ನು ನೀಡುತ್ತಾರೆ. ಎಂಬ ವಚನದಂತೆ ದೇವತೆಗಳಿಗೆ ವಿಗ್ರಹವಿದೆಯೆಂಬುದು ಸಿದ್ಧವಾಗುತ್ತದೆ.

ಆದರೆ ಈ ವಿಗ್ರಹವೇ ಮೊದಲಾದ ಐದು ಅಂಶಗಳನ್ನು ಕಲ್ಪನೆ ಮಾಡುವುದಕ್ಕಿಂತಲೂ ಕರ್ಮಾನುಷ್ಠಾನದಿಂದ ಉಂಟಾದ ಅಪೂರ್ವವೇ ಫಲವನ್ನು ನೀಡುತ್ತದೆಯೆಂಬುದೂ, ಫಲಪ್ರದಾನಶಕ್ತಿಯು ಆ ಅಪೂರ್ವಕ್ಕೇ ಇದೆಯೆಂದು ಒಪ್ಪುವುದು ಉಚಿತವಲ್ಲವೇ? ಎಂಬ ಆಕ್ಷೇಪವಿದೆ.

ಈ ಆಕ್ಷೇಪವು ಸರಿಯಲ್ಲ. ಏಕೆಂದರೆ ವಿಗ್ರಹ ಮೊದಲಾದವುಗಳು ಕಲ್ಪನೆಗಳಲ್ಲ. ಇವೆಲ್ಲಕ್ಕೂ ಪ್ರಮಾಣಗಳಿವೆ.

'ಸಹಸ್ರಾಕ್ಷೋ ಗೋತ್ರಭಿದ್ವಜ್ರಬಾಹುಃ।'

[ಇಂದ್ರನಿಗೆ ಸಾವಿರ ಕಣ್ಣುಗಳುಂಟು. ಅವನು ವಜ್ರಾಯುಧವನ್ನು ಧರಿಸಿರುತ್ತಾನೆ. ಆ ವಜ್ರಾಯುಧದಿಂದ ಪರ್ವತಗಳನ್ನು ಭೇದಿಸಿದ್ದಾನೆ.] ಮೊದಲಾದ ಶ್ರುತಿವಾಕ್ಯಗಳು ದೇವತೆಗಳಿಗೆ ವಿಗ್ರಹವಿದೆಯೆಂಬ ವಿಷಯದಲ್ಲಿ ಪ್ರಮಾಣವಾಗಿವೆ.

'ಅಗ್ನಿರಿದಗ್ಂ ಹವಿರಜುಷತ'

[ಅಗ್ನಿಯು ಈ ಹವಿಸ್ಸನ್ನು ಸೇವಿಸಿದನು.] ಎಂದು ಹವಿಸ್ಸಿನ ಸೇವನೆಯೂ ಉಕ್ತವಾಗಿದೆ. 'ಅದ್ಧೀದಿಂದ್ರ ಪ್ರಸ್ಥಿತೇಮಾ ಹವೀಂಷಿ' (ಇಂದ್ರನೇ! ನೀನು ಬಂದು ಈ ಹವಿಸ್ಸುಗಳನ್ನು ಭುಂಜಿಸು] ಎಂದು ಹವಿರ್ಭೋಜನ,

ತೃಪ್ತ ಏವೈನಮಿಂದ್ರಃ ಪ್ರಜಯಾ ಪಶುಭಿಸ್ತರ್ಪಯತಿ ।

(ಹವಿರ್ಭೋಜನದಿಂದ ತೃಪ್ತನಾದ ಇಂದ್ರನು ಪ್ರಸನ್ನನಾಗಿ ಯಜಮಾನನನ್ನು ಪ್ರಜೆಗಳಿಂದಲೂ ಪಶುಗಳಿಂದಲೂ ಸಂತೋಷಪಡಿಸುವನು) ಎಂದು ತೃಪ್ತಿಯೂ, ಅನುಗ್ರಹವೂ ಉಕ್ತವಾಗಿವೆ. ಆದುದರಿಂದ ಫಲಪ್ರದವಾದ ದೇವತೆಯ ಪ್ರಾಧಾನ್ಯವಿರುವುದರಿಂದ ಆ ದೇವತೆಯೇ ಅರ್ಥಗಳಿಗೆ ಪ್ರಯೋಜಕನಾಗುತ್ತದೆ. ಭೋಜನಕ್ಕೆ ಪ್ರಯೋಜಕನಾದವನು ಅತಿಥಿಯೇ ಅಲ್ಲವೇ? ಇದು ಪೂರ್ವಮೀಮಾಂಸಾ ಸೂತ್ರಕಾರರಾದ ಜೈಮಿನಿಮಹರ್ಷಿಗಳ ಪೂರ್ವಪಕ್ಷಸೂತ್ರದ ಅಭಿಪ್ರಾಯ.

ಈ ವಿಷಯದಲ್ಲಿ ಜೈಮಿನಿಮಹರ್ಷಿಗಳ ಸಿದ್ಧಾಂತ ಹೀಗಿದೆ : ಯಜ್ಞವನ್ನು ಅನುಷ್ಠಿಸಿದ ನಂತರ ಫಲವನ್ನೀಯುವುದು ಆ ಯಜ್ಞಕರ್ಮವೇ? ಅಥವಾ ದೇವತೆಯೇ? 'ಯಜೇತ ಸ್ವರ್ಗಕಾಮಃ' ಮೊದಲಾದ ವಾಕ್ಯಗಳಲ್ಲಿ ಯಾಗವೇ (ಜ್ಯೋತಿಷ್ಟೋಮವೇ ಮೊದಲಾದವುಗಳು) ಸ್ವರ್ಗಾದಿಫಲಗಳಿಗೆ ಸಾಧನವೆಂದು ತಿಳಿಯುತ್ತದೆ. 'ದೇವತೋದ್ದೇಶೇನ ದ್ರವ್ಯತ್ಯಾಗಃ ಯಾಗಃ' ಅಂದರೆ ದೇವತೆಗಳಿಗಾಗಿ ದ್ರವ್ಯವನ್ನು ಅಗ್ನ್ಯಾದಿಗಳಲ್ಲಿ ತ್ಯಾಗ ಮಾಡುವುದು ಯಾಗವೆನಿಸುತ್ತದೆ. ಮುಂದೆ ಉಂಟಾಗುವ ಫಲಕ್ಕೂ ಈಗ ಮಾಡುತ್ತಿರುವ ಯಾಗಕ್ಕೂ ಕಾಲದ ಅಂತರ ಹೆಚ್ಚು ಇರುವುದರಿಂದ ಈಗಿನ ಯಾಗವು ಮುಂಬರುವ ಫಲಕ್ಕೆ ಸಾಧನವಾಗುವುದು ಹೇಗೆ? ದೇವತೆಯಾದರೆ ಯಾವಾಗಲೂ

ಇರುವುದರಿಂದ ದೇವತೆಯೇ ಫಲವನ್ನೀಯುತ್ತದೆಯೆಂಬುದು ಉಚಿತವಲ್ಲವೇ? ಎಂಬ ಸಂಶಯವು ಬರುತ್ತದೆ. ಇದಕ್ಕೆ ಈ ರೀತಿ ಪರಿಹಾರವಿದೆ. ಈಗ ಮಾಡುತ್ತಿರುವ ಯಾಗದಿಂದ ಉಂಟಾಗುವ ಅಪೂರ್ವವು ಫಲವು ಉಂಟಾಗುವವರೆಗೆ ಆತ್ಮನಲ್ಲಿರುತ್ತದೆ. ಅಲ್ಲದೆ ದೇವತೆಯನ್ನು ಫಲಪ್ರದವೆನ್ನುವುದಾದರೆ ದೇವತೆಗೆ ವಿಗ್ರಹವೇ ಮೊದಲಾದ ಐದು ಅಂಶಗಳನ್ನು ಅಂಗೀಕರಿಸಬೇಕಾಗುತ್ತದೆ. ಈ ರೀತಿ ಅಂಗೀಕರಿಸಿದರೆ—

'ಓಷಧೀಭ್ಯಃ ಸ್ವಾಹಾ'

ಮೊದಲಾಗಿ ಅಚೇತನವಸ್ತುಗಳನ್ನು ಉದ್ದೇಶಿಸಿ ಹೋಮಗಳನ್ನು ಹೇಳಿರುತ್ತಾರೆ. —ಓಷಧಿಯು ಯಾಗದ ಫಲವನ್ನು ಕೊಡುವುದು ಹೇಗೆ? ಆದುದರಿಂದ ಅಪೂರ್ವವೇ ಫಲದಾಯಕ. ದೇವತೆಗಳು ಯಾಗದ ಫಲವನ್ನು ಕೊಡುವುದಾದರೂ ಯಾಗಕರ್ಮವಿಲ್ಲದೆ ಫಲವನ್ನು ನೀಡುವುದಿಲ್ಲ. ಅಂದಮೇಲೆ ದೇವತೆಯು ಫಲವನ್ನೀಯುತ್ತದೆಯೆಂಬ ವಾದಿಯೂ ಯಾಗಕರ್ಮವನ್ನು ಒಪ್ಪಿಕೊಳ್ಳಲೇಬೇಕಾಗಿರುವುದರಿಂದ ಉಭಯವಾದಿಗೂ ಸಮ್ಮತವಾದ ಯಾಗಕರ್ಮವೇ ಫಲಸಾಧನವೆಂದು ಹೇಳುವುದು ಉಚಿತ.

ಹಿಂದೆ ಹೇಳಿದ 'ಸಹಸ್ರಾಕ್ಷೋ.....' 'ಅಗ್ನಿರಿದಗ್ಂ......' ಮುಂತಾದ ಶ್ರುತಿಗಳನ್ನು ಅವಲಂಬಿಸಿ ದೇವತೆಗಳಿಗೆ ವಿಗ್ರಹಾದಿಗಳು ಇವೆಯೆಂದು ಹೇಳಲು ಬಾರದು. ಏಕೆಂದರೆ ಅವು ಅರ್ಥವಾದಗಳು. ಅರ್ಥವಾದಗಳಿಗೆ ಸ್ತುತಿಯಲ್ಲಿ ತಾತ್ಪರ್ಯವೇ ಹೊರತು ತಾವು ತಿಳಿಸುತ್ತಿರುವ ಅರ್ಥದಲ್ಲಿ ತಾತ್ಪರ್ಯವಿರುವುದಿಲ್ಲ. ತಂದೆ, ತಾಯಿ ಮತ್ತು ಗುರು ಶುಶ್ರೂಷೆಯು ಫಲವನ್ನೀಯುವುದು ಎಲ್ಲರಿಗೂ ಸಮ್ಮತವೇ ಆಗಿದೆ. ಅಲ್ಲಿ ಯಾವ ದೇವತೆಯೂ ಇರುವುದಿಲ್ಲ. ಅಲ್ಲಿಯೂ ಅಪೂರ್ವವೇ ಫಲವನ್ನು ಉಂಟುಮಾಡುತ್ತದೆ. ಅಲ್ಲದೆ ದೇವತೆಯು ಫಲವನ್ನು ನೀಡುತ್ತದೆಯೆಂದು ಹೇಳುವುದಾದರೆ ಅಗ್ನಿಯನ್ನು ದೇವತೆಯನ್ನಾಗಿ ಹೊಂದಿರುವ ಆಗ್ನೇಯಯಾಗಕ್ಕೆ ಅಂಗವಾದ ಪ್ರಯಾಜ ಮುಂತಾದವುಗಳನ್ನು ಅಗ್ನಿಯು ದೇವತೆಯಲ್ಲದ ಸೌರ್ಯಾದಿಯಾಗಗಳಲ್ಲಿ ಊಹ ಮಾಡುವುದಕ್ಕೆ ಆಗುವುದಿಲ್ಲ. ಆದರೆ ಅಪೂರ್ವವನ್ನು ಒಪ್ಪುವುದಾದರೆ ಮಾತ್ರ ಅಪೂರ್ವವು ಸೌರ್ಯಾದಿವಿಕೃತಿಯಾಗಗಳಲ್ಲಿಯೂ ಇರುವುದರಿಂದ ಅಲ್ಲಿಯೂ ಪ್ರಯಾಜಗಳೇ ಮೊದಲಾದವುಗಳನ್ನು ಊಹೆ ಮಾಡುವುದು ಸರಿಯಾಗುತ್ತದೆ. ಆದುದರಿಂದ ಯಾಗದ ಫಲವನ್ನೀಯುವುದು ಅಪೂರ್ವವೇ ವಿನಃ ದೇವತೆಯಲ್ಲವೆಂದು ಜೈಮಿನಿಮಹರ್ಷಿಯ ಸೂತ್ರಗಳಂತೆ ಪೂರ್ವಮೀಮಾಂಸಾಶಾಸ್ತ್ರದ ಸಿದ್ಧಾಂತ. ಹೀಗೆ ದೇವತೆಗಳಿಗೆ ವಿಗ್ರಹವೇ ಮೊದಲಾದವುಗಳು ಇಲ್ಲವಾದುದರಿಂದ ವಿಗ್ರಹವೇ ಇಲ್ಲದ

ದೇವತೆಗಳಿಗೆ ಯಾಗಾಧಿಕಾರವು ಬರುವುದಿಲ್ಲವೆಂಬುದು ಪೂರ್ವಮೀಮಾಂಸೆಯ ಸಿದ್ಧಾಂತ.

ಈ ವಿಷಯದಲ್ಲಿ ಉತ್ತರಮೀಮಾಂಸಾಶಾಸ್ತ್ರದ ಅಭಿಪ್ರಾಯವು ಹೀಗಿದೆ. ಜೈಮಿನಿ ಮಹರ್ಷಿಯ ಈ ಮತವನ್ನು ಬಾದರಾಯಣರು (ವ್ಯಾಸರು) ಪೂರ್ವಪಕ್ಷವನ್ನಾಗಿಟ್ಟುಕೊಂಡು ದೇವತೆಗಳಿಗೆ ಯಾಗಾಧಿಕಾರವಿದೆಯೆಂದು ತಿಳಿಸಿರುತ್ತಾರೆ. ಅಲ್ಲಿಯ ಪೂರ್ವಪಕ್ಷಸೂತ್ರವು ಹೀಗಿದೆ : 'ಮಧ್ವಾದಿಷ್ವಸಂಭವಾದನಧಿಕಾರಂ ಜೈಮಿನಿಃ' (ಬ್ರ.ಸೂ. 1.3.31) ಈ ಸೂತ್ರದ ಅಭಿಪ್ರಾಯವಿದು : ಛಾಂದೋಗ್ಯೋಪನಿಷತ್ತಿನಲ್ಲಿ ಮಧುವಿದ್ಯೆಯನ್ನು ಹೇಳಿರುತ್ತಾರೆ. ಆದಿತ್ಯನನ್ನು ಮಧುವೆಂದು ಉಪಾಸನೆ ಮಾಡಬೇಕು. ವಸುಗಳೂ, ರುದ್ರರೂ, ಆದಿತ್ಯರೂ ಮರುತರೂ ಮತ್ತು ಸಾಧ್ಯರೂ ಸುತ್ತುವರಿದು ಆ ಮಧುವನ್ನು ಸೇವಿಸುತ್ತಾರೆ. ಆ ಮಧುವಿದ್ಯೆಯಲ್ಲಿ ಮನುಷ್ಯರಿಗೆ ಅಧಿಕಾರವಿದೆಯೆಂದು ಹೇಳಬಹುದು. ಏಕೆಂದರೆ ಮನುಷ್ಯರು ಈ ಉಪಾಸನೆಯಿಂದ ವಸುವೇ ಮೊದಲಾದ ದೇವತೆಗಳ ಮಹಿಮೆಯನ್ನು ಹೊಂದುತ್ತಾರೆ ಎಂದು ಹೇಳಬಹುದು. ದೇವತೆಗಳಿಗೆ ಈ ವಿದ್ಯೆಯಲ್ಲಿ ಅಧಿಕಾರವಿದೆಯೆಂದಾದರೆ ವಸುಗಳೇ ಯಾವ ಬೇರೆ ವಸುಗಳ ಮಹಿಮೆಯನ್ನು ಹೊಂದಬೇಕು? ಆದಿತ್ಯನು ಬೇರೆ ಯಾವ ಆದಿತ್ಯನನ್ನು ಸೇವಿಸಬೇಕು? ಆದುದರಿಂದ ಈ ಮಧೂಪಾಸನೆಯಲ್ಲಿ ದೇವತೆಗಳಿಗೆ ಅಧಿಕಾರವಿಲ್ಲ. ಅಲ್ಲದೆ ಆದಿತ್ಯನೆಂಬ ವಿಗ್ರಹವುಳ್ಳ, ಚೇತನವುಳ್ಳ ದೇವತೆಯೇ ಇಲ್ಲ. ಒಮ್ಮೆ ಹಾಗಿದ್ದರೆ ವಿಗ್ರಹವಿರುವ ದೇವತೆಗಳು ಏಕಕಾಲದಲ್ಲಿ ಎಷ್ಟು ಯಜಮಾನರ ಯಾಗಗಳಿಗೆ ಹೋಗಬಲ್ಲರು? ಆದುದರಿಂದ 'ವಜ್ರಹಸ್ತಃ ಪುರಂದರಃ' ಮೊದಲಾದ ವಾಕ್ಯಗಳಿಂದ ಉಂಟಾಗುವ ಜ್ಞಾನದ ಸ್ವರೂಪವೇ ಭಿನ್ನವಾದ ರೀತಿಯದಾಗಿರುತ್ತದೆ. ಶಬ್ದದಿಂದ ಹೇಳಲ್ಪಡುವ ವಸ್ತುವು ವಾಸ್ತವವಾಗಿ ಇಲ್ಲದಿದ್ದರೂ ಶಬ್ದದಿಂದ ಉಂಟಾಗುವ ಜ್ಞಾನಕ್ಕೆ ವಿಕಲ್ಪಜ್ಞಾನವೆನ್ನುತ್ತಾರೆ.

'ಶಬ್ದಜ್ಞಾನಾನುಪಾತೀ ವಸ್ತುಶೂನ್ಯೋ ವಿಕಲ್ಪಃ' (ಯೋಗಸೂತ್ರ 1-9) 'ವಜ್ರಹಸ್ತಃ' ಮುಂತಾದ ವಾಕ್ಯಗಳಿಂದ ಬರುವ ಜ್ಞಾನವು ಈ ರೀತಿಯದಾಗಿರುತ್ತದೆ. ಆದುದರಿಂದ

'ಅಗ್ನೇ ಯಷ್ಟುರಿದಂ ನಮಃ' 'ಅಗ್ನಿರ್ವೈ ದೇವಾನಾಂ ಯಷ್ಟಾ'

ಮುಂತಾದ ವಾಕ್ಯಗಳ ಬಲದಿಂದ ದೇವತೆಗಳಿಗೆ ಯಾಗಾಧಿಕಾರವಿದೆಯೆಂದು ಹೇಳಲಾಗದು.

ಇಲ್ಲಿಯ ಸಿದ್ಧಾಂತ ಹೀಗಿದೆ. ಅರ್ಥವಾದ, ಇತಿಹಾಸ, ಪುರಾಣ, ಯೋಗಿಪ್ರತ್ಯಕ್ಷ

ಮತ್ತು ಲೋಕಪ್ರಸಿದ್ಧಿಗಳಿಂದ ದೇವತೆಗಳಿಗೆ ವಿಗ್ರಹಾದಿಗಳಿರುವುದು ಸಿದ್ಧವಾಗುತ್ತದೆ. ಮೂರು ಬಗೆಯ ಅರ್ಥವಾದಗಳಲ್ಲಿ ಭೂತಾರ್ಥವಾದಗಳಿಗೆ ಸ್ತುತಿಯಲ್ಲಿಯೇ ತಾತ್ಪರ್ಯವಿರುವುದಾದರೂ, ಅವುಗಳಿಗೆ ತಾವು ತಿಳಿಸುವ ಅರ್ಥದಲ್ಲಿಯೂ ಪ್ರಾಮಾಣ್ಯವಿದೆ.

'ಪ್ರಜಾಪತಿರ್ದೇವೇಭ್ಯೋ ಯಜ್ಞಾನ್ ವ್ಯಾದಿಶತ್ ।

ಮುಂತಾದವುಗಳು ಈ ರೀತಿಯವು. ಹಾಗೆಯೇ ಮಂತ್ರಗಳೂ, ಪುರಾಣ-ಇತಿಹಾಸಗಳೂ ದೇವತೆಗಳಿಗೆ ವಿಗ್ರಹಾದಿಗಳು ಉಂಟೆಂದು ತಿಳಿಸುತ್ತವೆ. ಯೋಗಸೂತ್ರದಲ್ಲಿ ಯೋಗಿಪ್ರತ್ಯಕ್ಷದ ವಿಷಯವನ್ನೂ ಹೇಳಿರುತ್ತಾರೆ. ದೇವತೆಗಳ ಚಿತ್ರವನ್ನು ಬರೆಯುವ ಕ್ರಮವೂ ಲೋಕದಲ್ಲಿ ಪ್ರಸಿದ್ಧವಾಗಿಯೇ ಇದೆ. ದೇವತೆಗಳಿಗೆ ಯಾಗಾಧಿಕಾರವಿದ್ದರೆ ಅವರು ಇನ್ನಾವ ದೇವತೆಗಳನ್ನು ಉದ್ದೇಶಿಸಿ ಹೋಮ ಮಾಡಬೇಕೆಂಬ ಆಕ್ಷೇಪಕ್ಕೆ ಈ ಉತ್ತರ ನೀಡಬಹುದು. ಈ ಮನ್ವಂತರದ ಇಂದ್ರನು ಹಿಂದಿನ ಮನ್ವಂತರದ ಇಂದ್ರನನ್ನು ಉದ್ದೇಶಿಸಿ ಹೋಮವನ್ನು ಮಾಡಬಹುದು. ಓಷಧಿ ವನಸ್ಪತಿಗಳು ಅಚೇತನಗಳಾದರೂ ಆ ವಸ್ತುಗಳ ಅಭಿಮಾನಿದೇವತೆಗಳನ್ನು ಉದ್ದೇಶಿಸಿ ಹೋಮ ಮಾಡುವುದು ಯುಕ್ತವೇ ಆಗುತ್ತದೆ. 'ಅಭಿಮಾನಿವ್ಯಪದೇಶಸ್ತು ವಿಶೇಷಾನುಗತಿಭ್ಯಾಮ್' (ಬ್ರ.ಸೂ. 2.1.5) ಎಂಬುದಾಗಿ ಬಾದರಾಯಣರು ಈ ವಿಷಯವನ್ನು ಹೇಳಿರುತ್ತಾರೆ. ಅಲ್ಲದೆ ದೇವತೆಗಳಿಗೆ ಅರ್ಥಿತ್ವವೂ, ವಿದ್ಯೆಯೂ ಇರುವುದರಿಂದ ಅವರೂ ಯಜ್ಞದಲ್ಲಿ ಅಧಿಕಾರಿಗಳಾಗಬಹುದು. ಹೀಗೆ ಉತ್ತರಮೀಮಾಂಸಾಸೂತ್ರದಂತೆ ಸಿದ್ಧಾಂತವಿರುತ್ತದೆ.

೨) ದೇವತೆಗಳಿಗೆ ಋತ್ವಿಜರಾಗಲು ಅಧಿಕಾರವುಂಟೇ?

ವಿದ್ಯೆಯನ್ನು ತಿಳಿದ ತ್ರೈವರ್ಣಿಕರಿಗೆ ಮಾತ್ರ ಋತ್ವಿಜರಾಗಲು ಅಧಿಕಾರವಿರುತ್ತದೆಯೆಂಬುದು ಇಲ್ಲಿನ ಪೂರ್ವಪಕ್ಷ.

ಇಲ್ಲಿ ಪೂರ್ವಮೀಮಾಂಸಾಸಿದ್ಧಾಂತವು ಹೀಗಿದೆ :

'ಪ್ರತಿಗ್ರಹೋಽಧಿಕೋ ವಿಪ್ರೇ ಯಾಜನಾಧ್ಯಾಪನೇ ತಥಾ'

(ಯಾಜ್ಞವಲ್ಕ್ಯಸ್ಮೃತಿ 1-118)

[ಬ್ರಾಹ್ಮಣನಿಗೆ ಪ್ರತಿಗ್ರಹವೂ, ಯಾಜನವೂ ಮತ್ತು ಅಧ್ಯಾಪನವೂ ಇರುತ್ತದೆ.] ಎಂಬ ಸ್ಮೃತಿವಾಕ್ಯದಂತೆಯೂ 'ಬ್ರಾಹ್ಮಣಾನಾಮಾರ್ತ್ವಿಜ್ಯಮ್' (ಆಪಸ್ತಂಬ ಪರಿಭಾಷಾ

1-1-23) ಎಂಬ ವಚನದಂತೆಯೂ ಬ್ರಾಹ್ಮಣರಿಗೆ ಋತ್ವಿಕ್ತ್ವವು ಹೇಳಲ್ಪಟ್ಟಿದೆ. ಬೇರೆಯವರಿಗೆ ಇರುವುದಿಲ್ಲ. ಆದುದರಿಂದ ದೇವತೆಗಳಿಗೆ ಅಧಿಕಾರವಿರುವುದಿಲ್ಲ.

ಆದರೆ ಉತ್ತರಮೀಮಾಂಸಾಸಿದ್ಧಾಂತದಂತೆ ದೇವತೆಗಳಿಗೆ ಋತ್ವಿಜರಾಗಲು ಅಧಿಕಾರವಿದೆ. ಏಕೆಂದರೆ ದೇವತೆಗಳಿಗೆ ಈ ವರ್ಣಾಶ್ರಮಧರ್ಮಗಳು ಅನ್ವಯಿಸುವುದಿಲ್ಲ.

'ಅಗ್ನಿರ್ ಹೋತಾ' 'ಅಶ್ವಿನಾಧ್ವರ್ಯೂ'

ಎಂಬ ಶ್ರುತಿವಾಕ್ಯಗಳೇ ದೇವತೆಗಳಿಗೆ ಋತ್ವಿಜರಾಗಲು ಅಧಿಕಾರವಿದೆಯೆಂಬುದಕ್ಕೆ ಪ್ರಮಾಣಗಳಾಗುತ್ತವೆ.

'ತಂ ಧಾತಾಽಽಧತ್ತ' 'ಪೂಷಾಽಽಧತ್ತ'



ಮೊದಲಾದ ವೇದವಾಕ್ಯಗಳಿಂದ ದೇವತೆಗಳು ಆಧಾನವನ್ನು ಮಾಡಿದಂತೆಯೂ ತಿಳಿದುಬರುತ್ತದೆ. ಹೀಗೆ ವಿದ್ಯೆಯುಳ್ಳ, ಪ್ರಭಾವವುಳ್ಳ, ಮತ್ತು ಅರ್ಥಿತ್ವವುಳ್ಳ ದೇವತೆಗಳಿಗೆ ಯಾಗಾಧಿಕಾರವೂ, ಋತ್ವಿಜರಾಗುವ ಅಧಿಕಾರವೂ ಇವೆ. ಆದುದರಿಂದ

'ಅಗ್ನಿರ್ವೈ ದೇವಾನಾಂ ಹೋತಾ' ಎಂದು ಹೇಳುವುದೂ ಯುಕ್ತವಾಗಿಯೇ ಇದೆ.

೩) ಅಗ್ನಿಹೋತ್ರ, ಆಘಾರ ಇವು ನಾಮಧೇಯವೇ? ದ್ರವ್ಯ-ದೇವತಾವಿಧಿಯೇ?

'ಅಗ್ನಿಹೋತ್ರಂ ಜುಹೋತಿ' 'ಆಘಾರಮಾಘಾರಯತಿ' ಮುಂತಾದ ವಾಕ್ಯಗಳು ವಿಷಯವಾಕ್ಯಗಳು.'ಅಗ್ನಿಹೋತ್ರ' 'ಆಘಾರ' ಇವುಗಳು ಕರ್ಮಗಳ ನಾಮಧೇಯವೇ? ಅಥವಾ ದ್ರವ್ಯ-ದೇವತಾವಿಧಿಯೇ? ಎಂದು ಸಂಶಯ. 'ಅಗ್ನಿಹೋತ್ರಂ ಜುಹೋತಿ' ಎಂಬ ವಾಕ್ಯದಲ್ಲಿ 'ಜುಹೋತಿ' ಎಂಬ ಪದವಿರುವುದರಿಂದ ಇದು ದರ್ವೀಹೋಮ. ಈ ಹೋಮಕ್ಕೆ ಅಗ್ನಿಯು ದೇವತೆ ಎಂಬ ಗುಣವಾಗಿ ವಿಹಿತವಾಗಿರುವುದರಿಂದ ಇದು ಗುಣವಿಧಿಯೆನಿಸುತ್ತದೆ. ಹಾಗೆಯೇ 'ಆಘಾರಮಾಘಾರಯತಿ' ಎಂಬ ವಾಕ್ಯದಲ್ಲಿ 'ಆಘಾರ' ಎಂಬ ಶಬ್ದವು 'ಘೃ-ಕ್ಷರಣದೀಪ್ತ್ಯೋಃ' [ಅದಾದಿ. ಪರಸ್ಮೈಪದೀ] ಎಂಬ ಧಾತುವಿನಿಂದ ನಿಷ್ಪನ್ನವಾದುದರಿಂದ ಆಜ್ಯಕ್ಕೆ ಕ್ಷರಣರೂಪ ಸಂಸ್ಕಾರವನ್ನು ಮಾಡಬೇಕು ಎಂಬ ಕ್ಷರಣ ಸಂಸ್ಕಾರವಿಧಿವಾಕ್ಯವಿದಾಗಿದೆ. ಇಂತಹ ಸಂಸ್ಕಾರದಿಂದ ಸಂಸ್ಕೃತವಾದ ಆಜ್ಯವನ್ನು

ಉಪಾಂಶುಯಾಜಯಾಗದಲ್ಲಿ ವಿನಿಯೋಗಿಸಲಾಗುವುದು. ಆದುದರಿಂದ 'ಅಗ್ನಿಹೋತ್ರ' 'ಆಘಾರ' ಇವು ಕರ್ಮನಾಮಧೇಯಗಳಲ್ಲ. ಬದಲಾಗಿ ಇವು ಗುಣ ಮತ್ತು ಸಂಸ್ಕಾರಗಳ ವಿಧಾಯಕಗಳು. ಇದು ಇಲ್ಲಿನ ಪೂರ್ವಪಕ್ಷ.

ಇಲ್ಲಿಯ ಸಿದ್ಧಾಂತಪಕ್ಷವು ಹೀಗಿದೆ. 'ಅಗ್ನಿರ್ಜ್ಯೋತಿರ್ಜ್ಯೋತಿರಗ್ನಿಃ ಸ್ವಾಹಾ' ಎಂಬ ಮಂತ್ರದಿಂದ ದರ್ವೀಹೋಮಕ್ಕೆ ದೇವತೆಯು ಪ್ರಾಪ್ತವಾಗಿರುವುದರಿಂದ 'ಅಗ್ನಿಹೋತ್ರಂ ಜುಹೋತಿ' ಎಂಬ ವಾಕ್ಯವು ದೇವತಾವಿಧಾಯಕವೆಂದು ಹೇಳುವಂತಿಲ್ಲ. ಆದುದರಿಂದ ಸಾಯಂ ಪ್ರಾತಃಕಾಲಗಳಲ್ಲಿ, ಅಗ್ನಿ ಮತ್ತು ಸೂರ್ಯದೇವತೆಗಳನ್ನುದ್ದೇಶಿಸಿ ಅನುಷ್ಠಿಸಬೇಕಾದ ಕರ್ಮಕ್ಕೆ 'ಅಗ್ನಿಹೋತ್ರ' ಎಂದು ಯೌಗಿಕವಾದ ಹೆಸರಾದುದರಿಂದ ಇದು ಕರ್ಮನಾಮಧೇಯ.

'ಆಘಾರಮಾಘಾರಯತಿ' ಎಂಬ ವಾಕ್ಯದಿಂದ ಆಘಾರಹೋಮಕ್ಕೆ ಆಜ್ಯವು ದ್ರವ್ಯವೆಂಬುದನ್ನು ತಿಳಿಯಬೇಕಿಲ್ಲ. 'ಚತುರ್ಗೃಹೀತಂ ವಾ ಏತದಭೂತ್, ತಸ್ಯಾಘಾರಮಾಘಾರ್ಯ' ಎಂಬ ವಾಕ್ಯದಿಂದ ಆಘಾರಹೋಮಕ್ಕೆ ಆಜ್ಯದ್ರವ್ಯವು ಪ್ರಾಪ್ತವಾಗುವುದರಿಂದ ಇಲ್ಲಿ ಆಜ್ಯವಿಧಿಯಲ್ಲ. ಆದುದರಿಂದ ಆಘಾರವೆಂಬುದು ಕರ್ಮನಾಮಧೇಯವೇ ಆಗಿದೆ. ಕ್ರಿಯಾವಾಚಿಗಳಾದ 'ಅಗ್ನಿಹೋತ್ರಹೋಮ' 'ಆಘಾರಹೋಮ' ಇವುಗಳೂ ಕರ್ಮನಾಮಧೇಯಗಳಾಗಿವೆ. ಅನುಷ್ಠಾನಕ್ಕೆ ಮೊದಲು ಧಾತ್ವರ್ಥವು (ಹೋಮವು) ಅಸಿದ್ಧವಾಗಿರುವುದರಿಂದ, ಸಾಧ್ಯಾಂಶವನ್ನು ಸೂಚಿಸಲು 'ಅಗ್ನಿಹೋತ್ರಮ್' 'ಆಘಾರಮ್' ಎಂಬುದಾಗಿ ದ್ವಿತೀಯಾವಿಭಕ್ತಿಯು ಯುಕ್ತವಾಗಿಯೇ ಇದೆ. 'ದಧ್ನಾ ಜುಹೋತಿ' 'ಪಯಸಾ ಜುಹೋತಿ' ಮುಂತಾದ ವಾಕ್ಯಗಳು ಅಗ್ನಿಹೋತ್ರದಲ್ಲಿ ದ್ರವ್ಯವಿಧಿಗಳಾಗುತ್ತವೆ. ಆದುದರಿಂದ 'ಅಗ್ನಿಹೋತ್ರಂ ಜುಹೋತಿ' 'ಆಘಾರಮಾಘಾರಯತಿ' ಮೊದಲಾದ ವಾಕ್ಯಗಳು ಹೋಮವಿಧಿಗಳು, ಗುಣವಿಧಿಗಳಲ್ಲ. ಗುಣವಿಶಿಷ್ಟಹೋಮವಿಧಿಗಳೂ ಅಲ್ಲ. 'ಅಗ್ನಿಹೋತ್ರ' 'ಆಘಾರ' ಎಂಬುದು ಕರ್ಮನಾಮಧೇಯ.

**೪) ವಾಯವ್ಯಪಶುವಿನ ಸಂದರ್ಭದ ಆಘಾರವು ಮೊದಲನೆಯದೇ? ಎರಡನೆಯದೇ?**

ವಾಯವ್ಯಪಶುವಿನಲ್ಲಿ (ಚಯನ)

'ಹಿರಣ್ಯಗರ್ಭಃ ಸಮವರ್ತತಾಗ್ರ ಇತ್ಯಾಘಾರಮಾಘಾರಯತಿ'

ಎಂಬ ವಾಕ್ಯವಿದೆ. ಈ ಮಂತ್ರದಿಂದ ಮಾಡಬೇಕಾದ ಆಘಾರವು ಪ್ರಥಮಾಘಾರ

ದಲ್ಲಿಯೇ? ಅಥವಾ ದ್ವಿತೀಯಾಘಾರದಲ್ಲಿಯೇ? ಎಂದು ಸಂಶಯ. ಮೊದಲನೆಯ ಆಘಾರಕ್ಕೆ ಪ್ರಕೃತಿಯಾಗದಲ್ಲಿ ಪ್ರಜಾಪತಿಯು ದೇವತೆಯಾದುದರಿಂದ

'ಪ್ರಜಾಪತಿರ್ವೈ ಹಿರಣ್ಯಗರ್ಭಃ'

ಎಂಬ ಇನ್ನೊಂದು ಶ್ರುತಿವಾಕ್ಯದಿಂದ ಪ್ರಜಾಪತಿಯೂ, ಹಿರಣ್ಯಗರ್ಭನೂ ಒಂದೇ ಆಗಿರುವುದರಿಂದ ಈ ಮಂತ್ರವು ಪ್ರಥಮಾಘಾರದ ಮಂತ್ರವಾಗಿರುವುದೇ ಉಚಿತ. ದ್ವಿತೀಯಾಘಾರಕ್ಕೆ ಇಂದ್ರನು ದೇವತೆಯಾದುದರಿಂದ ಅಲ್ಲಿ ಈ ಮಂತ್ರವು ಹೊಂದುವುದಿಲ್ಲ ಎಂಬುದು ಇಲ್ಲಿನ ಪೂರ್ವಪಕ್ಷ.

ಇಲ್ಲಿಯ ಸಿದ್ಧಾಂತವು ಹೀಗಿದೆ : ಈ ಸಂದರ್ಭದ ಪ್ರಥಮಾಘಾರವು ಅಮಂತ್ರಕ. 'ತೂಷ್ಣೀಮಾಘಾರಮಾಘಾರಯತಿ' ಎಂಬ ವಾಕ್ಯದಂತೆಯೂ, 'ಪ್ರಜಾಪತಿಂ ಮನಸಾ ಧ್ಯಾಯನ್' ಎಂಬ ವಾಕ್ಯದಂತೆಯೂ ಧ್ಯಾನಮಾತ್ರವೇ ಅಲ್ಲಿ ವಿಹಿತವಾಗಿರುವುದರಿಂದ ಮೊದಲನೆಯ ಆಘಾರಕ್ಕೆ ಮಂತ್ರವಿರುವುದಿಲ್ಲ. ಪ್ರಕೃತಿಯಲ್ಲಿ ಮಂತ್ರವಿಲ್ಲದುದರಿಂದ ವಿಕೃತಿಯಲ್ಲಿ ಹೊಸದಾಗಿ ವಿಧಿಸಬೇಕಾಗುತ್ತದೆ. ಉತ್ತರಾಘಾರದಲ್ಲಿ ಮಂತ್ರವಿರುವುದರಿಂದ ಪ್ರಾಕೃತಿಕಮಂತ್ರವಾದ ಐಂದ್ರಮಂತ್ರದ ಸ್ಥಾನದಲ್ಲಿ ಹಿರಣ್ಯಗರ್ಭಮಂತ್ರದ ವಿಧಿಯು ಯುಕ್ತವಾಗುತ್ತದೆ. 'ಪ್ರಜಾನಾಂ ಪತಿಃ = ಪ್ರಜಾಪತಿಃ' ಎಂಬ ಅರ್ಥವ್ಯುತ್ಪತ್ತಿಯಂತೆ ಇಂದ್ರನೂ ಸಹ ಪ್ರಜಾಪತಿಯೇ. ಆದುದರಿಂದ

'ಪ್ರಜಾಪತಿರ್ವೈ ಹಿರಣ್ಯಗರ್ಭಃ'

ಎಂಬ ಶ್ರುತಿವಾಕ್ಯದ ವಿರೋಧವೂ ಇಲ್ಲ. ಹೀಗಾಗಿ ವಾಯುವ್ಯಪಶುವಿನ ಸಂದರ್ಭದ ಆಘಾರವು ದ್ವಿತೀಯಾಘಾರವೇ. ಪ್ರಥಮಾಘಾರವಲ್ಲ.

೫) 'ಮಾ ಮಾ ಸಂತಾಪ್ತಮ್' ಎಂಬಲ್ಲಿಯ ಸಂತಾಪಾಭಾವವು ಯಾರಿಗೆ?

ಆಘಾರಹೋಮವನ್ನು ಮಾಡುವಾಗ ಅಧ್ವರ್ಯುವು ಅಗ್ನಿ ಮತ್ತು ವಿಷ್ಣುವನ್ನು

'ಮಾ ಮಾ ಸಂತಾಪ್ತಮ್'

[ನನ್ನನ್ನು ಸಂತಾಪಗೊಳಿಸದಿರಿ] ಎಂದು ಪ್ರಾರ್ಥಿಸುತ್ತಾನೆ. ಪೂರ್ವಮೀಮಾಂಸಾ

ಶಾಸ್ತ್ರದಲ್ಲಿ ಈ ವಿಚಾರವನ್ನು ಮಾಡಿರುವ ಅಧಿಕರಣದ ಹಿಂದಿನ ಅಧಿಕರಣದಲ್ಲಿ-

'ಮಮಾಗ್ನೇ ವರ್ಚಃ'

ಎಂಬ ಮಂತ್ರದಲ್ಲಿರುವ ಮಮ ಎಂಬ ಶಬ್ದವು ಮಮ = ಯಜಮಾನಸ್ಯ ಎಂಬ ಅರ್ಥದಲ್ಲಿದೆ. ಏಕೆಂದರೆ ಸಂಪೂರ್ಣಯಜ್ಞಫಲಕ್ಕೆ ಯಜಮಾನನೇ ಸ್ವಾಮಿಯೆಂದು -ಹೇಳಿದೆ. ಅದರಂತೆ ಇಲ್ಲಿಯೂ ಸಹ ಸಂತಾಪಾಭಾವವು ಯಜಮಾನನಿಗೆ ಸಂಬಂಧಿಸಿದುದು ಎಂಬುದು ಇಲ್ಲಿನ ಪೂರ್ವಪಕ್ಷ.

ಇಲ್ಲಿಯ ಸಿದ್ಧಾಂತವು ಹೀಗಿದೆ: ಅಧ್ವರ್ಯುವು ಆಘಾರಹೋಮವನ್ನು ಮಾಡುವಾಗ ಅಗ್ನಿಯಿಂದ ತಪ್ತನಾದರೆ ಸಂತಾಪಗೊಳ್ಳುವನು. ಅಧ್ವರ್ಯುವು ಸಂತಾಪ ಹೊಂದಿದರೆ ಯಜಮಾನನ ಯಾಗವು ಸರಿಯಾಗಿ ನಡೆಯಲಾರದು. ಯಾಗವು ಸರಿಯಾಗಿ ನಡೆಯದಿದ್ದರೆ ಯಜಮಾನನಿಗೆ ಫಲವು ಹೇಗೆ ದೊರೆಯಲು ಸಾಧ್ಯ? ಆದುದರಿಂದ ಅಧ್ವರ್ಯುವು ಸಂತಾಪರಹಿತನಾಗಿರುವುದು ಯಜಮಾನನ ಯಾಗಕ್ಕೆ ಉಪಕಾರಕವೇ ಆದುದರಿಂದ ಅಧ್ವರ್ಯುವು ಈ ಸಂದರ್ಭದಲ್ಲಿ ಹೇಳುವ



'ಮಾ ಮಾ ಸಂತಾಪ್ತಮ್'

ಎಂಬ ಮಂತ್ರದಲ್ಲಿ ವ್ಯಕ್ತವಾಗಿರುವ ಸಂತಾಪಾಭಾವವು ಅಧ್ವರ್ಯುವಿಗೇ ಸಂಬಂಧಿಸಿದ್ದಾಗಿರುತ್ತದೆ.

ಈ ಹನ್ನೆರಡನೆಯ ಅನುವಾಕದಲ್ಲಿ ಆಘಾರಹೋಮವು ಹೇಳಲ್ಪಟ್ಟಿದೆ. ಇದಾದ ನಂತರ ಐದು ಪ್ರಯಾಜಗಳು. ಎರಡು ಆಜ್ಯಭಾಗಗಳು, ಮೂರು ಪ್ರಧಾನಯಾಗಗಳು, ಒಂದು ಸ್ವಿಷ್ಟಕೃತ್ ಯಾಗ, ಇಡಾಭಾಗಭಕ್ಷಣ ಮತ್ತು ಮೂರು ಅನೂಯಾಜಗಳು ಇವುಗಳ ಅನುಷ್ಠಾನವಿದೆ.ಇವುಗಳಿಗೆ ಸಂಬಂಧಿಸಿದ ಮಂತ್ರಗಳು ಹೋತೃವಿನದಾದುದರಿಂದ ಈ ಅಧ್ವರ್ಯುಕಾಂಡದಲ್ಲಿ ಅವುಗಳನ್ನು ಹೇಳಿಲ್ಲ. ಬಳಿಕ ಮಾಡಬೇಕಾದ ಸ್ರುಗ್ವ್ಯೂಹನ ಮೊದಲಾದ ಕರ್ಮಗಳ ಮಂತ್ರಗಳು ಅಧ್ವರ್ಯುವಿಗೆ ಸಂಬಂಧಿಸಿದುದರಿಂದ ಮುಂದಿನ ಅನುವಾಕದಲ್ಲಿ ಅವುಗಳು ಹೇಳಲ್ಪಟ್ಟಿವೆ.

---

## ॥ ತ್ರಯೋದಶೋऽನುವಾಕಃ ॥

**ವಾಜಸ್ಯ ಮಾ ಪ್ರಸವೇನೋದ್ಗ್ರಾಭೇಣೋದಗ್ರಭೀತ್ ।**

**ಅಥಾ ಸಪತ್ನಾಗ್^ಂ ಇಂದ್ರೋ ಮೇ ನಿಗ್ರಾಭೇಣಾಧರಾಗ್^ಂ**

---

ವಾಜಸ್ಯ । ಮಾ । ಪ್ರಸವೇನೇತಿ ಪ್ರ-ಸವೇನ । ಉದ್ಗ್ರಾಭೇಣೇತ್ಯುತ್-ಗ್ರಾಭೇಣ ।

ಉದಿತಿ। ಅಗ್ರಭೀತ್ ॥ ಅಥ । ಸಪತ್ನಾನ್ । ಇಂದ್ರಃ । ಮೇ । ನಿಗ್ರಾಭೇಣೇತಿ ನಿ-ಗ್ರಾಭೇಣ।



---

| ಮಂತ್ರ | ವಿನಿಯೋಗ |
|---|---|
| ವಾಜಸ್ಯ............ವ್ಯಸ್ಯತಾಮ್ | |
| ವಾಜಸ್ಯ.......ಅಗ್ರಭೀತ್ । [ಅರ್ಧರ್ಚ] | ಸ್ರುಕ್ ಅನ್ನು ಮೇಲೆತ್ತಲು |
| ಅಥಾ..........ಅಕಃ । [ಅರ್ಧರ್ಚ] | ಉಪಭೃತ್ ಅನ್ನು ಕೆಳಗೆ ಹಿಡಿಯಲು |

---

ವಾಜಸ್ಯ = ಅನ್ನಕ್ಕೆ; ಪ್ರಸವೇನ = ಉತ್ಪತ್ತಿಕಾರಣವಾದ; ಉದ್ಗ್ರಾಭೇಣ = ಬಲಮುಷ್ಟಿಯಿಂದ; [ಜುಹುವನ್ನು ಮೇಲಕ್ಕೆ ಎತ್ತುವುದರಿಂದ] [ಇಂದ್ರಃ = ಇಂದ್ರನು] ಮಾ = ನನ್ನನ್ನು; ಉದಗ್ರಭೀತ್ = ಇಲ್ಲಿಂದ ಮೇಲಕ್ಕೆ ಎತ್ತಲಿ. +ಅಥ = ಅನಂತರದಲ್ಲಿ ನಿಗ್ರಾಭೇಣ = ಎಡಗೈಮುಷ್ಟಿಯಿಂದ [ಉಪಭೃತ್ ಅನ್ನು ಕೆಳಗೆ ಹಿಡಿಯುವುದರಿಂದ] ಇಂದ್ರಃ = ಇಂದ್ರನು; ಮೇ =ನನ್ನ; ಸಪತ್ನಾನ್ = ಶತ್ರುಗಳನ್ನು; ಅಧರಾನ್ = [ನನಗಿಂತ] ನಿಕೃಷ್ಟರನ್ನಾಗಿ; ಅಕಃ = ಮಾಡಲಿ; +ಬ್ರಹ್ಮ = ಪರಬ್ರಹ್ಮವೂ;

---

ಅಧ್ವರ್ಯುವು *ಸ್ರುಗ್ವ್ಯೂಹನವನ್ನು ಮಾಡುತ್ತಾ ಹೀಗೆ ಪ್ರಾರ್ಥಿಸುತ್ತಾನೆ. 'ಈ ಜುಹೂವನ್ನು ಬಲಗೈಯಿಂದ ನಾನು ಮೇಲೆತ್ತುತ್ತೇನೆ. ಇದು ಅನ್ನದ ಉತ್ಪತ್ತಿಗೆ ಕಾರಣವಾದುದು. ಇದರಿಂದ ಇಂದ್ರನು ನನ್ನನ್ನು ಇಲ್ಲಿಂದ ಮೇಲಕ್ಕೆ ಎತ್ತಲಿ (ಎತ್ತಿದನು) (ಅಭಿವೃದ್ಧಿಗೊಳಿಸಲಿ). #ಉಪಭೃತ್ ಅನ್ನು ಎಡಗೈಯಲ್ಲಿ ಹಿಡಿದು ಕೆಳಗೆ ಮಾಡುತ್ತೇನೆ.

---

*ಈ ಸ್ರುಗ್ವ್ಯೂಹನಕ್ಕೆ ಮೊದಲು ಇಡಾಭಕ್ಷಣಾದಿಗಳಿವೆ. ಅದರ ವಿನಿಯೋಗಪ್ರಕಾರವು ತೈತ್ತಿರೀಯ ಬ್ರಾಹ್ಮಣದ ಮೂರನೆಯ ಅಷ್ಟಕದ ಮೂರನೆಯ ಪ್ರಪಾಠಕದಲ್ಲಿದೆ ಅಲ್ಲಿ ಧಿಷ್ಣಿಯಾ ವಾ ಏತೇ ಎಂದು ಆರಂಭ.

ಅಕಃ। ಉದ್ಗ್ರಾಭಂ ಚ ನಿಗ್ರಾಭಂ ಚ ಬ್ರಹ್ಮ ದೇವಾ ಅವೀ

ವೃಧನ್ । ಅಥಾ ಸಪತ್ನಾನಿಂದ್ರಾಗ್ನೀ ಮೇ ವಿಷೂಚೀನಾ

---

ಅಧರಾನ್। ಅಕಃ ॥ ಉದ್ಗ್ರಾಭಮಿತ್ಯುತ್-ಗ್ರಾಭಮ್। ಚ । ನಿಗ್ರಾಭಮಿತಿ ನಿ-ಗ್ರಾಭಮ್।

ಚ । ಬ್ರಹ್ಮ । ದೇವಾಃ । ಅವೀವೃಧನ್ ॥ ಅಥ । ಸಪತ್ನಾನ್ । ಇಂದ್ರಾಗ್ನೀ ಇತೀಂದ್ರ-

ಅಗ್ನೀ । ಮೇ । ವಿಷೂಚೀನಾನ್ ।

---

| ಮಂತ್ರ | ವಿನಿಯೋಗ |
|---|---|
| ಉದ್ಗ್ರಾಭಂ......ಅವೀವೃಧನ್। [ಅರ್ಧರ್ಚ] | ಜುಹೂವನ್ನು ಮುಂದಕ್ಕೆ (ಪೂರ್ವಕ್ಕೆ) ಸರಿಸಲು. |
| ಅಥಾ.......ವ್ಯಸ್ಯತಾಮ್ । [ಅರ್ಧರ್ಚ] | ಉಪಭೃತ್ ಅನ್ನು ಹಿಂದಕ್ಕೆ (ಪಶ್ಚಿಮಕ್ಕೆ) ಸರಿಸಲು. |

---

ದೇವಾಃ = ದೇವತೆಗಳೂ; ಉದ್ಗ್ರಾಭಂ ಚ=[ನನ್ನ] ಉನ್ನತಿಯನ್ನೂ; ನಿಗ್ರಾಭಂ ಚ = (ಶತ್ರುಗಳ) ಅವನತಿಯನ್ನೂ; ಅವೀವೃಧನ್ = ವೃದ್ಧಿಹೊಂದಿಸಲಿ; †ಅಥ = ಅನಂತರ; ಇಂದ್ರಾಗ್ನೀ = ಇಂದ್ರ ಮತ್ತು ಅಗ್ನಿದೇವತೆಗಳು; ಮೇ = ನನ್ನ; ಸಪತ್ನಾನ್ = ವೈರಿಗಳನ್ನು; ವಿಷೂಚೀನಾನ್ = ಸ್ಥಾನಭ್ರಷ್ಟರನ್ನಾಗಿ [ಮಾಡಿ;] ವ್ಯಸ್ಯತಾಮ್ = ಚೆನ್ನಾಗಿ

---

ಇದರಿಂದ ಇಂದ್ರನು ಶತ್ರುಗಳನ್ನು ಕೀಳಾಗಿ ಮಾಡಲಿ (ಮಾಡಿದನು)#.

ಪರಬ್ರಹ್ಮನೂ, ಇಲ್ಲಿಗೆ ಬಂದಿರುವ ದೇವತೆಗಳೂ ನನ್ನ ಉತ್ಕರ್ಷವನ್ನೂ ಶತ್ರುಗಳ ಅವನತಿಯನ್ನೂ ವೃದ್ಧಿಗೊಳಿಸಲಿ (ವೃದ್ಧಿಗೊಳಿಸಿದರು*).

ಬಳಿಕ ಇಂದ್ರಾಗ್ನಿ ದೇವತೆಗಳು ನನ್ನ ಶತ್ರುಗಳನ್ನು ಸ್ಥಾನಭ್ರಷ್ಟರನ್ನಾಗಿ ಮಾಡಿ ದಿಕ್ಕುದಿಕ್ಕಿಗೆ ಚದುರಿ ಹೋಗುವಂತೆ ಮಾಡಲಿ.

---

*ಅಗ್ರಭೀತ್, ಅಕಃ, ಅವಿವೃಧನ್ ಇವುಗಳು ಭೂತಕಾಲದ ಕ್ರಿಯಾಪದಗಳು. ಸಾಯಣರು ಭೂತಕಾಲದ ಅರ್ಥವನ್ನು ಹೇಳಿರುತ್ತಾರೆ. ಮಿಶ್ರರು ಆಶೀರರ್ಥವನ್ನು ತಿಳಿಸಿರುತ್ತಾರೆ.

ನ್ವ್ಯಸ್ಯತಾಮ್ ॥ ವಸುಭ್ಯಸ್ತ್ವಾ ರುದ್ರೇಭ್ಯಸ್ತ್ವಾದಿತ್ಯೇಭ್ಯ

ಸ್ತ್ವಾಕ್ತಗ್‍ಂ ರಿಹಾಣಾ ವಿಯಂತು ವಯಃ । ಪ್ರಜಾಂ

---

ವೀತಿ । ಅಸ್ಯತಾಮ್ ॥ ವಸುಭ್ಯ ಇತಿ ವಸು-ಭ್ಯಃ। ರುದ್ರೇಭ್ಯಃ । ತ್ವಾ । ಆದಿತ್ಯೇಭ್ಯಃ।

ತ್ವಾ ।* ಅಕ್ತಮ್ । ರಿಹಾಣಾಃ । ವಿಯಂತು । ವಯಃ*॥ ಪ್ರಜಾಮಿತಿ ಪ್ರ-ಜಾಮ್।

---

| ಮಂತ್ರ | ವಿನಿಯೋಗ |
|---|---|
| ವಸುಭ್ಯಸ್ತ್ವಾ...ಆದಿತ್ಯೇಭ್ಯಸ್ತ್ವಾ । | ಜುಹೂವಿನ ಆಜ್ಯದಿಂದ ಕ್ರಮವಾಗಿ ಮಧ್ಯಮ ಪರಿಧಿ, ದಕ್ಷಿಣಪರಿಧಿ ಮತ್ತು ಉತ್ತರಪರಿಧಿಗಳ ಅಂಜನಕ್ಕಾಗಿ. (ಲೇಪ) |
| ೧) ಅಕ್ತಗ್‍ಂ ರಿಹಾಣಾಃ । | ಪ್ರಸ್ತರದ ಅಗ್ರಗಳನ್ನು ಜುಹೂವಿನಲ್ಲಿ ಅಂಜನ ಮಾಡಲು —ಬೌಧಾಯನ. |
| ೨) ಅಕ್ತಗ್‍ಂ...........ವಯಃ । | ಪ್ರಸ್ತರದ ಅಗ್ರಗಳನ್ನು ಜುಹುವಿನಲ್ಲಿ ಅಂಜನ ಮಾಡಲು —ಆಪಸ್ತಂಬ |

---

ಚದುರಿ ಹೋಗುವಂತೆ ಮಾಡಲಿ. +[ಎಲೈ ಮಧ್ಯಮಪರಿಧಿಯೇ!] ವಸುಭ್ಯಃ= ವಸುದೇವತೆಗಳಿಗಾಗಿ (ವಸುಗಳ ತೃಪ್ತಿಗಾಗಿ); ತ್ವಾ = ನಿನ್ನನ್ನು; [ಅನಜ್ಮಿ= ಆಜ್ಯದಿಂದ ಲೇಪಿಸುತ್ತೇನೆ] +[ಎಲೈ ದಕ್ಷಿಣಪರಿಧಿಯೇ!]ರುದ್ರೇಭ್ಯಃ=ರುದ್ರದೇವತೆಗಳಿಗಾಗಿ; ತ್ವಾ=ನಿನ್ನನ್ನು; [ಅನಜ್ಮಿ = ಆಜ್ಯಲಿಪ್ತನನ್ನಾಗಿ ಮಾಡುತ್ತೇನೆ] +[ಎಲೈ ಉತ್ತರಪರಿಧಿಯೇ!] ತ್ವಾ = ನಿನ್ನನ್ನು; ಆದಿತ್ಯೇಭ್ಯಃ = ಆದಿತ್ಯದೇವತೆಗಳ ತೃಪ್ತ್ಯರ್ಥವಾಗಿ; [ಅನಜ್ಮಿ= ಆಜ್ಯದಿಂದ ಲಿಪ್ತನನ್ನಾಗಿ ಮಾಡುತ್ತೇನೆ]+ವಯಃ=ಪಕ್ಷಿಗಳು; ಅಕ್ತಮ್=[ಜುಹ್ವಾಜ್ಯದಿಂದ] ಅಕ್ತವಾದ(ಲಿಪ್ತವಾದ)

---

ಎಲೈ ಮಧ್ಯಮಪರಿಧಿಯೇ! ಈ ಜುಹೂವಿನಲ್ಲಿರುವ ಆಜ್ಯದಿಂದ ವಸುದೇವತೆಗಳ ಪ್ರೀತ್ಯರ್ಥವಾಗಿ ನಿನ್ನನ್ನು ಲೇಪಿಸುತ್ತೇನೆ. ✿ಎಲೈ ದಕ್ಷಿಣಪರಿಧಿಯೇ! ರುದ್ರದೇವತೆಗಳ ಪ್ರೀತ್ಯರ್ಥವಾಗಿ ನಿನ್ನನ್ನು ಆಜ್ಯಾಕ್ತನನ್ನಾಗಿ ಮಾಡುತ್ತೇನೆ. ✿ಎಲೈ ಉತ್ತರಪರಿಧಿಯೇ! ಆದಿತ್ಯರ ತೃಪ್ತ್ಯರ್ಥವಾಗಿ ನಿನ್ನನ್ನು ಘೃತಾಕ್ತನನ್ನಾಗಿ ಮಾಡುತ್ತೇನೆ.

---

* * ಆಪಸ್ತಂಬ ಮತ.

**ಯೋನಿಂ ಮಾ ನಿರ್ಮೃಕ್ಷಮಾಪ್ಯಾಯಂತಾಮಾಪ**

**ಓಷಧಯೋ ಮರುತಾಂ ಪೃಷತಯಃ ಸ್ಥ ದಿವಂ [ದಿವಮ್**

**(೧)ಗಚ್ಛ] ಗಚ್ಛ ತತೋ ನೋ ವೃಷ್ಟಿಮೇರಯ ।**

ಯೋನಿಮ್। ಮಾ । ನಿರಿತಿ । ಮೃಕ್ಷಮ್।* ಏತಿ । ಪ್ಯಾಯಂತಾಮ್ । ಆಪಃ । ಓಷಧಯಃ।
ಮರುತಾಮ್। ಪೃಷತಯಃ। ಸ್ಥ। ದಿವಮ್। ಗಚ್ಛ। ತತಃ। ನಃ। ವೃಷ್ಟಿಮ್। ಏತಿ । ಈರಯ*

| ಮಂತ್ರ | ವಿನಿಯೋಗ |
|---|---|
| ೧) ವಿಯಂತು ವಯಃ । | ಪ್ರಸ್ತರದ ಮಧ್ಯವನ್ನು ಉಪಭೃತ್‌ನಲ್ಲಿ ಅಂಜನ ಮಾಡಲು —ಬೌಧಾಯನ |
| ೨) ಪ್ರಜಾಂ.....ನಿರ್ಮೃಕ್ಷಮ್ । | ಪ್ರಸ್ತರದ ಮಧ್ಯವನ್ನು ಉಪಭೃತ್‌ನಲ್ಲಿ ಅಂಜನ ಮಾಡಲು —ಆಪಸ್ತಂಬ |
| ೧) ಪ್ರಜಾಂ.....ನಿರ್ಮೃಕ್ಷಮ್ । | ಪ್ರಸ್ತರದ ಮೂಲವನ್ನು ಧ್ರುವಾದಲ್ಲಿ ಅಂಜನ ಮಾಡಲು —ಬೌಧಾಯನ |
| ೨) ಆಪ್ಯಾಯಂತಾ....ಓಷಧಯಃ । | ಪ್ರಸ್ತರದ ಮೂಲವನ್ನು ಧ್ರುವಾದಲ್ಲಿ ಅಂಜನ ಮಾಡಲು —ಆಪಸ್ತಂಬ |

---

[ಪ್ರಸ್ತರಾಗ್ರವನ್ನು]ರಿಹಾಣಾಃ [ಸಂತಃ] = ಆಸ್ವಾದಿಸುವವುಗಳಾಗಿ; ವಿಯಂತು = ವಿವಿಧ ಮಾರ್ಗಗಳಲ್ಲಿ ಸಂಚರಿಸಲಿ. +[ನಾನು] ಪ್ರಜಾಮ್ = ಪ್ರಜೆಯನ್ನೂ (ಮಕ್ಕಳನ್ನೂ); ಯೋನಿಮ್=ಅದರ ಕಾರಣವನ್ನೂ; ಮಾನಿರ್ಮೃಕ್ಷಮ್ = ನಾಶಪಡಿಸುವುದಿಲ್ಲ; +ಆಪಃ = ಆಜ್ಯರೂಪವಾದ ನೀರುಗಳು; ಓಷಧಯಃ = [ಪ್ರಸ್ತರಮೂಲರೂಪವಾದ] ಓಷಧಿಗಳನ್ನು; ಆಪ್ಯಾಯಂತಾಮ್= ವೃದ್ಧಿಗೊಳಿಸಲಿ; [ಎಲೈ ಪ್ರಸ್ತರವೇ! ನಿನ್ನ ಪ್ರಹರಣದಿಂದ] ಆಪಃ =ನೀರುಗಳೂ; ಓಷಧಯಃ = ಸಸ್ಯಗಳೂ; ಆಪ್ಯಾಯಂತಾಮ್ = ವೃದ್ಧಿಹೊಂದಲಿ.

---

ಆಜ್ಯದಿಂದ ಲಿಪ್ತವಾದ ಪ್ರಸ್ತರವನ್ನು ಆಸ್ವಾದಿಸಿ ತೃಪ್ತಿಹೊಂದಿದ ಹಕ್ಕಿಗಳು ವಿವಿಧ ಮಾರ್ಗಗಳಲ್ಲಿ ಹಾರಾಡಲಿ.

ಆಯುಷ್ಪಾ ಅಗ್ನೇಽಸ್ಯಾಯುರ್ಮೇ ಪಾಹಿ ಚಕ್ಷುಷ್ಪಾ

ಅಗ್ನೇಽಸಿ ಚಕ್ಷುರ್ಮೇ ಪಾಹಿ ಧ್ರುವಾಸಿ ಯಂ

---

ಆಯುಷ್ಪಾ ಇತ್ಯಾಯುಃ-ಪಾಃ । ಅಗ್ನೇ । ಅಸಿ । ಆಯುಃ । ಮೇ । ಪಾಹಿ ।

ಚಕ್ಷುಷ್ಪಾ, ಇತಿ ಚಕ್ಷುಃ-ಪಾಃ । ಅಗ್ನೇ । ಅಸಿ । ಚಕ್ಷುಃ । ಮೇ । ಪಾಹಿ । ಧ್ರುವಾ।

ಅಸಿ । ಯಮ್ ।

---

| ಮಂತ್ರ | ವಿನಿಯೋಗ |
|---|---|
| ೧) ಆಪ್ಯಾಯಂತಾ...ಮೇರಯ । | ಪ್ರಸ್ತರವನ್ನು ಆಹವನೀಯದಲ್ಲಿ ಪ್ರಹರಣ ಮಾಡಲು (ಹಾಕಲು) —ಬೌಧಾಯನ |
| ೨) ಮರುತಾಂ.......ಮೇರಯ । | ಪ್ರಸ್ತರವನ್ನು ಆಹವನೀಯದಲ್ಲಿ ಪ್ರಹರಣ ಮಾಡಲು —ಆಪಸ್ತಂಬ |
| ಆಯುಷ್ಪಾ...ಚಕ್ಷುರ್ಮೇ ಪಾಹಿ । | ಆಹವನೀಯೋಪಸ್ಥಾನವನ್ನು ಮಾಡಲು. |

---

+[ಎಲೈ ಪ್ರಸ್ತರಾವಯವಗಳೇ! ನೀವು] ಮರುತಾಂ=ವಾಯುಗಳ; ಪೃಷತಯಃ = ಬಿಂದುಗಳಾಗಿ[ವಾಯುಪ್ರೇರಿತವಾದ ಮಳೆಯಿಂದ ಬೆಳೆಯುವುದರಿಂದ ವಾಯುಬಿಂದುಗಳಂತೆ] ಸ್ಥ = ಆಗಿದ್ದೀರಿ.[ಎಲೈ ಪ್ರಸ್ತರವೇ! ನೀನು] ದಿವಂ ಗಚ್ಛ=ಅಂತರಿಕ್ಷಕ್ಕೆ ಹೋಗು; ತತಃ = ಬಳಿಕ; ನಃ=ನಮಗಾಗಿ; ವೃಷ್ಟಿಮ್ = ಮಳೆಯನ್ನು; ಏರಯ = ಪ್ರೇರಿಸು; (ಭೂಮಿಯಲ್ಲಿ ಬೀಳುವಂತೆ ಮಾಡು) +ಅಗ್ನೇ=ಎಲೈ ಆಹವನೀಯಾಗ್ನಿಯೇ! [ನೀನು] ಆಯುಷ್ಪಾಃ =ಆಯುಸ್ಸನ್ನು ರಕ್ಷಿಸುವವನು; ಅಸಿ=ಆಗಿದ್ದೀಯೆ; ಮೇ=ನನ್ನ; ಆಯುಃ = ಆಯುಸ್ಸನ್ನು; ಪಾಹಿ=ಕಾಪಾಡು; ಅಗ್ನೇ=ಎಲೈ! ಆಹವನೀಯಾಗ್ನಿಯೇ! ನೀನು; ಚಕ್ಷುಷ್ಪಾಃ =ಕಣ್ಣುಗಳನ್ನು ರಕ್ಷಿಸುವವನು; ಅಸಿ=ಆಗಿರುವೆ; ಮೇ = ನನ್ನ; ಚಕ್ಷುಃ = ಕಣ್ಣನ್ನು; ಪಾಹಿ = ಕಾಪಾಡು.

---

ನಾನು ಪ್ರಜೆಗಳನ್ನೂ, ಅದರ ಕಾರಣವನ್ನೂ ನಾಶಪಡಿಸುವುದಿಲ್ಲ. ವೃದ್ಧಿಪಡಿಸಲು ಇಚ್ಛಿಸುತ್ತೇನೆ. [ಅದು ಹಾಗೇ ಆಗಲಿ]

ಪರಿಧಿಂ ಪರ್ಯಧತ್ಥಾ ಅಗ್ನೇ ದೇವ ಪಣಿಭಿರ್ವೀಯಮಾಣಃ ।

ತಂ ತ ಏತಮನು ಜೋಷಂ ಭರಾಮಿ ನೇದೇಷತ್ವದಪಚೇತಯಾ

ಪರಿಧಿಮಿತಿ ಪರಿ-ಧಿಮ್ । ಪರ್ಯಧತ್ಥಾ ಇತಿ ಪರಿ-ಅಧತ್ಥಾಃ । ಅಗ್ನೇ । ದೇವ ।

ಪಣಿಭಿರಿತಿ ಪಣಿ-ಭಿಃ । ವೀಯಮಾಣಃ ॥ ತಮ್ । ತೇ । ಏತಮ್। ಅನ್ವಿತಿ । ಜೋಷಮ್।

ಭರಾಮಿ । ನ । ಇತ್ । ಏಷಃ । ತ್ವತ್ । ಅಪಚೇತಯಾತಾ ಇತ್ಯಪ-ಚೇತಯಾತೈ।

---

| ಮಂತ್ರ | ವಿನಿಯೋಗ |
|---|---|
| ಧ್ರುವಾಸಿ । | ವೇದಿಯ ಒಳಭಾಗದಲ್ಲಿ ಭೂಮಿಯನ್ನು ಸ್ಪರ್ಶಿಸಲು. |
| ಯಂ......ಚೇತಯಾತೈ । | ಮಧ್ಯಮಪರಿಧಿಯನ್ನು ಪ್ರಹರಣ ಮಾಡಲು. |

---

+[ಎಲೈ! ಅಂತರ್ವೇದಿಭೂಮಿಯೇ! ನೀನು] ಧ್ರುವಾ = ನಿತ್ಯಳಾಗಿ; ಅಸಿ = ಆಗಿರುವೆ. [ನನ್ನನ್ನೂ ಧ್ರುವನನ್ನಾಗಿ ಮಾಡು.] +ಅಗ್ನೇ! ದೇವ! = ಎಲೈ ಅಗ್ನಿದೇವನೇ! ಪಣಿಭಿಃ = ಸ್ತುತಿಗಳಿಂದ; ವೀಯಮಾಣಃ = ಹೊಂದಲ್ಪಡುವವನಾಗಿದ್ದೀಯೆ; ಯಮ್ = ಯಾವ; ಪರಿಧಿಮ್ = ಮಧ್ಯಮಪರಿಧಿಯನ್ನು; ಪರ್ಯಧತ್ಥಾಃ = [ನಿನ್ನ] [ಪಶ್ಚಿಮಭಾಗದಲ್ಲಿ] ಸ್ಥಾಪಿಸಿದ್ದೀಯೋ; ತೇ = ನಿನಗೆ; ಅನು ಜೋಷಮ್ = ಅನುಕೂಲವಾಗಿ ಪ್ರಿಯವಾಗಿರುವ; ತಮ್ ಏತಮ್ = ಆ ಈ ಮಧ್ಯಮಪರಿಧಿಯನ್ನು; ಭರಾಮಿ = [ನಿನ್ನಲ್ಲಿ] ಹಾಕುತ್ತೇನೆ ಏಷಃ = ಈ ಪರಿಧಿಯು; ತ್ವತ್ = ನಿನ್ನ ದೆಸೆಯಿಂದ; ನ ಇತ್ ಅಪಚೇತಯಾತೈ = ಪ್ರೀತಿಹೀನನಾಗಿ (ವಿಪ್ರಿಯನಾಗಿ) ಆಗದಿರಲಿ.

---

ಸ್ರುಕ್‌ಗಳಲ್ಲಿರುವ ಆಜ್ಯರೂಪವಾದ ನೀರುಗಳು ಪ್ರಸ್ತರದ ಮೂಲರೂಪವಾದ ಓಷಧಿಗಳನ್ನು ವೃದ್ಧಿಗೊಳಿಸಲಿ. (ಈ ಯಜ್ಞದಿಂದ ವೃಷ್ಟಿಯಾಗಿ ಓಷಧಿಗಳು ಚೆನ್ನಾಗಿ ಬೆಳೆಯಲಿ. ಎಲೈ ಪ್ರಸ್ತರವೇ! ನಿನ್ನ ಪ್ರಹರಣದಿಂದ ದೇವತೆಗಳು ಸಂತುಷ್ಟರಾಗಿ ಮಳೆಯನ್ನು ಸುರಿಸಲಿ. ಅದರಿಂದ ನೀರು ಒದಗಿ ಓಷಧಿಗಳು ವೃದ್ಧಿಹೊಂದಲಿ. ಅದರಿಂದ ಪ್ರಜೆಗಳೂ ಅವರ ಉಳಿವಿಗೆ ಕಾರಣವಾದ ಅನ್ನವೂ ಸಮೃದ್ಧಿಯನ್ನು ಹೊಂದಲಿ. ಎಲೈ ಪ್ರಸ್ತರಾವಯವಗಳೇ! ನೀವು ವಾಯುಪ್ರೇರಿತವಾದ ಮಳೆಯಿಂದ ಬೆಳೆಯುವಿರಿ. ಆದುದರಿಂದ ಮರುತ್ತುಗಳ ಬಿಂದುಗಳೇ ಆಗಿರುತ್ತೀರಿ. ಎಲೈ ಪ್ರಸ್ತರವೇ! ನೀನು ಅಗ್ನಿಪ್ರಹರಣದ

-ತೈ ಯಜ್ಞಸ್ಯ ಪಾಥ ಉಪಸಮಿತಗ್ಂ ಸಗ್ಂ-

ಸ್ರಾವಭಾಗಾಃ ಸ್ಥೇಷಾ ಬೃಹಂತಃ ಪ್ರಸ್ತರೇಷ್ಠಾ

---

ಯಜ್ಞಸ್ಯ । ಪಾಥಃ । ಉಪ । ಸಮಿತಿ । ಇತಮ್ । ಸಗ್ಂಸ್ರಾವಭಾಗಾ ಇತಿ ಸಗ್ಂಸ್ರಾವ-ಭಾಗಾಃ । ಸ್ಥ । ಇಷಾಃ । ಬೃಹಂತಃ । ಪ್ರಸ್ತರೇಷ್ಠಾ ಇತಿ ಪ್ರಸ್ತರೇ-ಸ್ಥಾಃ।

---

| ಮಂತ್ರ | ವಿನಿಯೋಗ |
|---|---|
| ಯಜ್ಞಸ್ಯ.........ಸಮಿತಮ್ । | ದಕ್ಷಿಣೋತ್ತರಪರಿಧಿಗಳ ಪ್ರಹರಣ ಮಾಡಲು. |
| ಸಗ್ಂಸ್ರಾವಭಾಗಾಃ.....ಮಾದಯಧ್ವಮ್ । | ಸಂಸ್ರಾವಹೋಮವನ್ನು ಮಾಡಲು |

---

+[ಎಲೈ! ದಕ್ಷಿಣೋತ್ತರಪರಿಧಿಗಳೇ;] ಯಜ್ಞಸ್ಯ ಪಾಥಃ = ಯಜ್ಞದ [ಫಲರೂಪವಾದ] ಅನ್ನವನ್ನು; ಉಪಸಮಿತಮ್ = ಹೊಂದಿರಿ; +ವಿಶ್ವೇ ದೇವಾಃ = ಎಲೈ ವಿಶ್ವೇದೇವರೇ! (ನೀವು); ಸಗ್ಂಸ್ರಾವಭಾಗಾಃ = [ಬಹು ಉಪಭೃತ್ತುಗಳಿಂದ] ಸುರಿಯುವ ಆಜ್ಯವೇ ಭಾಗವುಳ್ಳವರಾಗಿ; ಸ್ಥ = ಆಗಿದ್ದೀರಿ; ಇಷಾಃ = [ಆ ಹವ್ಯಭಾಗವನ್ನು ಹೊಂದುವ] ಇಚ್ಛೆಯುಳ್ಳವರೂ; ಬೃಹಂತಃ = [ಎಲ್ಲರಿಂದಲೂ ಆರಾಧಿಸಲ್ಪಡುವ] ಮಹಾಂತರೂ, [ಆಗಿದ್ದೀರಿ;] [ಕೆಲವರು] ಪ್ರಸ್ತರೇಷ್ಠಾಃ = ಪ್ರಸ್ತರದಲ್ಲಿರುವವರು (ಮತ್ತೆ ಕೆಲವರು)

---

ಮೂಲಕ ದ್ಯುಲೋಕಕ್ಕೆ ಹೋಗಿ ಮಳೆಯನ್ನು ಪ್ರೇರಿಸಿ ಸುರಿಯುವಂತೆ ಮಾಡು.

ಪ್ರಸ್ತರಪ್ರಹರಣದಿಂದ ಆಯುಸ್ಸಿನ ಮತ್ತು ಕಣ್ಣಿನ ಹಾನಿಯಾಗುತ್ತದೆ. ಆದುದರಿಂದ ಅಧ್ವರ್ಯುವು ಆಹವನೀಯಾಗ್ನಿಯನ್ನು ಪ್ರಾರ್ಥಿಸುತ್ತಾನೆ. ಎಲೈ ಆಹವನೀಯಾಗ್ನಿಯೇ! ನೀನು ಆಯುಸ್ಸಿನ ರಕ್ಷಕನು. ನನ್ನ ಆಯುಸ್ಸನ್ನು ರಕ್ಷಿಸು. ನೀನು ಕಣ್ಣುಗಳನ್ನು ರಕ್ಷಿಸತಕ್ಕವನು. ನನ್ನ ಕಣ್ಣುಗಳಿಗೆ ಹಾನಿಯಾಗದಂತೆ ರಕ್ಷಿಸು. ❖ಎಲೈ ವೇದ್ಯಂತ ಭೂಮಿಯೇ! ಧ್ರುವೆಯಾದ ನೀನು ನನ್ನನ್ನೂ ಕ್ಲೇಶಗಳಿಲ್ಲದ ಧ್ರುವನನ್ನಾಗಿ ಮಾಡು.

ಎಲೈ ಸ್ತುತಿಗಳಿಂದ ಹೊಂದಲ್ಪಡುವ ಅಗ್ನಿಯೇ! ನೀನು ಪಶ್ಚಿಮದಿಕ್ಕಿನಲ್ಲಿ ಪರಿಧಿಯನ್ನು ರಕ್ಷೋಬಾಧಾನಿವೃತ್ತ್ಯರ್ಥವಾಗಿ ಹಾಕಿದ್ದೆ. ನಿನಗೆ ಪ್ರಿಯವಾದ ಆ ಪರಿಧಿಯನ್ನು

# ಬರ್ಹಿಷದಶ್ಚ (೨) ದೇವಾ ಇಮಾಂ ವಾಚಮಭಿ ವಿಶ್ವೇ ಗೃಣಂತ ಆಸದ್ಯಾಸ್ಮಿನ್ಬರ್ಹಿಷಿ ಮಾದಯಧ್ವಮಗ್ನೇರ್ವಾ

ಬರ್ಹಿಷದ ಇತಿ ಬರ್ಹಿ-ಸದಃ । ಚ । ದೇವಾಃ । ಇಮಾಮ್ । ವಾಚಮ್ । ಅಭೀತಿ। ವಿಶ್ವೇ । ಗೃಣಂತಃ । ಆಸದ್ಯೇತ್ಯಾ-ಸದ್ಯ । ಅಸ್ಮಿನ್ । ಬರ್ಹಿಷಿ । ಮಾದಯಧ್ವಮ್। * ಅಗ್ನೇಃ । ವಾಮ್ ।

| ಮಂತ್ರ | ವಿನಿಯೋಗ |
| --- | --- |
| ಅಗ್ನೇಃ........ಪಾತಮ್ । | ಶಕಟದ ನೊಗದಲ್ಲಿ ಸ್ರುಕ್‌ಗಳನ್ನು ಇಡಲು -ಬೌಧಾಯನ. |
| ೧) ಅಗ್ನೇಃ............ಧತ್ತಮ್। | ಶಕಟದ ಪೂರ್ವಭಾಗದಲ್ಲಿ ಸ್ರುಕ್‌ಗಳನ್ನು ಇಡಲು |
| ೨) ಧುರಿ ಧುರ್ಯೌ ಪಾತಮ್। | ನೊಗದ ಧುರಿಯಲ್ಲಿ ಸ್ರುಕ್‌ಗಳನ್ನು ಮುಂದೆ ನೂಕಲು - ಆಪಸ್ತಂಬ. |

ಬರ್ಹಿಷದಃ ಚ = ಹರಡಿರುವ ಬರ್ಹಿಸ್ಸಿನಲ್ಲಿ ಇರುವವರೂ ಆಗಿದ್ದೀರಿ. ವಿಶ್ವೇ ದೇವಾಃ =ವಿಶ್ವೇದೇವತೆಗಳಾದ ನೀವು; ಇಮಾಂ ವಾಚಮ್ = ಈ [ನಮ್ಮ ಸ್ತೋತ್ರರೂಪವಾದ] ಮಾತನ್ನು; ಅಭಿ (ವೀಕ್ಷ್ಯ) =ನೋಡಿ (ತಿಳಿದು) ಗೃಣಂತಃ = ಚೆನ್ನಾಗಿದೆಯೆಂದು ಭಾವಿಸುವವರಾಗಿ; ಅಸ್ಮಿನ್ ಬರ್ಹಿಷಿ =ಈ ಯಾಗದಲ್ಲಿ; ಆಸದ್ಯ=ಕುಳಿತು; ಮಾದಯಧ್ವಮ್ = ಸಂತೋಷಪಡಿರಿ; ❖[ಎಲೈ ಜುಹೂಪಭೃತ್ತುಗಳೇ!] ವಾಮ್ = ನಿಮ್ಮಿಬ್ಬರನ್ನು;

---

ಅನುಕೂಲವಾಗಿರುವಂತೆ ನಿನ್ನಲ್ಲಿ ಹಾಕುತ್ತೇನೆ. ಈ ಪರಿಧಿಯು ನಿನ್ನಲ್ಲಿ ಪ್ರೀತಿರಹಿತವಾಗದಿರಲಿ. ನಿನ್ನಿಂದ ಬೇರೆಯಾಗದಿರಲಿ. ●ಎಲೈ! ದಕ್ಷಿಣೋತ್ತರಪರಿಧಿಗಳೇ! ಯಜ್ಞದ ಫಲರೂಪವಾದ ಅನ್ನವನ್ನು ನೀವೂ ಹೊಂದಿರಿ. (ಯಜ್ಞದಲ್ಲಿಉಪಯುಕ್ತವಾದ ಅಚೇತನಗಳಿಗೂ ಯಜ್ಞದ ಫಲಸಂಬಂಧ ಉಂಟು)

ಎಲೈ! ವಿಶ್ವೇದೇವರೇ! ಜುಹೂ-ಉಪಭೃತ್‌ಗಳಿಂದ ಮಾಡುತ್ತಿರುವ ಆಜ್ಯಶೇಷದ ಈ ಸಂಸ್ರಾವವು ನಿಮ್ಮ ಭಾಗವಾಗಿದೆ. ಈ ಭಾಗವನ್ನು ಅಪೇಕ್ಷಿಸುವ ನೀವು ಮಹಾತ್ಮ

ಮಪನ್ನಗೃಹಸ್ಯ ಸದಸಿ ಸಾದಯಾಮಿ ಸುಮ್ನಾಯ ಸುಮ್ನಿನೀ

ಸುಮ್ನೇ ಮಾ ಧತ್ತಂ ಧುರಿ ಧುರ್ಯೌ ಪಾತಮಗ್ನೇಽದಬ್ಧಾ-

ಅಪನ್ನಗೃಹಸ್ಯೇತ್ಯಪನ್ನ-ಗೃಹಸ್ಯ । ಸದಸಿ । ಸಾದಯಾಮಿ । ಸುಮ್ನಾಯ । ಸುಮ್ನಿನೀ

ಇತಿ । ಸುಮ್ನೇ । ಮಾ । ಧತ್ತಮ್ *। ಧುರಿ । ಧುರ್ಯೌ । ಪಾತಮ್ *। ಅಗ್ನೇ।

ಅದಬ್ಧಾಯೋ ಇತ್ಯದಬ್ಧ - ಆಯೋ ।

| ಮಂತ್ರ | ವಿನಿಯೋಗ |
|---|---|
| ಅಗ್ನೇ............ಸ್ವಾಹಾ । | ಫಲೀಕರಣ(ಭತ್ತದ ತವುಡು)ದ ಹೋಮದಲ್ಲಿ |

ಅಪನ್ನಗೃಹಸ್ಯ = ನಾಶವಾಗದ ಮನೆಯುಳ್ಳ; ಅಗ್ನೇಃ = ಅಗ್ನಿದೇವನ; ಸದಸಿ = ಶಕಟರೂಪವಾದ ಸ್ಥಾನದಲ್ಲಿ; ಸುಮ್ನಾಯ = (ಯಜಮಾನನ) ಸುಖಕ್ಕಾಗಿ; ಸಾದಯಾಮಿ = ಇಡುತ್ತೇನೆ; ಸುಮ್ನಿನೀ! = ಎಲೈ ಸುಖವತಿಯರೇ! [ಸುಮ್ನಾಯ = [ಯಜಮಾನನ] ಸುಖಕ್ಕಾಗಿ; ನಿಮ್ಮನ್ನು ಸದಸ್ಸಿನಲ್ಲಿಡುತ್ತೇನೆ.] ಮಾ = ನನ್ನನ್ನು; ಸುಮ್ನೇ = ಸುಖದಲ್ಲಿ; ಧತ್ತಮ್ = ಇಡಿರಿ; +ಧುರಿ = ಯಾಗವೆಂಬ ಕರ್ಮದಲ್ಲಿ; ಧುರ್ಯೌ = ಹೊರೆಯನ್ನು ಹೊತ್ತಿರುವ [ಯಜಮಾನದಂಪತಿಗಳನ್ನು] ಪಾತಮ್ = ರಕ್ಷಿಸಿರಿ; +[ಹೇ] ಅಗ್ನೇ = ಎಲೈ ಯಜ್ಞಾಗ್ನಿಯೇ!; ಅದಬ್ಧಾಯೋ = ಹಿಂಸಾರಹಿತವಾದ ಜೀವನವುಳ್ಳವನೇ!

ರಾಗಿರುತ್ತೀರಿ. ನಿಮ್ಮಲ್ಲಿ ಕೆಲವರು ಪ್ರಸ್ತರದಲ್ಲಿರತಕ್ಕವರು. ಮತ್ತೆ ಕೆಲವರು ಬರ್ಹಿಸ್ಸಿನಲ್ಲಿ ಕುಳಿತಿರುವವರು. ಇಂತಹ ವಿಶ್ವೇದೇವರಾದ ನೀವು ನಮ್ಮ ಸ್ತುತಿಯನ್ನು ಗಮನಿಸಿ ಯುಕ್ತವಾಗಿದೆಯೆಂದು ಭಾವಿಸಿರಿ. ಈ ಯಜ್ಞದಲ್ಲಿ ಸನ್ನಿಹಿತರಾಗಿ ಹವ್ಯವನ್ನು ಹೊಂದಿ ಸಂತೋಷಪಡಿರಿ.

ಎಲೈ ಜುಹೂಪಭೃತ್ತುಗಳೇ! ಅಕ್ಷಯವಾದ ಮನೆಯುಳ್ಳ ಅಗ್ನಿದೇವನ ಸ್ಥಾನವಾದ ಶಕಟ(ಬಂಡಿ)ದ ಮುಂಭಾಗದ ನೊಗದಲ್ಲಿ ಯಜಮಾನನ ಸುಖಕ್ಕಾಗಿ ನಿಮ್ಮನ್ನು ಇಡುತ್ತೇನೆ. ಪ್ರಜಾಪಶುರೂಪವಾದ ಸುಖಕ್ಕೆ ಕಾರಣರಾದ ಸ್ರುಕ್ಕುಗಳೇ! ನನ್ನನ್ನೂ ಸುಖದಲ್ಲಿಡಿರಿ. ಈ ಯಜ್ಞದ ಭಾರವನ್ನು ಹೊತ್ತಿರುವ ಯಜಮಾನದಂಪತಿಗಳನ್ನೋ ಕಾಪಾಡಿರಿ.

**ಯೋಽಶೀತತನೋ ಪಾಹಿ ಮಾದ್ಯ ದಿವಃ ಪಾಹಿ ಪ್ರಸಿತ್ಯೈ ಪಾಹಿ ದುರಿಷ್ಟ್ಯೈ ಪಾಹಿ ದುರದ್ಮನ್ಯೈ ಪಾಹಿ ದುಶ್ಚರಿತಾದ ವಿಷಂ ನಃ ಪಿತುಂ ಕೃಣು ಸುಷದಾ ಯೋನಿಗ್ಗ್ಂ ಸ್ವಾಹಾ**

---

ಅಶೀತತನೋ ಇತ್ಯಶೀತ-ತನೋ । ಪಾಹಿ । ಮಾ । ಅದ್ಯ । ದಿವಃ । ಪಾಹಿ । ಪ್ರಸಿತ್ಯಾ ಇತಿ ಪ್ರ-ಸಿತ್ಯೈ । ಪಾಹಿ । ದುರಿಷ್ಟ್ಯಾ ಇತಿ ದುಃ-ಇಷ್ಟ್ಯೈ । ಪಾಹಿ । ದುರದ್ಮನ್ಯಾ ಇತಿ ದುಃ-ಅದ್ಮನ್ಯೈ । ಪಾಹಿ । ದುಶ್ಚರಿತಾದಿತಿ ದುಃ-ಚರಿತಾತ್ । ಅವಿಷಮ್ । ನಃ। ಪಿತುಮ್ । ಕೃಣು । ಸುಷದೇತಿ ಸು-ಸದಾ । ಯೋನಿಮ್ । ಸ್ವಾಹಾ ।

---

**ಅಶೀತತನೋ!** = ಉಷ್ಣಶರೀರವುಳ್ಳವನೇ! **ಅದ್ಯ** = ಈಗ; **ಮಾ** = ನನ್ನನ್ನು; **ದಿವಃ** = ದೇವಲೋಕದ ದೆಸೆಯಿಂದ (ದೇವತೆಗಳಿಗೆ ನನ್ನ ಮೇಲೆ ಕೋಪವುಂಟಾಗದಂತೆ ಮಾಡಿ) **ಪಾಹಿ** = ರಕ್ಷಿಸು; **ಪ್ರಸಿತ್ಯೈ** = ಪ್ರಬಲವಾದ ಕರ್ಮವಿಘ್ನದ ದೆಸೆಯಿಂದ; **ಪಾಹಿ** = ಕಾಪಾಡು; **ದುರಿಷ್ಟ್ಯೈ** = ಕೆಟ್ಟದಾದ[ವಿಧಿವಿರುದ್ಧವಾದ] ಯಾಗದ ದೆಸೆಯಿಂದ; **ಪಾಹಿ** = ರಕ್ಷಿಸು; **ದುರದ್ಮನ್ಯೈ** = [ಯಾಗಸಮಯದಲ್ಲಿ] ತಿನ್ನಬಾರದ ವಸ್ತುಗಳ ಭೋಜನದ ದೆಸೆಯಿಂದ; **ಪಾಹಿ** = ಕಾಪಾಡು; **ದುಶ್ಚರಿತಾತ್** = ನಿಷಿದ್ಧಾಚರಣೆಯ ದೆಸೆಯಿಂದ; **ಪಾಹಿ** = ಪೊರೆ; **ನಃ** = ನಮ್ಮ **ಪಿತುಮ್** = ಅನ್ನವನ್ನು; **ಅವಿಷಮ್** = ಅಮೃತವನ್ನಾಗಿ; **ಕೃಣು** = ಮಾಡು; **ಸುಷದಾ** = ಸುಖವಾಗಿ ಕುಳಿತುಕೊಳ್ಳುವಿಕೆಯಿಂದ; **ಯೋನಿಮ್** = ಒಳ್ಳೆಯ ಸ್ಥಾನವನ್ನು; (ಒಳ್ಳೆಯ ಸ್ಥಾನದಲ್ಲಿ ಕುಳಿತುಕೊಳ್ಳುವ ಸ್ಥಿತಿಯನ್ನು) [ಕೃಣು = ಮಾಡು] [ಈ ಫಲೀಕರಣದ್ರವ್ಯವು] **ಸ್ವಾಹಾ** = ಹುತವಾಗಲಿ;

---

ಅಗ್ನಿಯೇ! ನೀನು ಹಿಂಸಿಸಲಾಗದ ಜೀವನವುಳ್ಳವನು. ಉಷ್ಣಶರೀರನು. ನೀನು ಈಗ ದೇವತೆಗಳಿಗೆ ಕೋಪ ಬರದಂತೆ ಮಾಡಿ ದ್ಯುಲೋಕದ ದೆಸೆಯಿಂದ ನನ್ನನ್ನು ರಕ್ಷಿಸು. ಕರ್ಮವಿಘ್ನಗಳ ದೆಸೆಯಿಂದಲೂ, ಫಲಪ್ರತಿಬಂಧಕಗಳ ದೆಸೆಯಿಂದಲೂ ನನ್ನನ್ನು ರಕ್ಷಿಸು. ಯಾಗದಲ್ಲಿ ಶಾಸ್ತ್ರಕ್ಕೆ ಹೊಂದಿಕೊಳ್ಳದ ಕರ್ಮಗಳ ದೆಸೆಯಿಂದಲೂ ಕಾಪಾಡು.

ದೇವಾ ಗಾತುವಿದೋ ಗಾತುಂ ವಿತ್ವಾ ಗಾತುಮಿತ

ಮನಸಸ್ಪತ ಇಮಂ ನೋ ದೇವ ದೇವೇಷು ಯಜ್ಞಗ್ಂ

ಸ್ವಾಹಾ ವಾಚಿ ಸ್ವಾಹಾ ವಾತೇ ಧಾಃ ll ೧೩-24ll

[ದಿವಂ ಚ ವಿತ್ವಾ ಗಾತುಂ ತ್ರಯೋದಶ ಚ । ]

---

ದೇವಾಃ । ಗಾತುವಿದ ಇತಿ ಗಾತು-ವಿದಃ । ಗಾತುಮ್ । ವಿತ್ವಾ । ಗಾತುಮ್ ।

ಇತ । ಮನಸಃ । ಪತೇ । ಇಮಮ್ । ನಃ । ದೇವ । ದೇವೇಷು । ಯಜ್ಞಮ್।

ಸ್ವಾಹಾ । ವಾಚಿ । ಸ್ವಾಹಾ । ವಾತೇ । ಧಾಃ ॥ ೧೩ ॥

---

| ಮಂತ್ರ | ವಿನಿಯೋಗ |
|---|---|
| ದೇವಾ..ವಾತೇ ಧಾಃ । | ಧ್ರುವೆಯಿಂದ ಸಮಿಷ್ಟಯಜುರ್ಹೋಮವನ್ನು ಮಾಡಲು ವಾಚಿ ಸ್ವಾಹಾ ಎಂಬ ಮಧ್ಯಮಸ್ವಾಹಾಕಾರದಲ್ಲಿ ಬರ್ಹಿರ್ಹವನ [ದರ್ಭೆಯ ಹವನ] —ಆಪಸ್ತಂಬ. |

---

+[ಹೇ!] ಗಾತುವಿದೋ ದೇವಾಃ = [ಎಲೈ!] ಮಾರ್ಗಗಳನ್ನು ತಿಳಿದಿರುವ ದೇವತೆಗಳೇ! ಗಾತುಮ್ = [ಯಾವ] ಮಾರ್ಗವನ್ನು; ವಿತ್ವಾ=ಹೊಂದಿ ಬಂದಿರೋ; ಗಾತುಮ್ = ಆ ಮಾರ್ಗವನ್ನು [ಹೊಂದಿ;] ಇತ = ತೆರಳಿರಿ; ಮನಸಸ್ಪತೇ ದೇವ = ಮನಸ್ಸಿಗೆ ಒಡೆಯನಾದ ದೇವನೇ! [ಸರ್ವಭೂತಾಂತರಾತ್ಮನಾದ ದೇವನೇ!] ನಃ = ನಮ್ಮ; ಇಮಮ್ = ಈ; ಯಜ್ಞಮ್ = ಯಾಗವನ್ನು; ದೇವೇಷು = ದೇವತೆಗಳಲ್ಲಿ; [ಇಡು] [ಈ ಆಜ್ಯವು] ಸ್ವಾಹಾ = ಹುತವಾಗಲಿ; ವಾಚಿ = ವಾಗ್ದೇವತೆಯಲ್ಲಿ [ಶಬ್ದಬ್ರಹ್ಮನಲ್ಲಿ]; [ಯಜ್ಞವನ್ನು ಸ್ಥಾಪಿಸು]; [ಈ ಆಜ್ಯವು] [ಈ ಬರ್ಹಿಸ್ಸು] ಸ್ವಾಹಾ = ಹುತವಾಗಲಿ; ವಾತೇ = ಯಜ್ಞಪ್ರವರ್ತಕನಾದ (ಸರ್ವಕ್ರಿಯಾಪ್ರವರ್ತಕನಾದ) ವಾಯುದೇವನಲ್ಲಿ; ಧಾಃ = ಸ್ಥಾಪಿಸು.

---

ನಿಷಿದ್ಧಾಚರಣೆಯ ದೆಸೆಯಿಂದಲೂ ರಕ್ಷಿಸು. ನಮ್ಮ ಅನ್ನವು ಅಮೃತವಾಗುವಂತೆ (ವಿಷವಾಗದಂತೆ) ಮಾಡು. ಸುಖವಾಗಿ ಕುಳಿತುಕೊಳ್ಳಲು ತಕ್ಕ ಸ್ಥಾನವನ್ನು ಕಲ್ಪಿಸಿಕೊಡು.

ಈ ಫಲೀಕರಣದ್ರವ್ಯವು ನಿನಗೆ ಹುತವಾಗಲಿ.

ಸರ್ವಮಾರ್ಗಗಳನ್ನೂ ತಿಳಿದಿರುವ ದೇವತೆಗಳೇ! ಈ ಯಜ್ಞವು ಸಮಾಪ್ತ ವಾಗುತ್ತಿದೆ.* ನೀವು ಯಾವ ಮಾರ್ಗವನ್ನು ಆಶ್ರಯಿಸಿ ಬಂದಿರೋ ಅದೇ ಮಾರ್ಗವನ್ನು ಹಿಡಿದು ಹಿಂದಿರುಗಿರಿ. ಎಲೈ ಅಂತರಾತ್ಮನಾದ ಮನಸ್ಸಿನ ಒಡೆಯನಾದ ದೇವನೇ! ಈ ನಮ್ಮ ಯಜ್ಞವನ್ನು ದೇವತೆಗಳಲ್ಲಿ ಸ್ಥಾಪಿಸು.(ಯಜ್ಞದಿಂದ ದೇವತೆಗಳ ತೃಪ್ತಿಯಾಗು ವಂತೆ ಮಾಡು). ಈ ಆಜ್ಯವು ಹುತವಾಗಲಿ. ವಾಗ್ದೇವಿಯಲ್ಲಿ ಈ ಯಜ್ಞವನ್ನು ಇಡು. ಈ ಆಜ್ಯವು [ಈ ಬರ್ಹಿಸ್ಸು]ಹುತವಾಗಲಿ.

'ವಾತಾದ್ಧ್ಯಜ್ಞಃ ಪ್ರಯುಜ್ಯತಾಮ್'

ಎಂದು ವಾತದೇವನಿಂದ ಆರಬ್ಧವಾದ ಈ ಯಜ್ಞವನ್ನು ವಾತದೇವನಲ್ಲಿ ಇಡು. ಈ ಆಜ್ಯವು ನಿನಗೆ ಹುತವಾಗಲಿ.

### ವಿನಿಯೋಗಸಂಗ್ರಹ

ವಾಜ[1,2]ದ್ವಾಭ್ಯಾಂ ಸ್ರುಚೋರ್ವ್ಯೂರ್ಹೋ ವಸ್ವಂಚ್ಯಾತ್[3,4,5] ಪರಿಧೀಂಸ್ತ್ರಿಭಿಃ ।
ಅಕ್ತ[6] ಪ್ರಾ[7] ಪ್ಯಾ[8] ತ್ರಿಭಿಃ ಸ್ರುಕ್ಷು ಪ್ರಸ್ತರಾಗ್ರಾದಿಕಾಂಜನಮ್ ॥
ಮರು[9] ಪ್ರಸ್ತರಹೋಮೋऽಯಮಾಯು[10] ರಗ್ನ್ಯಭಿಮಂತ್ರಣಮ್ ।
ಧ್ರುವಾ[11] ಭೂಮಿಂ ಸ್ಪೃಶೇದ್ಯಂ ಪ[12] ಮಧ್ಯಸ್ಯ ಪರಿಧೇರ್ಹುತಿಃ ॥
[13]ಯಜ್ಞಾನ್ಯಯೋರ್ದ್ವಯೋರ್ಹೋಮಃ ಸಂಸ್ರಾ[14] ಸಂಸ್ರಾವಕಾಹುತಿಃ ।
ಅಗ್ನೇಃ[15] ಸ್ರುಚೌ ಸಾದಯಿತ್ವಾ ಧುರಿ[16] ತೇ ಪ್ರೋಹಯೇತ್ ಸ್ರುಚೌ ॥
ಅಗ್ನೇ[17] ಫಲೀಕೃತೇರ್ಹೋಮಃ ದೇವಾ[18] ಇಷ್ಟ್ವಯಜುರ್ಹುತಿಃ ।
ವಾಚಿ[19] ಬರ್ಹಿರ್ಹುತಿರ್ವಾತೇ[20] ಸರ್ವಹೋಮೋऽತ್ರ ವಿಂಶತಿಃ ॥

ಅನುವಾಕದ ಮಂತ್ರಗಳ ಸಂಖ್ಯೆ ಬೌಧಾಯನ - 17

ಆಪಸ್ತಂಬ - 20

*ಈ ಸಮಿಷ್ಟಯಜುರ್ಹೋಮಕ್ಕೆ ಮೊದಲು ಪತ್ನಿಯ ಸಮೀಪದಲ್ಲಿ ವೇದವನ್ನು ಹಾಕುವುದು, ವೇದಾಸ್ತರಣ ಮೊದಲಾದವುಗಳೂ, ಹೋಮದ ಅನಂತರ ಪತ್ನೀಯೋಕ್ತ್ರವಿಮೋಚನ, ಉಪವೇಷತ್ಯಾಗ, ಪೂರ್ಣಪಾತ್ರನಿನಯನ ಮುಂತಾದ ಕರ್ಮಗಳಿವೆ. ಪಾಠಕ್ರಮದಂತೆ ಈ ವಚನವನ್ನು ಹೇಳಲಾಗಿದೆ.

## ಅನುವಾಕದ ವಿಶೇಷ ವಿಷಯಗಳು

### ಅ) ಭ.ಭಾ. ಭಾಷ್ಯ.

ಮಂತ್ರಸಂಖ್ಯೆ

೫) ಉದ್ಗ್ರಾಭಂ........ಅವೀವೃಧನ್ । ಬ್ರಹ್ಮ = ವ್ಯಾಪಕವಾದ; ಉದ್ಗ್ರಾಭಂ = ಉತ್ಕರ್ಷವನ್ನು; ನಿಗ್ರಾಭಂ = ಅವನತಿಯನ್ನು- ಎಂಬುದಾಗಿ ಬ್ರಹ್ಮಶಬ್ದವನ್ನು ಉದ್ಗ್ರಾಭ-ನಿಗ್ರಾಭಗಳಿಗೆ ವಿಶೇಷಣವಾಗಿ ಹೇಳಿಯುತ್ತಾರೆ.

೬) ಅಕ್ತಮ್.........ವಯಃ । ವಯಃ = ಪ್ರಜನಿಷ್ಣವಃ = ಆದಿತ್ಯರಶ್ಮಯಃ = ಉತ್ಪಾದನಶೀಲವಾದ ಆದಿತ್ಯರಶ್ಮಿಗಳು; ವಿಯಂತು = ಆಜ್ಯಾಕ್ತವಾದ ಪ್ರಸ್ತರವನ್ನು ಆಸ್ವಾದಿಸುವುದರಿಂದ ವೃದ್ಧಿಗಾಗಿ(ವೃಷ್ಟಿಗಾಗಿ) ಗರ್ಭವನ್ನು ಧರಿಸಲಿ.

೭) ಪ್ರಜಾಂ............ನಿರ್ಮೃಕ್ಷಮ್ । ನಾನು ಪ್ರಜಾಮ್ = ಪ್ರಜೆಯನ್ನೂ; ಯೋನಿಮ್ = ಪ್ರಜಾಕಾರಣವಾದ ಅನ್ನವೇ ಮೊದಲಾದವನ್ನೂ; ಮಾ ನಿರ್ಮೃಕ್ಷಮ್ = ನಾಶಪಡಿಸುವುದಿಲ್ಲ. ಆದರೆ ವೃದ್ಧಿಪಡಿಸಲು ಇಚ್ಛಿಸುತ್ತೇನೆ. ಆ ವೃದ್ಧಿಗಾಗಿ ವಯಃ ವಿಯಂತು = ಸೂರ್ಯಕಿರಣಗಳು........ (೭ನೆಯ ಮಂತ್ರಾರ್ಥ)

೮) ಆಪ್ಯಾಯಂತಾ......ಮೇರಯ [ಬೌಧಾಯನಮತದಂತೆ ಪ್ರಸ್ತರಪ್ರಹರಣದಲ್ಲಿ ವಿನಿಯೋಗ] ಈ ವಿನಿಯೋಗದಂತೆ ಆಪಃ ಓಷಧಯಃ ಆಪ್ಯಾಯಂತಾಮ್ = ಎಲೈ ಪ್ರಸ್ತರವೇ! ನಿನ್ನ ಪ್ರಹರಣದಿಂದ ಮಳೆಯಾಗಿ ನೀರುಗಳು ವೃದ್ಧಿ ಹೊಂದಿ (ಹೆಚ್ಚಾಗಿ) ಸಸ್ಯಾದಿಗಳೂ ವೃದ್ಧಿಹೊಂದಲಿ. ಆದರಿಂದ ಅನ್ನಾದಿಗಳೂ ಪ್ರಜೆಗಳೂ ವೃದ್ಧಿಹೊಂದಲು ಸಾಧ್ಯವಾಗುತ್ತದೆ. ಪ್ರಸ್ತರವೇ! ಮರುತಾಮ್ = ವಾಯುಗಳ; ಪೃಷತಯಃ ಸ್ಥ = ಕುದುರೆಗಳಂತೆ ಶೀಘ್ರಗಾಮಿಯಾಗಿರುವೆ. ದಿವಂ ಗಚ್ಛ = ಸೂರ್ಯನನ್ನು ಬೇಗನೆ ಹೊಂದು; ತತಃ = ಆ ಆದಿತ್ಯಮಂಡಲದ ದೆಸೆಯಿಂದ; ವೃಷ್ಟಿಮ್ = ಮಳೆಯನ್ನು; ಏರಯ = ಪ್ರೇರಿಸು; ಬರುವಂತೆ ಮಾಡು. ಹೀಗೆ ಮಾಡುವುದರಿಂದ ನೀರುಗಳ ಮತ್ತು ಸಸ್ಯಾದಿಗಳ ವೃದ್ಧಿಯಾಗುತ್ತದೆ. ವೃಷ್ಟಿ ಎಂಬ ಶಬ್ದದ ಎರಡನೆಯ ರೀತಿಯ ಅರ್ಥವನ್ನನುಸರಿಸಿ ತತಃ = ಆದಿತ್ಯಮಂಡಲದಿಂದ; ವೃಷ್ಟಿಮ್ = ವೃಷ್ಟಿಗೆ ಕಾರಣವಾದ ಸೂರ್ಯನ ಕಿರಣವನ್ನು [ನಮ್ಮ ಕಡೆಗೆ] ಏರಯ = ಪ್ರೇರಿಸು.

೧೨) ಯಂ ಪರಿಧಿಂ.......ಚೇತಯಾತೈ । ಅಗ್ನೇ ದೇವ! = ದೇವನಾದಿಗುಣ ಯುಕ್ತನಾದ ಅಗ್ನಿದೇವನೇ! ಪಣಿಭಿಃ = ಪಣಿಗಳೆಂಬ ರಾಕ್ಷಸರಿಂದ; ವೀಯಮಾಣಃ = ಸುತ್ತುವರಿಯಲ್ಪಟ್ಟವನಾಗಿ[ಅವರಿಂದ ರಕ್ಷಿಸಿಕೊಳ್ಳಲು] ಯಂ ಪರಿಧಿಂ ಪರ್ಯಧತ್ಥಾಃ = ಯಾವ ಮಧ್ಯಮಪರಿಧಿಯನ್ನು[ಪಶ್ಚಿಮಭಾಗದಲ್ಲಿ] ಇಟ್ಟುಕೊಂಡಿದ್ದೀಯೋ; ತಮ್ ತೇ ಜೋಷಮ್ = ನಿನಗೆ ಇಷ್ಟವಾದ ಆ ಮಧ್ಯಮಪರಿಧಿಯನ್ನು; ಅನುಭರಾಮಿ = ಅನುಹರಾಮಿ = ನಿನ್ನನ್ನು ಅನುಸರಿಸಿ ನಿನ್ನಲ್ಲಿ ಹಾಕುತ್ತೇನೆ.; ಏಷಃ = ಈ ಪರಿಧಿಯು; ತ್ವತ್ = ನಿನ್ನ ದೆಸೆಯಿಂದ; ನ ಇತ್ ಅಪಚೇತಯಾತೈ = ವಿರಕ್ತಿ ಹೊಂದಿದ ಮನಸ್ಸುಳ್ಳದ್ದಾಗದಿರಲಿ. (ನಿನ್ನಲ್ಲಿ ಹಾಕದಿದ್ದರೆ ಅಗ್ನಿಗೆ ತಾನು ಅಪ್ರಿಯನೆಂದು ಪರಿಧಿಯು ಭಾವಿಸಬಹುದು; ಹಾಗೆ ಆಗದಿರಲಿ.)

೧೪) ಸಗ್ಂಸ್ರಾವಭಾಗಾಃ.......ಮಾದಯಧ್ವಮ್ । ಸಗ್ಂಸ್ರಾವಭಾಗಾಃ = ವಸುಗಳೂ, ರುದ್ರರೂ, ಆದಿತ್ಯರೂ; ಪ್ರಸ್ತರೇಷ್ಠಾಃ ಬರ್‌ಹಿಷದಶ್ಚ ದೇವಾಃ = ಪ್ರಸ್ತರದಲ್ಲಿಯೂ, ಬರ್ಹಿಸ್ಸಿನಲ್ಲಿ ಕುಳಿತಿರುವ ವಿಶ್ವೇದೇವರೂ; ಅಭಿಗೃಣಂತಃ = ಚೆನ್ನಾಗಿ ಸ್ತುತಿಸಿದರೆಂದು ಪ್ರಶಂಸಿಸುತ್ತಾ; ಅಸ್ಮಿನ್ ಬರ್ಹಿಷಿ ಆಸದ್ಯ ಮಾದಯಧ್ವಮ್ = ಈ ಯಜ್ಞದಲ್ಲಿ ಕುಳಿತು ಸಂತೋಷಪಡಿರಿ.

೧೭) ಅಗ್ನೇ..........ಸ್ವಾಹಾ । ದಿವಃ = ದ್ಯುಲೋಕವಾಸಿಗಳಾದ ದೇವತೆಗಳ ದೆಸೆಯಿಂದ; [ದೇವತೆಗಳು ಕೋಪಗೊಂಡು ಹಿಂಸಿಸದಂತೆ ಮಾಡಿ ನನ್ನನ್ನು ರಕ್ಷಿಸು] ಪ್ರಸಿತ್ಯೈ = ಪ್ರಸಿತಿಂ ನಿವಾರಯಿತುಮ್ = ಕರ್ಮದ ನಾಶವನ್ನು ಪರಿಹರಿಸುವುದಕ್ಕಾಗಿ; ಮಾಮ್ ಪಾಹಿ = ನನ್ನನ್ನು ಕಾಪಾಡು. [ಪ್ರಸಿತ್ಯೈ ಎಂಬಲ್ಲಿ ಚತುರ್ಥೀವಿಭಕ್ತಿಯು ಪಂಚಮೀವಿಭಕ್ತಿಯ ಅರ್ಥದಲ್ಲಿ ಎಂದೂ ವ್ಯಾಖ್ಯಾನ ಮಾಡಿದ್ದಾರೆ] ದುರಿಷ್ಟ್ಯೈ = ಯಜ್ಞವು ವಿಕಲಾಂಗವಾಗದಂತೆ ಮಾಡಲು; ದುರದ್ಮನ್ಯೈ = ಅಭೋಜ್ಯಭೋಜನವಾಗದಂತೆ ಮಾಡಲು; ದುಶ್ಚರಿತಾತ್ ಪಾಹಿ = ತಪ್ಪಾದ ಕರ್ಮಾಚರಣೆಯಿಂದ ಉಂಟಾಗಬಹುದಾದ ಅನರ್ಥವನ್ನು ಪರಿಹರಿಸಿ ರಕ್ಷಿಸು. ಸುಷದಾ ಯೋನಿಮ್ = ಎಲ್ಲಕ್ಕೂ ಉತ್ಪತ್ತಿಸ್ಥಾನವಾದ ಅನ್ನವನ್ನು ಒದಗಿಸಿ ಸುಖವಾಗಿ ಇರುವಂತೆ ಮಾಡು.

## ಆ) ಮೀಮಾಂಸಾ

**೧) ಪೌರ್ಣಮಾಸೇಷ್ಟಿಯಲ್ಲಿಯೂ ಶಾಖಾಹರಣವಿದೆಯೇ?**

ದರ್ಶ-ಪೂರ್ಣಮಾಸಪ್ರಕರಣದಲ್ಲಿ 'ಸಹ ಶಾಖಯಾ ಪ್ರಸ್ತರಂ ಪ್ರಹರತಿ' (ಆಪ.ಶ್ರೌ.ಸೂ. 3.6.6.) ಎಂಬ ವಚನವಿದೆ. ಈ ಶಾಖಾಪ್ರಹರಣವು ಅರ್ಥಕರ್ಮವೇ

ಅಥವಾ ಪ್ರತಿಪತ್ತಿರೂಪವಾದ ದೃಷ್ಟಾರ್ಥವಾದ ಸಂಸ್ಕಾರಕರ್ಮವೇ? ಎಂಬ ಸಂಶಯ.

ಈ ಶಾಖಾಪ್ರಹರಣವು ಅರ್ಥಕರ್ಮವೇ. ಏಕೆಂದರೆ 'ಸೂಕ್ತವಾಕೇನ ಪ್ರಸ್ತರಂ ಪ್ರಹರತಿ' ಎಂಬ ವಾಕ್ಯದಲ್ಲಿ 'ಹರತಿ' ಎಂಬ ಪದಕ್ಕೆ 'ಜುಹೋತಿ' ಎಂಬುದಾಗಿ ಲಾಕ್ಷಣಿಕವಾಗಿ ಅರ್ಥ ಮಾಡುವುದರಿಂದ ಪ್ರಸ್ತರದ ಸಾಹಚರ್ಯದಿಂದ 'ಸಹ ಶಾಖಯಾ........' ಎಂಬ ವಾಕ್ಯದಲ್ಲಿಯೂ 'ಹರತಿ' ಎಂಬ ಪದಕ್ಕೆ ಜುಹೋತಿ ಎಂದೇ ಅರ್ಥವನ್ನು ಮಾಡಬೇಕು. ಆದುದರಿಂದ ಪ್ರಸ್ತರದೊಡನೆ ಪರ್ಣಶಾಖೆಯನ್ನೂ ಹೋಮ ಮಾಡಬೇಕೆಂದು ಅರ್ಥವಾಗುತ್ತದೆ. ದರ್ಶೇಷ್ಟಿಯಲ್ಲಿ ಶಾಖೆಯನ್ನು ತರುತ್ತಾರಾದರೂ, ಪೌರ್ಣಮಾಸೇಷ್ಟಿಯಲ್ಲಿ ವತ್ಸಾಪಾಕರಣಕ್ಕಾಗಿ ಶಾಖೆಯನ್ನು ತಂದಿರದಿದ್ದರೂ ಈ ಪ್ರಸ್ತರದೊಡನೆಯ ಪ್ರಹರಣಕ್ಕಾಗಿ ಪರ್ಣಶಾಖೆಯನ್ನು ತರಬೇಕು. ಇಲ್ಲಿ ಇದು ಪೂರ್ವಪಕ್ಷ.

ಇಲ್ಲಿಯ ಸಿದ್ಧಾಂತವು ಹೀಗಿದೆ : ಅರ್ಥಾಯ ಕ್ರಿಯಮಾಣಂ ಕರ್ಮ = ಅರ್ಥಕರ್ಮ ಎಂದರೆ ಕ್ರತುಸಾಫಲ್ಯರೂಪವಾದ ಪ್ರಯೋಜನಕ್ಕಾಗಿ ಮಾಡುವ ಕರ್ಮ. ಅಲ್ಲದೆ 'ಸಹ ಶಾಖಯಾ ಪ್ರಸ್ತರಂ ಪ್ರಹರತಿ' ಎಂಬ ವಾಕ್ಯದಲ್ಲಿ ಪ್ರಹರತಿ ಎಂಬ ಪದಕ್ಕೆ ಯಾಗವೆಂದು ಅರ್ಥವಲ್ಲ. 'ಸೂಕ್ತವಾಕೇನ ಪ್ರಹರತಿ' ಎಂಬ ವಾಕ್ಯದಲ್ಲಿ ಮಂತ್ರದಿಂದ ಉಕ್ತವಾಗುವ ದೇವತೆ ಮತ್ತು ಪ್ರಸ್ತರರೂಪವಾದ ದ್ರವ್ಯ ಇವುಗಳನ್ನು ಉಪಯೋಗಿಸಿಕೊಂಡು ಯಾಗವೆಂಬ ಲಾಕ್ಷಣಿಕವಾದ ಅರ್ಥವನ್ನು ಅಂಗೀಕರಿಸಲಾಗಿದೆ. ಆದರೆ ಶಾಖಾವಾಕ್ಯದಲ್ಲಿ ದೇವತೆಯು ಉಕ್ತವಾಗಿಲ್ಲವಾದುದರಿಂದ 'ಪ್ರಹರತಿ' ಎಂಬ ಶಬ್ದಕ್ಕೆ 'ಅಗ್ನಿಯಲ್ಲಿ ಹಾಕುವುದು' ಎಂಬ ಶಕ್ಯಾರ್ಥವನ್ನೇ ಇಟ್ಟುಕೊಳ್ಳಬೇಕು. ಈ ಶಾಖಾಪ್ರಹರಣವು ಪ್ರತಿಪತ್ತಿಕರ್ಮವೇ ಹೊರತು ಅರ್ಥಕರ್ಮವಲ್ಲ. ಪ್ರತಿಪತ್ತಿಕರ್ಮವೆಂದರೆ 'ಉಪಯುಕ್ತಸ್ಯ ಆಕೀರ್ಣಕರತಾನಿವರ್ತಕಂ ಕರ್ಮ' = ಉಪಯೋಗಿಸಿದ ವಸ್ತುವನ್ನು ಅದರಿಂದ ಮತ್ತೊಂದು ಕಾರ್ಯಕ್ಕೆ ತೊಂದರೆಯಾಗದಂತೆ ವಿಧಿಚೋದಿತವಾದ ಸ್ಥಳದಲ್ಲಿ ಹಾಕುವ ಕರ್ಮ. ವತ್ಸಾಪಾಕರಣದಲ್ಲಿ ಉಪಯುಕ್ತವಾದ ಪರ್ಣಶಾಖೆಯನ್ನು ಪ್ರಸ್ತರದೊಡನೆ ಅಗ್ನಿಯಲ್ಲಿ ಹಾಕುವುದು ಅದರ ಪ್ರತಿಪತ್ತಿಕರ್ಮ. ಇದು ದೃಷ್ಟಾರ್ಥ. ಅದೃಷ್ಟಾರ್ಥವಲ್ಲ. ಪೌರ್ಣಮಾಸೇಷ್ಟಿಯಲ್ಲಿ ವತ್ಸಾಪಾಕರಣವು ಇಲ್ಲದುದರಿಂದ ಶಾಖೆಗೆ ಅರ್ಥಕರ್ಮದಲ್ಲಿಯೇ ವಿಧಿಯಿಲ್ಲವಾದುದರಿಂದ ಪ್ರತಿಪತ್ತಿಕರ್ಮದಲ್ಲಿ ಪ್ರಸಕ್ತಿ ಬರದಿರುವುದರಿಂದ ಪ್ರಹರಣಕ್ಕಾಗಿ ಶಾಖೆಯನ್ನು ತರಬೇಕಾಗಿಲ್ಲ.

**೨) ಯಾಗಾಧಿಕಾರವು ಸ್ತ್ರೀಯರಿಗೂ ಉಂಟೇ?**

'ಸ್ವರ್ಗಕಾಮೋ ಯಜೇತ' ಮೊದಲಾದ ವಾಕ್ಯಗಳಲ್ಲಿ ಪುಲ್ಲಿಂಗರೂಪವಾದ

'ಸ್ವರ್ಗಕಾಮಃ' ಮೊದಲಾದ ಪದಗಳಿರುವುದರಿಂದ ಪುರುಷರಿಗೆ ಮಾತ್ರ ಯಾಗಾಧಿಕಾರವೇ? ಅಥವಾ ಸ್ತ್ರೀಯರಿಗೂ ಉಂಟೇ? ಎಂಬುದು ಸಂಶಯ.

'ಗ್ರಹಂ ಸಂಮಾರ್ಷ್ಟಿ' ಎಂಬ ವಾಕ್ಯದಲ್ಲಿ ಎಲ್ಲ ಗ್ರಹ[ಸೋಮರಸವನ್ನಿಡುವ ಮರದ ಪಾತ್ರೆ]ಗಳಿಗೂ ಸಮ್ಮಾರ್ಜನೆ ಮಾಡಬೇಕಾದುದರಿಂದ 'ಗ್ರಹಮ್' ಎಂಬಲ್ಲಿಯ ಏಕವಚನವು ವಿವಕ್ಷಿತವಲ್ಲ ಎಂಬ ನಿರ್ಣಯದಂತೆ ಇಲ್ಲಿಯೂ 'ಸ್ವರ್ಗಕಾಮಃ' ಎಂಬಲ್ಲಿ ಪುಲ್ಲಿಂಗವು ವಿವಕ್ಷಿತವಲ್ಲ, ಆದ್ದರಿಂದ ಉಭಯರಿಗೂ ಅಧಿಕಾರವಿದೆ ಎಂದು ಕೆಲವರು ಹೇಳುತ್ತಾರೆ. ಆದರೆ 'ಗ್ರಹಂ ಸಮ್ಮಾರ್ಷ್ಟಿ' ಎಂಬ ವಾಕ್ಯಕ್ಕೂ ಇಲ್ಲಿಗ್ಗೂ ಭೇದವಿದೆ. ಅಲ್ಲಿ ಏಕತ್ವವೆಂಬುದು ಪ್ರತ್ಯಯದ ಅರ್ಥ. ಪ್ರಾತಿಪದಿಕವಾದ ಗ್ರಹ ಎಂಬುದರ ಅರ್ಥವಾದ ಗ್ರಹತ್ವವು ವಿವಕ್ಷಿತವೇ. ಅಂತೆಯೇ ಇಲ್ಲಿಯೂ 'ಸ್ವರ್ಗಕಾಮ' ಎಂಬುದು ಪ್ರಾತಿಪದಿಕವಾದುದರಿಂದ ಲಿಂಗವು ಪ್ರಾತಿಪದಿಕದ ಅರ್ಥವಾದುದರಿಂದ ಪುರುಷರಿಗೆ ಮಾತ್ರವೇ ಯಾಗಾಧಿಕಾರ ಎಂದು ಇಲ್ಲಿನ ಪೂರ್ವಪಕ್ಷ.

ಇಲ್ಲಿಯ ಸಿದ್ಧಾಂತವು ಹೀಗಿದೆ: ಯಾಗದಲ್ಲಿ ಸ್ತ್ರೀಯರಿಗೂ ಅಧಿಕಾರವುಂಟು. 'ಗ್ರಹಂ ಸಮ್ಮಾರ್ಷ್ಟಿ' ಎಂಬಲ್ಲಿ ಏಕತ್ವವನ್ನು ಅವಿವಕ್ಷಿತವೆಂಬುದಕ್ಕೆ ಕಾರಣವಿದೆ. ಗ್ರಹಗಳನ್ನು ಉದ್ದೇಶಿಸಿ ಈ ವಾಕ್ಯವು ಸಮ್ಮಾರ್ಜನವನ್ನು ವಿಧಿಸುತ್ತದೆ. ಉದ್ದೇಶ್ಯವಾದ ಗ್ರಹಗಳಿಗೆ ಏಕತ್ವವು ವಿಶೇಷಣವಾದುದರಿಂದ ಉದ್ದೇಶ್ಯದ ಸಂಖ್ಯೆಯು ಅವಿವಕ್ಷಿತವೇ ಹೊರತು ಸಂಖ್ಯೆಯು ಪ್ರತ್ಯಯಾರ್ಥವೆಂಬ ಕಾರಣದಿಂದಲ್ಲ. **'ಸ್ವರ್ಗಕಾಮೋ ಯಜೇತ'** ಎಂಬುದನ್ನು **'ಯಃ ಸ್ವರ್ಗಕಾಮಃ ಸ ಯಜೇತ'** ಎಂಬ ವಾಕ್ಯ ಮಾಡಿಕೊಂಡಾಗ ಪುರುಷತ್ವವು ಉದ್ದೇಶ್ಯವಿಶೇಷಣವಾಗಿದೆ. ಸ್ವರ್ಗಕಾಮನಾದವನನ್ನುದ್ದೇಶಿಸಿ ಯಾಗವು ವಿಧಿಸಲ್ಪಡುತ್ತದೆ. ಅಲ್ಲಿ ಲಿಂಗವು ಅವಿವಕ್ಷಿತವಾಗಿದೆ. ಅಲ್ಲದೆ ಲಿಂಗವು ಪ್ರಕೃತಿಯ ಅರ್ಥವಲ್ಲ. 'ಟಾಪ್, ಜೀಪ್' ಮೊದಲಾದ ಪ್ರತ್ಯಯಗಳಿಂದ ಸ್ತ್ರೀತ್ವವು ಹೇಳಲ್ಪಡುತ್ತದೆ. ಪುಲ್ಲಿಂಗವು 'ವೃಕ್ಷಾನ್' ಮೊದಲಾದ ಕಡೆಗಳಲ್ಲಿ ನಕಾರದಿಂದ ವ್ಯಕ್ತವಾಗುತ್ತದೆ. 'ಕುಲಮ್' ಮೊದಲಾದ ಕಡೆಯಲ್ಲಿ ಪ್ರಥಮಾವಿಭಕ್ತಿಯ ಏಕವಚನವು ನಪುಂಸಕತ್ವಾಭಿವ್ಯಂಜಕವಾಗುತ್ತದೆ. ಆದುದರಿಂದ ಲಿಂಗವು ಪ್ರಕೃತ್ಯರ್ಥವಲ್ಲದುದರಿಂದ, ಉದ್ದೇಶ್ಯದಲ್ಲಿ ಅವಿವಕ್ಷಿತವೇ ಆಗಿರುತ್ತದೆ. ಗ್ರಹತ್ವದಂತೆ ಲಿಂಗವನ್ನು ವಿವಕ್ಷಿತವೆಂದು ಹೇಳಲು ಬರುವುದಿಲ್ಲ. ಹೀಗಾಗಿ ಸ್ತ್ರೀಯರಿಗೂ ಯಾಗಾಧಿಕಾರವಿರುತ್ತದೆ.

**೩) ದಂಪತಿಗಳಿಗೆ ಪ್ರತ್ಯೇಕಾಧಿಕಾರವೇ? ಸಹಾಧಿಕಾರವೇ?**

ಸ್ತ್ರೀಯರಿಗೆ ಯಾಗಾಧಿಕಾರವಿದೆಯೆಂದಮೇಲೆ ಸ್ತ್ರೀಯರಿಗೂ ಪುರುಷರಿಗೂ ಪ್ರತ್ಯೇಕಾಧಿಕಾರವೇ? ಸಹಾಧಿಕಾರವೇ? ಎಂಬ ಸಂಶಯ.

ಇಲ್ಲಿಯ ಪೂರ್ವಪಕ್ಷ ಹೀಗಿದೆ; 'ಯಜೇತ' ಎಂಬ ಪದದಲ್ಲಿ ಏಕವಚನ ವಿರುವುದರಿಂದ ಒಬ್ಬನೇ ಅಥವಾ ಒಬ್ಬಳೇ ಯಾಗ ಮಾಡಬೇಕು. 'ಯಜೇತ' ಎಂಬುದು ವಿಧೇಯವಾದುದರಿಂದ ಅದರ ಸಂಖ್ಯೆಯೂ ವಿವಕ್ಷಿತವೇ ಹೊರತು ಅವಿವಕ್ಷಿತವೆಂದು ಹೇಳಲು ಬರುವಂತಿಲ್ಲ. ಆದ್ದರಿಂದ ದಂಪತಿಗಳಿಗೆ ಯಾಗದಲ್ಲಿ ಪ್ರತ್ಯೇಕಾಧಿಕಾರವೇ ಹೊರತು ಸಹಾಧಿಕಾರವಲ್ಲ.

ಇಲ್ಲಿನ ಸಿದ್ಧಾಂತವು ಹೀಗಿದೆ; ಪ್ರತ್ಯೇಕಾಧಿಕಾರವಿದ್ದರೆ ಯಾಗದಲ್ಲಿ ವೈಗುಣ್ಯ ಸಂಭವಿಸುತ್ತದೆ. ಏಕೆಂದರೆ ಯಾಗದಲ್ಲಿ ಯಜಮಾನನ ಆಜ್ಯಾವೇಕ್ಷಣವಿದೆ. ಪತ್ನಿಯ ಆಜ್ಯಾವೇಕ್ಷಣವೂ ಇದೆ. ಅದನ್ನು ಅವರವರೇ ಮಾಡತಕ್ಕದ್ದಾಗಿರುತ್ತದೆ. ಪತಿಯೇ ಕೇವಲ ಯಾಗಾನುಷ್ಠಾನವನ್ನು ಮಾಡಿದರೆ ಪತ್ನಿಯ ಆಜ್ಯಾವಲೋಕನವಿಧಿಯ ಲೋಪವಾಗುತ್ತದೆ. ಪತ್ನಿಯೇ ಕೇವಲ ಯಾಗಾನುಷ್ಠಾನವನ್ನು ಮಾಡಿದರೆ ಪತಿಯ ಆಜ್ಯಾವಲೋಕನ ವಿಧಿಯ ಲೋಪವಾಗುತ್ತದೆ. ಹೀಗಾಗುವುದರಿಂದ ಯಾಗದ ವೈಗುಣ್ಯವಾಗುತ್ತದೆ. ಆದುದರಿಂದ ಸಹಾಧಿಕಾರವೇ ಹೊರತು ಪ್ರತ್ಯೇಕಾಧಿಕಾರವಲ್ಲ. 'ಅಗ್ನೀಷೋಮೌ ದೇವತಾ' ಎಂಬಲ್ಲಿ ಯಾವ ರೀತಿ ಅಗ್ನಿ ಮತ್ತು ಸೋಮನಿಗೆ ಪ್ರತ್ಯೇಕದೇವತಾತ್ವ ವಿರುವುದಿಲ್ಲವೋ, ಬದಲಾಗಿ ಉಭಯನಿಷ್ಠವಾದ, ವ್ಯಾಸಕ್ತವಾದ ಒಂದೇ ದೇವತಾತ್ವವಿರುವುದೋ ಅಂತೆಯೇ ಪತಿ ಮತ್ತು ಪತ್ನಿಯರಿಗೆ ಕರ್ತೃತ್ವವು ಒಂದೇ. 'ಊನಾತಿರಿಕ್ತಂ ಧೀಯಾತೈ' [ತೈ.ಬ್ರಾ. 3.3.5] 'ಕರ್ಮದಲ್ಲಿ ನ್ಯೂನಾಂಗಪೂರಣವು ಪತ್ನಿಯಿಂದ ಮಾಡಲ್ಪಡುತ್ತದೆ' ಎಂಬ ಶ್ರುತಿವಾಕ್ಯವು ಹೇಳಿರುವುದೂ ಸಹಾಧಿಕಾರ ವಿದ್ದಾಗಲೇ ಹೊಂದಿಕೊಳ್ಳುತ್ತದೆ. ಆದುದರಿಂದ ದಂಪತಿಗಳಿಗೆ ಸಹಾಧಿಕಾರವಿರುತ್ತದೆ.

## ಇ) ಛಂದಸ್ಸು

[ಈ ಪ್ರಪಾಠಕದ ಕಳೆದ ಹದಿಮೂರು ಅನುವಾಕಗಳಲ್ಲಿ 'ಇಷೇ ತ್ವಾ ಮುಂತಾದವುಗಳು ಯಜುರ್ಮಂತ್ರಗಳು. ಸಾಯಣರು ಈ ಹದಿಮೂರನೆಯ ಅನುವಾಕದ ಶೇಷಭಾಗದಲ್ಲಿ ಕಳೆದ ಅನುವಾಕಗಳಲ್ಲಿ ಬಂದ ಮಂತ್ರಗಳ ಛಂದಸ್ಸಿನ ವಿಷಯವನ್ನು ಪ್ರಸ್ತಾಪಿಸಿ ವಿವರಿಸಿದ್ದಾರೆ.]

**ಇಷೇ ತ್ವಾದ್ಯಾ ಯಜುರ್ಮಂತ್ರಾಃ ಕಾಚಿತ್ಕಾಚಿದುದೀರಿತಾ ।**
**ತಾಂ ತಾಮೃಚಂ ವಿವಿಚ್ಯಾತ್ರ ವಚ್ಮಿ ಛಂದೋಽವಬುದ್ಧಯೇ ॥**

'ಇಷೇ ತ್ವಾ' ಮುಂತಾದವುಗಳು ಯಜುರ್ಮಂತ್ರಗಳು. ಮಧ್ಯದಲ್ಲಿ ಅಲ್ಲಲ್ಲಿ ಕೆಲವು

ಛಂದೋಬದ್ಧವಾದ ಮಂತ್ರಗಳಿವೆ. ಅವು ಋಕ್ಕುಗಳು. ಅವುಗಳ ವಿನಿಯೋಗವನ್ನು ಹೇಳುವ ಬ್ರಾಹ್ಮಣದಲ್ಲಿ 'ಸಾವಿತ್ರಿಯರ್ಚಾ' 'ಅನುಷ್ಟುಭರ್ಚಾ' 'ವೈಶ್ವದೇವ್ಯರ್ಚಾ' ಎಂದು ಋಕ್‌ಶಬ್ದಪ್ರಯೋಗಪೂರ್ವಕವಾಗಿ ವಿನಿಯೋಗವನ್ನು ಹೇಳಲಾಗಿದೆ. ಆದುದರಿಂದ ಛಂದಸ್ಸಿನ ವಿಷಯವನ್ನು ತಿಳಿಯಬೇಕು. ಅನುಬಂಧದಲ್ಲಿ ಈ ಪ್ರಪಾಠಕದ ಮಂತ್ರಗಳ ಛಂದಸ್ಸಿನ ವಿಷಯವನ್ನು ಕೋಷ್ಟಕದ ಮೂಲಕ ತಿಳಿಸಲಾಗಿದೆ.

ಈ ಪ್ರಪಾಠಕದ ಕಡೆಯ ಅನುವಾಕವು ಯಾಜ್ಯಾಕಾಂಡಕ್ಕೆ ಸೇರಿದೆ. ಅಲ್ಲಿ ಋಕ್‌ಗಳೇ ಇರುತ್ತವೆ. ಸಾಯಣರು ತಾವು ತಿಳಿಸಿದ ಋಕ್‌ಗಳಲ್ಲದೆ ಉಳಿದ ಮಂತ್ರಗಳಲ್ಲಿಯೂ ತಾವು ತಿಳಿಸಿರುವ ಋಕ್‌ಗಳಲ್ಲಿರುವ ಅಕ್ಷರಗಳಷ್ಟೇ ಅಕ್ಷರಗಳಿದ್ದರೆ ಅದನ್ನೂ, ಮಾತ್ರೆಗಳನ್ನೂ ಗಮನಿಸಿ ಯಾವುದಾದರೂ ಛಂದಸ್ಸನ್ನು ಹೇಳಬಹುದಲ್ಲವೇ? ಎಂಬ ಸಂಶಯವನ್ನು ಎತ್ತಿ ಹೀಗೆ ಪರಿಹರಿಸಿರುತ್ತಾರೆ. ಶ್ರುತಿಯಲ್ಲಿ

'ತತ್ಪ್ರೋಭಯೋರ್ಮೀಮಾಗ್ಂಸಾ । ಜಾಮಿ ಸ್ಯಾತ್ । ಯದ್ಯಜುಷಾಜ್ಯಂ
ಯಜುಷಾಪ ಉತ್ಪುನೀಯಾತ್ । ಛಂದಸಾಪ ಉತ್ಪುನಾತ್ಯಜಾಮಿತ್ವಾಯ ।

(ತೈ.ಬ್ರಾ. 3.3.4)

ಎಂಬ ವಾಕ್ಯಗಳಿವೆ. ಈ ಸಂದರ್ಭದಲ್ಲಿ ಯಜುಸ್ಸನ್ನು ನಿಷೇಧಿಸಿ ಛಂದಸ್ಸಿನಿಂದ (ಋಕ್‌ನಿಂದ) ಉತ್ಪವನವನ್ನು ಮಾಡಬೇಕೆಂದು ಹೇಳಿರುವುದರಿಂದ ಯಜುರ್ಮಂತ್ರಗಳಿಗೆ ಯಾವುದಾದರೂ ಛಂದಸ್ಸನ್ನು ಹೇಳುವುದು ಶ್ರುತಿಗೆ ಅಭಿಮತವಲ್ಲ. ಆದುದರಿಂದ ಸಂಪ್ರದಾಯಾನುಸಾರವಾಗಿ ಎಲ್ಲಿಯಾದರೂ ಛಂದೋಲಕ್ಷಣವಿದ್ದರೆ ಅದನ್ನು ಮಾತ್ರ ಗುರುತಿಸಿ ಛಂದಸ್ಸನ್ನು ಹೇಳಲಾಗಿದೆ ಎಂದಿದ್ದಾರೆ.

*ಸಾರಸ್ವತಪಾಠಕ್ರಮದ ಎರಡನೆಯ ಕಾಂಡದ ಎರಡು, ಮೂರು ಮತ್ತು ನಾಲ್ಕನೆಯ ಪ್ರಪಾಠಕಗಳು ಕಾಮ್ಯೇಷ್ಟಿಗಳನ್ನು ಹೇಳುತ್ತವೆ. ಈ ಕಾಮ್ಯೇಷ್ಟಿಗೆ ಸಂಬಂಧಿಸಿದ ಯಾಜ್ಯಾ-ಪುರೋನುವಾಕ್ಯಗಳು ಒಂದು, ಎರಡು, ಮತ್ತು ಮೂರನೆಯ ಕಾಂಡದ ಎಲ್ಲ ಪ್ರಪಾಠಕಗಳ ಕಡೆಯ ಅನುವಾಕಗಳಲ್ಲಿಯೂ, ನಾಲ್ಕನೆಯ ಕಾಂಡದ ಮೊದಲ ಮೂರು ಪ್ರಪಾಠಕಗಳ ಕಡೆಯ ಅನುವಾಕಗಳಲ್ಲಿಯೂ ಹೇಳಲ್ಪಟ್ಟಿವೆ. ಸಮಾಖ್ಯೆಯಿಂದ ಈ ಎರಡೂ ಕಾಂಡಗಳಿಗೆ ಸಂಬಂಧ. ಕಾಮ್ಯೇಷ್ಟಿಕಾಂಡ ಮತ್ತು

*ಕೃ.ಯ. ಕನ್ನಡ ಪ್ರಕಾಶನ ಸಂಪುಟ ೧, ಭಾಗ ೨.

ಕಾಮ್ಯೇಷ್ಟಿಯಾಜ್ಯಾಕಾಂಡ ಎಂಬುದೇ ಸಮಾಖ್ಯೆ. ದೇವತಾಪ್ರಕಾಶನಸಾಮರ್ಥ್ಯ ರೂಪವಾದ ಲಿಂಗದಿಂದಲೂ ಈ ಎರಡು ಕಾಂಡಗಳ ಸಂಬಂಧವು ಕ್ರಮವಾಗಿ ಆಗುತ್ತದೆ.

ಈ ಕಾಮ್ಯೇಷ್ಟಿಯಾಜ್ಯಾಕಾಂಡದಲ್ಲಿ ಒಂದೊಂದು ಮಂತ್ರವೇ ದೇವತಾ ಪ್ರಕಾಶಕವಾದರೂ ದರ್ವಿಹೋಮಕ್ಕಿಂತ ಯಾಗವು ಭಿನ್ನವಾದುದರಿಂದ ಭೇದವನ್ನು ಸೂಚಿಸಲು ಎರಡು ಮಂತ್ರಗಳಿವೆ.

'ಯದೇಕಯಾ ಜುಹುಯಾತ್, ದರ್ವಿಹೋಮಂ ಕುರ್ಯಾತ್, ಪುರೋನುವಾಕ್ಯಾ-

ಮನೂಚ್ಯ ಯಾಜ್ಯಯಾ ಜುಹೋತಿ'

ಎಂಬ ವಿಧಿಯಿದೆ. ಯಾಗದಲ್ಲಿ ಹೇಳುವ ಪುರೋನುವಾಕ್ಯೆಯ ಪೂರ್ವಾರ್ಧದಲ್ಲಿ ದೇವತಾವಾಚಕಶಬ್ದವಿರುತ್ತದೆ. ಯಾಜ್ಯೆಯ ಉತ್ತರಾರ್ಧದಲ್ಲಿ ದೇವತಾವಾಚಕ ವಿರುತ್ತದೆ.

'ಪುರಸ್ತಾಲ್ಲಕ್ಷ್ಮಾ ಪುರೋನುವಾಕ್ಯಾ ಭವತಿ, ಉಪರಿಷ್ಟಾಲ್ಲಕ್ಷ್ಮಾ ಯಾಜ್ಯಾ'

ಎಂಬ ಈ ಲಕ್ಷಣವು ಸಾಧಾರಣಲಕ್ಷಣ.

ಇಷ್ಟಿಯು ಒಂದೇ ಇದ್ದು ಮಂತ್ರಗಳು ಹಲವಿದ್ದರೆ ಮಂತ್ರಗಳಲ್ಲಿ ವಿಕಲ್ಪ. ಇಷ್ಟಿಗಳು ಹಲವಿದ್ದು ಮಂತ್ರಗಳು ಕೆಲವಿದ್ದರೆ ಮಂತ್ರಗಳನ್ನುವಿಭಾಗ ಮಾಡಿ ವಿನಿಯೋಗಿಸಬೇಕು.

ಎರಡನೆಯ ಕಾಂಡದ ಎರಡನೆಯ ಪ್ರಪಾಠಕದ ಮೊದಲನೆಯ ಅನುವಾಕದಲ್ಲಿ ಆರು ಐಂದ್ರಾಗ್ನೇಷ್ಟಿಗಳು ವಿಹಿತವಾಗಿವೆ. ಈ ಅನುವಾಕದಲ್ಲಿ ಇಂದ್ರಾಗ್ನಿದೇವತಾ ಪ್ರಕಾಶಕವಾದ ಯಾಜ್ಯಾ-ಪುರೋನುವಾಕ್ಯಗಳ ಎರಡು ಜೋಡಿಗಳು ಇವೆ. ಮೊದಲನೆಯ ಪುರೋನುವಾಕ್ಯೆ-ಯಾಜ್ಯಾನುವಾಕ್ಯಗಳು ಮೊದಲ ಮೂರು ಇಷ್ಟಿಗಳಿಗೂ, ಎರಡನೆಯ ಪುರೋನುವಾಕ್ಯೆ-ಯಾಜ್ಯಾನುವಾಕ್ಯೆಯ ಜೋಡಿಯು ಉಳಿದ ಮೂರು ಇಷ್ಟಿಗಳಿಗೂ ಸಂಬಂಧಿಸುತ್ತದೆ.

ಹಿಂದಿನ ಹದಿಮೂರು ಅನುವಾಕದ ಮಂತ್ರಗಳು ಪ್ರಾಜಾಪತ್ಯಕಾಂಡಕ್ಕೆ ಸೇರಿದವುಗಳಷ್ಟೆ. ಈ ಯಾಜ್ಯಾಕಾಂಡದ ಎಲ್ಲ ಮಂತ್ರಗಳೂ ವೈಶ್ವದೇವಕಾಂಡಕ್ಕೆ ಸೇರಿದವುಗಳು.

ಕಳೆದ ಹದಿಮೂರು ಅನುವಾಕಗಳಲ್ಲಿ ಬಂದ ಋಕ್‌ಗಳನ್ನೂ ಅವುಗಳ ಛಂದಸ್ಸನ್ನೂ ತಿಳಿಸುವ ಕೋಷ್ಟಕವನ್ನು ಅನುಬಂಧದಲ್ಲಿ ನೀಡಲಾಗಿದೆ. ವಿನಿಯೋಗವನ್ನನುಸರಿಸಿ, ಬೌಧಾಯನ-ಆಪಸ್ತಂಬರ ಮತಗಳನ್ನನುಸರಿಸಿ, ಸಾಯಣ-ಮಿಶ್ರರ ಮತಗಳನ್ನನುಸರಿಸಿ ಛಂದಸ್ಸಿನಲ್ಲಿ ಭೇದವಿದ್ದರೆ ಅದನ್ನೂ ಸಹ ತಿಳಿಸಲಾಗಿದೆ. ಹದಿನಾಲ್ಕನೆಯ ಅನುವಾಕದಲ್ಲಿ ಬರುವ ಎಲ್ಲ ಮಂತ್ರಗಳೂ ಸಹ ಛಂದೋಬದ್ಧವಾಗಿಯೇ ಇರುವುದರಿಂದ ಅವುಗಳ ಛಂದಸ್ಸಿನ ವಿಚಾರವನ್ನೂ ಅಲ್ಲಿಯೇ ನೀಡಲಾಗಿದೆ.

ಹಿಂದಿನ ಹದಿಮೂರು ಅನುವಾಕಗಳಲ್ಲಿ ದರ್ಶ-ಪೂರ್ಣಮಾಸೇಷ್ಟಿಗಳಿಗೆ ಸಂಬಂಧಿಸಿದ ಮಂತ್ರಗಳನ್ನು ಹೇಳಲಾಗಿದೆ. ಐಷ್ಟಿಕಗಳಿಗೆ ಪ್ರಕೃತಿಯಾದ ಈ ಇಷ್ಟಿಯನ್ನು ಹೇಳಿದ ಮೇಲೆ ವಿಕೃತೀಷ್ಟಿಗಳನ್ನು ಹೇಳಬೇಕು. '**ಪ್ರಕೃತಿವತ್ ವಿಕೃತಿಃ ಕರ್ತವ್ಯಾ**' ಎಂಬ ಅತಿದೇಶವಚನದಂತೆ ಪ್ರಕೃತೀಷ್ಟಿಯಲ್ಲಿ ಅಧ್ವರ್ಯುವಿಗೆ ಸಂಬಂಧಿಸಿದ ಮಂತ್ರಗಳು, ವಿನಿಯೋಗಗಳು ವಿಕೃತೀಷ್ಟಿಗಳಲ್ಲಿ ಪ್ರಾಪ್ತವಾಗುತ್ತವೆ. ಹೋತೃವಿಗೆ ಸಂಬಂಧಿಸಿದ ಯಾಜ್ಯಾ-ಪುರೋನುವಾಕ್ಯಾದಿಗಳು ಪ್ರಾಪ್ತವಾಗುವುದಿಲ್ಲ. ವಿಕೃತೀಷ್ಟಿಯಲ್ಲಿ ದ್ರವ್ಯವೂ ದೇವತೆಯೂ ಬೇರೆ ಇರುವುದರಿಂದ ಯಾಜ್ಯಾ-ಪುರೋನುವಾಕ್ಯಗಳು ಬೇರೆಯೇ ಇರುತ್ತವೆ. ಬೇರೆ ಬೇರೆಯಾಗಿ ಶ್ರುತಿಯಲ್ಲಿ ಉಪದಿಷ್ಟವಾಗಿರುವ ಕೆಲವು ಇಷ್ಟಿಗಳ ಯಾಜ್ಯಾ-ಪುರೋನುವಾಕ್ಯಗಳು ಮುಂದಿನ ಹದಿನಾಲ್ಕನೆಯ ಅನುವಾಕದಲ್ಲಿ ಹೇಳಲ್ಪಟ್ಟಿವೆ.



---

## || ಚತುರ್ದಶೋಽನುವಾಕಃ ||

ಉಭಾ ವಾಮಿಂದ್ರಾಗ್ನೀ ಆಹುವಧ್ಯಾ ಉಭಾ ರಾಧ
ಸಸ್ಸಹ ಮಾದಯಧ್ಯೈ । ಉಭಾ ದಾತಾರಾವಿಷಾಗ್ಂ
ರಯೀಣಾಮುಭಾ ವಾಜಸ್ಯ ಸಾತಯೇ ಹುವೇ ವಾಮ್ ||

● ಪ ● ಉಭಾ । ವಾಮ್ । ಇಂದ್ರಾಗ್ನೀ ಇತೀಂದ್ರ-ಅಗ್ನೀ । ಆಹುವಧ್ಯೈ । ಉಭಾ। ರಾಧಸಃ । ಸಹ । ಮಾದಯಧ್ಯೈ ॥ ಉಭಾ । ದಾತಾರೌ । ಇಷಾಮ್ । ರಯೀಣಾಮ್। ಉಭಾ । ವಾಜಸ್ಯ । ಸಾತಯೇ । ಹುವೇ । ವಾಮ್ ||

| ಮಂತ್ರ | ವಿನಿಯೋಗ |
|---|---|
| ಉಭಾ....ವಾಮ್॥ | ೧) ಪ್ರಜಾಕಾಮನು(ಸಂತತಿಯನ್ನು ಬಯಸುವವನು) ಮಾಡುವ ೨) ಶತ್ರುಗಳೊಡನೆ ಸ್ಪರ್ಧಿಸುವವನು ಮಾಡುವ ೩) ಯುದ್ಧಕ್ಕೆ ಹೋಗುವವನು ಮಾಡುವ ಐಂದ್ರಾಗ್ನೇಷ್ಟಿಗಳಲ್ಲಿ ಪುರೋನುವಾಕ್ಯೆಯಾಗಿ. |

ಇಂದ್ರಾಗ್ನೀ! = ಎಲೈ ಇಂದ್ರಾಗ್ನಿದೇವತೆಗಳೇ! ಉಭಾ ವಾಮ್ = ನಿಮ್ಮಿಬ್ಬರನ್ನು [ಉದ್ದೇಶಿಸಿ;] ಆಹುವಧ್ಯೈ=ಸಂಪೂರ್ಣವಾಗಿ ಹೋಮ ಮಾಡುವುದಕ್ಕೂ; (ಆಹುತಿಪ್ರದಾನದಿಂದ ಆರಾಧಿಸುವುದಕ್ಕೂ) ರಾಧಸಃ = ಪುರೋಡಾಶರೂಪವಾದ ಅನ್ನದಿಂದ; ಉಭಾ = ನಿಮ್ಮಿಬ್ಬರನ್ನೂ; ಸಹ ಮಾದಯಧ್ಯೈ = ಜೊತೆಯಲ್ಲಿಯೇ ಸಂತೋಷಪಡಿಸುವುದಕ್ಕೂ (ತೃಪ್ತಿಪಡಿಸುವುದಕ್ಕೂ); ಹುವೇ= ಆಹ್ವಾನಿಸುತ್ತೇನೆ; ಉಭಾ=ನೀವಿಬ್ಬರೂ; ಇಷಾಮ್ = ಅನ್ನವಸ್ತುಗಳನ್ನು; ರಯೀಣಾಮ್ = ಕ್ಷೇತ್ರ-ಪುತ್ರ-ಪಶ್ವಾದಿಸಂಪತ್ತುಗಳನ್ನು; ದಾತಾರೌ = ಕೊಡತಕ್ಕವರಾಗಿರುತ್ತೀರಿ; ವಾಜಸ್ಯ= ಅನ್ನಾದಿಗಳ; ಸಾತಯೇ = ಪ್ರಾಪ್ತಿಗಾಗಿ; ಉಭಾ ವಾಮ್=ನಿಮ್ಮಿಬ್ಬರನ್ನೂ; ಹುವೇ = ಕರೆಯುತ್ತಿದ್ದೇನೆ. +ಇಂದ್ರಾಗ್ನೀ = ಎಲೈ ಇಂದ್ರಾಗ್ನಿದೇವತೆಗಳೇ! ವಾಮ್ = ನಿಮ್ಮಿಬ್ಬರನ್ನು;

ದೇವತೆಗಳಾದ ಇಂದ್ರಾಗ್ನಿಗಳೇ! ನಿಮ್ಮಿಬ್ಬರನ್ನೂ ಉದ್ದೇಶಿಸಿ ಅಗ್ನಿಯಲ್ಲಿ ಆಹುತಿ

## ಅಶ್ರವಗ್ಂ ಹಿ ಭೂರಿದಾವತ್ತರಾ ವಾಂ ವಿಜಾಮಾತುರುತ ವಾ ಘಾ ಸ್ಯಾಲಾತ್। ಅಥಾ ಸೋಮಸ್ಯ ಪ್ರಯತೀ ಯುವ-ಭ್ಯಾಮಿಂದ್ರಾಗ್ನೀ ಸ್ತೋಮಂ ಜನಯಾಮಿ ನವ್ಯಮ್ ॥

ಅಶ್ರವಮ್ । ಹಿ । ಭೂರಿದಾವತ್ತರೇತಿ ಭೂರಿದಾವತ್-ತರಾ । ವಾಮ್ । ವಿಜಾಮಾತುರಿತಿ ವಿ-ಜಾಮಾತುಃ । ಉತ । ವಾ । ಘ । ಸ್ಯಾಲಾತ್ ॥ ಅಥ । ಸೋಮಸ್ಯ । ಪ್ರಯತೀತಿ ಪ್ರ-ಯತೀ । ಯುವಭ್ಯಾಮಿತಿ ಯುವ-ಭ್ಯಾಮ್ । ಇಂದ್ರಾಗ್ನೀ ಇತೀಂದ್ರ-ಅಗ್ನೀ । ಸ್ತೋಮಮ್ । ಜನಯಾಮಿ । ನವ್ಯಮ್ ॥

| ಮಂತ್ರ | ವಿನಿಯೋಗ |
|---|---|
| ಅಶ್ರವಮ್.......ನವ್ಯಮ್ ॥ | ಪ್ರಜಾಕಾಮನೂ, ಶತ್ರುಗಳೊಡನೆ ಸ್ಪರ್ಧಿಯೂ, ಯುದ್ಧಕ್ಕೆ ಹೊರಡುವವನೂ - ಮಾಡುವ ಐಂದ್ರಾಗ್ನೇಷ್ಟಿಯಲ್ಲಿ ಯಾಜ್ಯಾನುವಾಕ್ಯವಾಗಿ. |

ವಿಜಾಮಾತುಃ=ಶ್ರೇಷ್ಠನಾದ ಅಳಿಯನಿಗಿಂತಲೂ; ಉತ ವಾ=ಅಥವಾ; ಸ್ಯಾಲಾತ್ ಘ = [ಸೋದರಿಯಲ್ಲಿ ಅತಿಸ್ನೇಹಯುಕ್ತನಾದ] ಭಾವಮೈದುನನಿಗಿಂತಲೂ; ಭೂರಿದಾವತ್ತರಾ= ಹೆಚ್ಚಾಗಿ ಪ್ರಜಾದಿಗಳನ್ನು ಕೊಡತಕ್ಕವರೆಂದು; ಅಶ್ರವಗ್ಂ ಹಿ=ಕೇಳಿರುವೆನಷ್ಟೆ; ಅಥ= ಆದುದರಿಂದ; ಯುವಭ್ಯಾಮ್=ನಿಮ್ಮಿಬ್ಬರಿಗೆ; ಸೋಮಸ್ಯ=ಸೋಮಸದೃಶವಾದ ಪುರೋಡಾಶದ್ರವ್ಯದ; ಪ್ರಯತೀ= ಕೊಡುವಿಕೆಯಿಂದ; ನವ್ಯಮ್=ಹೊಸದಾದ; ಸ್ತೋಮಮ್= [ಸಂತೋಷರೂಪವಾದ ಚಿತ್ತವೃತ್ತಿಗಳ] ಸಮೂಹವನ್ನು; ಜನಯಾಮಿ = ಉಂಟು

ಯನ್ನು ಸಮರ್ಪಿಸುವುದಕ್ಕಾಗಿ ನಿಮ್ಮನ್ನು ಮಂತ್ರದಿಂದ ಕರೆಯುತ್ತಿದ್ದೇನೆ. ಪುರೋಡಾಶ ದ್ರವ್ಯದ ಆಹುತಿಯಿಂದ ನಿಮ್ಮಿಬ್ಬರನ್ನೂ ಒಟ್ಟಿಗೇ ಸಂತೋಷಪಡಿಸುವುದಕ್ಕಾಗಿ ಆಹ್ವಾನಿಸುತ್ತೇನೆ. ಸಂತುಷ್ಟರಾದ ನೀವು ಅನ್ನಾದಿದ್ರವ್ಯಗಳನ್ನೂ, ಪುತ್ರ ಪಶ್ವಾದಿಸಂಪತ್ತುಗಳನ್ನೂ ಕೊಡತಕ್ಕವರು. ಆದುದರಿಂದ ಅನ್ನಾದಿಲಾಭಕ್ಕಾಗಿ ನಿಮ್ಮಿಬ್ಬರನ್ನೂ ಆಹ್ವಾನಿಸುತ್ತೇನೆ.

ಇಂದ್ರಾಗ್ನೀ ನವತಿಂ ಪುರೋ

ದಾಸಪತ್ನೀರಧೂನುತಮ್ । ಸಾಕಮೇಕೇನ ಕರ್ಮಣಾ ॥

---

ಇಂದ್ರಾಗ್ನೀ ಇತೀಂದ್ರ-ಅಗ್ನೀ । ನವತಿಮ್ । ಪುರಃ । ದಾಸಪತ್ನೀರಿತಿ ದಾಸ-ಪತ್ನೀಃ । ಅಧೂನುತಮ್ ॥ ಸಾಕಮ್ । ಏಕೇನ । ಕರ್ಮಣಾ ॥

---

| ಮಂತ್ರ | ವಿನಿಯೋಗ |
|---|---|
| ಇಂದ್ರಾಗ್ನೀ......ಕರ್ಮಣಾ । | ಉಳಿದ ಮೂರು ಐಂದ್ರಾಗ್ನೇಷ್ಟಿಗಳಲ್ಲಿ ಇದು ಪುರೋನುವಾಕ್ಯ.* ಇವುಗಳು ಕ್ರಮವಾಗಿ ೧)ಯುದ್ಧದಲ್ಲಿ ಗೆದ್ದವನಿಗೆ ೨) ವಾದಾದಿಗಳಲ್ಲಿ ಜಯಿಸಲು ಜನಸಮೂಹಕ್ಕೆ ಹೋಗುವವನಿಗೆ ೩)ಕ್ಷತ್ರಪತ್ಯಚರುವಿನ ಅನಂತರ ವೀರ್ಯಕಾಮನಾದವನಿಗೆ ಕಾಮ್ಯೇಷ್ಟಿಗಳಾಗಿವೆ. |



---

ಮಾಡುತ್ತೇನೆ; ಇಂದ್ರಾಗ್ನೀ = ಎಲೈ ಇಂದ್ರಾಗ್ನಿದೇವತೆಗಳೇ! [ನೀವು ಇಬ್ಬರು] **ದಾಸಪತ್ನೀಃ** = [ಜನರನ್ನು ನಾಶಪಡಿಸುವ] ತಸ್ಕರಪ್ರಭುಗಳೇ ಒಡೆಯರಾಗಿರುವ (ಅಸುರರೇ ಪ್ರಭುಗಳಾಗಿರುವ) **ನವತಿಂ ಪುರಃ** = ತೊಂಬತ್ತು ಪಟ್ಟಣಗಳನ್ನು; **ಸಾಕಮ್** = ಒಟ್ಟಿಗೇ; **ಏಕೇನ ಕರ್ಮಣಾ** = ಒಂದೇ ಒಂದು[ಹೊಡೆತವೆಂಬ] ಕೆಲಸದಿಂದ; **ಅಧೂನುತಮ್** = ನಾಶಪಡಿಸಿದಿರಿ. (ನಡುಗಿಸಿದಿರಿ)

---

ಎಲೈ ದೇವತೆಗಳಾದ ಇಂದ್ರಾಗ್ನಿಗಳೇ! ಲೋಕದಲ್ಲಿ ಶ್ರೇಷ್ಠಗುಣಯುಕ್ತನಾದ ಅಳಿಯನು ದೌಹಿತ್ರಾದಿಪ್ರಜಾಸಂಪತ್ತಿಯನ್ನು ಮಾವನಿಗೆ ಕೊಡುತ್ತಾನೆ. ಹಾಗೆಯೇ ಅಕ್ಕ ತಂಗಿಯರಲ್ಲಿ ಪ್ರೀತಿಯುಳ್ಳ ಭಾವಮೈದುನನು ಭಾವನಿಗೆ ದಾಸೀದಾಸಾದಿ ಜನ ಸಂಪತ್ತಿಯನ್ನು ಒದಗಿಸಿಕೊಡುತ್ತಾನೆ. ನೀವಿಬ್ಬರು ಅವರಿಬ್ಬರಿಗಿಂತಲೂ ಅತಿಶಯವಾಗಿ ಪುತ್ರಬಲಾದಿ ಸಕಲಸಂಪತ್ತನ್ನೂ ಕೊಡುತ್ತೀರೆಂದು ಪ್ರಸಿದ್ಧವಾದ ವಿಷಯವನ್ನು ಕೇಳಿರು

---

*ಅಧ್ವರ್ಯುವು 'ಇಂದ್ರಾಗ್ನಿಭ್ಯಾಮನುಬ್ರೂಹಿ' ಎಂಬುದಾಗಿ ಹೇಳಿದ ಪ್ರೈಷವನ್ನನುಸರಿಸಿ ಹೋತೃವು ಹೇಳುವುದರಿಂದ ಇದು 'ಪುರೋನುವಾಕ್ಯಾ' ಎನ್ನಿಸಿಕೊಳ್ಳುತ್ತದೆ.

ಶುಚಿಂ ನು ಸ್ತೋಮಂ ನವಜಾತಮದ್ಯೇಂದ್ರಾಗ್ನೀ ವೃತ್ರಹಣಾ ಜುಷೇಥಾಮ್ [೧] । ಉಭಾ ಹಿ ವಾಗ್ಂ ಸುಹವಾ ಜೋಹವೀಮಿ ತಾ ವಾಜಗ್ಂ ಸದ್ಯ ಉಶತೇ ಧೇಷ್ಠಾ ॥

ಶುಚಿಮ್ । ನು । ಸ್ತೋಮಮ್ । ನವಜಾತಮಿತಿ ನವ-ಜಾತಮ್ । ಅದ್ಯ । ಇಂದ್ರಾಗ್ನೀ ಇತೀಂದ್ರ-ಅಗ್ನೀ। ವೃತ್ರಹಣೇತಿ ವೃತ್ರ-ಹನಾ। ಜುಷೇಥಾಮ್ । ಉಭಾ । ಹಿ। ವಾಮ್। ಸುಹವೇತಿ ಸು-ಹವಾ। ಜೋಹವೀಮಿ । ತಾ । ವಾಜಮ್ । ಸದ್ಯಃ। ಉಶತೇ । ಧೇಷ್ಠಾ॥

| ಮಂತ್ರ | ವಿನಿಯೋಗ |
| --- | --- |
| ಶುಚಿಂ ನು....ಧೇಷ್ಠಾ । | ಯುದ್ಧದಲ್ಲಿ ಗೆದ್ದವನು, ವಾದದಲ್ಲಿ ಗೆಲ್ಲಲು ಬಯಸುವವನು, ಕ್ಷೇತ್ರಪತ್ಯಬೆರುವಿನ ಅನಂತರ ವೀರ್ಯಕಾಮನು ಮಾಡುವ ಐಂದ್ರಾಗ್ನೇಷ್ಟಿಗಳಲ್ಲಿ ಯಾಜ್ಯಾನುವಾಕ್ಯವಾಗಿ.* |

+ವೃತ್ರಹಣಾ = ವೃತ್ರಾಸುರನನ್ನು ಕೊಂದಿರುವ (ಪಾಪನಾಶಕರಾದ) ಇಂದ್ರಾಗ್ನೀ = ದೇವತೆಗಳಾದ ಇಂದ್ರಾಗ್ನಿಗಳೇ! ಅದ್ಯ = ಈ ದಿನ; ಶುಚಿಮ್ = ನಿರ್ದೋಷವಾದ; ನವಜಾತಮ್ = ಹೊಸದಾಗಿ ಉಂಟಾಗಿರುವ(ಅಭೂತಪೂರ್ವವಾದ) ಸ್ತೋಮಮ್ = ಸ್ತೋತ್ರವನ್ನು; ನು = ಬೇಗನೆ; ಜುಷೇಥಾಮ್ = ಸೇವಿಸಿರಿ (ಸ್ವೀಕರಿಸಿರಿ); ಹಿ = ಯಾವ ಕಾರಣದಿಂದ; ಸುಹವಾ = ಸುಲಭವಾಗಿ ಕರೆಯಬಹುದಾದ (ರೋಷ, ಗರ್ವಗಳು ಇಲ್ಲವಾದುದರಿಂದ ಸುಖವಾಗಿ ಹೋಮ ಮಾಡಬಹುದಾದ) ಉಭಾ ವಾಮ್ = ನಿಮ್ಮಿಬ್ಬರನ್ನೂ; ಜೋಹವೀಮಿ = ಮತ್ತೆ ಮತ್ತೆ ಆಹ್ವಾನಿಸುತ್ತಿರುವೆನೋ; [ಆ ಕಾರಣದಿಂದ] ತಾ = ಆ ನೀವಿಬ್ಬರೂ; ಉಶತೇ = ಅಪೇಕ್ಷಿಸುತ್ತಿರುವ ಯಜಮಾನನಿಗೆ; ಸದ್ಯಃ = ಒಡನೆಯೇ; ವಾಜಮ್ = ಅನ್ನವನ್ನು [ಇಂದ್ರಿಯಾದಿಗಳನ್ನು] ಧೇಷ್ಠಾ = ಅನುಗ್ರಹಿಸಿರಿ;

ತ್ತೇನೆ. ಈಗ ಸೋಮಸದೃಶವಾದ ಪುರೋಡಾಶವನ್ನು ನಿಮಗೆ ಸಮರ್ಪಿಸಿ ಸಂತೋಷ

* ಅಧ್ವರ್ಯುವು 'ಯಜ' ಎಂಬ ಪ್ರೈಷವನ್ನು ಹೇಳಿದ ಮೇಲೆ ಹೋತೃವು ಹೇಳುವ ಋಕ್ಕು 'ಯಾಜ್ಯಾ' ಎನ್ನಿಸಿಕೊಳ್ಳುತ್ತದೆ.

ವಯಮು ತ್ವಾ ಪಥಸ್ಪತೇ ರಥಂ ನ ವಾಜಸಾತಯೇ ।

ಧಿಯೇ ಪೂಷನ್ನಯುಜ್ಮಹಿ ॥

---

ವಯಮ್ । ಉ । ತ್ವಾ । ಪಥಃ । ಪತೇ । ರಥಮ್ । ನ । ವಾಜಸಾತಯ ಇತಿ ವಾಜ-ಸಾತಯೇ ॥ ಧಿಯೇ । ಪೂಷನ್ । ಅಯುಜ್ಮಹಿ ॥

---

| ಮಂತ್ರ | ವಿನಿಯೋಗ |
|---|---|
| ವಯಮ್........ಅಯುಜ್ಮಹಿ ॥ | ಐದನೆಯ ಐಂದ್ರಾಗ್ನೇಷ್ಟಿಯನ್ನು ಅನುಸರಿಸಿ ಮಾಡಬೇಕಾದ ಪೌಷ್ಣಚರುಯಾಗದಲ್ಲಿನ ಪುರೋನುವಾಕ್ಯೆ. |

---

**ಪಥಃ ಪತೇ** = ಒಳ್ಳೆಯ ಮಾರ್ಗಕ್ಕೆ ಪತಿಯಾದ (ತೋರಿಸಿಕೊಡತಕ್ಕವನಾದ) **ಪೂಷನ್** = ಪೂಷದೇವನೇ!; **ವಯಮ್ ಉ**=ನಾವೇ; **ತ್ವಾ**=ನಿನ್ನನ್ನು; **ರಥಂ ನ**= ರಥದಂತೆ; **ವಾಜ ಸಾತಯೇ** = ಅನ್ನಪ್ರಾಪ್ತ್ಯರ್ಥವಾದ; **ಧಿಯೇ** = ಯಾಗರೂಪವಾದ ಕರ್ಮಕ್ಕಾಗಿ; [ಕರ್ಮ ಸಿದ್ಧಿಗಾಗಿ] **ಅಯುಜ್ಮಹಿ**=ಯೋಜಿಸುತ್ತೇವೆ; (ದೇವತಾರೂಪದಿಂದ ಆಹ್ವಾನಿಸುತ್ತೇವೆ.]

---

ಪಡಿಸುತ್ತೇನೆ. ಸಂತುಷ್ಟರಾದ ನೀವು ಯಜಮಾನನಿಗೆ ಪುತ್ರ, ಬಲವೀರ್ಯಾದಿಗಳನ್ನು ಅನುಗ್ರಹಿಸಿ.

ಇಂದ್ರಾಗ್ನಿಗಳೇ! ನಿಮ್ಮ ಪರಾಕ್ರಮವು ಅಪರಿಮಿತವಾದುದು. ನೀವು ಒಂದೇ ಹೊಡೆತದಿಂದಲೇ ಜನಗಳಿಗೆ ಪೀಡೆಯನ್ನುಂಟುಮಾಡುತ್ತಿದ್ದ ಅಸುರರು (ತಸ್ಕರರು) ಒಡೆಯರಾಗಿದ್ದ ತೊಂಬತ್ತು ಪಟ್ಟಣಗಳನ್ನು ನಾಶಪಡಿಸಿದಿರಿ. ಇಂತಹ ಮಹಾನುಭಾವ ರಾದ ನೀವು ಯುದ್ಧದಲ್ಲಿ ಗೆದ್ದು, ಬಳಲಿರುವ ಯಜಮಾನನಿಗೆ ಇಂದ್ರಿಯ ವೀರ್ಯಾದಿಗ ಳನ್ನು ಕೊಟ್ಟು ಅನುಗ್ರಹಿಸಿರಿ. ✿ ವೃತ್ರನಾಶಕರಾದ ಇಂದ್ರಾಗ್ನಿಗಳೇ! ದೋಷರಹಿತವಾದ ಈ ಮಂತ್ರರೂಪವಾದ ಹೊಸ ಸ್ತೋತ್ರವನ್ನು ಕೇಳಿರಿ. ನೀವು ರೋಷರಹಿತರು. ಆದುದ ರಿಂದ ನಿಮ್ಮನ್ನು ಸುಲಭವಾಗಿ ಆಹ್ವಾನಿಸಬಹುದು. [ನಿಮ್ಮನ್ನುದ್ದೇಶಿಸಿ ಯಾಗ ಮಾಡ ಬಹುದು]. ನಿಮ್ಮನ್ನು ಯಾಗಕ್ಕೆ ಮತ್ತೆ ಮತ್ತೆ ಆಹ್ವಾನಿಸುತ್ತೇನೆ. ನೀವು ಫಲಾಪೇಕ್ಷೆಯಿಂದ ಯಾಗ ಮಾಡುತ್ತಿರುವ ಯಜಮಾನನಿಗೆ ಅನ್ನಾದಿಗಳನ್ನು ಒಡನೆಯೇ ಅನುಗ್ರಹಿಸಿರಿ.

ಪಥಸ್ಪಥಃ ಪರಿಪತಿಂ ವಚಸ್ಯಾ ಕಾಮೇನ ಕೃತೋ ಅಭ್ಯಾನಡರ್ಕಮ್ । ಸ ನೋ ರಾಸಚ್ಛುರುಧ ಶ್ಚಂದ್ರಾಗ್ರಾ ಧಿಯಂಧಿಯಗ್ಂ ಸೀಷಧಾತಿ ಪ್ರ ಪೂಷಾ ॥

ಪಥಸ್ಪಥ ಇತಿ ಪಥಃ-ಪಥಃ । ಪರಿಪತಿಮಿತಿ ಪರಿ-ಪತಿಮ್। ವಚಸ್ಯಾ। ಕಾಮೇನ । ಕೃತಃ। ಅಭೀತಿ। ಆನಟ್। ಅರ್ಕಮ್॥ ಸಃ । ನಃ । ರಾಸತ್ । ಶುರುಧಃ । ಚಂದ್ರಾಗ್ರಾ ಇತಿ ಚಂದ್ರ-ಅಗ್ರಾಃ । ಧಿಯಂಧಿಯಮಿತಿ ಧಿಯಮ್-ಧಿಯಮ್। ಸೀಷಧಾತಿ। ಪ್ರೇತಿ। ಪೂಷಾ॥

| ಮಂತ್ರ | ವಿನಿಯೋಗ |
|---|---|
| ಪಥಸ್ಪಥಃ.....ಪೂಷಾ । | ಪೌಷ್ಣಚರುಯಾಗದ ಯಾಜ್ಯಾನುವಾಕ್ಯೆ |

+ಪಥಸ್ಪಥಃ = ಎಲ್ಲ ಮಾರ್ಗಗಳಿಗೂ; ಪರಿಪತಿಮ್ = ಪಾಲಕನಾಗಿರುವ; ಅರ್ಕಮ್ = ಅರ್ಕಶಬ್ದವಾಚ್ಯನೂ ಆಗಿರುವ (ಸ್ತುತ್ಯರ್ಹನೂ ಆಗಿರುವ) ಪೂಷದೇವನಾದ ನಿನ್ನನ್ನು; ಕಾಮೇನ ಕೃತಃ= ಫಲಕಾಮನಾದ ಯಜಮಾನನಿಂದ ಪ್ರೇರಿತನಾದ (ಫಲಕಾಮನೆಯಿಂದ ವಶೀಕೃತನಾದ) ನಾನು; ವಚಸ್ಯಾ = ಸ್ತೋತ್ರರೂಪವಾದ ವಾಕ್ಕಿನಿಂದ; ಅಭ್ಯಾನಟ್ = ಅಭಿವ್ಯಾಪಿಸಿದವನಾಗಿದ್ದೇನೆ. (ಪರಿಪರಿಯಾಗಿ ಸ್ತೋತ್ರ ಮಾಡಿರುತ್ತೇನೆ) ಸಃ = ಆ ಪೂಷ ದೇವನು; ನಃ = ನಮಗೆ; ಶುರುಧಃ= ಶೋಕನಾಶಕವಾಗಿರುವ (ದುಃಖವನ್ನು ತಡೆಗಟ್ಟುವ); ಚಂದ್ರಾಗ್ರಾಃ = ಚಂದ್ರನಂತೆ ಆಹ್ಲಾದಕರವಾದ ಅಗ್ರಭಾಗವುಳ್ಳ ಓಷಧಿಗಳನ್ನು; ರಾಸತ್ = ಕೊಡಲಿ; ಪೂಷಾ = ಆ ಪೂಷದೇವನು; ಧಿಯಂಧಿಯಮ್ = ಓಷಧಿವಿಷಯಕವಾದ ಪ್ರಜ್ಞೆಯನ್ನು; ಪ್ರ ಸೀಷಧಾತಿ = ಅತಿಶಯವಾಗಿ ಸಾಧಿಸಿ ಕೊಡಲಿ.

ಸುಮಾರ್ಗಕ್ಕೆ ಒಡೆಯನಾದ [ದರ್ಶಕನಾದ] ಎಲೈ ಪೂಷದೇವನೇ! ಯುದ್ಧಕ್ಕೆ ಹೋಗುವವರು ಅಥವಾ ಬೇರೆ ಪ್ರದೇಶಕ್ಕೆ ಶೀಘ್ರವಾಗಿ ಹೋಗಬಯಸುವವರು ರಥ ವನ್ನು ಸಜ್ಜುಗೊಳಿಸುವಂತೆ ಅನ್ನಾದಿಗಳನ್ನು ಕೊಡುವ ಈ ಯಾಗವೆಂಬ ಕರ್ಮಕ್ಕೆ ನಿನ್ನನ್ನು ದೇವತಾರೂಪನನ್ನಾಗಿ ಸಜ್ಜುಗೊಳಿಸಿದ್ದೇವೆ. (ಆಹ್ವಾನಿಸುತ್ತಿದ್ದೇವೆ). (ಯಾಗಕ್ಕೆ ದೇವತೆ ಯಿರಲೇಬೇಕು. 'ದೇವತೋದ್ದೇಶ್ಯಕಃ ದ್ರವ್ಯತ್ಯಾಗಃ ಯಾಗಃ' ಎಂದು ಯಾಗದ ಲಕ್ಷಣ).

ಕ್ಷೇತ್ರಸ್ಯಪತಿನಾ ವಯಗ್ಂ ಹಿತೇನೇವ ಜಯಾಮಸಿ। ಗಾಮಶ್ವಂ ಪೋಷಯಿತ್ನ್ವಾ ಸ ನೋ[ನಃ(೨)ಮೃಡಾತೀ] ಮೃಡಾತೀದೃಶೇ॥

ಕ್ಷೇತ್ರಸ್ಯ । ಪತಿನಾ । ವಯಮ್ । ಹಿತೇನ । ಇವ । ಜಯಾಮಸಿ ॥ ಗಾಮ್ । ಅಶ್ವಮ್ । ಪೋಷಯಿತ್ನು । ಏತಿ । ಸಃ । ನಃ । ಮೃಡಾತಿ । ಈದೃಶೇ ॥

| ಮಂತ್ರ | ವಿನಿಯೋಗ |
| --- | --- |
| ಕ್ಷೇತ್ರಸ್ಯ......ಮೃಡಾತೀದೃಶೇ । | ಆರನೆಯ ಐಂದ್ರಾಗ್ನೇಷ್ಟಿಯಲ್ಲಿ ಪ್ರತಿಷ್ಠಾಕಾಮನು ಮಾಡಬೇಕಾದ ಕ್ಷೇತ್ರಪತ್ಯಚರುಯಾಗದ ಪುರೋನುವಾಕ್ಯ. |

+ವಯಮ್ = ನಾವು; ಹಿತೇನ ಇವ = ನಮಗೆ ಹಿತರಾಗಿರುವ ಪುತ್ರಮಿತ್ರಾದಿಗಳಿಂದ ಹೇಗೋ ಹಾಗೆ; ಕ್ಷೇತ್ರಸ್ಯ ಪತಿನಾ = ಭೂಮಿಗೆ ಒಡೆಯನಾದ ದೇವನಿಂದ; ಗಾಮ್ = ಹಸುವನ್ನೂ; ಅಶ್ವಮ್ = ಕುದುರೆಯನ್ನೂ, ಪೋಷಯಿತ್ನು = ಪ್ರಾಣಿವರ್ಗವನ್ನು ಪೋಷಿಸುವ ಅನ್ನಾದಿವಸ್ತುವನ್ನೂ, ಆ ಜಯಾಮಸಿ = ಎಲ್ಲ ಕಡೆಗಳಿಂದಲೂ ಗೆಲ್ಲುತ್ತೇವೆ. ಸಃ = ಆ ಕ್ಷೇತ್ರಪತಿಯು; ನಃ = ನಮ್ಮನ್ನು; ಈದೃಶೇ= ಇಂತಹ ಗವಾದಿ ಭೋಗವಸ್ತುವಿನಲ್ಲಿ; ಮೃಡಾತಿ = ಸುಖಿಸುವಂತೆ ಮಾಡಲಿ;

ಆದುದರಿಂದ ನೀನು ಯಾಗಸಿದ್ಧಿಯನ್ನು ಮಾಡಿ ಯಜಮಾನನಿಗೆ ಬೇಗನೆ ಫಲವನ್ನು ಅನುಗ್ರಹಿಸು.

ಪೂಷದೇವನು ಸರ್ವವಿಧಸನ್ಮಾರ್ಗಗಳಿಗೂ ಪರಿಪಾಲಕನು. ಅರ್ಕನೆಂದೂ ಪೂಷದೇವನು ಪ್ರಸಿದ್ಧನಾಗಿದ್ದಾನೆ. ಫಲಕಾಮನೆಯಿಂದ ಪ್ರೇರಿತನಾದ ನಾನು ಆ ಪೂಷದೇವನನ್ನು ಸ್ತೋತ್ರರೂಪವಾದ ವಾಕ್ಕಿನಿಂದ ವ್ಯಾಪಿಸಿದ್ದೇನೆ. (ಸ್ತುತಿಸಿದ್ದೇನೆ). ಆತನು ನಮಗೆ ಶೋಕನಿರೋಧಕಗಳಾದ ಚಂದ್ರನಂತೆ ಆಹ್ಲಾದಕರವಾದ ಅಗ್ರಗಳುಳ್ಳ ಓಷಧಿಗಳನ್ನು ಕೊಡಲಿ. ಆ ಓಷಧಿಗಳ ಪ್ರಜ್ಞೆಯನ್ನೂ ನಮಗೆ ಉಂಟು ಮಾಡಿಕೊಡಲಿ. ಈ ಲೋಕದಲ್ಲಿ ಜನರು ತಮಗೆ ಹಿತರಾದ ಪುತ್ರಮಿತ್ರಾದಿಗಳನ್ನು ಕೂಡಿಕೊಂಡು ಶತ್ರುಗಳನ್ನು ಗೆಲ್ಲುತ್ತಾರೆ. ಗವಾದಿ ಭೋಗವಸ್ತುಗಳನ್ನೂ ಪಡೆಯುತ್ತಾರೆ. ಹಾಗೆಯೇ

**ಕ್ಷೇತ್ರಸ್ಯ ಪತೇ ಮಧುಮಂತಮೂರ್ಮಿಂ ಧೇನುರಿವ ಪಯೋ ಅಸ್ಮಾಸು ಧುಕ್ಷ್ವ । ಮಧುಶ್ಚುತಂ ಘೃತಮಿವ ಸುಪೂತಮೃತಸ್ಯ ನಃ ಪತಯೋ ಮೃಡಯಂತು ॥**

---

ಕ್ಷೇತ್ರಸ್ಯ । ಪತೇ । ಮಧುಮಂತಮಿತಿ ಮಧು-ಮಂತಮ್ । ಊರ್ಮಿಮ್ । ಧೇನುಃ। ಇವ । ಪಯಃ । ಅಸ್ಮಾಸು । ಧುಕ್ಷ್ವ ॥ ಮಧುಶ್ಚುತಮಿತಿ ಮಧು-ಶ್ಚುತಮ್ । ಘೃತಮ್। ಇವ । ಸುಪೂತಮಿತಿ ಸು-ಪೂತಮ್ । ಋತಸ್ಯ । ನಃ । ಪತಯಃ । ಮೃಡಯಂತು॥

---

| ಮಂತ್ರ | ವಿನಿಯೋಗ |
|---|---|
| ಕ್ಷೇತ್ರಸ್ಯ......ಮೃಡಯಂತು । | ಕ್ಷೇತ್ರಪತ್ಯಚರುಯಾಗದ ಯಾಜ್ಯೆ |

---

+**ಕ್ಷೇತ್ರಸ್ಯ ಪತೇ!** = ಕ್ಷೇತ್ರಪತಿದೇವನೇ! **ಧೇನುಃ** = ಹಸುವು; **ಪಯಃ ಇವ** = ಹಾಲನ್ನು ಕರೆಯುವಂತೆ [ನೀನು] **ಮಧುಮಂತಮ್** = ಸವಿಯಾಗಿರುವ; **ಊರ್ಮಿಮ್** = ಅಲೆಗಳಂತೆ (ಮತ್ತೆ ಮತ್ತೆ ಬರುತ್ತಿರುವ) **ಮಧುಶ್ಚುತಮ್** = ತಮ್ಮ ಸೇರುವಿಕೆಯಿಂದ ಬೇರೆಯ ವಸ್ತುಗಳನ್ನೂ ಮಾಧುರವಾಗುವಂತೆ ಮಾಡುವ, **ಘೃತಮಿವ ಸುಪೂತಮ್** = ತುಪ್ಪದಂತೆ ಅತಿ ಪವಿತ್ರವಾದ (ತೆಂಗಿನಕಾಯಿ, ಕಬ್ಬು, ಬೆಲ್ಲ ಮೊದಲಾದ) ಭೋಗ್ಯ ವಸ್ತುವನ್ನು; **ಅಸ್ಮಾಸು** = ನಮ್ಮಲ್ಲಿ; **ಧುಕ್ಷ್ವ** = ಉಂಟು ಮಾಡು (ಕರೆದುಕೊಡು). **ಋತಸ್ಯ ಪತಯಃ** = ಯಜ್ಞಕ್ಕೆ ಒಡೆಯರಾದ ಅಗ್ನ್ಯಾದಿದೇವತೆಗಳು; **ನಃ** = ನಮ್ಮನ್ನು; **ಮೃಡಯಂತು** = ಸುಖಿಗಳಾಗಿರುವಂತೆ ಮಾಡಲಿ.

---

ನಾವು ಹಿತನಾದ ಕ್ಷೇತ್ರಪತಿಯಿಂದ ಹಸುಗಳನ್ನೂ*, ಕುದುರೆಗಳನ್ನೂ* ಅನ್ನಾದಿ ಭೋಗವಸ್ತುಗಳನ್ನೂ ಗೆಲ್ಲುತ್ತೇವೆ. ಆ ಕ್ಷೇತ್ರಪತಿದೇವನು ಇಂತಹ ಗವಾದಿ ಭೋಗ ವಸ್ತುಗಳಲ್ಲಿ ನಮಗೆ ಸುಖವು ಲಭಿಸುವಂತೆ ಮಾಡಲಿ.

---

* 'ಆಯಾತಯಾಮಮ್ ಆಜ್ಯಮ್' ಎಂಬ ಶ್ರುತಿವಾಕ್ಯದಂತೆ ತುಪ್ಪವು ಯಾವಾಗಲೂ ಶುದ್ಧವಾದುದು.

* ಗಾಮ್, ಅಶ್ವಮ್ ಮೊದಲಾದವುಗಳು ಜಾತ್ಯೇಕವಚನಗಳು.ಜಾತಿವಾಚಕವಾದುದರಿಂದ ಬಹುವಚನದ ಅರ್ಥವನ್ನು ನೀಡಿದೆ.

**ಅಗ್ನೇ ನಯ ಸುಪಥಾ ರಾಯೇ ಅಸ್ಮಾನ್ ವಿಶ್ವಾನಿ ದೇವ ವಯುನಾನಿ ವಿದ್ವಾನ್ । ಯುಯೋಧ್ಯಸ್ಮಜ್ಜುಹುರಾಣ ಮೇನೋ ಭೂಯಿಷ್ಠಾಂ ತೇ ನಮಉಕ್ತಿಂ ವಿಧೇಮ ॥**

---

ಅಗ್ನೇ । ನಯ । ಸುಪಥೇತಿ ಸು-ಪಥಾ । ರಾಯೇ । ಅಸ್ಮಾನ್ । ವಿಶ್ವಾನಿ । ದೇವ। ವಯುನಾನಿ । ವಿದ್ವಾನ್ ॥ ಯುಯೋಧಿ । ಅಸ್ಮತ್ । ಜುಹುರಾಣಮ್ । ಏನಃ। ಭೂಯಿಷ್ಠಾಮ್ । ತೇ । ನಮಉಕ್ತಿಮಿತಿ ನಮಃ-ಉಕ್ತಿಮ್ । ವಿಧೇಮ ॥

---



| ಮಂತ್ರ | ವಿನಿಯೋಗ |
|---|---|
| ಅಗ್ನೇ........ವಿಧೇಮ । | ದರ್ಶ-ಪೂರ್ಣಮಾಸಯಾಜಿಯಾದವನು ಪ್ರಮಾದವಶಾತ್ ದರ್ಶೇಷ್ಟಿಯನ್ನಾಗಲೀ, ಪೌರ್ಣಮಾಸೇಷ್ಟಿಯನ್ನಾಗಲೀ ಮಾಡದೆ ತಪ್ಪಿದರೆ ಪ್ರಾಯಶ್ಚಿತ್ತವಾಗಿ ವಿಹಿತವಾಗಿರುವ ಪಾಥಿಕೃತೇಷ್ಟಿಯಲ್ಲಿನ ಪುರೋನುವಾಕ್ಯೆ. |

---

+ಅಗ್ನೇ = ಎಲೈ ಅಗ್ನಿದೇವನೇ! [ನೀನು] ರಾಯೇ = (ದರ್ಶ-ಪೂರ್ಣಮಾಸೇಷ್ಟಿಫಲ ರೂಪವಾದ) ಧನಕ್ಕೆ; ಅಸ್ಮಾನ್ = ನಮ್ಮನ್ನು; ಸುಪಥಾ = (ಅತಿಪಾದದೋಷವಿಲ್ಲದ) ಒಳ್ಳೆಯ ಮಾರ್ಗದಿಂದ; ನಯ = ಕರೆದುಕೊಂಡು ಹೋಗು; ದೇವ = ಅಗ್ನಿದೇವನೇ! (ನೀನು) ವಿಶ್ವಾನಿ ವಯುನಾನಿ = ಎಲ್ಲಾ ಮಾರ್ಗಗಳನ್ನೂ; ವಿದ್ವಾನ್ = ತಿಳಿದವನಾಗಿದ್ದೀಯೆ; ಜುಹುರಾಣಮ್ = (ನರಕಹೇತುವಾಗಿ) ಕುಟಿಲವಾಗಿರುವ; ಏನಃ = ಅತಿಪಾದರೂಪವಾದ ಪಾಪವನ್ನು; ಅಸ್ಮತ್ = ನಮ್ಮಿಂದ; ಯುಯೋಧಿ = ದೂರಮಾಡು. [ನಾವು] ತೇ = ನಿನಗೆ; ಭೂಯಿಷ್ಠಾಮ್ = ಹೆಚ್ಚಾದ; ನಮಉಕ್ತಿಮ್ = ನಮಸ್ಕಾರವಚನಗಳನ್ನು; ವಿಧೇಮ = ಮಾಡುತ್ತೇವೆ (ಹೇಳುತ್ತೇವೆ).

---

ಕ್ಷೇತ್ರಪತಿದೇವನೇ! ಹಸುವು ಸವಿಯಾದ, ಪವಿತ್ರವಾದ ಹಾಲನ್ನು ಮತ್ತೆ ಮತ್ತೆ ಕೊಡುವಂತೆ ನೀನು ನಮಗೆ ಮಧುರವಾಗಿರುವ, ತಮ್ಮ ಸೇರುವಿಕೆಯಿಂದ ಬೇರೆಯ ವಸ್ತುಗಳನ್ನೂ ಮಧುರಗೊಳಿಸುವ, ತುಪ್ಪದಂತೆ ಪವಿತ್ರವಾದ, ಕಬ್ಬು, ಬೆಲ್ಲ, ತೆಂಗಿನ

## ಆ ದೇವಾನಾಮಪಿ ಪಂಥಾಮಗನ್ಮ ಯಚ್ಛಕ್ನವಾಮ ತದನು ಪ್ರವೋಢುಮ್ ।

ಎತಿ । ದೇವಾನಾಮ್ । ಅಪೀತಿ । ಪಂಥಾಮ್ । ಅಗನ್ಮ । ಯತ್ । ಶಕ್ನವಾಮ। ತತ್ । ಅನ್ವಿತಿ । ಪ್ರವೋಢುಮಿತಿ ಪ್ರ-ವೋಢುಮ್ ॥

| ಮಂತ್ರ | ವಿನಿಯೋಗ |
|---|---|
| ಆ ದೇವಾನಾಮ್.....ಕಲ್ಪಯಾತಿ । | ಪಾಥಿಕೃತೀಷ್ಟಿಯ ಯಾಜ್ಯಾನುವಾಕ್ಯೆ. |

+[ಯಾವ ಮಾರ್ಗದಿಂದ ನಾವು ತಪ್ಪಿಹೋಗಿದ್ದೆವೋ] [ತಮ್] ಅಪಿ ದೇವಾನಾಮ್ ಪಂಥಾಮ್ = ಆ ದೇವತೆಗಳ ಮಾರ್ಗವನ್ನು, ಆ ಅಗನ್ಮ = ಕುರಿತು ಬಂದವರಾಗಿದ್ದೇವೆ; (ಹೊಂದಿದವರಾಗಿದ್ದೇವೆ) ಯತ್ = ಯಾವ ಕರ್ಮವನ್ನು (ಆಚರಿಸಲು) ಶಕ್ನವಾಮ = ಸಮರ್ಥರಾಗಿದ್ದೇವೆಯೋ; ತತ್ = ಆ ಕರ್ಮವನ್ನು, ಅನು ಪ್ರವೋಢುಮ್ = ಕ್ರಮವಾಗಿ ವಿಚ್ಛಿತ್ತಿಯಿಲ್ಲದೆ ಮಾಡುವುದಕ್ಕಾಗಿ [ಆ ಅಗನ್ಮ] = ಆ ದೇವಮಾರ್ಗಕ್ಕೆ ಬಂದಿದ್ದೇವೆ.

ಕಾಯಿ ಮೊದಲಾದ ಭೋಗ್ಯವಸ್ತುಸಮೂಹವನ್ನು ಮತ್ತೆ ಮತ್ತೆ ಕೊಡು. ಯಜ್ಞದೇವತೆಗಳಾದ ಅಗ್ನ್ಯಾದಿಗಳೂ ನಮ್ಮನ್ನು ಸುಖಿಗಳನ್ನಾಗಿ ಮಾಡಲಿ. ಎಲೈ ಅಗ್ನಿದೇವನೇ! ನಾವು ಅತಿಪಾದ ಮಾಡಿ (ಮೀರಿ) ದಾರಿ ತಪ್ಪಿದ್ದೇವೆ. ನೀನು ನಮ್ಮನ್ನು ದರ್ಶ-ಪೂರ್ಣಮಾಸದ ಫಲವೆಂಬ ಧನದ ಕಡೆಗೆ ಕರೆದುಕೊಂಡು ಹೋಗು. ನೀನು ಎಲ್ಲ ಒಳ್ಳೆಯ ಮಾರ್ಗಗಳನ್ನೂ ಬಲ್ಲವನು. ನಾವು ಮಾಡಿದ ಅತಿಪಾದದಿಂದ ಉಂಟಾದ ನರಕಹೇತುವಾದ ಪಾಪವನ್ನು ಹೋಗಲಾಡಿಸು. ನಾವು ನಿನಗೆ ಹಲವು ನಮಸ್ಕಾರೋಕ್ತಿಗಳನ್ನು ಹೇಳುತ್ತೇವೆ. [ಈ ಮಂತ್ರಕ್ಕೆ ಅತಿಪಾದಸಂದರ್ಭವನ್ನು ಬಿಟ್ಟು ಸಾಧಾರಣ ಅರ್ಥವನ್ನೂ ಹೇಳಬಹುದು. ಎಲೈ ಅಗ್ನಿಯೇ! ನಮ್ಮನ್ನು ಸರಿಯಾದ ಮಾರ್ಗದಲ್ಲಿ ಸಂಪತ್ತಿನೆಡೆಗೆ ನಡೆಸು. ನೀನು ಎಲ್ಲ ಮಾರ್ಗಗಳನ್ನೂ ಬಲ್ಲವನು. ನಮ್ಮನ್ನು ಕುಟಿಲವಾದ ಪಾಪದಿಂದ ದೂರಮಾಡು. ನಿನಗೆ ನಮ್ಮ ಪ್ರಣಾಮಗಳು.]

ಕಾಲದಲ್ಲಿ ದರ್ಶ-ಪೂರ್ಣಮಾಸೇಷ್ಟಿಯನ್ನು ಮಾಡದೇ ದಾರಿ ತಪ್ಪಿ ನಡೆದ ನಾವು ಈಗ ಆ ದೇವತೆಗಳ ಮಾರ್ಗಕ್ಕೆ ಬಂದಿರುತ್ತೇವೆ. [ವಿಹಿತವಾದ ಕಾಲದಲ್ಲಿಯೇ ಯಾಗ

ಅಗ್ನಿರ್ವಿದ್ವಾನ್ತ್ಸ ಯಜಾತ್ [ಯಜಾತ್(ಇ)ಸೇದು]ಸೇದು

ಹೋತಾ ಸೋ ಅಧ್ವರಾನ್ತ್ಸ ಋತೂನ್ಕಲ್ಪಯಾತಿ ॥

---

ಅಗ್ನಿಃ । ವಿದ್ವಾನ್ । ಸಃ । ಯಜಾತ್ । ಸಃ । ಇತ್ । ಉ । ಹೋತಾ । ಸಃ।

ಅಧ್ವರಾನ್ । ಸಃ । ಋತೂನ್ । ಕಲ್ಪಯಾತಿ ॥

---

ಅಗ್ನಿಃ = [ಪಾಥಿಕೃತೀಷ್ಟಿಯ ಪ್ರಧಾನದೇವತೆಯಾದ] ಅಗ್ನಿಯು; ವಿದ್ವಾನ್ = [ಅತಿಪಾದದೋಷವನ್ನು ಸರಿಪಡಿಸಲು] ತಿಳಿದಿರುತ್ತಾನೆ; ಸಃ = ಅವನೇ; ಯಜಾತ್ = ಯಾಗ ಮಾಡುತ್ತಾನೆ [ಯಾಗವನ್ನು ಸಫಲಗೊಳಿಸುತ್ತಾನೆ]. ಸಃ ಇತ್ ಉ = ಆ ಅಗ್ನಿಯೇ; ಹೋತಾ = [ಯಜ್ಞಕ್ಕೆ ದೇವತೆಗಳನ್ನು] ಆಹ್ವಾನಿಸುವವನು; ಸಃ = ಆತನೇ; ಅಧ್ವರಾನ್ = ಯಾಗಗಳನ್ನು; ಕಲ್ಪಯಾತಿ = [ಫಲಗಳನ್ನು ಕೊಡಲು] ಸಮರ್ಥವಾಗುವಂತೆ ಮಾಡುತ್ತಾನೆ; ಸಃ = ಆ ಅಗ್ನಿದೇವನೇ, ಋತೂನ್ = ಋತುವೇ ಮೊದಲಾದ ಕಾಲಗಳನ್ನು; [ಕಲ್ಪಯಾತಿ = ಸರಿಪಡಿಸುತ್ತಾನೆ].



---

ಮಾಡುತ್ತೇವೆ). ನಾವು ಯಾವ ಕರ್ಮವನ್ನು ಆಚರಿಸಲು ಸಮರ್ಥರೋ ಅದನ್ನು ಕ್ರಮವಾಗಿ ತಪ್ಪದೆ ಆಚರಿಸಲು ಆ ದೇವಮಾರ್ಗಕ್ಕೆ ಬಂದಿರುತ್ತೇವೆ. (ಮತ್ತೆ ತಪ್ಪಿ ನಡೆಯುವುದಿಲ್ಲ.) ನಮ್ಮ ಅಪರಾಧಗಳನ್ನು ಹೇಗೆ ಸರಿಪಡಿಸಬಹುದೆಂದು ಅಗ್ನಿಯು ತಿಳಿದಿರುತ್ತಾನೆ. ಆ ದೇವನೇ ಯಾಗವನ್ನು ಪೂರ್ಣಗೊಳಿಸತಕ್ಕವನು. ಆತನೇ ಹವಿಸ್ಸನ್ನು ತೆಗೆದುಕೊಳ್ಳಲು ದೇವತೆಗಳನ್ನು ಆಹ್ವಾನಿಸುವವನು. ಆ ದೇವನೇ ಯಾಗವನ್ನು ಫಲಪ್ರದವಾಗುವಂತೆ ಮಾಡಲು ಸಮರ್ಥನು. ಋತುವೇ ಮೊದಲಾದ ಕಾಲಗಳಲ್ಲಿನ ದೋಷಗಳನ್ನು ಪರಿಹರಿಸಿ, ವಿಹಿತಕಾಲದಲ್ಲಿಯೇ ಮಾಡಿದಂತೆ ಅನುಗ್ರಹಿಸುತ್ತಾನೆ. ಅಂತಹ ಅಗ್ನಿದೇವನು ನಮ್ಮ ಅತಿಪಾದದೋಷವನ್ನು ಪರಿಹರಿಸಲಿ.

ನಾವು ಕೊಡುವ ಹವಿಸ್ಸು ಅಗ್ನಿದೇವತೆಗೆ ತೃಪ್ತಿಯನ್ನುಂಟುಮಾಡುವಂತೆ ಮಹತ್ತಾಗಿ ಆಗಲಿ. ಓ! ತೇಜೋರಾಶಿಯಾದ ಅಗ್ನಿಯೇ! ಚೆನ್ನಾಗಿ ಪೋಷಿಸಿದ ಎಮ್ಮೆಯು ಅಧಿಕವಾಗಿ ಹಾಲನ್ನು ಕೊಟ್ಟು, ಯಜಮಾನನನ್ನು ಸಂತೋಷಪಡಿಸುವಂತೆ ಯಾಗದ ಹವಿಸ್ಸನ್ನು

## ಯದ್ವಾಹಿಷ್ಠಂ ತದಗ್ನಯೇ ಬೃಹದರ್ಚ ವಿಭಾವಸೋ ।

ಯತ್ । ವಾಹಿಷ್ಠಮ್ । ತತ್ । ಅಗ್ನಯೇ । ಬೃಹತ್ । ಅರ್ಚ । ವಿಭಾವಸೋ

ಇತಿ ವಿಭಾ-ವಸೋ ॥

| ಮಂತ್ರ | ವಿನಿಯೋಗ |
| --- | --- |
| ಯದ್ವಾಹಿಷ್ಠಂ......ಉದೀರತೇ ॥ | *ಪ್ರಥಮಮತ - ಪಾಥಿಕೃತೀಷ್ಟಿಯಲ್ಲಿ ಹಿಂದಿನ ಮಂತ್ರಗಳ ಸ್ಥಾನದಲ್ಲಿ ವಿಕಲ್ಪವಾಗಿ ಹೇಳಿರುವ ಪುರೋನುವಾಕ್ಯೆ. |
| | *ದ್ವಿತೀಯಮತ - ಮುಂದಿನ ವ್ರಾತಪತೀಷ್ಟಿಯಲ್ಲಿರುವ ಮಂತ್ರಗಳ ಸ್ಥಾನದಲ್ಲಿ ವಿಕಲ್ಪವಾಗಿ ಹೇಳಿರುವ ಪುರೋನುವಾಕ್ಯೆ. |
| | *ಆಚಾರ್ಯರ ಮತ - ಹಿಂದಿನ ಪಾಥಿಕೃತೀಷ್ಟಿಯಲ್ಲಿಯೇ ಸ್ವಿಷ್ಟಕೃದ್ಯಾಗದ ಪುರೋನುವಾಕ್ಯೆ. |



+ಯತ್=ಯಾವುದು; ವಾಹಿಷ್ಠಮ್ = ಕೊಡಬೇಕಾದ ಹವಿಸ್ಸಾಗಿದೆಯೋ; ತತ್ = ಅದು; ಅಗ್ನಯೇ=ಅಗ್ನಿದೇವನಿಗೆ; ಬೃಹತ್ = ದೊಡ್ಡದಾಗಿ(ಮಹತ್ತಾಗಿ) (ಆಗಲಿ). ವಿಭಾವಸೋ! = ತೇಜೋಧನನಾದ ಅಗ್ನಿಯೇ! ಮಹಿಷೀ ಇವ = [ನಾವು ಕೊಡುವ ಹತ್ತಿಬೀಜ ಮುಂತಾದವುಗಳನ್ನು ತಿಂದು ಹೆಚ್ಚಾಗಿ ಹಾಲು ಕೊಡುವ] ಎಮ್ಮೆಯಂತೆ;ಅರ್ಚ = [ನಾವು ಕೊಡುವ ಹವಿಸ್ಸನ್ನು ಸ್ವೀಕರಿಸಿ ಫಲವನ್ನು ಕೊಡುವುದರಿಂದ ನಮ್ಮನ್ನು] ಅನುಗ್ರಹಿಸು.

ಸ್ವೀಕರಿಸಿ, ಫಲವನ್ನು ಕೊಡುವುದರಿಂದ ಯಜಮಾನನನ್ನು ಸಂತೋಷಪಡಿಸು. ನಿನ್ನ ಅನುಗ್ರಹದಿಂದಲೇ ಧನವೂ, ಅನ್ನಾದಿವಸ್ತುಗಳೂ ಪ್ರಾಪ್ತವಾಗುತ್ತವೆ. ❁ ಓ! ಅಗ್ನಿಯೇ! ನೀನು ಹೊಸದಾದ ಪಾಪಪರಿಹಾರಕರೂಪದಿಂದ ಬಂದಿರುತ್ತೀಯೆ. ನೀನು ಶಾಸ್ತ್ರಾನುಗುಣ

* * * ಕಾಮ್ಯೇಷ್ಟಿಕಾಂಡದಲ್ಲಿ (ತೈ.ಸಂ. 2-2) ಪಾಥಿಕೃತೀಷ್ಟಿಯ ನಂತರ ವ್ರಾತಪತೀಷ್ಟಿಯನ್ನು ಹೇಳಲಾಗಿದೆ. ಯಾಜ್ಯಾಕಾಂಡದಲ್ಲಿ ಈ ಎರಡು ಇಷ್ಟಿಗಳ ಮಧ್ಯದಲ್ಲಿರುವ ಈ ಯಾಜ್ಯಾ-ಪುರೋನುವಾಕ್ಯಗಳು ಉಭಯಕ್ಕೂ ವಿಕಲ್ಪವೆಂದೂ, ಹಿಂದಿನ ಸ್ವಿಷ್ಟಕೃತ್‌ನ ಯಾಜ್ಯಾ-ಪುರೋನುವಾಕ್ಯಗಳೆಂದೂ ಮೂರು ಮತ. ಇವು ಅಗ್ನಿ ಪ್ರಕಾಶಕಗಳೇ. ಅಗ್ನಿವಿಶೇಷದ ಪ್ರಕಾಶಕಗಳಲ್ಲ.

ಮಹಿಷೀವ ತ್ವದ್ರಯಿಸ್ತ್ವದ್ವಾಜಾ ಉದೀರತೇ ॥ ಅಗ್ನೇ
ತ್ವಂ ಪಾರಯಾ ನವ್ಯೋ ಅಸ್ಮಾನ್ಥ್ಸ್ವಸ್ತಿಭಿರತಿ ದುರ್ಗಾಣಿ

---

+ಮಹಿಷೀ । ಇವ । ತ್ವತ್ । ರಯಿಃ । ತ್ವತ್ । ವಾಜಾಃ । ಉದಿತಿ । ಈರತೇ।
ಅಗ್ನೇ । ತ್ವಮ್ । ಪಾರಯ । ನವ್ಯಃ । ಅಸ್ಮಾನ್ । ಸ್ವಸ್ತಿಭಿರಿತಿ ಸ್ವಸ್ತಿ-ಭಿಃ । ಅತೀತಿ।
ದುರ್ಗಾಣೀತಿ ದುಃ-ಗಾನಿ ।

---



| ಮಂತ್ರ | ವಿನಿಯೋಗ |
|---|---|
| ಅಗ್ನೇ.........ಶಂ ಯೋಃ ॥ | ಹಿಂದಿನ ಪುರೋನುವಾಕ್ಯೆಯಂತೆಯೇ ಇದು ಪಾಥಿಕೃತೀಷ್ಟಿಯ ಅಥವಾ ವ್ರಾತಪತೀಷ್ಟಿಯ ಅಥವಾ ಸ್ವಿಷ್ಟಕೃದ್ಯಾಗದ ಯಾಜ್ಯಾನುವಾಕ್ಯೆ. |

---

**ತ್ವತ್** = ನಿನ್ನ ದೆಸೆಯಿಂದ (ನಿನ್ನ ಅನುಗ್ರಹದಿಂದ) **ರಯಿಃ** = ಧನವೂ (ಉಂಟಾಗುತ್ತದೆ). **ತ್ವತ್** = ನಿನ್ನ ದೆಸೆಯಿಂದ, **ವಾಜಾಃ** = ಅನ್ನಾದಿಗಳು; **ಉದೀರತೇ** = ಉತ್ಪನ್ನವಾಗುತ್ತವೆ. (ಪ್ರಾಪ್ತವಾಗುತ್ತವೆ). +**ಅಗ್ನೇ** = ಎಲೈ ಅಗ್ನಿದೇವನೇ!; **ನವ್ಯಃ** = (ನಮ್ಮ ತಪ್ಪುಗಳನ್ನು ಸರಿಪಡಿಸಲು ಬಂದವನಾದುದರಿಂದ) ಹೊಸಬನಾಗಿರುವ; **ತ್ವಮ್** = ನೀನು; **ಅಸ್ಮಾನ್** = ನಮ್ಮನ್ನು; **ಸ್ವಸ್ತಿಭಿಃ** = ಶಾಸ್ತ್ರಾನುಗುಣವಾದ ಅನುಷ್ಠಾನಗಳಿಂದ;

---

ವಾದ ಕರ್ಮಾಚರಣೆಯಿಂದ ಸಮಸ್ತಪಾಪಗಳನ್ನೂ ಪರಿಹರಿಸಿ, ಫಲವನ್ನು ಹೊಂದುವಂತೆ ಮಾಡು. ನಾವು ವಾಸ ಮಾಡುವ ನಗರವು ವಿಸ್ತೃತವಾಗಿರಲಿ. ನಮ್ಮ ಭೂಮಿಯೂ ಸಸ್ಯಾದಿಬಹುಫಲಪ್ರದವಾಗಲಿ. ನೀನು ನಮ್ಮ ಹೆಣ್ಣು ಮಕ್ಕಳಿಗೂ, ಗಂಡು ಮಕ್ಕಳಿಗೂ ಸುಖವನ್ನುಂಟುಮಾಡು. ಭಯಪೀಡಾದಿಗಳನ್ನು ನಿವಾರಿಸು.

ಅಗ್ನಿದೇವನೇ! ಪ್ರಾರ್ಥಿಸಿದಾಗ ಬಂದು ಮನುಷ್ಯರ ವ್ರತಗಳನ್ನು ರಕ್ಷಿಸುವ ದೇವನೇ

---

+ 'ಮಹಿಷೀ' ಎಂಬುದನ್ನು 'ರಯಿಃ' ಎಂಬುದಕ್ಕೆ ವಿಶೇಷಣ ಮಾಡಿ, ಹೇ ಅಗ್ನೇ! ತ್ವತ್ = ನಿನ್ನದೆಸೆಯಿಂದ, ಮಹಿಷೀ ರಯಿಃ ಇವ = ಹೆಚ್ಚಾದ ಐಶ್ವರ್ಯದಂತೆ, ತ್ವತ್ = ನಿನ್ನಿಂದ, ವಾಜಃ = ಅನ್ನಸಂಪತ್ತುಗಳೂ, ಉದೀರತೇ = ಪ್ರಾಪ್ತವಾಗುತ್ತವೆ ಎಂದೂ ಈ ಮಂತ್ರದ ಅರ್ಥವನ್ನು ವಿವರಿಸಬಹುದು.

ವಿಶ್ವಾ । ಪೂಶ್ಚ ಪೃಥ್ವೀ ಬಹುಲಾ ನ ಉರ್ವೀ ಭವಾ ತೋಕಾಯ ತನಯಾಯ ಶಂ ಯೋಃ॥ ತ್ವಮಗ್ನೇ ವ್ರತಪಾ ಅಸಿ ದೇವ ಆ ಮರ್ತ್ಯೇಷ್ವಾ । ತ್ವಂ ಯಜ್ಞೇಷ್ವೀಡ್ಯಃ ॥

---

ವಿಶ್ವಾ ॥ ಪೂಃ । ಚ । ಪೃಥ್ವೀ । ಬಹುಲಾ । ನಃ । ಉರ್ವೀ । ಭವ । ತೋಕಾಯ। ತನಯಾಯ । ಶಮ್ । ಯೋಃ ॥ ತ್ವಮ್ । ಅಗ್ನೇ । ವ್ರತಪಾ ಇತಿ ವ್ರತ-ಪಾಃ। ಅಸಿ । ದೇವಃ । ಐತಿ । ಮರ್ತ್ಯೇಷು । ಆ । ತ್ವಮ್ । ಯಜ್ಞೇಷು । ಈಡ್ಯಃ ॥

---

| ಮಂತ್ರ | ವಿನಿಯೋಗ |
|---|---|
| ತ್ವಮಗ್ನೇ....ಈಡ್ಯಃ । | ಆಹಿತಾಗ್ನಿಯು ವ್ರತವಿರುದ್ಧವಾದ ಆಚರಣೆ(ಸುಳ್ಳು ಹೇಳುವುದು ಮೊದಲಾದ)ಗಳನ್ನು ಮಾಡಿದರೆ ಪ್ರಾಯಶ್ಚಿತ್ತವಾಗಿ ವಿಧಾನ ಮಾಡಿರುವ ವ್ರಾತ್ರಪತ್ಯೇಷ್ಟಿಯಲ್ಲಿನ ಪುರೋನುವಾಕ್ಯೆ. |

---

ವಿಶ್ವಾ = ಸಮಸ್ತವಾದ, ದುರ್ಗಾಣಿ = (ಅತಿಪಾದ, ಅವ್ರತ್ಯಾಚರಣ ಮೊದಲಾದ) ಪಾಪಗಳನ್ನು; ಅತಿ=ಅತಿಕ್ರಮಿಸಿ (ಪರಿಹರಿಸಿ); ಪಾರಯ = [ಫಲಪರ್ಯಂತವಾದ ಕರ್ಮಗಳ] ಕೊನೆ ಮುಟ್ಟಿಸು; ನಃ = ನಮಗೆ; ಪೂಃ ಚ = ನಗರಿಯೂ; ಪೃಥ್ವೀ = ವಾಸಕ್ಕಾಗಿ ವಿಸ್ತಾರವಾಗಲಿ; ಉರ್ವೀ = ಭೂಮಿಯೂ; ಬಹುಲಾ = ಬಹುಸಸ್ಯಸಮೃದ್ಧಿಯಿಂದ ಕೂಡಿದುದಾಗಿ (ಆಗಲಿ). (ನಮ್ಮ) ತೋಕಾಯ = ಹೆಣ್ಣುಮಕ್ಕಳಿಗೂ; ತನಯಾಯ= ಗಂಡುಮಕ್ಕಳಿಗೂ; ಶಂ ಯೋಃ= ಸುಖಪ್ರದನಾಗಿ ಆಗು; (ಸುಖವನ್ನು ಕೊಡುವವನೂ, ಭಯಾದಿಗಳನ್ನು ಹೋಗಲಾಡಿಸುವವನೂ ಆಗು). ಅಗ್ನೇ = ಅಗ್ನಿದೇವನೇ! ತ್ವಮ್=ನೀನು; ಆ=(ಆಗತ್ಯ) ಬಂದು; ಮರ್ತ್ಯೇಷು= ಮಾನವರಲ್ಲಿ; ವ್ರತಪಾಃ = ವ್ರತಗಳನ್ನು ರಕ್ಷಿಸುವ; ದೇವಃ ಅಸಿ=ದೇವನಾಗಿದ್ದೀಯೆ; ಆ= (ಸಮಂತಾತ್) = ಎಲ್ಲ ಕಡೆಗಳಲ್ಲಿಯೂ; ಯಜ್ಞೇಷು=ಯಾಗಗಳಲ್ಲಿ; ತ್ವಮ್=ನೀನು; ಈಡ್ಯಃ=ಸ್ತುತಿಸಲ್ಪಡುವವನು;

---

ನೀನಾಗಿದ್ದೀಯೆ. ನಿನ್ನನ್ನು ಎಲ್ಲೆಲ್ಲಿಯೂ ಯಜ್ಞಗಳಲ್ಲಿ ಸ್ತುತಿಸುತ್ತಾರೆ. ನೀನು ನಮ್ಮ ವ್ರತವಿರುದ್ಧವಾದ ಆಚರಣೆಗಳ ದೋಷವನ್ನು ಪರಿಹರಿಸು.

# ಯದ್ವೋ ವಯಂ ಪ್ರಮಿನಾಮ ವ್ರತಾನಿ ವಿದುಷಾಂ ದೇವಾ ಅವಿದುಷ್ಟರಾಸಃ । ಅಗ್ನಿಷ್ಟದ್ವಿಶ್ವಮಾಪೃಣಾತಿ ವಿದ್ವಾನ್ ಯೇಭಿರ್ದೇವಾಗ್ಂ ಋತುಭಿಃ ಕಲ್ಪಯಾತಿ ॥ ೧೪-28 ॥

[ ಜುಷೇಥಾಮಾ ಸ ನೋ ಯಜಾದಾ ತ್ರಯೋವಿಗ್ಂಶತಿಶ್ಚ । ]

---

ಯತ್ । ವಃ । ವಯಮ್ । ಪ್ರಮಿನಾಮೇತಿ ಪ್ರ-ಮಿನಾಮ । ವ್ರತಾನಿ । ವಿದುಷಾಮ್। ದೇವಾಃ । ಅವಿದುಷ್ಟರಾಸ ಇತ್ಯವಿದುಃ-ತರಾಸಃ ॥ ಅಗ್ನಿಃ । ತತ್ । ವಿಶ್ವಮ್ ಏತಿ। ಪೃಣಾತಿ । ವಿದ್ವಾನ್ । ಯೇಭಿಃ । ದೇವಾನ್ । ಋತುಭಿರಿತ್ಯೃತು-ಭಿಃ । ಕಲ್ಪಯಾತಿ॥೧೪॥

---

| ಮಂತ್ರ | ವಿನಿಯೋಗ |
|---|---|
| ಯದ್ವೋ.....................ಕಲ್ಪಯಾತಿ॥ | ವ್ರಾತಪತ್ಯೇಷ್ಟಿಯ ಯಾಜ್ಯಾನುವಾಕ್ಯೆ |

---

(ಅಸಿ=ಆಗಿದ್ದೀಯೆ)❖[ಹೇ] **ದೇವಾಃ!** =ಎಲೈ ದೇವತೆಗಳೇ! **ವಿದುಷಾಂ ವಃ** =ಸರ್ವಜ್ಞರಾದ ನಿಮಗೆ ಸಂಬಂಧಿಸಿದ; **ವ್ರತಾನಿ**=ನಿಯಮಾನುಷ್ಠಾನಗಳನ್ನು; **ಅವಿದುಷ್ಟರಾಸಃ**=ಏನೇನೂ ತಿಳಿಯದಿರುವ; **ವಯಮ್** =ನಾವು; **ಪ್ರಮಿನಾಮ** [ಇತಿ] **ಯತ್**=ಹಾಳುಮಾಡಿದೆವು ಎಂಬುದು ಯಾವುದುಂಟೋ; **ತತ್ ವಿಶ್ವಮ್**=ಅದೆಲ್ಲವನ್ನೂ; **ವಿದ್ವಾನ್**=(ಎಲ್ಲವನ್ನೂ) ತಿಳಿದಿರುವ; **ಅಗ್ನಿಃ** =ಅಗ್ನಿದೇವನು; **ಆಪೃಣಾತಿ** =ಪೂರ್ಣಗೊಳಿಸಲಿ;(ಅಖಂಡಿತವನ್ನಾಗಿ ಮಾಡಲಿ). **ಯೇಭಿಃ ಋತುಭಿಃ** = ಯಾವ ಕಾಲವಿಶೇಷಗಳಿಂದ; **ದೇವಾನ್** = ದೇವತೆಗಳನ್ನು; **ಕಲ್ಪಯಾತಿ** =ಹವಿರ್ಭಾಗಿಗಳನ್ನಾಗಿ ಮಾಡುತ್ತಾನೆಯೋ; [ತೈಃ ಋತುಭಿಃ=ಆ ಕಾಲವಿಶೇಷಗಳಿಂದಲೇ] ವ್ರತಾನಿ = ವ್ರತಗಳನ್ನು; ಆ ಪೃಣಾತಿ = ಪೂರ್ತಿಗೊಳಿಸಲಿ.

---

ಓ! ದೇವತೆಗಳೇ! ನೀವು ಎಲ್ಲವನ್ನೂ ತಿಳಿದವರು. ನಿಮಗೆ ಸಂಬಂಧಿಸಿದ (ನಿಮ್ಮ ಯಾಗಕ್ಕೆ ಸಂಬಂಧಿಸಿದ) ವ್ರತಗಳನ್ನು ಅಜ್ಞರಾದ ನಾವು ಸರಿಯಾಗಿ ಆಚರಿಸದೆ ತಪ್ಪು ಮಾಡಿದೆವು.ಎಲ್ಲವನ್ನೂ ತಿಳಿದ ಅಗ್ನಿದೇವನು ನಮ್ಮ ಪ್ರಾರ್ಥನೆಯಿಂದ ಪ್ರಸನ್ನನಾಗಿ ಆ ವ್ರತಗಳನ್ನು ಪೂರ್ಣಗೊಳಿಸಲಿ. ಯಾಗಕಾಲದಲ್ಲಿ ದೇವತೆಗಳಿಗೆ ಹವಿಸ್ಸನ್ನು

ಒಯ್ಯುವವನು ಅಗ್ನಿಯೇ. ಆ ದೇವನು ವ್ರತಲೋಪವನ್ನು ಪರಿಹರಿಸಿ ನಮ್ಮನ್ನು ಅನುಗ್ರಹಿಸಲಿ. ದೇವತೆಗಳಿಗೂ ಕೋಪವುಂಟಾಗದಂತೆ ಮಾಡಲಿ.

[ಇಷೇ ತ್ವಾ ಯಜ್ಞಸ್ಯ ಶುಂಧಧ್ವಂ ಕರ್ಮಣೇ ವಾಂ ದೇವೋಽವ

ಧೂತಂ ಧೃಷ್ಟಿಃ ಸಂವಪಾಮ್ಯಾದದೇ ಪ್ರತ್ಯುಷ್ಟಂ ಕೃಷ್ಣೋಽಸಿ

ಭುವನಮಸಿ ವಾಜಸ್ಯೋಽಭಾ ವಾಂ ಚತುರ್ದಶ || ೧೪ ||

ಇಷೇ ದೃಗ್ಂಹ ಭುವನಮಷ್ಟಾವಿಗ್ಂಶತಿಃ || ೨೮ ||

|| ಇಷೇ ತ್ವಾ ಕಲ್ಪಯಾತಿ ||

ಹರಿಃ ಓಂ। ಶ್ರೀಕೃಷ್ಣಾರ್ಪಣಮಸ್ತು.

ಇತಿ ಪ್ರಥಮಕಾಂಡೇ ಪ್ರಥಮಃ ಪ್ರಶ್ನಃ

---

## ವಿನಿಯೋಗ ಸಂಗ್ರಹ

ಅಂತ್ಯಾನುವಾಕೇ ಯಾಜ್ಯಾನುವಾಕ್ಯಾಃ ಕಾಮ್ಯೇಷ್ಟಿಸಂಗತಾಃ ।
ಕಾಂಡಸ್ಯ ತು ದ್ವಿತೀಯೇ ಪ್ರಶ್ನ ಇಷ್ಟಯಃ ॥
1,2 ಉಭ್ಯೈಂದ್ರಾಗ್ನತ್ರಯೇ ಯುಗ್ಮಮಿಂದ್ರ್ಯೆಂ3,4 ದ್ರಾಗ್ನತ್ರಯೇ ತಥಾ ।
ವಯಂ5,6 ಪೌಷ್ಣೇ ಚರೌ ಕ್ಷೇತ್ರ7,8 ಕ್ಷೈತ್ರಪತ್ಯಚರೌ ತಥಾ ॥
ಅಗ್ನೇ9,10 ಪಾಥಿಕೃತೇ ಯದ್ವಾ11-14 ವಾತ್ರಪತ್ಯೇ ದ್ವಿಯುಗ್ಮಕಮ್ ।
ವಿಕಲ್ಪೇನೇತಿ ಮಂತ್ರಾಃ ಸ್ಯುರನುವಾಕೇ ಚತುರ್ದಶ ॥

ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ - 14

[ಎರಡನೆಯ ಕಾಂಡದ ಎರಡನೆಯ ಪ್ರಶ್ನೆಯಲ್ಲಿ ವಿಹಿತವಾಗಿರುವ ಕಾಮ್ಯೇಷ್ಟಿಗಳಲ್ಲಿನ ಯಾಜ್ಯಾ-ಪುರೋನುವಾಕ್ಯಗಳು ಈ ಕಡೆಯ ಅನುವಾಕದಲ್ಲಿ ಹೇಳಲ್ಪಟ್ಟಿವೆ]

### ಅನುವಾಕದ ವಿಶೇಷ ವಿಷಯಗಳು

### ಅ) ಭ.ಭಾ. ಭಾಷ್ಯ*

ಮಂತ್ರಸಂಖ್ಯೆ

। ॥

೨) ಆಶ್ರವಂ........ನವ್ಯಮ್॥ ಈ ಮಂತ್ರದಲ್ಲಿರುವ 'ಘ' ಎನ್ನುವುದಕ್ಕೆ ಪ್ರಸಿದ್ಧ ಎಂದು ಅರ್ಥ. ಅಥವಾ ಪಾದದ ಪೂರ್ತಿಗಾಗಿ 'ಘ' ಶಬ್ದವಿದೆ. ಇದೇ ಮಂತ್ರದಲ್ಲಿರುವ ವಿಜಾಮಾತುಃ ಎಂಬ ಶಬ್ದಕ್ಕೆ ವಿಹೀನಜಾಮಾತುಃ ಎಂದು ಅರ್ಥವನ್ನು ಹೇಳಿರುತ್ತಾರೆ. ಹೀಗೆ ಹೇಳಿದಾಗ ಗುಣರಹಿತನಾದರೂ ಧನಿಕನಾದ ಅಳಿಯನು ಕನ್ಯೆಯನ್ನು ವಿವಾಹವಾಗಲು ಮಾವನಿಗೆ ಬೇಕಾದಷ್ಟು ಧನವನ್ನು ಕೊಡುತ್ತಾನೆಂದು ಮಂತ್ರಾರ್ಥವಾಗುತ್ತದೆ. ಅಲ್ಲದೆ ಈ ಮಂತ್ರದಲ್ಲಿರುವ 'ಸ್ತೋಮ' ಎಂಬ ಶಬ್ದಕ್ಕೆ 'ಸ್ತೋತ್ರ' ವೆಂದು ಅರ್ಥ ಮಾಡಿ, 'ಈ ನವೀನವಾದ ಸ್ತೋತ್ರವನ್ನು ಮಾಡುತ್ತೇನೆ' ಎಂದು ತಿಳಿಸಿ, ಪ್ರಯತೀ=ಪ್ರಯತ್ಯೈ (ಕೊಡುವುದಕ್ಕಾಗಿ) ಎಂದು ಅರ್ಥವನ್ನಿಟ್ಟುಕೊಂಡು, 'ನಿಮಗೆ ಸೋಮಸದೃಶವಾದ ಪುರೋಡಾಶವನ್ನು ಕೊಡುವುದಕ್ಕಾಗಿ ಈ ನವೀನವಾದ ಮಂತ್ರರೂಪಸ್ತೋತ್ರವನ್ನು ಮಾಡುತ್ತೇನೆ' ಎಂದು ಅರ್ಥವನ್ನು ಹೇಳಬಹುದು ಎಂದೂ ವಿವರಿಸಿರುತ್ತಾರೆ.

---

* ಭಟ್ಟಭಾಸ್ಕರರು ತಮ್ಮ ಭಾಷ್ಯದಲ್ಲಿ ವ್ಯಾಕರಣವಿಶೇಷಗಳನ್ನು ವಿಸ್ತರವಾಗಿ ಪ್ರತಿಪಾದಿಸಿರುತ್ತಾರಾದರೂ, ಅವರು ನಿರೂಪಿಸಿದ ಅರ್ಥವಿಶೇಷಗಳನ್ನು ಮಾತ್ರ ಇಲ್ಲಿ ತಿಳಿಸಲಾಗಿದೆ.

೩) ಇಂದ್ರಾಗ್ನೀ.......ಕರ್ಮಣಾ । ನವತಿಂ ಪುರಃ = ಅಸುರಾಣಾಂ ಶತ್ರೂಣಾಂ ವಾ = ರಾಕ್ಷಸರ ಅಥವಾ ಶತ್ರುಗಳ ತೊಂಬತ್ತು ಪಟ್ಟಣಗಳನ್ನು ನಾಶ ಪಡಿಸಿದಿರಿ.

೪) ಶುಚಿಂ.......ಧೇಷ್ಠಾ । ಧೇಷ್ಠಾ = ಉಂಟುಮಾಡತಕ್ಕವರು. ಈ ಶಬ್ದವು ಇಂದ್ರಾಗ್ನೀ ಎಂಬ ಶಬ್ದಕ್ಕೆ ವಿಶೇಷಣ. ಸಾಯಣರ ಮತದಲ್ಲಿ ಇದು ಕ್ರಿಯಾಪದ.

೬) ಪಥಸ್ಪಥಃ.......ಪೂಷಾ । ಕಾಮೇನ ಕೃತಃ ವಚಸ್ಯಾ ಅಭ್ಯಾನಟ್ = ಕಾಮೇನ ವಶೀಕೃತಃ ಜನಃ, ವಚಸ್ಯಾ = ವಚಸಾ = ಸ್ತೋತ್ರೇಣ; ಅಭ್ಯಾನಟ್ = ಅಭಿಪ್ರಾಪ್ನೋತಿ ತಥಾ ಅಹಮಪಿ ಉಪಾಗತೋಽಸ್ಮಿ । = ಫಲಕಾಮನೆಯುಳ್ಳವನು ಹೇಗೆ ಸ್ತುತಿಸುತ್ತಾ ಬರುತ್ತಾನೆಯೋ ಹಾಗೆ ನಾನೂ ಬಂದಿರುವೆನು; ಅಭ್ಯಾನಟ್ = ಬಂದಿರುವೆನು (ಸಾಯಣ). ಅಭ್ಯಾನಟ್ = ಬರುತ್ತಾನೆ. (ಭ.ಭಾಸ್ಕರರು).

ಚಂದ್ರಾಗ್ರಾಃ = ಚಂದ್ರಃ = ಹಿರಣ್ಯಮ್, ರಜತಜಾತಿರ್ವಾ (ಅಸಿತಜಾತಿರ್ವಾ) ಚಂದ್ರಃ ಅಗ್ರಮ್=ಪ್ರಧಾನಮ್ ಈಶ್ವರೋ ವಾ ಯಾಸಾಂ ತಾಃ ಓಷಧೀಃ = ಚಂದ್ರನೇ ಪ್ರಧಾನನಾಗಿರುವ ಓಷಧಿಗಳನ್ನು; ಹಿರಣ್ಯಾದಿಧನಗಳನ್ನೂ; ರಾಸತ್ = ಕೊಡಲಿ.

೭) ಕ್ಷೇತ್ರಸ್ಯ........ಈದೃಶೇ ॥ ಪೋಷಯಿತ್ನು = ಅನ್ನಾದಿಗಳು ಮತ್ತು ಪ್ರಜೆಯನ್ನೂ; ಈದೃಶೇ = ಗವಾದಾವರ್ಥೇ ಅಸ್ಮಾನ್ ಸ್ವಾಮಿತ್ವೇನ ಸ್ಥಾಪಯಿತ್ವಾ ಸುಖಯತು = ಪಶುಸಂಪತ್ತಿಗೆ ನಮ್ಮನ್ನು ಒಡೆಯರನ್ನಾಗಿ ಮಾಡಿ ಸುಖಪಡುವಂತೆ ಮಾಡಲಿ.

೮) ಕ್ಷೇತ್ರಸ್ಯ.........ಮೃಡಯಂತು । ಮಧುಮಂತಮ್ ಊರ್ಮಿಮ್ = ಮಧುರವಾದ ಕ್ಷೀರದಿಂದ ಕೂಡಿದ ಗೋವು ಮತ್ತಿತರ ಸಮುದಾಯವನ್ನು; ಮಧುಶ್ಚುತಮ್ = ಮಧುರವಾದ ಕ್ಷೀರವನ್ನು ಪ್ರೀತಿಯಿಂದ ಸುರಿಸುತ್ತಿರುವ (ಗವಾದಿ ಸಮುದಾಯವನ್ನು); ಅಥವಾ 'ಕ್ಷೇತ್ರ' ಎಂಬ ಪದವನ್ನು ಅಧ್ಯಾಹಾರ ಮಾಡಿಕೊಂಡು ಗವಾದಿಸಮುದಾಯಗಳಿಂದ ಕೂಡಿದ ಕ್ಷೇತ್ರವನ್ನು; ಧುಕ್ಷ್ವ = ಒದಗಿಸು.

ನಃ ಮೃಡಯಂತು = ನಮ್ಮನ್ನು, ನಮ್ಮದಾದ ಗವಾದಿಸಮುದಾಯವನ್ನು ಸುಖಪಡಿಸಲಿ.

೯) ಅಗ್ನೇ............ವಿಧೇಮ । ಸುಪಥಾ = ಶಾಸ್ತ್ರಕ್ಕೆ ವಿರುದ್ಧವಲ್ಲದ ಒಳ್ಳೆಯ

ಮಾರ್ಗದಿಂದ; ರಾಯೇ = ಹವಿಸ್ಸಿನ ರೂಪವಾದ ಧನಪ್ರಾಪ್ತಿಗೆ; ವಯುನಾನಿ = ಜ್ಞಾನಗಳನ್ನು, ಅಭಿಪ್ರಾಯಗಳನ್ನು;

೧೦) ಆ ದೇವಾನಾಮಪಿ.........ಕಲ್ಪಯಾತಿ । ಅಧ್ವರಾನ್ ಕಲ್ಪಯಾತಿ = ಧ್ವರೈಃ– ಕರ್ಮಣೋ ವಾರಕೈಃ– ಕಾಲಾತಿಪತ್ತ್ಯಾದಿ ದೋಷೈಃ ರಹಿತಾನ್ ಅಸ್ಮದ್ಯಾಗಾನ್ ವಾ ಕರೋತು = ಯಾಗದ ಫಲನಾಶಕವಾದ ಕಾಲಾತಿಪಾತಾದಿದೋಷರಹಿತವಾದದ್ದನ್ನಾಗಿ (ನಮ್ಮ ಯಾಗಗಳನ್ನು) ಮಾಡಲಿ. ನಮ್ಮನ್ನೂ ದೋಷರಹಿತರನ್ನಾಗಿ ಮಾಡಲಿ. ಸ ಋತೂನ್ ಕಲ್ಪಯಾತಿ = ಆದಿತ್ಯಾತ್ಮಕನಾದ ಅಗ್ನಿಯು ಕಾಲನಿಯಾಮಕನೂ ಆಗಿರುತ್ತಾನೆ. ಆದುದರಿಂದ ಕಾಲಾತಿಪತ್ತಿದೋಷವನ್ನು ಪರಿಹರಿಸಬಲ್ಲನು.

ದೇವಾಃ ಖಲು ಅಗ್ನಿನಾ ಹೂಯಮಾನಾಃ ಕರ್ಮಣೋ ವೈಗುಣ್ಯಮನಾದೃತ್ಯ ಆಗಮಿಷ್ಯಂತಿ = ಅಗ್ನಿಯು ಆಹ್ವಾನಿಸಿದರೆ ದೇವತೆಗಳು ಯಾಗದ ವೈಗುಣ್ಯವನ್ನು ಗಮನಿಸದೇ ಬರುತ್ತಾರೆ.

೧೧) ಯದ್ವಾ...........ಉದೀರತೇ । ವಾಹಿಷ್ಠಮ್ = ವಾಹಯಿತೃತಮಮ್ = ಅತ್ಯುತ್ತಮವಾಗಿ ತಲುಪಿಸುವ ಕಾರ್ಯವನ್ನು ಮಾಡುವಂತಹುದು. ಪ್ರೀತೇಃ ವಾಹಿಷ್ಠಮ್ = ನಮ್ಮ ಪ್ರೀತಿಯನ್ನು ತಲುಪಿಸುವಂತಹದು ಸ್ತೋತ್ರ. ಅದು, ಅಗ್ನಯೇ = ಅಗ್ನಿಗೇ ಆಗಲಿ;.

ಅಥವಾ ವಾಹಿಷ್ಠಮ್ = ಅಭೀಷ್ಟನಿರ್ವಹಣಂ ಪ್ರಯತ್ನಃ = ನಮ್ಮ ಇಷ್ಟ-ಸಿದ್ಧಿಗಾಗಿ ಮಾಡುವ ಪ್ರಯತ್ನವು; ಅಗ್ನಯೇ = ಅಗ್ನಿಯ ಅನುಗ್ರಹಕ್ಕಾಗಿ; [ನಮ್ಮ ಸ್ತೋತ್ರವನ್ನು] ಅರ್ಚ = ಗೌರವಿಸು, ಅಂಗೀಕರಿಸು. ಮಹಿಷೀ ಇವ = ಮಹಾ + ಋಷಿ ಎಂಬಲ್ಲಿ ಸಂಧಿಯ ನಂತರ 'ಮಹರ್ಷಿ' ಎಂಬಲ್ಲಿ 'ಅ' ಕಾರಕ್ಕೆ ಇ ಕಾರ ಬಂದು ರೇಫಲೋಪದ ನಂತರ ಆಗುವ 'ಮಹಿಷೀ' ಶಬ್ದಕ್ಕೆ ಮಹೇಶ್ವರ = ಮಹಾರಾಜ ಎಂಬ ಅರ್ಥವನ್ನಿಟ್ಟುಕೊಂಡು ಮಹಾರಾಜನಿಂದ ಹೇಗೋ ಹಾಗೆ ಎಂದು ಅರ್ಥ ಮಾಡಿರುತ್ತಾರೆ. ಅಥವಾ ಮಹಿಷೀ ಎಂಬ ಶಬ್ದಕ್ಕೆ ರಾಣಿ ಎಂಬರ್ಥವನ್ನಿಟ್ಟುಕೊಂಡು ರಾಜಭಾರ್ಯೆಯಿಂದ ಹೇಗೋ ಹಾಗೆ ನಿನ್ನ ಅನುಗ್ರಹದಿಂದಲೇ ಧನವೂ, ಅನ್ನಾದಿಗಳೂ ಉಂಟಾಗುತ್ತವೆ ಎಂಬುದಾಗಿ ಅರ್ಥವನ್ನೂ ಮಾಡಿರುತ್ತಾರೆ.

೧೨) ಅಗ್ನೇ ತ್ವಂ.......ಶಂ ಯೋಃ । ತೋಕಾಯ = ಅಸ್ಮದೀಯಾಯ = ನಮ್ಮ ಮಗನಿಗೆ; ತನಯಾಯ= ತಸ್ಯಾಪತ್ಯಾಯ = ಅಸ್ಮತ್ಪೌತ್ರಾಯ = ನಮ್ಮ ಮೊಮ್ಮಗನಿಗೆ;

ಶಮ್ = ರೋಗಾಣಾಂ ಶಮಯಿತಾ = ರೋಗಗಳನ್ನು ದೂರಮಾಡುವವನು; ಯೋಃ = ಆಗಾಮಿಭಯವಿನಾಶಕಃ = ಮುಂಬರುವ ಭಯನಿವಾರಕನು; ಭವ = ಆಗು. ನಮ್ಮ ಮಕ್ಕಳಿಗೂ ಮೊಮ್ಮಕ್ಕಳಿಗೂ ರೋಗಾದಿಪರಿಹಾರಕನೂ ಭಯನಿವರ್ತಕನೂ ಆಗು.

೧೩) ತ್ವಮಗ್ನೇ.......ಈಡ್ಯಃ। 'ಚ' ಎಂಬುದಕ್ಕೆ ಸಮುಚ್ಚಯ ಎಂಬರ್ಥವನ್ನಿಟ್ಟು ಕೊಂಡು, ದೇವೇಷು ಚ ಮನುಷ್ಯೇಷು ಚ ವ್ರತಪಾ ಅಸಿ = ದೇವತೆಗಳಲ್ಲಿಯೂ ಮನುಷ್ಯರಲ್ಲಿಯೂ ವ್ರತರಕ್ಷಕನಾಗಿದ್ದೀಯೆ ಎಂಬ ಅರ್ಥವನ್ನು ವಿವರಿಸಿದ್ದಾರೆ.

## ಆ) ಮೀಮಾಂಸಾ

೧) ಯಾಜ್ಯಾನುವಾಕ್ಯಗಳಲ್ಲಿ ವಿನಿಯೋಗವು ಹೇಗೆ? [ಜೈ.ಸೂ. 3.2]

ಮೈತ್ರಾಯಣೀಯಸಂಹಿತೆಯಲ್ಲಿ ಐಂದ್ರಾಗ್ನೇಷ್ಟಿಗಳು ಉಕ್ತವಾಗಿವೆ. ಅದೇ ಸಂಹಿತೆಯ ಯಾಜ್ಯಾನುವಾಕ್ಯಾಕಾಂಡದಲ್ಲಿ [ಮೈ.ಸಂ. 2.11/4-11-1] ಯಾಜ್ಯಾನುವಾಕ್ಯೆಗಳು ಅದೇ ಕ್ರಮದಲ್ಲಿ ಉಕ್ತವಾಗಿವೆ. ಆಯಾ ದೇವತಾಪ್ರಕಾಶನರೂಪವಾದ ಲಿಂಗವೂ ಆ ಮಂತ್ರಗಳಿಗಿದೆ. ಇವುಗಳ ವಿನಿಯೋಗದ ವಿಷಯದಲ್ಲಿ ವಿಚಾರ ಮಾಡಿರುತ್ತಾರೆ.

ಇವುಗಳ ವಿನಿಯೋಗದಲ್ಲಿ ಅನಿಯಮವೇ ಅಥವಾ ನಿಯಮವೇ ಎಂದು ಸಂಶಯ. ಇಲ್ಲಿಯ ಪೂರ್ವಪಕ್ಷ ಹೀಗಿದೆ : ಲಿಂಗವು ಪ್ರಬಲ. ಆದುದರಿಂದ ಕಾಮ್ಯೇಷ್ಟಿಗಳಲ್ಲಿಯೂ, ಇತರ ಕರ್ಮಗಳಲ್ಲಿಯೂ ದೇವತಾಪ್ರಕಾಶನಸಾಮರ್ಥ್ಯರೂಪವಾದ ಲಿಂಗದಿಂದ ಅಂಗತ್ವವು ಬರಲಿ. ಅಥವಾ ಕ್ರಮವನ್ನು ಗಮನಿಸದೇ ಆಯಾ ದೇವತೆಗಳುಳ್ಳ ಕಾಮ್ಯೇಷ್ಟಿಯಾಗಗಳಲ್ಲಿ ವಿಕಲ್ಪದಿಂದ ವಿನಿಯೋಗವಾಗಲಿ. ದೇವತಾಪ್ರಕಾಶನ-ಸಾಮರ್ಥ್ಯವೆಂಬ ಲಿಂಗದಿಂದಲೇ ಯಾಜ್ಯಾನುವಾಕ್ಯಗಳು ಅಂಗಗಳಾಗುತ್ತವೆ. ಕ್ರಮವನ್ನು ಗಮನಿಸದಿದ್ದರೂ ಬಾಧಕವಿಲ್ಲ.

ಇಲ್ಲಿಯ ಸಿದ್ಧಾಂತವು ಹೀಗಿದೆ : ಕಾಮ್ಯೇಷ್ಟಿ, ಕಾಮ್ಯೇಷ್ಟಿಯಾಜ್ಯಾಕಾಂಡ ಎಂಬ ಯಾಜ್ಞಿಕಸಮಾಖ್ಯೆಯಿಂದ ಇಷ್ಟಿಗಳಿಗೂ ಯಾಜ್ಯಾನುವಾಕ್ಯಗಳಿಗೂ ಸಂಬಂಧವು ತಿಳಿಯುತ್ತದೆ. ಆದರೆ ಮೊದಲನೆಯ ಇಷ್ಟಿಗೆ ಮೊದಲನೆಯ ಯಾಜ್ಯಾನುವಾಕ್ಯೆ, ಎರಡನೆಯ ಇಷ್ಟಿಗೆ ಎರಡನೆಯದು ಎಂಬ ವಿಶೇಷವು ಕ್ರಮದಿಂದ ತಿಳಿಯುತ್ತದೆ. ಪೂರ್ವೋಕ್ತ ಮೈತ್ರಾಯಣೀಯಸಂಹಿತೆಯಲ್ಲಿ ಎರಡು ಐಂದ್ರಾಗ್ನೇಷ್ಟಿಗಳೂ, ಎರಡು ಯಾಜ್ಯಾನುವಾಕ್ಯೆಗಳೂ ಇರುವುದರಿಂದ ಕ್ರಮಸಾಪೇಕ್ಷವಾದ ಲಿಂಗದಿಂದ

ಮೊದಲನೆಯದಕ್ಕೆ ಮೊದಲನೆಯದು, ಎರಡನೆಯದಕ್ಕೆ ಎರಡನೆಯದು ಎಂದು ತಿಳಿಯುತ್ತದೆ. ಕ್ರಮದಿಂದಲೇ ವ್ಯವಸ್ಥೆಯಾಗುವುದಾದರೆ ಲಿಂಗವನ್ನು ಏಕೆ ಆಶ್ರಯಿಸಿ ನಿರ್ಣಯಿಸಬೇಕು? ಎಂದು ಸಂಶಯ ಬಂದರೆ, ಕೆಲವೆಡೆ ಲಿಂಗದಿಂದಲೇ ನಿರ್ಣಯ ಮಾಡಬೇಕಾಗುತ್ತದೆ. ಐಂದ್ರಾಬಾರ್ಹಸ್ಪತ್ಯೇಷ್ಟಿಯಾಗಕ್ರಮದಲ್ಲಿ ಎರಡು ಯಾಜ್ಯಾನು ವಾಕ್ಯಗಳಿವೆ. ಕ್ರಮದಿಂದ ಒಂದಕ್ಕೆ ವಿನಿಯೋಗವನ್ನು ಹೇಳಬಹುದು. ಮತ್ತೊಂದು ಯಾಜ್ಯಾನುವಾಕ್ಯಯುಗಳಕ್ಕೂ ಅಲ್ಲಿಯೇ ವಿಕಲ್ಪದಿಂದ ವಿನಿಯೋಗವೆಂದು ಲಿಂಗದಿಂದಲೇ ತಿಳಿಯುತ್ತದೆ. ಆದುದರಿಂದ ಸಮಾಖ್ಯಾಸಹಿತವಾದ ಲಿಂಗದಿಂದಲೇ ಈ ಮಂತ್ರಗಳಿಗೆ ವಿನಿಯೋಗವು ನಿಯತವಾಗಿದೆ.

**೨) ಯಾಜ್ಯಾ-ಪುರೋನುವಾಕ್ಯಗಳಿಗೆ ಸಮುಚ್ಚಯವೇ? [ಜೈ.ಸೂ. 12.4.2]**

ಐಂದ್ರಾಬಾರ್ಹಸ್ಪತ್ಯಯಾಗದ ಕ್ರಮದಲ್ಲಿ ಹೇಳಿರುವ ಎರಡು ಯಾಜ್ಯಾ- ಪುರೋನು ವಾಕ್ಯಗಳಿಗೆ ಸಮುಚ್ಚಯವೇ ? ಅಥವಾ ವಿಕಲ್ಪವೇ, ಅಂದರೆ ಎರಡನ್ನೂ ಹೇಳಬೇಕೆ? ಅಥವಾ ಎರಡರಲ್ಲಿ ಒಂದನ್ನು ಹೇಳಬೇಕೆ? ಇದು ಇಲ್ಲಿನ ಸಂಶಯ.

ಇಲ್ಲಿಯ ಪೂರ್ವಪಕ್ಷ ಹೀಗಿದೆ : 'ಸಾರಸ್ವತೀಮನೂಚ್ಯ ವಾಗ್ಯಂತವ್ಯಾ' 'ವೈಷ್ಣವೀಮನೂಚ್ಯ ವಾಗ್ಯಂತವ್ಯಾ' ಎಂದು ಉಕ್ತವಾದ ವಾಗ್ಯಮದ ವಿಚಾರದಲ್ಲಿ ಎರಡು ಋಕ್‌ಗಳನ್ನೂ ಹೇಳಬೇಕು. ಹಾಗೆಯೇ ಇಲ್ಲಿಯೂ ಎರಡು ಯಾಜ್ಯಾನುವಾಕ್ಯೆಗಳ ಯುಗ್ಮವನ್ನೂ ಸಮುಚ್ಚಯವಾಗಿಯೇ ಹೇಳಬೇಕು.

ಇಲ್ಲಿಯ ಸಿದ್ಧಾಂತವು ಹೀಗಿದೆ: ವಾಗ್ಯಮದ ವಿಷಯದಲ್ಲಿ ವಾಗ್ಯಮವು ಅದೃಷ್ಟಾರ್ಥ ವಾದುದರಿಂದ ಸಮುಚ್ಚಯವು ಯುಕ್ತ. ಇಲ್ಲಿ ದೇವತಾಪ್ರಕಾಶನರೂಪವಾದ ಅರ್ಥವು ದೃಷ್ಟಾರ್ಥವಾಗಿದೆ. ಆದುದರಿಂದ ಎರಡು ಯಾಜ್ಯಾ-ಪುರೋವಾಕ್ಯೆಗಳ ಜೋಡಿಗೂ ವಿಕಲ್ಪ ದಿಂದ ಇಷ್ಟಿಯಲ್ಲಿ ವಿನಿಯೋಗ.

**೩) ಒಂದೇ ಯುಗ್ಮದಲ್ಲಿಯೂ ವಿಕಲ್ಪವೇ? [ಜೈ.ಸೂ. 12.4.3]**

ಒಂದು ಪುರೋನುವಾಕ್ಯ ಮತ್ತು ಯಾಜ್ಯಾನುವಾಕ್ಯವಿರುವಾಗ ಸಮುಚ್ಚಯವೇ? ವಿಕಲ್ಪವೇ? ಏಕೆಂದರೆ ಎರಡು ಜೋಡಿ ಯಾಜ್ಯಾ-ಪುರೋನುವಾಕ್ಯಗಳಿಗೆ ದೇವತಾ ಪ್ರಕಾಶನವೆಂಬ ಒಂದೇ ಪ್ರಯೋಜನವಿರುವುದರಿಂದ ವಿಕಲ್ಪವೆಂದು ನಿರ್ಣಯಿಸ ಲಾಯಿತು .ಒಂದೇ ಜೋಡಿಯಿರುವಾಗಲೂ ದೇವತಾಪ್ರಕಾಶನವು ಒಂದೊಂದು ಋಕ್ಕಿನಿಂದಲೂ ಆಗುವುದರಿಂದ ಇವುಗಳಿಗೆ ವಿಕಲ್ಪವೇ ಹೊರತು ಸಮುಚ್ಚಯವಿಲ್ಲ. ಇದು ಇಲ್ಲಿನ ಪೂರ್ವಪಕ್ಷ.

ಇಲ್ಲಿಯ ಸಿದ್ಧಾಂತವು ಹೀಗಿದೆ : ಪುರೋನುವಾಕ್ಯವೆಂದರೆ ಮೊದಲು ಹೇಳುವ ಮಂತ್ರ. ಅಂದರೆ ಯಾಜ್ಯಾನುವಾಕ್ಯೆಗೆ ಮೊದಲು ಹೇಳುವ ಮಂತ್ರ. ಎರಡನ್ನೂ ಸಮುಚ್ಚಯವನ್ನಾಗಿ ಹೇಳುವ ಪ್ರಸಂಗವು ಬಂದಾಗ ಮಾತ್ರ ಈ ಅರ್ಥವು ಹೊಂದಿಕೊಳ್ಳುತ್ತದೆ. ವಿಕಲ್ಪವಾದರೆ ಒಂದೊಂದನ್ನೇ ಹೇಳಬೇಕಾಗುವುದರಿಂದ ಮೊದಲು-ನಂತರ ಎಂಬ ವಿಚಾರವೇ ಬರುವುದಿಲ್ಲ. ಆದುದರಿಂದ ಒಂದೇ ಯುಗ್ಮವಿರುವಾಗ ಸಮುಚ್ಚಯವೇ. ಅಲ್ಲದೆ ಶ್ರುತಿಯು

'ಪುರೋನುವಾಕ್ಯಾಮನೂಚ್ಯ ಯಾಜ್ಯಯಾ ಜುಹೋತಿ' [ತೈ. ಸಂ. 3.4.10.]

ಎಂಬ ಪ್ರತ್ಯಕ್ಷವಚನದಿಂದ ಪುರೋನುವಾಕ್ಯೆಯು ದೇವತೋಪಲಕ್ಷಣಕ್ಕಾಗಿಯೂ ಯಾಜ್ಯಾನುವಾಕ್ಯೆಯು ಹವಿಃಪ್ರದಾನಕ್ಕಾಗಿಯೂ ಇರುವುದೆಂಬ ಕಾರ್ಯಭೇದವನ್ನು ಹೇಳಿ ಸಮುಚ್ಚಯವನ್ನೂ ಹೇಳಿದೆ. ಆದುದರಿಂದ ಒಂದೇ ಯುಗ್ಮದಲ್ಲಿ ವಿಕಲ್ಪವಿಲ್ಲ; ಸಮುಚ್ಚಯ.

೪) ಯಾಗಗಳಲ್ಲಿ ಪರ್ಯಾಯಶಬ್ದದಿಂದ ದೇವತೆಗಳನ್ನು ನಿರ್ದೇಶಿಸಬಹುದೇ?

ಯಾಗಗಳಲ್ಲಿ ದೇವತೆಯನ್ನು ಪರ್ಯಾಯಶಬ್ದದಿಂದಲೂ ಹೇಳಬಹುದೇ? ಅಥವಾ ವೈಧ(ವಿಧಿಯಲ್ಲಿರುವ)ಶಬ್ದದಿಂದಲೇ ಹೇಳಬೇಕೆ? ಎಂಬುದು ಸಂಶಯ.

ಇಲ್ಲಿಯ ಪೂರ್ವಪಕ್ಷವು ಹೀಗಿದೆ : ಅರ್ಥವನ್ನು ತಿಳಿಸುವುದು ಶಬ್ದದ ಸ್ವಭಾವ. ಆದುದರಿಂದ 'ಪಾವಕ' 'ಶುಚಿ' ಮೊದಲಾದ ಶಬ್ದಗಳು ಅಗ್ನಿಶಬ್ದದಿಂದ ಬೇರೆಯಾದರೂ ಅಗ್ನಿಯನ್ನು ತಿಳಿಸಿಕೊಡಬಲ್ಲವು. ಆದುದರಿಂದ

'ಅಗ್ನಯೇ ಜುಷ್ಟಂ ನಿರ್ವಪಾಮಿ'

ಮುಂತಾದ ಕಡೆಗಳಲ್ಲಿ ಅದೇ ಅರ್ಥವನ್ನು ಕೊಡುವ 'ಪಾವಕ' ಮೊದಲಾದ ಶಬ್ದಗಳನ್ನು ಪ್ರಯೋಗಿಸಬಹುದು.

ಇಲ್ಲಿಯ ಸಿದ್ಧಾಂತವು ಹೀಗಿದೆ : ಎಲ್ಲಿ ಅರ್ಥಕ್ಕೆ ಕಾರ್ಯಸಂಬಂಧವಿದೆಯೋ ಅಂತಹ ಸ್ಥಳಗಳಲ್ಲಿ ಪರ್ಯಾಯಶಬ್ದಗಳನ್ನು ಪ್ರಯೋಗಿಸಬಹುದು. ದೇವದತ್ತನೆಂಬ ಒಬ್ಬ ಮನುಷ್ಯನಿದ್ದಾನೆಂದಿಟ್ಟುಕೊಳ್ಳೋಣ. ಅವನಲ್ಲಿ ತನಗಿರುವ ಗೌರವವನ್ನು ಸೂಚಿಸುವುದಕ್ಕಾಗಿ ರಾಜಸಭೆಯಲ್ಲಿ 'ಆಚಾರ್ಯ' 'ಉಪಾಧ್ಯಾಯ' ಮೊದಲಾದ

ಪದಗಳನ್ನು ಬಳಸುತ್ತಾರೆ. ಹಾಗೆಯೇ ತಂದೆ, ಸೋದರಮಾವ ಮೊದಲಾದವರು ಸಂಬಂಧವಾಚಕವಾದ ಪದಗಳಿಂದ ಸಂತೋಷಿಸುವಂತೆ ಅವರ ಹೆಸರನ್ನು ಹಿಡಿದು ಕರೆಯುವುದರಿಂದ ಸಂತೋಷಿಸುವುದಿಲ್ಲ. ಇಂತಹ ಕಡೆ ಅರ್ಥಕ್ಕೆ ಕಾರ್ಯಸಂಬಂಧ ವಿರುವುದರಿಂದ ಪರ್ಯಾಯವನ್ನು ಬಳಸಬಹುದು.

ಎಲ್ಲಿ ಶಬ್ದಕ್ಕೆ ಕಾರ್ಯಸಂಬಂಧವಿದೆಯೋ ಅಲ್ಲಿ ವೈಧಶಬ್ದವನ್ನೇ ಪ್ರಯೋಗಿಸಬೇಕು. ವಿಧಿವಚನವಿಲ್ಲದೆ ಯಾಗ-ದೇವತೆಗಳಿಗೆ ಸಂಬಂಧವು ಬಾರದು. 'ಆಗ್ನೇಯೋಽಷ್ಟಾಕಪಾಲಃ ' ಎಂಬ ವಿಧಿವಚನವು ಅಗ್ನಿದೇವತೆಗೂ ಯಾಗಕ್ಕೂ ಸಂಬಂಧವನ್ನು ಕಲ್ಪಿಸಿದೆ. ವಿಧಿಯು ಸಂಬಂಧವನ್ನು ಕಲ್ಪಿಸುವುದರಿಂದ ವಿಧಿಯಲ್ಲಿ ಬಳಸಿರುವ ಶಬ್ದವೂ ಸಹ ಆ ಸಂಬಂಧವು ಉಂಟಾಗಲು ಕಾರಣವಾಗಿಯೇ ಆಗುತ್ತದೆ. ಆದುದರಿಂದ ವಿಧಿಯಲ್ಲಿರುವ (ವೈಧ) ಶಬ್ದವನ್ನೇ ಬಳಸಬೇಕು. ಆದ್ದರಿಂದಲೇ ಅಯಾಟ್- ಸ್ವಾಹಾಕಾರ-ಉಜ್ಜಿತಿ ಮೊದಲಾದ ನಿಗಮಗಳಲ್ಲಿ ನಿಯತವಾಗಿ

'ಅಯಾಡಗ್ನೇಃ ಪ್ರಿಯಾ ಧಾಮಾನಿ' 'ಸ್ವಾಹಾಗ್ನಿಮ್'

'ಅಗ್ನೇರಹಮುಜ್ಜಿತಿಮನೂಜ್ಜೇಷಮ್'

ಎಂಬುದಾಗಿ ವಿಧಿವಾಕ್ಯದಲ್ಲಿರುವ ಅಗ್ನಿಪದವೇ ಇದೆ. ಅಗ್ನಿವಾಚಕವಾದ ಪರ್ಯಾಯಪದವಿಲ್ಲ. ಆದುದರಿಂದ ವೈಧಪದಗಳಿಂದಲೇ ದೇವತೋಪಲಕ್ಷಣ ವಾಗಬೇಕು. ಪರ್ಯಾಯಪದಗಳಿಂದಲ್ಲ.

೫) ಆಧಾನದಲ್ಲಿನ ಇಷ್ಟಿಯಲ್ಲಿ ದೇವತೆಯು ಗುಣವಿಶಿಷ್ಟವೇ? [ಜೈ.ಸೂ. 10.4.]

ಆಧಾನಪ್ರಕರಣದಲ್ಲಿ 'ಅಗ್ನಯೇ ಪವಮಾನಾಯ' 'ಅಗ್ನಯೇ ಪಾವಕಾಯ' 'ಅಗ್ನಯೇ ಶುಚಯೇ' ಈ ರೀತಿ ಮೂರು ಇಷ್ಟಿಗಳಿವೆ. ಇಲ್ಲಿ ನಿಗಮಗಳಲ್ಲಿ 'ಅಗ್ನಿ-ಪಾವಕ' 'ಅಗ್ನಿ-ಶುಚಿ' ಈ ಎರಡೆರಡು ಪದಗಳನ್ನೂ ಪ್ರಯೋಗಿಸಬೇಕೆ? ಅಥವಾ ಅಗ್ನಿಪದವೇ ಸಾಕೆ? ಎಂದು ಸಂಶಯ.

ಅಗ್ನಿ-ಪಾವಕ ಶಬ್ದಗಳು ಸಮಾನಾರ್ಥಕಗಳು. ಅವುಗಳಲ್ಲಿ ಅಗ್ನಿಶಬ್ದವು ಪ್ರಕೃತಿ ಯಾಗವಾದ ದರ್ಶ-ಪೂರ್ಣಮಾಸೇಷ್ಟಿಯಲ್ಲಿನ ವಿಧಿವಾಕ್ಯದಲ್ಲಿರು ವುದರಿಂದ 'ಪ್ರಕೃತಿ-ವತ್ ವಿಕೃತಿಃ' ಎಂಬಂತೆ ಚೋದಕ(ಅತಿದೇಶ)ದಿಂದಲೇ ಬಂದಿರುತ್ತದೆ. ಆದುದರಿಂದ ಈ ಇಷ್ಟಿಯಲ್ಲಿ ಅಗ್ನಿಶಬ್ದವನ್ನೇ ಪ್ರಯೋಗಿಸಬೇಕು. ಪಾವಕಶಬ್ದವು ಗುಣವಾಚಕ ವಾದುದರಿಂದ ಗುಣಿವಾಚಕವಾದ ಅಗ್ನಿಶಬ್ದವೊಂದೇ ಸಾಕೆಂಬುದು ಇಲ್ಲಿನ ಪೂರ್ವಪಕ್ಷ.

ಇಲ್ಲಿಯ ಸಿದ್ಧಾಂತವು ಹೀಗಿದೆ : ಇಲ್ಲಿ ವಿಧಿವಾಕ್ಯದಲ್ಲಿ 'ಅಗ್ನಯೇ ಪಾವಕಾಯ' 'ಅಗ್ನಯೇ ಶುಚಯೇ' ಎಂಬುದಾಗಿ ಗುಣವಿಶಿಷ್ಟನಾದ ಅಗ್ನಿಗೇ ವಿಧಿಸಂಬಂಧ ವಿರುವುದರಿಂದ ಸರ್ವನಿಗಮಗಳಲ್ಲಿಯೂ ಶಬ್ದದ್ವಯವನ್ನೂ ಉಲ್ಲೇಖ ಮಾಡಬೇಕು. ಹಾಗೆಯೇ ಈ ಅನುವಾಕದಲ್ಲಿ ವಿಹಿತವಾದ ಐಂದ್ರಾಗ್ನೇಷ್ಟಿಯಲ್ಲಿಯೂ ಇಂದ್ರಾಗ್ನಿ ಗಳಿಬ್ಬರನ್ನೂ ಹೇಳಬೇಕು. 'ಅಗ್ನಯೇ ಪಥಿಕೃತೇ' ಎಂದು ಪಾಥಿಕೃತೇಷ್ಟಿಯಲ್ಲಿಯೂ, 'ಅಗ್ನಯೇ ವ್ರತಪತಯೇ' ಎಂದು ವ್ರಾತಪತ್ಯೇಷ್ಟಿಯಲ್ಲಿಯೂ ವಿಶೇಷಣಯುಕ್ತವಾದ ಅಗ್ನಿಗೇ ದೇವತಾತ್ವವನ್ನು ಹೇಳಿರುವುದರಿಂದ ಎರಡು ಶಬ್ದಗಳನ್ನೂ ಪ್ರಯೋಗಿಸಬೇಕು.

### ೩) ಋಷಿ-ಛಂದಸ್ಸು-ದೇವತೆ :

ಈ ಯಾಜ್ಯಾಕಾಂಡವು ವೈಶ್ವದೇವಕಾಂಡಕ್ಕೆ ಸೇರಿದುದು*. ಆದುದರಿಂದ ಈ ಯಾಜ್ಯಾಕಾಂಡದ ಎಲ್ಲ ಮಂತ್ರಗಳಿಗೂ ವಿಶ್ವೇದೇವ ಋಷಿಗಳು. ಈ ಕೆಳಗಿನ ಕೋಷ್ಟಕ ದಿಂದ ಈ ಅನುವಾಕದ ಮಂತ್ರಗಳ ಛಂದಸ್ಸು ಇತ್ಯಾದಿಗಳನ್ನು ತಿಳಿಯಬಹುದು.

| ಕ್ರ.ಸಂ. | ಮಂತ್ರ | ಋಷಿ | ಛಂದಸ್ಸು | ದೇವತೆ |
|---|---|---|---|---|
| ೧. | ಉಭಾ......ವಾಮ್ । | ವಿಶ್ವೇದೇವಾಃ | ತ್ರಿಷ್ಟುಪ್ | ಇಂದ್ರಾಗ್ನೀ |
| ೨. | ಅಶ್ರವಂ......ನವ್ಯಮ್ । | ವಿಶ್ವೇದೇವಾಃ | ತ್ರಿಷ್ಟುಪ್ | ಇಂದ್ರಾಗ್ನೀ |
| ೩. | ಇಂದ್ರಾಗ್ನೀ.....ಕರ್ಮಣಾ । | ವಿಶ್ವೇದೇವಾಃ | ಗಾಯತ್ರೀ | ಇಂದ್ರಾಗ್ನೀ |
| ೪. | ಶುಚಿಂ ನು.....ಧೇಷ್ಠಾ । | ವಿಶ್ವೇದೇವಾಃ | ತ್ರಿಷ್ಟುಪ್ | ಇಂದ್ರಾಗ್ನೀ |
| ೫. | ವಯಮು ತ್ವಾ...ಆಯುಜ್ಮಹಿ । | ವಿಶ್ವೇದೇವಾಃ | ಗಾಯತ್ರೀ | ಪೂಷಾ |
| ೬. | ಪಥಸ್ಪಥಃ.....ಪ್ರಪೂಷಾ । | ವಿಶ್ವೇದೇವಾಃ | ತ್ರಿಷ್ಟುಪ್ | ಪೂಷಾ |
| ೭. | ಕ್ಷೇತ್ರಸ್ಯ....ಮೃಡಾತೀದೃಶೇ । | ವಿಶ್ವೇದೇವಾಃ | ಅನುಷ್ಟುಪ್* | ಕ್ಷೇತ್ರಪತಿ |
| ೮. | ಕ್ಷೇತ್ರಸ್ಯ......ಮೃಡಯಂತು । | ವಿಶ್ವೇದೇವಾಃ | ತ್ರಿಷ್ಟುಪ್ | ಕ್ಷೇತ್ರಪತಿ |
| ೯. | ಅಗ್ನೇ.......ವಿಧೇಮ । | ವಿಶ್ವೇದೇವಾಃ | ತ್ರಿಷ್ಟುಪ್ | ಅಗ್ನಿ-ಪಥಿಕೃತ್ |
| ೧೦. | ಆ ದೇವಾನಾಂ....ಕಲ್ಪಯಾತಿ । | ವಿಶ್ವೇದೇವಾಃ | ತ್ರಿಷ್ಟುಪ್ | ಅಗ್ನಿ-ಪಥಿಕೃತ್ |

* ವೈಶ್ವದೇವಕಾಂಡದಲ್ಲಿನ ಮಂತ್ರಗಳು ಮುಂತಾದ ವಿವರಣೆಯು ಒಂದನೆಯ ಸಂಪುಟದ ಎರಡನೆಯ ಭಾಗದಲ್ಲಿವೆ. ಪುಟ 129.

* ಪೋಷಯಿತ್ನು + ಆ, ಮೃಡಾತಿ + ಈದೃಶೇ ಎಂದಿಟ್ಟುಕೊಂಡು ಗಣನೆ.

| | | | |
|---|---|---|---|
| ೧೧. ಯದ್ವಾಹಿಷ್ಠಂ.....ಉದೀರತೇ । | ವಿಶ್ವೇದೇವಾಃ | ಅನುಷ್ಟುಪ್ | ಅಗ್ನಿ-ಪಥಿಕೃತ್/ ಅಗ್ನಿ-ವ್ರತಪತಿ/ ಅಗ್ನಿ-ಸ್ವಿಷ್ಟಕೃತ್ |
| ೧೨. ಅಗ್ನೇ......ಶಂ ಯೋಃ । | ವಿಶ್ವೇದೇವಾಃ | ತ್ರಿಷ್ಟುಪ್ | ಅಗ್ನಿ-ಪಥಿಕೃತ್/ ಅಗ್ನಿ-ವ್ರತಪತಿ/ ಅಗ್ನಿ-ಸ್ವಿಷ್ಟಕೃತ್ |
| ೧೩. ತ್ವಮಗ್ನೇ..........ಈಡ್ಯಃ । | ವಿಶ್ವೇದೇವಾಃ | ಗಾಯತ್ರೀ (ಪ್ರತಿಷ್ಠಾ ಗಾಯತ್ರೀ)* | ಅಗ್ನಿ-ವ್ರತಪತಿ |
| ೧೪. ಯದ್ವೋ.......ಕಲ್ಪಯಾತಿ । | ವಿಶ್ವೇದೇವಾಃ | ತ್ರಿಷ್ಟುಪ್ | ಅಗ್ನಿ-ವ್ರತಪತಿ |

ಅನುಷ್ಠಾನದ ಕಾಲದಲ್ಲಿ ಈ ಋಷಿ-ದೇವತೆ-ಛಂದಸ್ಸುಗಳನ್ನು ಸ್ಮರಿಸಬೇಕು.

## ಈ) ವ್ಯಾಕರಣ

ಸಾಯಣರು ಮತ್ತು ಭಟ್ಟಭಾಸ್ಕರರಿಬ್ಬರೂ ತಮ್ಮ ಭಾಷ್ಯದಲ್ಲಿ ವ್ಯಾಕರಣದ ಪ್ರಕ್ರಿಯೆಯ ಮೂಲಕ ವೈದಿಕಶಬ್ದಗಳು ಹೇಗೆ ಸಿದ್ಧಿಸುತ್ತವೆ ಎಂಬುದನ್ನು ವಿಸ್ತರವಾಗಿ ತೋರಿಸಿರುತ್ತಾರೆ. ಮಿಶ್ರರು ಮಂತ್ರಗಳಿಗೆ ವ್ಯಾಖ್ಯಾನವನ್ನು ಮಾಡುವಾಗಲೇ ವ್ಯಾಕರಣ ಪ್ರಕ್ರಿಯೆಯನ್ನು ತಿಳಿಸುತ್ತಾರೆ. ಸಾಯಣರು ಅನುವಾಕವು ಮುಗಿದ ನಂತರ 'ಅಥ ವ್ಯಾಕರಣಮ್' ಎಂದು ಆರಂಭಿಸಿ ಪ್ರಕ್ರಿಯೆಯನ್ನು ತಿಳಿಸಿರುತ್ತಾರೆ. ಈ ಪ್ರಪಾಠಕದಲ್ಲಿ ಬರುವ ಎಲ್ಲ ವೈದಿಕಶಬ್ದಗಳ ಪ್ರಕ್ರಿಯೆಯನ್ನು ನೀಡುವುದು ಗ್ರಂಥಗೌರವ ವಾಗುವುದೆಂದು ಆಯ್ದ ಕೆಲವು ಶಬ್ದಗಳಲ್ಲಿ ವೈದಿಕ-ಲೌಕಿಕರೂಪಗಳಲ್ಲಿರುವ ವ್ಯತ್ಯಾಸವನ್ನು ತಿಳಿಸಲು ಅವುಗಳ ಸಿದ್ಧರೂಪಗಳನ್ನೇ ಪರಿಚಯಕ್ಕಾಗಿ ನೀಡಲಾಗಿದೆ. ಲೌಕಿಕರೂಪಗಳೆಂದು ನಿರ್ದೇಶಿಸಿರುವ ಶಬ್ದಗಳು ವೇದದಲ್ಲಿಯೂ ಬರುವ ಸಂದರ್ಭವಿರುತ್ತದೆ. ಆದರೆ ವೈದಿಕಶಬ್ದಗಳು ಲೋಕದಲ್ಲಿ ಬಳಸಲ್ಪಡುವುದಿಲ್ಲ. 'ಛಂದಸಿ ಬಹುಲಮ್' 'ದೃಷ್ಟಾನುವಿಧಿಶ್ಛಂದಸಿ' ಎಂಬ ವಚನಗಳಂತೆ ಒಂದು ವಿಭಕ್ತಿಯು ಬರಬೇಕಾದಲ್ಲಿ ವೇದದಲ್ಲಿ ಮತ್ತೊಂದು ವಿಭಕ್ತಿಯೂ, ಒಂದು ಲಕಾರದ ಬದಲು ಮತ್ತೊಂದು ಲಕಾರವೂ ಬರುತ್ತದೆ.

* ಅಕ್ಷರಗಳ ಸಂಖ್ಯೆ 8-7-6 ಕ್ರಮವಾಗಿ ಮೊದಲನೆಯ ಪಾದದಿಂದ ಇದ್ದರೆ ಪ್ರತಿಷ್ಠಾಗಾಯತ್ರೀ [ಮರ್ತ್ಯೇಷು + ಆ, ಯಜ್ಞೇಷು + ಈಡ್ಯಃ], 6-7-8 ಇದ್ದರೆ ವರ್ಧಮಾನಾ ಗಾಯತ್ರೀ

| ವೈದಿಕಶಬ್ದಗಳು | ಲೌಕಿಕಶಬ್ದಗಳು |
| --- | --- |
| ಉಭಾ, ರಥಂ ನ (ಉಪಮಾರ್ಥ) | ಉಭೌ, ರಥಮಿವ |
| ಭೂರಿದಾವತ್ತರಾ, ಆಹುವಧ್ಯೈ | ಭೂರಿದಾವತ್ತರೌ, ಆಹೋತುಮ್ |
| ವೃತ್ರಹಣಾ, ಮಾದಯಧ್ಯೈ | ವೃತ್ರಹಣೌ, ಮಾದಯಿತುಮ್ |
| ದೇವಾಸಃ, ದೇವ ಆ ಮರ್ತ್ಯೇಷ್ವಾ (ಸಮುಚ್ಚಯ) | ದೇವಾಃ, ದೇವೇಷು ಚ ಮನುಷ್ಯೇಷು ಚ |
| ಮರ್ತಾಸಃ | ಮರ್ತಾಃ |
| ಏಕಾದಶಾಸಃ | ಏಕಾದಶಾಃ |
| ವಿಶ್ವಾ ದುರಿತಾ | ವಿಶ್ವಾನಿ ದುರಿತಾನಿ |
| ಶೃಂಗಾ, ಯುವಭ್ಯಾಮ್ | ಶೃಂಗಾಣಿ, ಯುವಾಭ್ಯಾಮ್ |
| ಯೇಭಿಃ, ದೇವೇಭಿಃ | ಯೈಃ, ದೇವೈಃ |
| ಕಲ್ಪಯಾತಿ, ಭವಾತಿ | ಕಲ್ಪಯತಿ, ಭವತಿ |
| ಭರಾಮಿ, ಗೃಭ್ಣಾಮಿ | ಹರಾಮಿ, ಗೃಹ್ಣಾಮಿ |
| ಕ್ಷೇತ್ರಸ್ಯ ಪತಿನಾ | ಕ್ಷೇತ್ರಸ್ಯ ಪತ್ಯಾ |

ಶ್ರೀವೇದಪರಬ್ರಹ್ಮಣೇ ನಮಃ
ಶ್ರೀ ಶಾರದಾಗುರುಗಣಪತಿಭ್ಯೋ ನಮಃ

# ತೈತ್ತಿರೀಯ ಸಂಹಿತಾ

## ಪ್ರಥಮಕಾಂಡಃ ದ್ವಿತೀಯಪ್ರಶ್ನಃ

ಆಪ ಉಂದಂತು ಜೀವಸೇ ದೀರ್ಘಾಯುತ್ವಾಯ ವರ್ಚಸ ಓಷಧೇ ತ್ರಾಯಸ್ವೈನಗ್ಗ್ಂ ಸ್ವಧಿತೇ ಮೈನಗ್ಂ ಹಿಗ್ಂಸೀರ್ದೇವಶ್ರೂರೇತಾನಿ ಪ್ರವಪೇ ಸ್ವಸ್ತ್ಯುತ್ತರಾಣ್ಯಶೀಯಾಽಽಪೋ ಅಸ್ಮಾನ್ಮಾತರಃ ಶುಂಧಂತು ಘೃತೇನ ನೋ ಘೃತಪುವಃ ಪುನಂತು ವಿಶ್ವಮಸ್ಮತ್ಪ್ರವಹಂತು ರಿಪ್ರ ಮುದಾಭ್ಯಃ ಶುಚಿರಾ ಪೂತ ಏಮಿ ಸೋಮಸ್ಯ ತನೂರಸಿ ತನುವಂ ಮೇ ಪಾಹಿ ಮಹೀನಾಂ ಪಯೋಽಸಿ ವರ್ಚೋದಾ ಅಸಿ ವರ್ಚೋ [ವರ್ಚಃ(1)] ಮಯಿ ಧೇಹಿ ವೃತ್ರಸ್ಯ ಕನೀನಿಕಾಸಿ ಚಕ್ಷುಷ್ಪಾ ಅಸಿ ಚಕ್ಷುರ್ಮೇ ಪಾಹಿ ಚಿತ್ಪತಿಸ್ತ್ವಾ ಪುನಾತು ವಾಕ್ಪತಿಸ್ತ್ವಾ ಪುನಾತು ದೇವಸ್ತ್ವಾ ಸವಿತಾ

ಪುನಾತ್ವಚ್ಛಿದ್ರೇಣ ಪವಿತ್ರೇಣ ವಸೋಃ ಸೂರ್ಯಸ್ಯ ರಶ್ಮಿಭಿಸ್ತಸ್ಯ ತೇ ಪವಿತ್ರಪತೇ ಪವಿತ್ರೇಣ ಯಸ್ಮೈ ಕಂ ಪುನೇ ತಚ್ಛಕೇಯಮಾ ವೋ ದೇವಾಸ ಈಮಹೇ ಸತ್ಯಧರ್ಮಾಣೋ ಅಧ್ವರೇ ಯದ್ವೋ ದೇವಾಸ ಆಗುರೇ ಯಜ್ಞಿಯಾಸೋ ಹವಾಮಹ ಇಂದ್ರಾಗ್ನೀ ದ್ಯಾವಾಪೃಥಿವೀ ಆಪ ಓಷಧೀಸ್ತ್ವಂ ದೀಕ್ಷಾಣಾಮಧಿಪತಿರಸೀಹ ಮಾ ಸಂತಂ ಪಾಹಿ ||2||

ವರ್ಚ ಓಷಧೀರಷ್ಟೌ ಚ ||೧||

ಆಕೂತ್ಯೈ ಪ್ರಯುಜೇಽಗ್ನಯೇ ಸ್ವಾಹಾ ಮೇಧಾಯೈ ಮನಸೇಽಗ್ನಯೇ ಸ್ವಾಹಾ ದೀಕ್ಷಾಯೈ ತಪಸೇಽಗ್ನಯೇ ಸ್ವಾಹಾ ಸರಸ್ವತ್ಯೈ ಪೂಷ್ಣೇಽಗ್ನಯೇ ಸ್ವಾಹಾಽಽಪೋ ದೇವೀರ್ಬೃಹತೀರ್ವಿಶ್ವಶಂಭುವೋ ದ್ಯಾವಾಪೃಥಿವೀ ಉರ್ವಂತರಿಕ್ಷಂ ಬೃಹಸ್ಪತಿರ್ನೋ ಹವಿಷಾ ವೃಧಾತು ಸ್ವಾಹಾ ವಿಶ್ವೇ ದೇವಸ್ಯ ನೇತುರ್ಮರ್ತೋ ವೃಣೀತ ಸಖ್ಯಂ ವಿಶ್ವೇ ರಾಯ ಇಷುಧ್ಯಸಿ

ದ್ಯುಮ್ನಂ ವೃಣೀತ ಪುಷ್ಯಸೇ ಸ್ವಾಹರ್ಕ್ಸಾಮಯೋಃ ಶಿಲ್ಪೇ ಸ್ಥಸ್ತೇ ವಾಮಾ

ರಭೇ ತೇ ಮಾ [ಮಾ(1) ಪಾತಮಾಸ್ಯ] ಪಾತಮಾಸ್ಯ ಯಜ್ಞಸ್ಯೋದೃಚ

ಇಮಾಂ ಧಿಯಗ್ಂ ಶಿಕ್ಷಮಾಣಸ್ಯ ದೇವ ಕ್ರತುಂ ದಕ್ಷಂ ವರುಣ ಸಗ್ಂ

ಶಿಧಿ ಯಯಾತಿ ವಿಶ್ವಾ ದುರಿತಾ ತರೇಮ ಸುತರ್ಮಾಣಮಧಿ ನಾವಗ್ಂ

ರುಹೇಮೋರ್ಗಸ್ಯಾಂಗಿರಸ್ಯೂರ್ಣಮ್ರದಾ ಊರ್ಜಂ ಮೇ ಯಚ್ಛ ಪಾಹಿ

ಮಾ ಮಾ ಮಾ ಹಿಗ್ಂಸೀರ್ವಿಷ್ಣೋಃ ಶರ್ಮಾಸಿ ಶರ್ಮ ಯಜಮಾನಸ್ಯ

ಶರ್ಮ ಮೇ ಯಚ್ಛ ನಕ್ಷತ್ರಾಣಾಂ ಮಾತೀಕಾಶಾತ್ಪಾಹೀಂದ್ರಸ್ಯ ಯೋನಿ

ರಸಿ [ಯೋನಿರಸಿ(4)] ಮಾ ಮಾ ಹಿಗ್ಂಸೀಃ ಕೃಷ್ಯೈ ತ್ವಾ ಸುಸಸ್ಯಾಯೈ

ಸುಪಿಪ್ಪಲಾಭ್ಯಸ್ತ್ವೌಷಧೀಭ್ಯಃ ಸೂಪಸ್ಥಾ ದೇವೋ ವನಸ್ಪತಿರೂರ್ಧ್ವೋ

ಮಾ ಪಾಹ್ಯೋದೃಚಃ ಸ್ವಾಹಾ ಯಜ್ಞಂ ಮನಸಾ ಸ್ವಾಹಾ ದ್ಯಾವಾಪೃಥಿವೀ

ಭ್ಯಾಗ್ಂ ಸ್ವಾಹೋರೋರಂತರಿಕ್ಷಾತ್ಸ್ವಾಹಾ ಯಜ್ಞಂ ವಾತಾದಾರಭೇ ||5||

ಮಾ ಯೋನಿರಸಿ ತ್ರಿಗ್ಂಶಚ್ಚ|| ೨ ||

ದೈವೀಂ ಧಿಯಂ ಮನಾಮಹೇ ಸುಮೃಡೀಕಾಗ್ಂ ಅಭಿಷ್ಟಯೇ ವರ್ಚೋ

ಧಾಂ ಯಜ್ಞವಾಹಸಗ್ಂ ಸುಪಾರಾ ನೋ ಅಸದ್ವಶೇ। ಯೇ ದೇವಾ ಮನೋ

ಜಾತಾ ಮನೋಯುಜಃ ಸುದಕ್ಷಾ ದಕ್ಷಪಿತಾರಸ್ತೇ ನಃ ಪಾಂತು ತೇ

ನೋಽವಂತು ತೇಭ್ಯೋ ನಮಸ್ತೇಭ್ಯಃ ಸ್ವಾಹಾಗ್ನೇ ತ್ವಗ್ಂ ಸು ಜಾಗೃಹಿ

ವಯಗ್ಂ ಸು ಮಂದಿಷೀಮಹಿ ಗೋಪಾಯ ನಃ ಸ್ವಸ್ತಯೇ ಪ್ರಬುಧೇ

ನಃ ಪುನರ್ದದಃ। ತ್ವಮಗ್ನೇ ವ್ರತಪಾ ಅಸಿ ದೇವ ಆ ಮರ್ತ್ಯೇಷ್ವಾ ।

ತ್ವಂ(6)ಯಜ್ಞೇಷ್ವೀಡ್ಯಃ। ವಿಶ್ವೇ ದೇವಾ ಅಭಿ ಮಾಮಾಽವವೃತ್ರನ್ಪೂಷಾ

ಸನ್ಯಾ ಸೋಮೋ ರಾಧಸಾ ದೇವಃ ಸವಿತಾ ವಸೋರ್ವಸುದಾವಾ ರಾಸ್ವೇಯ

ತ್ಸೋಮಾ ಭೂಯೋ ಭರ ಮಾ ಪೃಣನ್ ಪೂರ್ತ್ಯಾ ವಿರಾಧಿ ಮಾಹಮಾ

ಯುಷಾ ಚಂದ್ರಮಸಿ ಮಮ ಭೋಗಾಯ ಭವ ವಸ್ತ್ರಮಸಿ ಮಮ

ಭೋಗಾಯ ಭವೋಸ್ರಾಸಿ ಮಮ ಭೋಗಾಯ ಭವ ಹಯೋಽಸಿ ಮಮ

ಭೋಗಾಯ ಭವ [ಭವ (7)] ಛಾಗೋಽಸಿ ಮಮ ಭೋಗಾಯ ಭವ

ಮೇಷೋಽಸಿ ಮಮ ಭೋಗಾಯ ಭವ ವಾಯವೇ ತ್ವಾ ವರುಣಾಯ

ತ್ವಾ ನಿರ್ಋತ್ಯೈ ತ್ವಾ ರುದ್ರಾಯ ತ್ವಾ ದೇವೀರಾಪೋ ಅಪಾಂ ನಪಾದ್ಯ

ಊರ್ಮಿರ್ ಹವಿಷ್ಯ ಇಂದ್ರಿಯಾವಾನ್ಮದಿಂತಮಸ್ತಂ ವೋ ಮಾಽವಕ್ರಮಿಷ

ಮಚ್ಛಿನ್ನಂ ತಂತುಂ ಪೃಥಿವ್ಯಾ ಅನು ಗೇಷಂ ಭದ್ರಾದಭಿ ಶ್ರೇಯಃ ಪ್ರೇಹಿ

ಬೃಹಸ್ಪತಿಃ ಪುರಏತಾ ತೇ ಅಸ್ತ್ವಥೇಮವ ಸ್ಯ ವರ ಆ ಪೃಥಿವ್ಯಾ ಆರೇ

ಶತ್ರೂನ್ಕೃಣುಹಿ ಸರ್ವವೀರ ಏದಮಗನ್ಮ ದೇವಯಜನಂ ಪೃಥಿವ್ಯಾ

ವಿಶ್ವೇ ದೇವಾ ಯದಜುಷಂತ ಪೂರ್ವ ಋಕ್ಸಾಮಾಭ್ಯಾಂ ಯಜುಷಾ ಸಂತ

ರಂತೋ ರಾಯಸ್ಪೋಷೇಣ ಸಮಿಷಾ ಮದೇಮ ॥ 8 ॥

ಆ ತ್ವಗ್ಂ ಹಯೋಽಸಿ ಮಮ ಭೋಗಾಯ

ಭವ ಸ್ಯ ಪಂಚವಿಗ್ಂಶತಿಶ್ಚ ॥ ೩ ॥

ಇಯಂ ತೇ ಶುಕ್ರ ತನೂರಿದಂ ವರ್ಚಸ್ತಯಾ ಸಂಭವ ಭ್ರಾಜಂ ಗಚ್ಛ

ಜೂರಸಿ ಧೃತಾ ಮನಸಾ ಜುಷ್ಟಾ ವಿಷ್ಣವೇ ತಸ್ಯಾಸ್ತೇ ಸತ್ಯಸವಸಃ ಪ್ರಸವೇ
ವಾಚೋ ಯಂತ್ರಮಶೀಯ ಸ್ವಾಹಾ ಶುಕ್ರಮಸ್ಯಮೃತಮಸಿ ವೈಶ್ವ
ದೇವಗ್ಂ ಹವಿಃ ಸೂರ್ಯಸ್ಯ ಚಕ್ಷುರಾಽರುಹಮಗ್ನೇರಕ್ಷ್ಣಃ ಕನೀನಿಕಾಂ
ಯದೇತಶೇಭಿರೀಯಸೇ ಭ್ರಾಜಮಾನೋ ವಿಪಶ್ಚಿತಾ ಚಿದಸಿ ಮನಾಸಿ
ಧೀರಸಿ ದಕ್ಷಿಣಾ [(9) ಅಸಿ]ಸಿ ಯಜ್ಞಿಯಾಸಿ ಕ್ಷತ್ರಿಯಾಸ್ಯದಿತಿರಸ್ಯುಭಯತಃ
ಶೀರ್ಷ್ಣೀ ಸಾ ನಃ ಸುಪ್ರಾಚೀ ಸುಪ್ರತೀಚೀ ಸಂಭವ ಮಿತ್ರಸ್ತ್ವಾ ಪದಿ
ಬಧ್ನಾತು ಪೂಷಾಧ್ವನಃ ಪಾತ್ವಿಂದ್ರಾಯಾಧ್ಯಕ್ಷಾಯಾನು ತ್ವಾ ಮಾತಾ ಮನ್ಯ
ತಾಮನು ಪಿತಾಽನು ಭ್ರಾತಾ ಸಗರ್ಭ್ಯೋಽನು ಸಖಾ ಸಯೂಥ್ಯಃ ಸಾ
ದೇವಿ ದೇವಮಚ್ಛೇಹೀಂದ್ರಾಯ ಸೋಮಗ್ಂ ರುದ್ರಸ್ತ್ವಾಽಽವರ್ತಯತು
ಮಿತ್ರಸ್ಯ ಪಥಾ ಸ್ವಸ್ತಿ ಸೋಮಸಖಾ ಪುನರೇಹಿ ಸಹ ರಯ್ಯಾ॥ 10 ॥

ದಕ್ಷಿಣಾ ಸೋಮಸಖಾ ಪಂಚ ಚ ॥ ೪ ॥

ವಸ್ವ್ಯಸಿ ರುದ್ರಾಸ್ಯದಿತಿರಸ್ಯಾದಿತ್ಯಾಸಿ ಶುಕ್ರಾಸಿ ಚಂದ್ರಾಸಿ ಬೃಹಸ್ಪತಿಸ್ತ್ವಾ

ಸುಮ್ನೇ ರಣ್ವತು ರುದ್ರೋ ವಸುಭಿರಾಚಿಕೇತು ಪೃಥಿವ್ಯಾಸ್ತ್ವಾ ಮೂರ್ಧ

ನ್ನಾಜಿಘರ್ಮಿ ದೇವಯಜನ ಇಡಾಯಾಃ ಪದೇ ಘೃತವತಿ ಸ್ವಾಹಾ

ಪರಿಲಿಖಿತಗ್ಂ ರಕ್ಷಃ ಪರಿಲಿಖಿತಾ ಅರಾತಯ ಇದಮಹಗ್ಂ ರಕ್ಷಸೋ

ಗ್ರೀವಾ ಅಪಿ ಕೃಂತಾಮಿ ಯೋಽಸ್ಮಾನ್ದ್ವೇಷ್ಟಿ ಯಂ ಚ ವಯಂ ದ್ವಿಷ್ಮ

ಇದಮಸ್ಯ ಗ್ರೀವಾ (ಗ್ರೀವಾಃ [11] ಅಪಿ) ಅಪಿ ಕೃಂತಾಮ್ಯಸ್ಮೇ

ರಾಯಸ್ತ್ವೇ ರಾಯಸ್ಪೋತೇ ರಾಯಃ ಸಂ ದೇವಿ ದೇವ್ಯೋರ್ವಶ್ಯಾ ಪಶ್ಯಸ್ವ

ತ್ವಷ್ಟೀಮತೀ ತೇ ಸಪೇಯ ಸುರೇತಾ ರೇತೋ ದಧಾನಾ ವೀರಂ ವಿದೇಯ

ತವ ಸಂದೃಶಿ ಮಾಹಗ್ಂ ರಾಯಸ್ಪೋಷೇಣ ವಿ ಯೋಷಮ್ ॥ 12 ॥

ಅಸ್ಯ ಗ್ರೀವಾ ಏಕಾನ್ನತ್ರಿಗ್ಂಶಚ್ಚ ॥ ೫ ॥

ಅಗ್ಂಶುನಾ ತೇ ಅಗ್ಂಶುಃ ಪೃಚ್ಯತಾಂ ಪರುಷಾ ಪರುರ್ಗಂಧಸ್ತೇ ಕಾಮ

ಮವತು ಮದಾಯ ರಸೋ ಅಚ್ಯುತೋಽಮಾತ್ಯೋಽಸಿ ಶುಕ್ರಸ್ತೇ ಗ್ರಹೋಽ-
ಭಿ ತ್ಯಂ ದೇವಗ್ಂ ಸವಿತಾರಮೂಣ್ಯೋಃ ಕವಿಕ್ರತುಮರ್ಚಾಮಿ ಸತ್ಯಸವ
ಗ್ಂ ರತ್ನಧಾಮಭಿ ಪ್ರಿಯಂ ಮತಿಮೂರ್ಧ್ವಾ ಯಸ್ಯಾಮತಿರ್ಭಾ
ಅದಿದ್ಯುತತ್ಸವೀಮನಿ ಹಿರಣ್ಯ ಪಾಣಿರಮಿಮೀತ ಸುಕ್ರತುಃ ಕೃಪಾ ಸುವಃ।
ಪ್ರಜಾಭ್ಯಸ್ತ್ವಾ ಪ್ರಾಣಾಯ ತ್ವಾ ವ್ಯಾನಾಯ ತ್ವಾ ಪ್ರಜಾಸ್ತ್ವಮನು
ಪ್ರಾಣಿಹಿ ಪ್ರಜಾಸ್ತ್ವಾಮನು ಪ್ರಾಣಂತು ॥ 13 ॥

ಅನು ಸಪ್ತ ಚ ॥ ೬ ॥

ಸೋಮಂ ತೇ ಕ್ರೀಣಾಮ್ಯೂರ್ಜಸ್ವಂತಂ ಪಯಸ್ವಂತಂ ವೀರ್ಯಾವಂತ
ಮಭಿಮಾತಿಷಾಹಗ್ಂ ಶುಕ್ರಂ ತೇ ಶುಕ್ರೇಣ ಕ್ರೀಣಾಮಿ ಚಂದ್ರಂ ಚಂದ್ರೇ
ಣಾಮೃತಮಮೃತೇನ ಸಮ್ಯತ್ತೇ ಗೋರಸ್ಮೇ ಚಂದ್ರಾಣಿ ತಪಸಸ್ತನೂರಸಿ
ಪ್ರಜಾಪತೇರ್ವರ್ಣಸ್ತಸ್ಯಾಸ್ತೇ ಸಹಸ್ರಪೋಷಂ ಪುಷ್ಯಂತ್ಯಾಶ್ಚರಮೇಣ
ಪಶುನಾ ಕ್ರೀಣಾಮ್ಯಸ್ಮೇ ತೇ ಬಂಧುರ್ಮಯಿ ತೇ ರಾಯಃ ಶ್ರಯಂತಾ

ಮಸ್ಮೇ ಜ್ಯೋತಿಃ ಸೋಮವಿಕ್ರಯಿಣಿ ತಮೋ ಮಿತ್ರೋ ನ ಏಹಿ ಸುಮಿ

ತ್ರಧಾ ಇಂದ್ರಸ್ಯೋರುಮಾವಿಶ ದಕ್ಷಿಣಮುಶನ್ನುಶಂತಗ್ಂ ಸ್ಯೋನಃ

ಸ್ಯೋನಗ್ಂ ಸ್ವಾನ ಭ್ರಾಜಾಂಘಾರೇ ಬಂಭಾರೇ ಹಸ್ತ ಸುಹಸ್ತ ಕೃಶಾನ

ವೇತೇ ವಃ ಸೋಮಕ್ರಯಣಾಸ್ತಾನ್ರಕ್ಷಧ್ವಂ ಮಾ ವೋ ದಭನ್ ॥ 14 ॥

ಊರುಂ ದ್ವಾವಿಗ್ಂಶತಿಶ್ಚ ॥ ೭ ॥

ಉದಾಯುಷಾ ಸ್ವಾಯುಷೋದೋಷಧೀನಾಗ್ಂ ರಸೇನೋತ್ಪರ್ಜನ್ಯಸ್ಯ

ಶುಷ್ಮೇಣೋದಸ್ಥಾಮಮೃತಾಗ್ಂ ಅನು । ಉರ್ವಂತರಿಕ್ಷಮನ್ವಿಹ್ಯದಿತ್ಯಾಃ

ಸದೋಽಸ್ಯದಿತ್ಯಾಃ ಸದ ಆ ಸೀದಾಸ್ತಭ್ನಾದ್ಯಾಮೃಷಭೋ ಅಂತರಿಕ್ಷಮ

ಮಿಮೀತ ವರಿಮಾಣಂ ಪೃಥಿವ್ಯಾ ಆ ಸೀದದ್ವಿಶ್ವಾ ಭುವನಾನಿ ಸಮ್ರಾಡ್ವಿ

ಶ್ವೇತ್ತಾನಿ ವರುಣಸ್ಯ ವ್ರತಾನಿ ವನೇಷು ವ್ಯಂತರಿಕ್ಷಂ ತತಾನ ವಾಜ

ಮರ್ವತ್ಸು ಪಯೋ ಅಘ್ನಿಯಾಸು ಹೃತ್ಸು (15) ಕ್ರತುಂ ವರುಣೋ

ವಿಕ್ಷ್ವಗ್ನಿಂ ದಿವಿ ಸೂರ್ಯಮದಧಾತ್ಸೋಮಮದ್ರಾವುದು ತ್ಯಂ ಜಾತ

ವೇದಸಂ ದೇವಂ ವಹಂತಿ ಕೇತವಃ। ದೃಶೇ ವಿಶ್ವಾಯ ಸೂರ್ಯಮ್।

ಉಸ್ರಾವೇತಂ ಧೂರ್ಷಾಹಾವನಶ್ರೂ ಅವೀರಹಣೌ ಬ್ರಹ್ಮಚೋದನೌ

ವರುಣಸ್ಯ ಸ್ಕಂಭನಮಸಿ ವರುಣಸ್ಯ ಸ್ಕಂಭಸರ್ಜನಮಸಿ ಪ್ರತ್ಯಸ್ತೋ

ವರುಣಸ್ಯ ಪಾಶಃ ॥ 16 ॥

ಹೃತ್ಸು ಪಂಚತ್ರಿಗ್ಂಶಚ್ಚ ॥ ೮ ॥

ಪ್ರಚ್ಯವಸ್ವ ಭುವಸ್ಪತೇ ವಿಶ್ವಾನ್ಯಭಿ ಧಾಮಾನಿ ಮಾ ತ್ವಾ ಪರಿಪರೀ

ವಿದನ್ಮಾ ತ್ವಾ ಪರಿಪಂಥಿನೋ ವಿದನ್ಮಾ ತ್ವಾ ವೃಕಾ ಅಘಾಯವೋ ಮಾ

ಗಂಧರ್ವೋ ವಿಶ್ವಾವಸುರಾದಘಚ್ಛ್ಯೇನೋ ಭೂತ್ವಾ ಪರಾ ಪತ ಯಜಮಾ

ನಸ್ಯ ನೋ ಗೃಹೇ ದೇವೈಃ ಸಗ್ಂಸ್ಕೃತಂ ಯಜಮಾನಸ್ಯ ಸ್ವಸ್ತ್ಯಯನ್ಯಸ್ಯಪಿ

ಪಂಥಾಮಗಸ್ಮಹಿ ಸ್ವಸ್ತಿಗಾಮನೇಹಸಂ ಯೇನ ವಿಶ್ವಾಃ ಪರಿ ದ್ವಿಷೋ

ವೃಣಕ್ತಿ ವಿಂದತೇ ವಸು ನಮೋ ಮಿತ್ರಸ್ಯ ವರುಣಸ್ಯ ಚಕ್ಷಸೇ ಮಹೋ

ದೇವಾಯ ತದ್ರುತಗ್ಂ ಸಪರ್ಯತ ದೂರೇದೃಶೇ ದೇವಜಾತಾಯ ಕೇತವೇ

ದಿವಸ್ಪುತ್ರಾಯ ಸೂರ್ಯಾಯ ಶಗ್ಂಸತ ವರುಣಸ್ಯ ಸ್ಕಂಭನಮಸಿ

ವರುಣಸ್ಯ ಸ್ಕಂಭಸರ್ಜನಮಸ್ಯುನ್ಮುಕ್ತೋ ವರುಣಸ್ಯ ಪಾಶಃ ॥ 17 ॥

ಮಿತ್ರಸ್ಯ ತ್ರಯೋವಿಗ್ಂಶತಿಶ್ಚ ॥ ೬ ॥

ಅಗ್ನೇರಾತಿಥ್ಯಮಸಿ ವಿಷ್ಣವೇ ತ್ವಾ ಸೋಮಸ್ಯಾತಿಥ್ಯಮಸಿ ವಿಷ್ಣವೇ ತ್ವಾತಿ

ಥೇರಾತಿಥ್ಯಮಸಿ ವಿಷ್ಣವೇ ತ್ವಾಗ್ನಯೇ ತ್ವಾ ರಾಯಸ್ಪೋಷದಾವ್ನ್ನೇ

ವಿಷ್ಣವೇ ತ್ವಾ ಶ್ಯೇನಾಯ ತ್ವಾ ಸೋಮಭೃತೇ ವಿಷ್ಣವೇ ತ್ವಾ ಯಾ ತೇ

ಧಾಮಾನಿ ಹವಿಷಾ ಯಜಂತಿ ತಾ ತೇ ವಿಶ್ವಾ ಪರಿಭೂರಸ್ತು ಯಜ್ಞಂ

ಗಯಸ್ಫಾನಃ ಪ್ರತರಣಃ ಸುವೀರೋಽವೀರಹಾ ಪ್ರಚರಾ ಸೋಮ ದುರ್ಯಾನ

ದಿತ್ಯಾಃ ಸದೋಽಸ್ಯದಿತ್ಯಾಃ ಸದ ಆ [ಆ (18)ಸೀದ] ಸೀದ ವರುಣೋಽಸಿ

ಧೃತವ್ರತೋ ವಾರುಣಮಸಿ ಶಂಯೋರ್ದೇವಾನಾಗ್ಂ ಸಖ್ಯಾನ್ಮಾ ದೇವಾ

ನಾಮಪಸಶ್ಫಿತ್ಸ್ರಹ್ಯಾಪತಯೇ ತ್ವಾ ಗೃಹ್ಣಾಮಿ ಪರಿಪತಯೇ ತ್ವಾ ಗೃಹ್ಣಾಮಿ

ತನೂನಪ್ತ್ರೇ ತ್ವಾ ಗೃಹ್ಣಾಮಿ ಶಾಕ್ವರಾಯ ತ್ವಾ ಗೃಹ್ಣಾಮಿ ಶಕ್ಮನ್ನೋಜಿ

ಷ್ಠಾಯ ತ್ವಾ ಗೃಹ್ಣಾಮ್ಯನಾಧೃಷ್ಟಮಸ್ಯನಾಧೃಷ್ಯಂ ದೇವಾನಾಮೋಜೋಽಭಿ

ಶಸ್ತಿಪಾ ಅನಭಿಶಸ್ತೇನ್ಯಮನು ಮೇ ದೀಕ್ಷಾಂ ದೀಕ್ಷಾಪತಿರ್ಮನ್ಯತಾಮನು

ತಪಸ್ತಪಸ್ಪತಿರಂಜಸಾ ಸತ್ಯಮುಪಗೇಷಗ್ಂ ಸುವಿತೇ ಮಾ ಧಾಃ ॥ 19 ॥

ಆ ಮ್ಯೈಕಂ ಚ ॥ ೧೦ ॥



ಅಗ್ಂಶುರಗ್ಂಶುಸ್ತೇ ದೇವಸೋಮಾಪ್ಯಾಯತಾಮಿಂದ್ರಾಯ್ಯೆಕಧನವಿದ

ಆ ತುಭ್ಯಮಿಂದ್ರಃ ಪ್ಯಾಯತಾಮಾ ತ್ವಮಿಂದ್ರಾಯ ಪ್ಯಾಯಸ್ವಾಪ್ಯಾಯಯ

ಸಖೀನ್ತ್ಸನ್ಯಾ ಮೇಧಯಾ ಸ್ವಸ್ತಿ ತೇ ದೇವ ಸೋಮ ಸುತ್ಯಾಮಶೀಯೇಷ್ಟಾ

ರಾಯಃ ಪ್ರೇಷೇ ಭಗಾಯರ್ತಮೃತವಾದಿಭ್ಯೋ ನಮೋ ದಿವೇ ನಮಃ

ಪೃಥಿವ್ಯಾ ಅಗ್ನೇ ವ್ರತಪತೇ ತ್ವಂ ವ್ರತಾನಾಂ ವ್ರತಪತಿರಸಿ ಯಾ ಮಮ

ತನೂರೇಷಾ ಸಾ ತ್ವಯಿ [.....ತ್ವಯಿ (20)] ಯಾ ತವ ತನೂರಿಯಗ್ಂ

ಸಾ ಮಯಿ ಸಹ ನೌ ವ್ರತಪತೇ ವ್ರತಿನೋರ್ವ್ರತಾನಿ ಯಾ ತೇ ಅಗ್ನೇ

ರುದ್ರಿಯಾ ತನೂಸ್ತಯಾ ನಃ ಪಾಹಿ ತಸ್ಯಾಸ್ತೇ ಸ್ವಾಹಾ ಯಾ ತೇ ಅಗ್ನೇಽ

ಯಾಶಯಾ ರಜಾಶಯಾ ಹರಾಶಯಾ ತನೂರ್ವರ್ಷಿಷ್ಠಾ ಗಹ್ವರೇಷ್ಠೋ

ಗ್ರಂ ವಚೋ ಅಪಾವಧೀಂ ತ್ವೇಷಂ ವಚೋ ಅಪಾವಧೀಗ್ಂ ಸ್ವಾಹಾ

॥ 21 ॥

ತ್ವಯಿ ಚತ್ವಾರಿಗ್ಂಶಚ್ಚ ॥ ೧೧ ॥

ವಿತ್ತಾಯನೀ ಮೇಽಸಿ ತಿಕ್ತಾಯನೀ ಮೇಽಸ್ಯವತಾನ್ಮಾ ನಾಥಿತಮವತಾನ್ಮಾ

ವ್ಯಥಿತಂ ವಿದೇರಗ್ನಿರ್ನಭೋ ನಾಮಾಗ್ನೇ ಅಂಗಿರೋ ಯೋಽಸ್ಯಾಂ

ಪೃಥಿವ್ಯಾಮಸ್ಯಾಯುಷಾ ನಾಮ್ನೇಹಿ ಯತ್ತೇಽನಾಧೃಷ್ಟಂ ನಾಮ ಯಜ್ಞಿಯಂ

ತೇನ ತ್ವಾಽಽದಧೇಽಗ್ನೇ ಅಂಗಿರೋ ಯೋ ದ್ವಿತೀಯಸ್ಯಾಂ ತೃತೀಯಸ್ಯಾಂ

ಪೃಥಿವ್ಯಾಮಸ್ಯಾಯುಷಾ ನಾಮ್ನೇಹಿ ಯತ್ತೇಽನಾಧೃಷ್ಟಂ ನಾಮ (1)

ಯಜ್ಞಿಯಂ ತೇನ ತ್ವಾಽಽದಧೇ ಸಿಗ್ಂಹೀರಸಿ ಮಹಿಷೀರಸ್ಯುರು ಪ್ರಥ

ಸ್ವೋರು ತೇ ಯಜ್ಞಪತಿಃ ಪ್ರಥತಾಂ ಧ್ರುವಾಸಿ ದೇವೇಭ್ಯಃ ಶುಂಧಸ್ವ

ದೇವೇಭ್ಯಶ್ಶುಂಭಸ್ವೇಂದ್ರಘೋಷಸ್ತ್ವಾ ವಸುಭಿಃ ಪುರಸ್ತಾತ್ಪಾತು ಮನೋ

ಜವಾಸ್ತ್ವಾ ಪಿತೃಭಿರ್ದಕ್ಷಿಣತಃ ಪಾತು ಪ್ರಚೇತಾಸ್ತ್ವಾ ರುದ್ರೈಃ ಪಶ್ಚಾತ್ಪಾ

ತು ವಿಶ್ವಕರ್ಮಾ ತ್ವಾಽಽದಿತ್ಯೈರುತ್ತರತಃ ಪಾತು ಸಿಗ್ಂಹೀರಸಿ ಸಪತ್ನಸಾಹೀ

ಸ್ವಾಹಾ ಸಿಗ್ಂಹೀರಸಿ ಸುಪ್ರಜಾವನಿಃ ಸ್ವಾಹಾ ಸಿಗ್ಂಹೀ[ಸಿಗ್ಂಹೀಃ (2)

ಅಸಿ ರಾಯಸ್ಪೋಷವನಿಃ] ರಸಿ ರಾಯಸ್ಪೋಷವನಿಃ ಸ್ವಾಹಾ ಸಿಗ್ಂಹೀರ

ಸ್ಯಾದಿತ್ಯವನಿಃ ಸ್ವಾಹಾ ಸಿಗ್ಂಹೀರಸ್ಯಾವಹ ದೇವಾನ್ದೇವಯತೇ ಯಜ

ಮಾನಾಯ ಸ್ವಾಹಾ ಭೂತೇಭ್ಯಸ್ತ್ವಾ ವಿಶ್ವಾಯುರಸಿ ಪೃಥಿವೀಂ ದೃಗ್ಂಹ

ಧ್ರುವಕ್ಷಿದಸ್ಯಂತರಿಕ್ಷಂ ದೃಗ್ಂಹಾಚ್ಯುತಕ್ಷಿದಸಿ ದಿವಂ ದೃಗ್ಂಹಾಗ್ನೇರ್ಭ

ಸ್ಮಾಸ್ಯಗ್ನೇಃ ಪುರೀಷಮಸಿ ॥ 24 ॥

ನಾಮ ಸುಪ್ರಜಾವನಿಃ ಸ್ವಾಹಾ ಸಿಗ್ಂಹೀಃ ಪಂಚತ್ರಿಗ್ಂಶಚ್ಚ ॥ ೧೨ ॥

ಯುಂಜತೇ ಮನ ಉತ ಯುಂಜತೇ ಧಿಯೋ ವಿಪ್ರಾ ವಿಪ್ರಸ್ಯ ಬೃಹತೋ
ವಿಪಶ್ಚಿತಃ । ವಿ ಹೋತ್ರಾ ದಧೇ ವಯುನಾವಿದೇಕ ಇನ್ಮಹೀ ದೇವಸ್ಯ
ಸವಿತುಃ ಪರಿಷ್ಟುತಿಃ ॥ ಸುವಾಗ್ದೇವ ದುರ್ಯಾಗ್‌ಂ ಆ ವದ ದೇವಶ್ರುತೌ
ದೇವೇಷ್ವಾ ಘೋಷೇಥಾಮಾ ನೋ ವೀರೋ ಜಾಯತಾಂ ಕರ್ಮಣ್ಯೋ
ಯಗ್‌ಂ ಸರ್ವೇಽನುಜೀವಾಮ ಯೋ ಬಹೂನಾಮಸದ್ವಶೀ। ಇದಂ ವಿಷ್ಣು
ರ್ವಿಚಕ್ರಮೇ ತ್ರೇಧಾ ನಿ ದಧೇ ಪದಮ್। ಸಮೂಢಮಸ್ಯ [(25) ಪಾಗ್‌ಂ
ಸುರ] ಪಾಗ್‌ಂಸುರ ಇರಾವತೀ ಧೇನುಮತೀ ಹಿ ಭೂತಗ್‌ಂ ಸೂಯ
ವಸಿನೀ ಮನವೇ ಯಶಸ್ಯೇ। ವ್ಯಸ್ಕಭ್ನಾದ್ರೋದಸೀ ವಿಷ್ಣುರೇತೇ ದಾಧಾರ
ಪೃಥಿವೀಮಭಿತೋ ಮಯೂಖೈಃ॥ ಪ್ರಾಚೀ ಪ್ರೇತಮಧ್ವರಂ ಕಲ್ಪಯಂತೀ
ಊರ್ಧ್ವಂ ಯಜ್ಞಂ ನಯತಂ ಮಾ ಜೀಹ್ವರತ ಮತ್ರ ರಮೇಥಾಂ ವರ್ಷ್ಮ
ನ್ಪೃಥಿವ್ಯಾ ದಿವೋ ವಾ ವಿಷ್ಣವುತ ವಾ ಪೃಥಿವ್ಯಾ ಮಹೋ ವಾ ವಿಷ್ಣವುತ
ವಾಂತರಿಕ್ಷಾದ್ಧಸ್ತೌ ಪೃಣಸ್ವ ಬಹುಭಿರ್ವಸವ್ಯೈರಾ ಪ್ರಯಚ್ಛ [(26) ಪ್ರಯ

ಚ್ಛ] ದಕ್ಷಿಣಾದೋತ ಸವ್ಯಾತ್ ॥ ವಿಷ್ಣೋರ್ನುಕಂ ವೀರ್ಯಾಣಿ ಪ್ರವೋ
ಚಂ ಯಃ ಪಾರ್ಥಿವಾನಿ ವಿಮಮೇ ರಜಾಗ್ಂಸಿ ಯೋ ಅಸ್ಕಭಾಯದುತ್ತ
ರಗ್ಂ ಸಧಸ್ಥಂ ವಿಚಕ್ರಮಾಣಸ್ತ್ರೇಧೋರುಗಾಯೋ ವಿಷ್ಣೋರರಾಟಮಸಿ
ವಿಷ್ಣೋಃ ಪೃಷ್ಠಮಸಿ ವಿಷ್ಣೋಃ ಶ್ನಪ್ತ್ರೇ ಸ್ಥೋ ವಿಷ್ಣೋಃ ಸ್ಯೂರಸಿ ವಿಷ್ಣೋ
ರ್ಧ್ರುವಮಸಿ ವೈಷ್ಣವಮಸಿ ವಿಷ್ಣವೇ ತ್ವಾ ॥ 27 ॥

ಅಸ್ಕ ಯಚ್ಛೈಕಾನ್ನಚತ್ವಾರಿಗ್ಂಶಚ್ಚ ॥ ೧೩ ॥

ಕೃಣುಷ್ವ ಪಾಜಃ ಪ್ರಸಿತಿಂ ನ ಪೃಥ್ವೀಂ ಯಾಹಿ ರಾಜೇವಾಮವಾಗ್ಂ
ಇಭೇನ । ತೃಷ್ವೀಮನು ಪ್ರಸಿತಿಂ ದ್ರೂಣಾನೋಽಸ್ತಾಸಿ ವಿಧ್ಯ ರಕ್ಷಸಸ್ತ-
ಪಿಷ್ಠೈಃ॥ ತವ ಭ್ರಮಾಸ ಆಶುಯಾ ಪತಂತ್ಯನುಸ್ಪೃಶ ಧೃಷತಾ ಶೋಶುಚಾನಃ॥
ತಪೂಗ್ಂಷ್ಯಗ್ನೇ ಜುಹ್ವಾ ಪತಂಗಾನಸಂದಿತೋ ವಿಸೃಜ ವಿಷ್ವಗುಲ್ಕಾಃ॥
ಪ್ರತಿ ಸ್ಪಶೋ ವಿ ಸೃಜ ತೂರ್ಣಿತಮೋ ಭವಾ ಪಾಯುರ್ವಿಶೋ ಅಸ್ಯಾ
ಅದಬ್ಧಃ । ಯೋ ನೋ ದೂರೇ ಅಘಶಗ್ಂಸೋ [ಅಘಶಗ್ಂಸಃ (28)]

ಯೋ ಅನ್ಯಗ್ನೇ ಮಾಕಿಷ್ಟೇ ವ್ಯಥಿರಾದಧರ್‌ಷೀತ್ ॥ ಉದಗ್ನೇ ತಿಷ್ಠ

ಪ್ರತ್ಯಾತನುಷ್ವ ನ್ಯಮಿತ್ರಾಗ್‌ಂ ಓಷತಾತ್ತಿಗ್ಮಹೇತೇ। ಯೋ ನೋ ಅರಾ

ತಿಗ್‌ಂ ಸಮಿಧಾನ ಚಕ್ರೇ ನೀಚಾ ತಂ ಧಕ್ಷ್ಯತಸಂ ನ ಶುಷ್ಕಮ್॥ ಊರ್ಧ್ವೋ

ಭವ ಪ್ರತಿ ವಿಧ್ಯಾಧ್ಯಸ್ಮದಾವಿಷ್ಕೃಣುಷ್ವ ದೈವ್ಯಾನ್ಯಗ್ನೇ। ಅವ ಸ್ಥಿರಾ ತನುಹಿ

ಯಾತುಜೂನಾಂ ಜಾಮಿಮಜಾಮಿಂ ಪ್ರಮೃಣೀಹಿ ಶತ್ರೂನ್॥ ಸ ತೇ

[ತೇ(29)ಜಾನಾತಿ] ಜಾನಾತಿ ಸುಮತಿಂ ಯವಿಷ್ಠ ಯ ಈವತೇ ಬ್ರಹ್ಮಣೇ

ಗಾತುಮೈರತ್। ವಿಶ್ವಾನ್ಯಸ್ಮೈ ಸುದಿನಾನಿ ರಾಯೋ ದ್ಯುಮ್ನಾನ್ಯರ್ಯೋ

ವಿ ದುರೋ ಅಭಿ ದ್ಯೌತ್॥ ಸೇದಗ್ನೇ ಅಸ್ತು ಸುಭಗಃ ಸುದಾನುರ್ಯಸ್ತ್ವಾ

ನಿತ್ಯೇನ ಹವಿಷಾ ಯ ಉಕ್ಥೈಃ। ಪಿಪ್ರೀಷತಿ ಸ್ವ ಆಯುಷಿ ದುರೋಣೇ

ವಿಶ್ವೇದಸ್ಮೈ ಸುದಿನಾ ಸಾಸದಿಷ್ಟಿಃ॥ ಅರ್ಚಾಮಿ ತೇ ಸುಮತಿಂ ಘೋಷ್ಯ

ರ್ವಾಕ್ಸಂ ತೇ ವಾವಾತಾ ಜರತಾ [ಜರತಾಮ್(30) ಇಯಂ ಗೀಃ]ಮಿಯಂ

ಗೀಃ। ಸ್ವಶ್ವಾಸ್ತ್ವಾ ಸುರಥಾ ಮರ್ಜಯೇಮಾಸ್ಮೇ ಕ್ಷತ್ರಾಣಿ ಧಾರಯೇರನು

ದ್ಯೂನ್॥ ಇಹ ತ್ವಾ ಭೂರ್ಯಾ ಚರೇದುಪ ತ್ಮನ್ದೋಷಾವಸ್ತರ್ದೀದಿವಾ

ಗ್ಂಸಮನು ದ್ಯೂನ್ ಕ್ರೀಡಂತಸ್ತ್ವಾ ಸುಮನಸಃ ಸಪೇಮಾಭಿ ದ್ಯುಮ್ನಾ

ತಸ್ಥಿವಾಗ್ಂಸೋ ಜನಾನಾಮ್ ॥ ಯಸ್ತ್ವಾ ಸ್ವಶ್ವಃ ಸುಹಿರಣ್ಯೋ ಅಗ್ನ

ಉಪಯಾತಿ ವಸುಮತಾ ರಥೇನ । ತಸ್ಯ ತ್ರಾತಾ ಭವಸಿ ತಸ್ಯ ಸಖಾ

ಯಸ್ತ ಆತಿಥ್ಯಮಾನುಷಗ್ಜುಜೋಷತ್ ॥ ಮಹೋ ರುಜಾಮಿ [31]

ಬಂಧುತಾ ವಚೋಭಿಸ್ತನ್ಮಾ ಪಿತುರ್ಗೋತಮಾದನ್ವಿಯಾಯ । ತ್ವಂ ನೋ

ಅಸ್ಯ ವಚಸಶ್ಚಿಕಿದ್ಧಿ ಹೋತರ್ಯವಿಷ್ಠ ಸುಕ್ರತೋ ದಮೂನಾಃ ॥ ಅಸ್ವಪ್ನ

ಜಸ್ತರಣಯಃ ಸುಶೇವಾ ಅತಂದ್ರಾಸೋಽವೃಕಾ ಅಶ್ರಮಿಷ್ಠಾಃ । ತೇ ಪಾಯ

ವಃ ಸಧ್ರಿಯಂಚೋ ನಿಷದ್ಯಾಗ್ನೇ ತವ ನಃ ಪಾಂತ್ವಮೂರ ॥ ಯೇ ಪಾಯ

ವೋ ಮಾಮತೇಯಂ ತೇ ಅಗ್ನೇ ಪಶ್ಯಂತೋ ಅಂಧಂ ದುರಿತಾದರಕ್ಷನ್

ರರಕ್ಷ ತಾನ್ತ್ಸುಕೃತೋ ವಿಶ್ವವೇದಾ ದಿಪ್ಸಂತ ಇದ್ರಿಪವೋ ನಾ ಹ [(32)

ದೇಭುಃ।] ದೇಭುಃ ॥ ತ್ವಯಾ ವಯಗ್ಂ ಸಧನ್ಯಸ್ತ್ವೋತಾಸ್ತವ ಪ್ರಣೀತ್ಯ

ಶ್ಯಾಮ ವಾಜಾನ್ । ಉಭಾ ಶಗ್ಂಸಾ ಸೂದಯ ಸತ್ಯತಾತೇಽನುಷ್ಠುಯಾ ಕೃಣುಹ್ಯಹ್ರಯಾಣ ॥ ಅಯಾ ತೇ ಅಗ್ನೇ ಸಮಿಧಾ ವಿಧೇಮ ಪ್ರತಿ ಸ್ತೋಮಗ್ಂ ಶಸ್ಯಮಾನಂ ಗೃಭಾಯ । ದಹಾಶಸೋ ರಕ್ಷಸಃ ಪಾಹ್ಯಸ್ಮಾನ್ದ್ರುಹೋ ನಿದೋ ಮಿತ್ರಮಹೋ ಅವದ್ಯಾತ್॥ ರಕ್ಷೋಹಣಂ ವಾಜಿನಮಾಜಿಘರ್ಮಿ ಮಿತ್ರಂ ಪ್ರಥಿಷ್ಠಮುಪಯಾಮಿ ಶರ್ಮ । ಶಿಶಾನೋ ಅಗ್ನಿಃ ಕ್ರತುಭಿಃ ಸಮಿದ್ಧಸ್ಸ ನೋ ದಿವಾ [ದಿವಾ(33)]ಸ ರಿಷಃ ಪಾತು ನಕ್ತಮ್॥ ವಿ ಜ್ಯೋತಿಷಾ ಬೃಹತಾ ಭಾತ್ಯಗ್ನಿರಾವಿರ್ವಿಶ್ವಾನಿ ಕೃಣುತೇ ಮಹಿತ್ವಾ । ಪ್ರಾದೇವೀರ್ಮಾಯಾಸ್ಸಹತೇ ದುರೇವಾಃ ಶಿಶೀತೇ ಶೃಂಗೇ ರಕ್ಷಸೇ ವಿನಿಕ್ಷೇ ॥ ಉತ ಸ್ವಾನಾಸೋ ದಿವಿ ಷಂತ್ವಗ್ನೇಸ್ತಿಗ್ಮಾಯುಧಾ ರಕ್ಷಸೇ ಹಂತವಾ ಉ । ಮದೇ ಚಿದಸ್ಯ ಪ್ರರುಜಂತಿ ಭಾಮಾ ನ ವರಂತೇ ಪರಿಬಾಧೋ ಅದೇವೀಃ ॥ 34 ॥

ಅಘಶಗ್ಂಸಸ್ಸ ತೇ ಜರತಾಗ್ಂ ರುಜಾಮಿ ಹ ದಿವ್ಯೆಕ

ಚತ್ವಾರಿಗ್ಂಶಚ್ಚ ॥ ೧೪ ॥

ಆಪ ಉಂದಂತ್ವಾಕೂತ್ತ್ಯೈ ದೈವೀಮಿಯಂ ತೇ ವಸ್ತ್ಯಸ್ಯಗ್ಂಶುನಾ

ತೇ ಸೋಮಂ ತ ಉದಾಯುಷಾ ಪ್ರತ್ಯವಸ್ವಾಗ್ನೇರಾತಿಥ್ಯಮಗ್ಂ

-ಶುರಗ್ಂಶುರ್ವಿತ್ತಾಯನೀ ಮೇಽಸಿ ಯುಂಜತೇ ಕೃಣುಷ್ವ

ಪಾಜಶ್ಚತುರ್ದಶ ॥ ೧೪ ॥

ಆಪೋ ವಸ್ತ್ಯಸಿ ಯಾ ತವೇಯಂ ಗೀಶ್ಚತುಸ್ತ್ರಿಗ್ಂಶತ್ ॥ ೩೪ ॥

॥ ಆಪ ಉಂದಂತ್ವದೇವೀಃ ॥

ಹರಿಃ ಓಂ। ಶ್ರೀಕೃಷ್ಣಾರ್ಪಣಮಸ್ತು

ಇತಿ ಪ್ರಥಮಕಾಂಡೇ ದ್ವಿತೀಯಃ ಪ್ರಶ್ನಃ

# ತೈತ್ತಿರೀಯ ಸಂಹಿತಾ

## ಪ್ರಥಮಕಾಂಡಃ ದ್ವಿತೀಯಪ್ರಶ್ನಃ

ಹರಿಃ ಓಮ್ ॥

ಆಪ ಉದಂತು ಜೀವಸೇ

❖ ಪೌ ❖ ಆಪಃ। ಉಂದಂತು। ಜೀವಸೇ।

| ಮಂತ್ರ | ವಿನಿಯೋಗ |
| --- | --- |
| ಆಪಃ............ವರ್ಚಸೇ॥ | ಸೋಮಯಾಗವನ್ನು ಅನುಷ್ಠಿಸುವ ಯಜಮಾನನಿಗೆ ದೀಕ್ಷಾನಿಮಿತ್ತವಾಗಿ ಮಾಡುವ ಕ್ಷೌರ ಸಂಸ್ಕಾರದಲ್ಲಿ ಬಲಗಡೆಯ ಕೇಶವನ್ನು ನೀರಿನಿಂದ ನೆನೆಸಲು, ನಂತರ ಎಡಗಡೆಯ ಕೇಶವನ್ನೂ ನೆನೆಸಲು. |

---

ಮೊದಲನೆಯ ಪ್ರಶ್ನೆಯಲ್ಲಿ ದರ್ಶ-ಪೂರ್ಣಮಾಸೇಷ್ಟಿಯ ಮಂತ್ರಗಳು ಹೇಳಲ್ಪಟ್ಟಿವೆ. ಎರಡು, ಮೂರು ಮತ್ತು ನಾಲ್ಕನೆಯ ಪ್ರಶ್ನೆಗಳಲ್ಲಿ ಅಗ್ನಿಷ್ಟೋಮ ಸೋಮಯಾಗದ* ಮಂತ್ರಗಳು ಹೇಳಲ್ಪಟ್ಟಿವೆ. 2 ಮತ್ತು 3ನೆಯ ಪ್ರಶ್ನೆಗಳ ಮಂತ್ರಗಳಿಗೆ ಆಧ್ವರಿಕಗಳೆಂದೂ ನಾಲ್ಕನೆಯ ಪ್ರಶ್ನೆಯ ಮಂತ್ರಗಳಿಗೆ ಗ್ರಹಗಳೆಂದೂ ಹೆಸರು. ಇವು ಸೌಮ್ಯಕಾಂಡಕ್ಕೆ* ಸೇರಿದ ಮಂತ್ರಗಳಾದುದರಿಂದ ಇವುಗಳಿಗೆ ಸೋಮನು ಕಾಂಡರ್ಷಿಯಾಗಿರುತ್ತಾನೆ.

ಸೋಮಯಾಗದ ಅಂಗವಾದ ದೀಕ್ಷಣೀಯ ಮುಂತಾದ ಇಷ್ಟಿಗಳಲ್ಲಿ ದರ್ಶೇಷ್ಟಿಯ ಮಂತ್ರಗಳ ಅತಿದೇಶವಿರುವುದರಿಂದ ದರ್ಶದ ಅನಂತರ ಸೋಮಯಾಗವನ್ನು

---

* ಕೃ.ಯ. ವೇದ ಸಂಪುಟ ೧. ಭಾಗ ೩. ಪುಟ ೯೬
* ಕೃ.ಯ. ವೇದ ಸಂಪುಟ ೧.ಭಾಗ ೨. ಪುಟ ೫೪

ಹೇಳುವುದು ಯುಕ್ತವಾಗಿಯೇ ಇದೆ.

ಸೋಮಯಾಗಕ್ಕೆ ಸಂಬಂಧಿಸಿದ ಮೂರು ಪ್ರಶ್ನೆಗಳಲ್ಲಿ ಈ ಪ್ರಶ್ನೆಗೆ (ಆಪ ಉಂದಂತು) 'ಕ್ರಯಪ್ರಶ್ನೆ'ಯೆಂದೂ, ನಂತರದ ಪ್ರಶ್ನೆಗೆ (ದೇವಸ್ಯ ತ್ವಾ) 'ಪಶುಪ್ರಶ್ನೆ' ಯೆಂದೂ, ಕಡೆಯ ಪ್ರಶ್ನೆಗೆ(ಆದದೇ) 'ಗ್ರಹಪ್ರಶ್ನೆ'ಯೆಂದೂ ಹೆಸರು. ಈ ಮೂರೂ ಪ್ರಶ್ನೆಗಳ ಅಂತ್ಯ ಅನುವಾಕಗಳು ಯಾಜ್ಯಾಮಂತ್ರಗಳಾಗಿವೆ. ಈ 'ಕ್ರಯಪ್ರಶ್ನೆ'ದಲ್ಲಿ 14 ಅನುವಾಕಗಳಿವೆ. ಅವುಗಳಲ್ಲಿ ಹೇಳಿರುವ ವಿಷಯಗಳು ಈ ಕೆಳಗಿನಂತಿವೆ.

| ಅನುವಾಕ | ವಿಷಯ |
|---|---|
| ೧ | ಪ್ರಾಗ್ವಂಶಪ್ರವೇಶ |
| ೨ | ದೀಕ್ಷಾ |
| ೩ | ದೇವಯಜನಗ್ರಹಣ |
| ೪ | ಸೋಮಕ್ರಯಣ್ಯಾನಯನ |
| ೫ | ಸೋಮಕ್ರಯಣೀಪದಸಂಗ್ರಹ |
| ೬ | ಸೋಮೋನ್ಮಾನ |
| ೭ | ಕ್ರಯ |
| ೮ | ಶಕಟಾರೋಹಣ |
| ೯ | ಶಕಟಗಮನ |
| ೧೦, ೧೧ | ಆತಿಥ್ಯೋಪಸತ್ತುಗಳು |
| ೧೨ | ಉತ್ತರವೇದಿನಿರ್ಮಾಣ |
| ೧೩ | ಹವಿರ್ಧಾನಕರಣ |
| ೧೪ | ಕಾಮ್ಯೇಷ್ಟಿಯಾಜ್ಯೆಗಳು |

ಈ ಪ್ರಶ್ನೆಯ ಮೊದಲ ಅನುವಾಕದಲ್ಲಿ ಯಾಗಶಾಲಾಪ್ರವೇಶವು ವಿಹಿತವಾಗಿದೆ. ಅದಕ್ಕೆ ಮೊದಲು ಯಜಮಾನನಿಗೆ ಕ್ಷೌರಾದಿಸಂಸ್ಕಾರಗಳಾಗಬೇಕು. ಇವೆಲ್ಲಕ್ಕೂ ಮೊದಲು ಯಾಗಶಾಲಾನಿರ್ಮಾಣವಾಗಬೇಕು. ಆದುದರಿಂದ ಸೌಮಿಕಬ್ರಾಹ್ಮಣದಲ್ಲಿ (6ನೆಯ ಕಾಂಡ) 'ಪ್ರಾಚೀನವಗ್‌ಂಶಂ ಕರೋತಿ' ಎಂಬುದಾಗಿ ಶಾಲಾನಿರ್ಮಾಣವನ್ನೇ ಹೇಳಿದೆ. ಈ ಅನುವಾಕದ ಮೊದಲ ಮಂತ್ರವು ಕ್ಷೌರವಿಧಿಗೆ ಸಂಬಂಧಿಸಿದ್ದಾಗಿದೆ.

## ದೀರ್ಘಾಯುತ್ವಾಯ ವರ್ಚಸ ಓಷಧೇ
## ತ್ರಾಯಸ್ವೈನಗ್ಂ ಸ್ವಧಿತೇ ಮೈನಗ್ಂ ಹಿಗ್ಂಸೀ

ದೀರ್ಘಾಯುತ್ವಾಯೇತಿ ದೀರ್ಘಾಯು - ತ್ವಾಯ । ವರ್ಚಸೇ । ಓಷಧೇ।

ತ್ರಾಯಸ್ವ। ಏನಮ್। ಸ್ವಧಿತ ಇತಿ ಸ್ವ-ಧಿತೇ। ಮಾ। ಏನಮ್। ಹಿಗ್ಂಸೀಃ।

---

| ಮಂತ್ರ | ವಿನಿಯೋಗ |
|---|---|
| ಓಷಧೇ ತ್ರಾಯಸ್ವೈನಮ್। | ಮೇಲ್ಮುಖವಾದ ಬರ್ಹಿಸ್ಸನ್ನು ಎತ್ತಲು |
| ಸ್ವಧಿತೇ.........ಹಿಗ್ಂಸೀಃ। | ಬರ್ಹಿಸ್ಸಿನಲ್ಲಿ ಕ್ಷುರ(ಕತ್ತಿ)ವನ್ನು ಅಡ್ಡಲಾಗಿ ಇಡಲು |

---

ಪದಶಃ ಅರ್ಥ :- ಆಪಃ = ನೀರುಗಳು; ಜೀವಸೇ = [ಒಳ್ಳೆಯ ರೀತಿಯಲ್ಲಿ] ಬದುಕುವಂತೆ ಮಾಡುವುದಕ್ಕೂ; ದೀರ್ಘಾಯುತ್ವಾಯ = ಆಯುಸ್ಸಿನ ವೃದ್ಧಿಗಾಗಿಯೂ; ವರ್ಚಸೇ = ಬ್ರಹ್ಮವರ್ಚಸಕ್ಕಾಗಿಯೂ; ಉಂದಂತು = [ಯಜಮಾನನ ಶಿರಸ್ಸನ್ನು] ತೋಯಿಸಲಿ. ❖ ಓಷಧೇ = ಎಲೈ ! ಬರ್ಹೀರೂಪವಾದ ಓಷಧಿಯೇ!; ಏನಮ್ = ಈ ಯಜಮಾನನನ್ನು; ತ್ರಾಯಸ್ವ = ರಕ್ಷಿಸು. ❖ ಸ್ವಧಿತೇ = ಎಲೈ! ಸ್ವಕಾರ್ಯ ಸಮರ್ಥವಾದ ಕ್ಷುರವೇ! ಏನಮ್ = ಈ ಯಜಮಾನನನ್ನು; ಮಾ ಹಿಗ್ಂಸೀಃ = [ಗಾಯಗೊಳಿಸಿ]ಹಿಂಸಿಸಬೇಡ.

---

ತಾತ್ಪರ್ಯ:-ಯಜಮಾನನು ಒಳ್ಳೆಯ ರೀತಿಯಲ್ಲಿ ಬದುಕುವಂತಾಗಬೇಕು. ದೀರ್ಘವಾದ ಆಯುಸ್ಸನ್ನು ಪಡೆಯಬೇಕು. ಬ್ರಹ್ಮವರ್ಚಸಿಯೂ ಆಗಬೇಕು. ಇಂತಹ ಫಲಗಳನ್ನು ಉಂಟುಮಾಡಲು ಈ ಜಲವು ಯಜಮಾನನ ತಲೆಯನ್ನು ತೋಯಿಸಲಿ.

ಓ!ಬರ್ಹಿಸ್ಸಿನ ರೂಪದಲ್ಲಿರುವ ಓಷಧಿಯೇ! ವಪನಸಮಯದಲ್ಲಿ ನೋವಾಗದಂತೆ ಈ ಯಜಮಾನನನ್ನು ಕಾಪಾಡು.

# ದೇವಶ್ರೂರೇತಾನಿ ಪ್ರವಪೇ ಸ್ವಸ್ತ್ಯುತ್ತರಾಣ್ಯಶೀಯಾಽಽ

---

ದೇವಶ್ರೂರಿತಿ ದೇವ-ಶ್ರೂಃ। ಏತಾನಿ। ಪ್ರೇತಿ। ವಪೇ। ಸ್ವಸ್ತಿ। ಉತ್ತರಾಣೀತ್ಯುತ್—ತರಾಣಿ। ಅಶೀಯ।

---

| ಮಂತ್ರ | ವಿನಿಯೋಗ |
| --- | --- |
| ದೇವಶ್ರೂಃ....... ಪ್ರವಪೇ। | ಅಧ್ವರ್ಯುವು ಮಾಡುವ ವಪನದ ಆರಂಭದಲ್ಲಿ |
| ಸ್ವಸ್ತಿ......... ಅಶೀಯ । | ವಪನ ಮಾಡಲ್ಪಟ್ಟ ಪ್ರದೇಶದ ಅಭಿಮರ್ಶನದಲ್ಲಿ —ಬೌಧಾಯನ |
| | ಯಜಮಾನನ ಜಪದಲ್ಲಿ —ಆಪಸ್ತಂಬ |

---

ದೇವಶ್ರೂಃ = [ದೇವತೆಗಳಲ್ಲಿ ಪ್ರಸಿದ್ಧನಾದ] 'ದೇವಶ್ರೂ' ಎಂಬ [ದೇವನಾಪಿತನಾಗಿಯೇ] ನಾನು(ಅಧ್ವರ್ಯು); ಏತಾನಿ = ಈ ಶ್ಮಶ್ರುಕೇಶಾದಿಗಳನ್ನು; ಪ್ರವಪೇ = ವಪನ ಮಾಡುತ್ತೇನೆ. +ಸ್ವಸ್ತಿ = ಅಡ್ಡಿಯಿಲ್ಲದೆ (ನಿರ್ವಿಘ್ನವಾಗಿ), ಉತ್ತರಾಣಿ = ಮುಂದೆ ಮಾಡಬೇಕಾದ ಕಾರ್ಯಗಳನ್ನು; ಅಶೀಯ= ಹೊಂದುವೆನು.

---

ಸ್ವಧಿತಿಯೆಂದರೆ ಕಾರ್ಯಸಮರ್ಥವೆಂಬ ಅವಯವಾರ್ಥವಿದೆ. ಎಲೈ! ಸ್ವಕಾರ್ಯಸಮರ್ಥವಾದ ಕತ್ತಿಯೇ!ನೀನು ಈ ಯಜಮಾನನನ್ನು ಗಾಯಗೊಳಿಸಬೇಡ. ಹಿಂಸಿಸಬೇಡ.

ಅಧ್ವರ್ಯುವಾದ ನಾನು ದೇವನಾಪಿತನೆಂದು ಪ್ರಸಿದ್ಧನಾಗಿರುವ ದೇವಶ್ರುವೇ ಆಗಿ ಯಜಮಾನನ ಶ್ಮಶ್ರುಕೇಶಾದಿಗಳನ್ನು ವಪನ ಮಾಡುತ್ತೇನೆ.

ಗಡ್ಡ, ಮೀಸೆ ಕೂದಲುಗಳನ್ನು ಹೋಗಲಾಡಿಸಿಕೊಂಡು ಪವಿತ್ರನಾದ ನಾನು [ಯಜಮಾನ] ವಿಘ್ನಗಳಿಲ್ಲದೆ ಮುಂದಿನ ಯಜ್ಞಕಾರ್ಯಗಳನ್ನು ಹೊಂದುವೆನು.

ಪೋ ಅಸ್ಮಾನ್ಮಾತರಃ ಶುಂಧಂತು ಘೃತೇನ ನೋ
ಘೃತಪುವಃ ಪುನಂತು ವಿಶ್ವಮಸ್ಮತ್ಪ್ರವಹಂತು
ರಿಪ್ರಮುದಾಭ್ಯಃ ಶುಚಿರಾ

---

ಆಪಃ। ಅಸ್ಮಾನ್। ಮಾತರಃ। ಶುಂಧಂತು। ಘೃತೇನ। ನಃ। ಘೃತಪುವ ಇತಿ ಘೃತ-ಪುವಃ। ಪುನಂತು। *ವಿಶ್ವಮ್। ಅಸ್ಮತ್। ಪ್ರೇತಿ। ವಹಂತು। ರಿಪ್ರಮ್* । ಉದಿತಿ। ಆಭ್ಯಃ। ಶುಚಿಃ। ಏತಿ।

---

| ಮಂತ್ರ | ವಿನಿಯೋಗ (ಬೌಧಾಯನ) |
|---|---|
| ೧) ಆಪೋ........ಪುನಂತು। | ಯಜಮಾನನಿಗೆ ಅಭಿಷೇಕವನ್ನು ಮಾಡಲು |
| ೨) ವಿಶ್ವ.........ರಿಪ್ರಮ್। | ಮೈಯನ್ನುಜ್ಜಿ ತೊಳೆಯಲು |
| | ಆಪಸ್ತಂಬ |
| ಆಪೋ...........ರಿಪ್ರಮ್। | ಯಜಮಾನನ ಅಭಿಷೇಕದಲ್ಲಿ |

---

ಮಾತರಃ = ತಾಯಂದಿರಾದ; ಆಪಃ = ನೀರುಗಳು; ಅಸ್ಮಾನ್ = ನಮ್ಮನ್ನು (ನಮ್ಮ ಯಜಮಾನರನ್ನು) ಶುಂಧಂತು = ಶುದ್ಧಿಮಾಡಲಿ; ಘೃತಪುವಃ = ನೀರಿನಿಂದ ಪವಿತ್ರಗೊಳಿಸುವ ಪರ್ಜನ್ಯಾದಿಗಳು; ಘೃತೇನ= ನೀರಿನಿಂದ; ನಃ = ನಮ್ಮನ್ನು; ಪುನಂತು = ಪವಿತ್ರಗೊಳಿಸಲಿ. [ಈ ನೀರುಗಳು] +ಅಸ್ಮತ್ = ನಮ್ಮ(ಯಜಮಾನರ)ದೆಸೆಯಿಂದ; ವಿಶ್ವಮ್ = ಸಮಸ್ತವಾದ; ರಿಪ್ರಮ್ = ಪಾಪವನ್ನು; ಪ್ರವಹಂತು = ತೊಳೆದುಹಾಕಲಿ.

---

ಲೋಕಕ್ಕೆ ತಾಯಂದಿರಂತಿರುವ ಈ ನೀರುಗಳು ನಮ್ಮ ಯಜಮಾನನನ್ನು ಶುದ್ಧಮಾಡಲಿ. ನೀರಿನಿಂದ ಪವಿತ್ರಗೊಳಿಸುವ ಪರ್ಜನ್ಯಾದಿದೇವತೆಗಳು ಪವಿತ್ರವಾದ ನೀರಿನಿಂದ ನಮ್ಮನ್ನು (ಯಜಮಾನನನ್ನು) ಪವಿತ್ರಗೊಳಿಸಲಿ. ನಮ್ಮ ಪಾಪವೆಲ್ಲವನ್ನೂ ಪವಿತ್ರವಾದ ಈ ನೀರುಗಳು ಹೋಗಲಾಡಿಸಲಿ.

# ಪೂತ ಏಮಿ ಸೋಮಸ್ಯ ತನೂರಸಿ ತನುವಂ ಮೇ ಪಾಹಿ

---

ಪೂತಃ । ಏಮಿ । ಸೋಮಸ್ಯ । ತನೂಃ । ಅಸಿ । ತನುವಮ್। ಮೇ । ಪಾಹಿ।

---

| ಮಂತ್ರ | ವಿನಿಯೋಗ |
|---|---|
| ಉದಾಭ್ಯಃ......... ಏಮಿ । | ನೀರಿನಿಂದ ಎದ್ದು ಬರುವಾಗ ಯಜಮಾನನು ಹೇಳಲು. |
| ಸೋಮಸ್ಯ.......... ಪಾಹಿ । | ಯಜಮಾನನು ಕ್ಷೌಮ(ನಾರುಬಟ್ಟೆ)ವಸ್ತ್ರವನ್ನು ಧರಿಸಲು |

---

[ನಾನು] **ಶುಚಿಃ** = ಸ್ನಾನದಿಂದ ಹೊರಗಡೆ ಶುದ್ಧನಾಗಿ; **ಪೂತಃ** = ಆಚಮನದಿಂದ ಒಳಗಡೆ ಶುದ್ಧನಾಗಿ; **ಆಭ್ಯಃ ಉತ್** = ಈ ನೀರುಗಳ ದೆಸೆಯಿಂದ ಮೇಲೆದ್ದು; **ಆ ಏಮಿ** = ಬರುತ್ತೇನೆ. +[ಎಲೈ! ಕ್ಷೌಮವಸ್ತ್ರವೇ! ನೀನು] **ಸೋಮಸ್ಯ** = ಸೋಮದೇವತೆಯ; **ತನೂಃ** = ದೇಹವೇ [ದೇಹದಂತೆ ಪ್ರಿಯವಾದುದೇ] **ಅಸಿ** = ಆಗಿರುವೆ; **ಮೇ** = ನನ್ನ; **ತನುವಮ್** = ಶರೀರವನ್ನು; **ಪಾಹಿ** = ರಕ್ಷಿಸು.

---

ಸ್ನಾನಾಚಮನಗಳಿಂದ ಹೊರಗೂ ಒಳಗೂ ಶುದ್ಧನಾದ ನಾನು (ಯಜಮಾನ) ಈ ನೀರಿನಿಂದ ಮೇಲೆದ್ದು ಬರುತ್ತೇನೆ. ವಪನಾದಿಸಂಸ್ಕಾರಗಳು ದೀಕ್ಷೆ. ಆಹಾರಾದಿ ನಿಯಮಗಳು ತಪಸ್ಸು. ಯಜಮಾನನು ತೀರ್ಥಸ್ನಾನದಿಂದ ಈ ಎರಡನ್ನೂ ಪಡೆಯುತ್ತಾನೆ.

ಎಲೈ ಶುದ್ಧವಾದ ಪಟ್ಟೆಯ ವಸ್ತ್ರವೇ! ನಿನಗೆ ಸೋಮನೇ ದೇವತೆ. ನೀನು ಸೋಮನಿಗೆ ದೇಹದಂತೆ ಪ್ರಿಯವಾಗಿರುವೆ. ನೀನು ನಿನ್ನನ್ನು ಧರಿಸುವ ನನ್ನ ಶರೀರವನ್ನು ರಕ್ಷಿಸು.

ಎಲೈ ನವನೀತವೇ! ನೀನು ಹಸುಗಳ ಹಾಲಿನಿಂದ ಉತ್ಪನ್ನನಾಗಿರುವೆ. ನಿನ್ನಲ್ಲಿ

# ಮಹೀನಾಂ ಪಯೋಽಸಿ ವರ್ಚೋಧಾ ಅಸಿ

# ವರ್ಚೋ[ವರ್ಚಃ(೧)] ಮಯಿ ಧೇಹಿ

---

ಮಹೀನಾಮ್। ಪಯಃ। ಅಸಿ। *ವರ್ಚೋಧಾ ಇತಿ ವರ್ಚಃ–ಧಾಃ। ಅಸಿ। ವರ್ಚಃ [೧]

ಮಯಿ। ಧೇಹಿ* ।

---

| ಮಂತ್ರ | ವಿನಿಯೋಗ (ಬೌಧಾಯನ) |
|---|---|
| ಮಹೀನಾಂ........ ಧೇಹಿ। | ಬೆಣ್ಣೆಯಿಂದ ಯಜಮಾನನ ಮುಖವೇ ಮೊದಲಾದ ಅವಯವಗಳ ಅಭ್ಯಂಜನದಲ್ಲಿ |
| | ಆಪಸ್ತಂಬ |
| ೧) ಮಹೀನಾಂ ಪಯೋಽಸಿ। | ದರ್ಭಪುಂಜಗಳಿಂದ ನವನೀತ (ಬೆಣ್ಣೆ)ವನ್ನು ಎತ್ತಿಕೊಳ್ಳಲು. |
| ೨) ವರ್ಚೋಧಾ.........ಧೇಹಿ। | ಮೂರು ಬಾರಿ ಅಭ್ಯಂಜನವನ್ನು ಮಾಡಲು. |

---

[ಎಲೈ ನವನೀತವೇ! ನೀನು] ಮಹೀನಾಮ್ = ಗೋವುಗಳ; ಪಯಃ = ಹಾಲು (ಹಾಲಿನಿಂದಾದವನು) ಅಸಿ= ಆಗಿದ್ದೀಯೆ; ವರ್ಚೋಧಾಃ = ಶುಭ್ರಕಾಂತಿಯನ್ನು ಹೊಂದಿದವನೂ; ಅಸಿ = ಆಗಿದ್ದೀಯೆ; ಮಯಿ = ನನ್ನಲ್ಲಿ; ವರ್ಚಃ = ಬ್ರಹ್ಮವರ್ಚಸವನ್ನು; ಧೇಹಿ = ಉಂಟುಮಾಡು.

---

ಶುಭ್ರವಾದ ವರ್ಚಸ್ಸಿದೆ. ನೀನು ನನ್ನಲ್ಲಿ ಬ್ರಹ್ಮವರ್ಚಸವನ್ನು ಉಂಟುಮಾಡು.

ಎಲೈ ಕಾಡಿಗೆಯೇ! ನೀನು ವೃತ್ರಾಸುರನ ಕಣ್ಣಿನ ಕರಿಯ ಗುಡ್ಡೆಯೇ ಆಗಿರುವೆ. [ಇಂದ್ರನು ವೃತ್ರನನ್ನು ಕೊಲ್ಲುವಾಗ ವೃತ್ರಾಸುರನ ಕಣ್ಣುಗುಡ್ಡೆಯು ಬಿದ್ದು ಹೋಯಿತು. ಅದೇ ಆಂಜನವಾಯಿತು ಎಂಬ ಆಖ್ಯಾನವಿದೆ.] (ತೈ. ಸಂ. 6.1.1.) ನೀನು ಕಣ್ಣುಗಳನ್ನು

ವೃತ್ರಸ್ಯ ಕನೀನಿಕಾಸಿ ಚಕ್ಷುಷ್ಪಾ ಅಸಿ ಚಕ್ಷುರ್ಮೇ ಪಾಹಿ

ಚಿತ್ಪತಿಸ್ತ್ವಾ ಪುನಾತು* ವಾಕ್ಪತಿಸ್ತ್ವಾ ಪುನಾತು*

---

ವೃತ್ರಸ್ಯ। ಕನೀನಿಕಾ। ಅಸಿ। ಚಕ್ಷುಷ್ಪಾ ಇತಿ ಚಕ್ಷುಃ - ಪಾಃ। ಅಸಿ। ಚಕ್ಷುಃ। ಮೇ। ಪಾಹಿ।

ಚಿತ್ಪತಿರಿತಿ ಚಿತ್-ಪತಿಃ। ತ್ವಾ। ಪುನಾತು। ವಾಕ್ಪತಿರಿತಿ ವಾಕ್ - ಪತಿಃ। ತ್ವಾ। ಪುನಾತು।

---

| ಮಂತ್ರ | ವಿನಿಯೋಗ |
|---|---|
| ವೃತ್ರಸ್ಯ............ ಪಾಹಿ। | ಯಜಮಾನನ ಕಣ್ಣಿಗೆ ಕಾಡಿಗೆಯನ್ನು ಹಚ್ಚಲು. |
| ಚಿತ್ಪತಿಸ್ತ್ವಾ ಪುನಾತ್ವಚ್ಛಿದ್ರೇಣ......ರಶ್ಮಿಭಿಃ। | ಇಪ್ಪತ್ತೊಂದು ದರ್ಭಪುಂಜಗಳಿಂದ |

---

[ಎಲೈ! ಆಂಜನವೇ] (ನೀನು) ವೃತ್ರಸ್ಯ = ವೃತ್ರಾಸುರನ; ಕನೀನಿಕಾ = ಕಣ್ಣಿನ ಕರಿಯ ಗುಡ್ಡೆಯೇ; ಅಸಿ =ಆಗಿದ್ದೀಯೆ; [ನೀನು] ಚಕ್ಷುಷ್ಪಾಃ = ಕಣ್ಣುಗಳನ್ನು ರಕ್ಷಿಸುವವನು; ಅಸಿ = ಆಗಿದ್ದೀಯೆ; ಮೇ =ನನ್ನ; ಚಕ್ಷುಃ = ಕಣ್ಣನ್ನು; ಪಾಹಿ = ರಕ್ಷಿಸು. ಚಿತ್ಪತಿಃ = ಜ್ಞಾನಕ್ಕೆ ಒಡೆಯನಾದ ಮನೋದೇವನು; ಅಚ್ಛಿದ್ರೇಣ ಪವಿತ್ರೇಣ = ಆದಿತ್ಯರೂಪನಾದ

---

ರಕ್ಷಿಸತಕ್ಕವನೂ ಆಗಿದ್ದೀಯೆ. ಆದುದರಿಂದ ನೀನು ಕಣ್ಣಿನ ದೋಷಗಳನ್ನು ದೂರ ಮಾಡಿ ನನ್ನ ಕಣ್ಣನ್ನು ರಕ್ಷಿಸು.

ಜ್ಞಾನಕ್ಕೆ ಪತಿಯಾದ ಮನೋದೇವನೂ, ವಾಕ್ಕಿಗೆ ಒಡತಿಯಾದ ಸರಸ್ವತಿಯೂ, ಸರ್ವಪ್ರೇರಕನಾದ ಪರಮಾತ್ಮನೂ (ಸವಿತೃದೇವನೂ) ಸೂರ್ಯರೂಪವಾದ ಛಿದ್ರ ವಿಲ್ಲದ ಪವಿತ್ರರೂಪವೂ, ಜಗತ್ತಿನ ನಿವಾಸಕ್ಕೆ ಕಾರಣನಾದ ಸೂರ್ಯನ ಕಿರಣರೂಪವೂ ಆದ ದರ್ಭೆಗಳಿಂದ ನಿನ್ನನ್ನು ಪವಿತ್ರಗೊಳಿಸಲಿ. ಮನಸ್ಸು, ವಾಕ್ಕು ಮತ್ತು ಶರೀರದ ದೋಷಗಳನ್ನು ಹೋಗಲಾಡಿಸಿ ಶುದ್ಧ ಮಾಡಲಿ (ಎಂದು ಮಾರ್ಜನ ಮಾಡಬೇಕು).

**ದೇವಸ್ತ್ವಾ ಸವಿತಾ ಪುನಾತ್ವಚ್ಛಿದ್ರೇಣ ಪವಿತ್ರೇಣ**

**ವಸೋಃ ಸೂರ್ಯಸ್ಯ ರಶ್ಮಿಭಿಸ್ತಸ್ಯ**

---

ದೇವಃ। ತ್ವಾ। ಸವಿತಾ। ಪುನಾತು। ಅಚ್ಛಿದ್ರೇಣ। ಪವಿತ್ರೇಣ। ವಸೋಃ। ಸೂರ್ಯಸ್ಯ।

ರಶ್ಮಿಭಿರಿತಿ ರಶ್ಮಿ - ಭಿಃ। ತಸ್ಯ।

---

| ಮಂತ್ರ | ವಿನಿಯೋಗ |
|---|---|
| ವಾಕ್ಪತಿಸ್ತ್ವಾ......ಅಚ್ಛಿದ್ರೇಣ.....ರಶ್ಮಿಭಿಃ। | ಯಜಮಾನನನ್ನು |
| ದೇವಸ್ತ್ವಾ.......ಅಚ್ಛಿದ್ರೇಣ......ರಶ್ಮಿಭಿಃ। | ಪವಿತ್ರಗೊಳಿಸಲು. |

---

ದರ್ಭಸ್ತೋಮದಿಂದ; ವಸೋಃ ಸೂರ್ಯಸ್ಯ ರಶ್ಮಿಭಿಃ = ಜಗನ್ನಿವಾಸಭೂತನಾದ ಸೂರ್ಯನ ಕಿರಣರೂಪವಾದ ದರ್ಭೆಗಳಿಂದ; ತ್ವಾ = ನಿನ್ನನ್ನು; ಪುನಾತು = ಪವಿತ್ರಗೊಳಿಸಲಿ; [ಮಾನಸಿಕ ದೋಷಗಳನ್ನು ದೂರಮಾಡಲಿ.]; ವಾಕ್ಪತಿಃ = ಮಾತುಗಳಿಗೆ ಒಡತಿಯಾದ ಸರಸ್ವತಿಯು; [ಅಚ್ಛಿದ್ರೇಣ.... ರಶ್ಮಿಭಿಃ =ಆದಿತ್ಯರೂಪವಾದ..... ದರ್ಭೆಗಳಿಂದ] ತ್ವಾ = ನಿನ್ನನ್ನು; ಪುನಾತು = ಶುದ್ಧಗೊಳಿಸಲಿ (ವಾಗ್ದೋಷಗಳನ್ನು ದೂರಮಾಡಲಿ.); ಸವಿತಾ = ಸರ್ವ ಪ್ರೇರಕನಾದ (ಮನಸ್ಸೇ ಮೊದಲಾದವನ್ನು ಪ್ರೇರಿಸುವ) ದೇವಃ = ಸವಿತೃದೇವನು; [ಅಚ್ಛಿದ್ರೇಣ.... ರಶ್ಮಿಭಿಃ= ಆದಿತ್ಯರೂಪವಾದ.... ದರ್ಭೆಗಳಿಂದ] ತ್ವಾ = ನಿನ್ನನ್ನು; ಪುನಾತು = ಶುದ್ಧಗೊಳಿಸಲಿ. (ಸರ್ವವಿಧ ದೋಷಗಳನ್ನೂ ದೂರ ಮಾಡಿ ಪವಿತ್ರಗೊಳಿಸಲಿ).

---

ಓ! ಅಂತರ್ಯಾಮಿಯಾದ ಪರಮಾತ್ಮನೇ! ನೀನು ಪವಿತ್ರರೂಪನಾದ ಆದಿತ್ಯನಿಗೂ ಪ್ರೇರಕನು. ಅಗ್ನಿಷ್ಟೋಮಯಾಗವನ್ನು ಮಾಡಲು ನಿನ್ನ ಪವಿತ್ರರೂಪನಾದ ಆದಿತ್ಯ ನಿಂದಲೂ, ಕಿರಣಗಳಿಂದಲೂ, ದರ್ಭೆಗಳಿಂದಲೂ ನನ್ನ ಆತ್ಮನನ್ನು ಪವಿತ್ರಗೊಳಿಸಿ

ತೇ ಪವಿತ್ರಪತೇ ಪವಿತ್ರೇಣ ಯಸ್ಮೈ ಕಂ ಪುನೇ

ತಚ್ಛಕೇಯಮಾ ವೋ ದೇವಾಸ ಈಮಹೇ

---

ತೇ। ಪವಿತ್ರಪತ ಇತಿ ಪವಿತ್ರ - ಪತೇ। ಪವಿತ್ರೇಣ। ಯಸ್ಮೈ। ಕಮ್। ಪುನೇ। ತತ್।

ಶಕೇಯಮ್। ಏತಿ। ವಃ। ದೇವಾಸಃ। ಈಮಹೇ।

---

| ಮಂತ್ರ | ವಿನಿಯೋಗ |
|---|---|
| ತಸ್ಯ......... ಶಕೇಯಮ್ । | ಅಧ್ವರ್ಯುವು ಈ ಮಂತ್ರವನ್ನು ಯಜಮಾನನಿಂದ ಹೇಳಿಸಬೇಕು. |
| ಆ ವೋ......... ಹವಾಮಹೇ। | ಅಧ್ವರ್ಯುವು ಯಜಮಾನನೊಡನೆ ಯಜ್ಞಶಾಲೆಯನ್ನು ಪ್ರವೇಶಿಸಲು |

---

+**ಪವಿತ್ರ ಪತೇ!** = [ಎಲೈ! ಆದಿತ್ಯನೆಂಬ] ಅಚ್ಛಿದ್ರಪವಿತ್ರಕ್ಕೂ ಪತಿಯಾದವನೇ! (ಅಚ್ಛಿದ್ರ ಪವಿತ್ರರೂಪನಾದ ಆದಿತ್ಯನಿಗೂ ಪ್ರೇರಕನಾದ ಅಂತರ್ಯಾಮಿಯೇ!) (ಅಚ್ಛಿದ್ರರೂಪವಾದ ಕಿರಣಗಳಿಗೆ ಪತಿಯಾದ ಆದಿತ್ಯದೇವನೇ!) **ತಸ್ಯ** = ಅಂತಹ; **ತೇ** = ನಿನ್ನ; **ಪವಿತ್ರೇಣ** = ಸೂರ್ಯರೂಪಪವಿತ್ರದಿಂದ; (ಕಿರಣರೂಪಪವಿತ್ರದಿಂದ) **ಯಸ್ಮೈ** = ಯಾವ ಅಗ್ನಿಷ್ಟೋಮ ಯಾಗಕ್ಕಾಗಿ (ಯಾವ ಪ್ರಯೋಜನಕ್ಕಾಗಿ) **ಕಮ್** = ಆತ್ಮನನ್ನು; **ಪುನೇ** = ಪರಿಶುದ್ಧ ಗೊಳಿಸಿಕೊಂಡೆನೋ; **ತತ್** = ಆ ಯಾಗವನ್ನು [ಮಾಡಲು]; **ಶಕೇಯಮ್** = ಸಮರ್ಥನಾಗುವೆನು; +**ದೇವಾಸಃ** = ಎಲೈ ದೇವತೆಗಳೇ! **ವಃ** = ನಿಮ್ಮ; **ಅಧ್ವರೇ** = ಯಾಗದಲ್ಲಿ (ಯಾಗನಿಮಿತ್ತವಾಗಿ) **ಸತ್ಯಧರ್ಮಾಣಃ** = ಸತ್ಯಶೀಲರಾದ; [ಅನುಷ್ಠಾನಪರರಾದ] ನಾವು; **ಆ ಈಮಹೇ** = [ಯಾಗಶಾಲೆಗೆ] ಬರುತ್ತಿದ್ದೇವೆ. [ನಿಮ್ಮನ್ನು

---

ಕೊಂಡಿರುತ್ತೇನೆ. ಆ ಯಾಗವನ್ನು ಮಾಡಲು ನಾನು ಶಕ್ತನಾಗುವೆನು.

ಎಲೈ ಯಜ್ಞಸಂಬಂಧಿದೇವತೆಗಳೇ! ಸತ್ಯಶೀಲರಾಗಿ, ನಿತ್ಯಕರ್ಮಾನುಷ್ಠಾನಪರರಾದ ನಾವು ನಿಮಗೆ ಸಂಬಂಧಿಸಿದ ಈ ಅಗ್ನಿಷ್ಟೋಮಯಾಗನಿಮಿತ್ತವಾಗಿ ಯಾಗಶಾಲೆಗೆ

ಸತ್ಯಧರ್ಮಾಣೋ ಅಧ್ವರೇ ಯದ್ವೋ ದೇವಾಸ
ಆಗುರೇ ಯಜ್ಞಿಯಾಸೋ ಹವಾಮಹ ಇಂದ್ರಾಗ್ನೀ
ದ್ಯಾವಾಪೃಥಿವೀ ಆಪ ಓಷಧೀಸ್ತ್ವಂ ದೀಕ್ಷಾಣಾ

---

ಸತ್ಯಧರ್ಮಾಣ ಇತಿ ಸತ್ಯ-ಧರ್ಮಾಣಃ। ಅಧ್ವರೇ। ಯತ್। ವಃ। ದೇವಾಸಃ। ಆಗುರ ಇತ್ಯಾ-ಗುರೇ। ಯಜ್ಞಿಯಾಸಃ। ಹವಾಮಹೇ। ಇಂದ್ರಾಗ್ನೀ ಇತೀಂದ್ರ-ಅಗ್ನೀ। ದ್ಯಾವಾ ಪೃಥಿವೀ ಇತಿ ದ್ಯಾವಾ - ಪೃಥಿವೀ। ಆಪಃ। ಓಷಧೀಃ। ತ್ವಮ್। ದೀಕ್ಷಾಣಾಮ್।

---

| ಮಂತ್ರ | ವಿನಿಯೋಗ (ಬೌಧಾಯನ) |
| --- | --- |
| ಇಂದ್ರಾಗ್ನೀ........ ಓಷಧೀಃ। | ಅಧ್ವರ್ಯುವು ಯಜಮಾನನನ್ನು ಯಾಗಶಾಲೆಗೆ ಪ್ರವೇಶಿಸುವಂತೆ ಮಾಡಲು |
| | ಆಪಸ್ತಂಬ |
| | ಯಜಮಾನನು ಆಹವನೀಯದ ಸಮೀಪಕ್ಕೆ ಹೋಗಲು |

---

ಪ್ರಾರ್ಥಿಸುತ್ತಿದ್ದೇವೆ] ಯಜ್ಞಿಯಾಸಃ = ಯಜ್ಞಕ್ಕೆ ಸಂಬಂಧಪಟ್ಟ; ದೇವಾಸಃ =ದೇವತೆಗಳೇ!; ಯತ್ = ಯಾವ ಉದ್ದೇಶಕ್ಕಾಗಿ ; ಆಗುರೇ = ಈ ಯಜ್ಞವೆಂಬ ಉದ್ಯಮದಲ್ಲಿ; ವಃ = ನಿಮ್ಮನ್ನು; ಹವಾಮಹೇ = ಆಹ್ವಾನಿಸುತ್ತಿರುವೆವೋ [ಆ ಯಜ್ಞವನ್ನು ಮಾಡಲು ಯಾಗಶಾಲೆಗೆ ಬರುತ್ತಿದ್ದೇವೆ]. + ಇಂದ್ರಾಗ್ನೀ = ಎಲೈ ಇಂದ್ರಾಗ್ನಿ ದೇವತೆಗಳೇ!; ದ್ಯಾವಾ ಪೃಥಿವೀ = ದ್ಯುಲೋಕ ಭೂಲೋಕಗಳೇ! ; ಆಪಃ = ಜಲದೇವತೆಗಳೇ! ; ಓಷಧೀಃ = ಸಸ್ಯ ದೇವತೆಗಳೇ!; (ಓಷಧಿಪೋಷಕಗಳಾದ ಜಲದೇವತೆಗಳೇ!) [ಯಜಮಾನನು ಯಾಗಶಾಲೆಯನ್ನು ಪ್ರವೇಶಿಸಲು ನೀವು ಅನುಮತಿಯನ್ನು ಕೊಡಿರಿ].

---

ಬರುತ್ತಿದ್ದೇವೆ. ಎಲೈ ದೇವತೆಗಳೇ! ನಿಮ್ಮನ್ನು ಈ ಯಾಗಕ್ಕಾಗಿ ಆಹ್ವಾನಿಸುತ್ತೇವೆ.

## ಮಧಿಪತಿರಸೀಹ ಮಾ ಸಂತಂ ಪಾಹಿ ॥ ೧-2 ॥

## [ವರ್ಚ ಓಷಧೀರಷ್ಟೌ ಚ]

---

ಅಧಿಪತಿರಿತ್ಯಧಿ-ಪತಿಃ। ಅಸಿ। ಇಹ। ಮಾ। ಸಂತಮ್। ಪಾಹಿ ॥ ೧ ॥

---

| ಮಂತ್ರ | ವಿನಿಯೋಗ (ಬೌಧಾಯನ) |
|---|---|
| ತ್ವಂ....... ಪಾಹಿ। | ಆಹವನೀಯಾಗ್ನಿಯನ್ನು ನೋಡಿಸಲು |
| | **ಆಪಸ್ತಂಬ** |
| | ಆಹವನೀಯಾಗ್ನಿಯ ಸಮೀಪದಲ್ಲಿ ಕೂರಲು |

---

+[ಎಲೈ ಆಹವನೀಯಾಗ್ನಿದೇವನೇ!] **ತ್ವಮ್** = ನೀನು; **ದೀಕ್ಷಾಣಾಮ್** = ದೀಕ್ಷಾರೂಪ ನಿಯಮಗಳಿಗೆ; **ಅಧಿಪತಿಃ** = ಒಡೆಯನು; **ಅಸಿ** = ಆಗಿರುವೆ; **ಇಹ** = ಇಲ್ಲಿ (ನಿನ್ನ ಸಮೀಪದಲ್ಲಿ); **ಸಂತಮ್** = ಇರುವ; **ಮಾ** = ನನ್ನನ್ನು; **ಪಾಹಿ** = ರಕ್ಷಿಸು.

---

ಎಲೈ ಇಂದ್ರಾಗ್ನಿ ದೇವತೆಗಳೇ! ದ್ಯಾವಾಪೃಥಿವೀಗಳೇ! ಜಲದೇವತೆಗಳೇ! ಓಷಧಿದೇವತೆಗಳೇ! ನೀವು ಯಜಮಾನನ ಯಜ್ಞಶಾಲಾಪ್ರವೇಶಕ್ಕೆ ಅನುಮತಿಯನ್ನು ಕೊಡಿ.

ಎಲೈ ಆಹವನೀಯಾಗ್ನಿದೇವನೇ! ನೀನು ದೀಕ್ಷಾರೂಪವಾದ ನಿಯಮಗಳಿಗೆ ಸ್ವಾಮಿಯಾಗಿದ್ದೀಯೆ. ನಿನ್ನ ಸಮೀಪದಲ್ಲಿರುವ ನನ್ನನ್ನು ನಿಯಮಲೋಪವಾಗದಂತೆ ರಕ್ಷಿಸು.

## ವಿನಿಯೋಗ ಸಂಗ್ರಹ

ಆಪಃ[1] ಶಿರ ಉನತ್ತ್ವೋಷ[2] ದರ್ಭೋಽತ್ರಾಂತರ್ಹಿತಃ ಸ್ವಧಿ[3]।
ಕ್ಷುರಂ ನಿಧಾಯ [4]ದೇವಶ್ರೂರ್ವಪೇತ್ ಸ್ವಸ್ತಿ[5] ತದಾ ಜಪೇತ್॥
ಆಪಃ[6] ಸ್ನಾಯಾದುದಾ[7] ಜಪ್ಯಂ ಸೋಮ[8] ವಸ್ತ್ರಪರಿಗ್ರಹಃ ।
[9]ಮಹೀತಿ ನವನೀತಸ್ಯ ಗ್ರಹೋ [10]ವರ್ಚೋಽತಿಲೇಪನಮ್ ॥
[11]ವೃತ್ರೇತ್ಯಾಜ್ಯೇ ಚಿತ್ಪತಿಸ್ತ್ವಾ[12, 13, 14] ತ್ರಿಭಿರ್ದರ್ಭೇಣ ಪಾವಯೇತ್।
[15]ತಸ್ಯೇತಿ ಜಪತಿ ಸ್ವಾಮೀ ಹ್ಯಾವಃ[16] ಪ್ರಾಗ್ವಂಶವೇಶನಮ್ ॥
[17]ಇಂದ್ರಾಗ್ನೀ ದಕ್ಷಿಣೇ ಗತ್ವಾ [18]ತ್ವಮಿತ್ಯುಪವಿಶೇದಿಹ ।
ಪ್ರಥಮೇ ಹ್ಯನುವಾಕೇಽಸ್ಮಿನ್ ಮಂತ್ರಾ ಅಷ್ಟಾದಶೇರಿತಾಃ ॥

ಅನುವಾಕದ ಮಂತ್ರಗಳ ಸಂಖ್ಯೆ — ಆಪಸ್ತಂಬ - 18, ಬೌಧಾಯನ - 18

ಐದನೆಯ, ಹದಿನೇಳನೆಯ ಮತ್ತು ಹದಿನೆಂಟನೆಯ ಮಂತ್ರಗಳಲ್ಲಿ ಬೌಧಾಯನ ಮತ್ತು ಆಪಸ್ತಂಬರು ವಿನಿಯೋಗಭೇದವನ್ನು ಹೇಳಿರುತ್ತಾರೆ. ಮಂತ್ರವು ಎರಡು ಮತದಲ್ಲಿಯೂ ಒಂದೇ. ಆರನೆಯ ಮಂತ್ರವು ಬೌಧಾಯನಮತದಲ್ಲಿ ಎರಡು ಮಂತ್ರಗಳು. ಒಂಬತ್ತನೆಯ ಮತ್ತು ಹತ್ತನೆಯ ಮಂತ್ರಗಳು ಸೇರಿ ಬೌಧಾಯನಮತದಲ್ಲಿ ಒಂದೇ ಮಂತ್ರ.

### ಅನುವಾಕದ ವಿಶೇಷ ವಿಷಯಗಳು

#### ಅ) ಛಂದಸ್ಸು

| ಮಂತ್ರಸಂಖ್ಯೆ | | |
|---|---|---|
| 1 | ಆಪಃ......... ವರ್ಚಸೇ। | ದ್ವಿಪದಾ ಗಾಯತ್ರೀ |
| 6 | ಆಪೋ.......ಪುನಂತು । [ಬೌ] | ದ್ವಿಪದಾ ವಿರಾಟ್ |
| 7 | ವಿಶ್ವ........ ರಿಪ್ರಮ್ [ಬೌ] | ಏಕಪದಾ ವಿರಾಟ್ |
| 12 | ಚಿತ್ಪತಿಃ.........ರಶ್ಮಿಭಿಃ। | ತ್ರಿಪದಾ ಗಾಯತ್ರೀ |
| 13 | ವಾಕ್ಪತಿಃ........ರಶ್ಮಿಭಿಃ | ತ್ರಿಪದಾ ಗಾಯತ್ರೀ |
| 14 | ದೇವಸ್ತ್ವಾ........ರಶ್ಮಿಭಿಃ। | ತ್ರಿಪದಾ ಗಾಯತ್ರೀ |
| 16 | ಆ ವೋ........ಹವಾಮಹೇ। | ಚತುಷ್ಪದಾ ಅನುಷ್ಟುಪ್ |

## ಆ) ಮೀಮಾಂಸಾ

### ೧. ಸೋಮಯಾಗವು ದರ್ಶ-ಪೂರ್ಣಮಾಸಾಂಗವೇ? [ಜೈ.ಸೂ. 4.3]

'**ದರ್ಶಪೂರ್ಣಮಾಸಾಭ್ಯಾಮಿಷ್ಟ್ವಾ ಸೋಮೇನ ಯಜೇತ**' ಎಂಬ ವಚನವಿದೆ. ಇಲ್ಲಿ ಸೋಮಯಾಗವು ದರ್ಶ-ಪೂರ್ಣಮಾಸೇಷ್ಟಿಗಳ ಅಂಗವೇ? ಅಥವಾ ಈ ವಚನದಿಂದ ದರ್ಶ-ಪೂರ್ಣಮಾಸೇಷ್ಟಿಯ ನಂತರ ಸೋಮಯಾಗವನ್ನು ಮಾಡಬೇಕೆಂಬುದಾಗಿ ಕಾಲವು ಸೂಚಿತವಾಗುತ್ತದೆಯೇ? ಈ ವಿಚಾರವನ್ನು ಜೈಮಿನಿಸೂತ್ರದ ನಾಲ್ಕನೆಯ ಅಧ್ಯಾಯದ ಮೂರನೆಯ ಪಾದದಲ್ಲಿ ನಿರೂಪಿಸಿರುತ್ತಾರೆ.

ಇಲ್ಲಿಯ ಪೂರ್ವಪಕ್ಷವು ಹೀಗಿದೆ : '**ರಾಜಸೂಯೇನೇಷ್ಟ್ವಾ ಬೃಹಸ್ಪತಿಸವೇನ ಯಜೇತ**' ಎನ್ನುವ ವಿಧಿವಾಕ್ಯದಿಂದ ವಿಹಿತವಾದ ಬೃಹಸ್ಪತಿಸವವು ರಾಜಸೂಯ ಯಾಗಾಂಗವಾಗಿರುವಂತೆ ಸೋಮಯಾಗವು ದರ್ಶ-ಪೂರ್ಣಮಾಸದ ಅಂಗವಾಗಬೇಕು.

ಇಲ್ಲಿಯ ಸಿದ್ಧಾಂತವು ಹೀಗಿದೆ: '**ವಸಂತೇ ವಸಂತೇ ಜ್ಯೋತಿಷಾ ಯಜೇತ**' ಎನ್ನುವ ವಚನವು ಜ್ಯೋತಿಷ್ಟೋಮಯಾಗವನ್ನು ನಿತ್ಯಕರ್ಮವನ್ನಾಗಿ ವಿಧಿಸಿದೆ. '**ಜ್ಯೋತಿಷ್ಟೋಮೇನ ಸ್ವರ್ಗಕಾಮೋ ಯಜೇತ**' ಎಂಬ ವಚನವು ಫಲಕ್ಕಾಗಿ ಜ್ಯೋತಿಷ್ಟೋಮವನ್ನು ಅನುಷ್ಠಿಸಬೇಕೆಂದು ತಿಳಿಸುತ್ತದೆ. ಹೀಗೆ ಸ್ವತಂತ್ರವಾಗಿ ವಿಧಾನ ಮಾಡಲ್ಪಟ್ಟಿರುವ ಈ ಸೋಮಯಾಗವು ಇನ್ನೊಂದಕ್ಕೆ ಅಂಗವಾಗಲಾರದು. ಬೃಹಸ್ಪತಿ ಸವದ ದೃಷ್ಟಾಂತವು ಇಲ್ಲಿಗೆ ಹೊಂದಿಕೊಳ್ಳುವುದಿಲ್ಲ. ಬೃಹಸ್ಪತಿಸವವು* ಒಂದು ಸವ(ಸೋಮಯಾಗವಿಶೇಷ)ದ ಹೆಸರು. ನಿರ್ದಿಷ್ಟವಾದ ಫಲವನ್ನು ಪಡೆಯಲು ಅದನ್ನು ಸ್ವತಂತ್ರವಾಗಿ ಅನುಷ್ಠಿಸಬಹುದು. ಆ ಯಾಗದ ಎಲ್ಲ ಧರ್ಮಗಳೂ ರಾಜಸೂಯ ಯಾಗಾಂಗವಾದ ಬೃಹಸ್ಪತಿಸವದಲ್ಲಿ ಅತಿದೇಶದಿಂದ ಬರುತ್ತವೆ. '**ದರ್ಶ-ಪೂರ್ಣಮಾಸಾಭ್ಯಾಮಿಷ್ಟ್ವಾ ಸೋಮೇನ ಯಜೇತ**' ಎಂಬ ವಾಕ್ಯದಲ್ಲಿ ಸೋಮವೆಂಬುದು ನಾಮಧೇಯವಲ್ಲ. ಆದುದರಿಂದ ದೃಷ್ಟಾಂತವು ಸಂಗತವಾಗಲಾರದು.

'**ಇಷ್ಟ್ವಾ**' ಎಂಬಲ್ಲಿರುವ '**ಕ್ತ್ವಾ**'ಪ್ರತ್ಯಯವು '**ಸಮಾನಕರ್ತೃಕಯೋಃ ಪೂರ್ವಕಾಲೇ [ಪಾಣಿನಿ ಸೂತ್ರ. 3.4.21]**' ಎಂಬ ಸೂತ್ರದಿಂದ ವಿಧಿಸಲ್ಪಟ್ಟು, ದರ್ಶ-ಪೂರ್ಣಮಾಸ ಮತ್ತು ಸೋಮಯಾಗಗಳಿಗೆ ಅಂಗಾಂಗಿಭಾವವು ಇಲ್ಲದಿದ್ದರೂ ಕರ್ತೃವು ಒಬ್ಬನೇ ಎಂಬುದನ್ನೂ, ದರ್ಶ-ಪೂರ್ಣಮಾಸದ ನಂತರ ಸೋಮಯಾಗವನ್ನು ಮಾಡಬೇಕೆಂಬುದಾಗಿ ಕಾಲವನ್ನೂ ತಿಳಿಸುತ್ತದೆ. ಇದಕ್ಕೆ ಸೂಚಕವಾದ ಅರ್ಥವಾದವೂ ಇದೆ.

---

* ಕೃ.ಯ. ವೇದ ಸಂಪುಟ ೧. ಭಾಗ ೩. ಪುಟ ೧೮೫.

'ಏಷ ವೈ ದೇವರಥೋ...... ಮವಸ್ಯತಿ' [ತೈ. ಸಂ. 2. 5. 6.]

ಎಂಬಲ್ಲಿ 'ಸವೆದಿರುವ ಮಾರ್ಗದಲ್ಲಿ ರಥವು ಸುಗಮವಾಗಿ ಸಂಚರಿಸುವಂತೆ ದರ್ಶ-ಪೂರ್ಣಮಾಸೇಷ್ಟಿಯನ್ನು ಮಾಡಿ ಸೋಮಯಾಗವನ್ನು ಮಾಡುವುದರಿಂದ ಸೋಮಾಂಗವಾಗಿ ಬರುವ ಪ್ರಾಯಣೀಯ ಮುಂತಾದ ಇಷ್ಟಿಗಳನ್ನು ಮಾಡಲು ಸುಗಮವಾಗುತ್ತದೆ' ಎಂದು ಸೂಚಿತವಾಗಿದೆ. ಆದುದರಿಂದ ಸೋಮಯಾಗವು ದರ್ಶ-ಪೂರ್ಣಮಾಸದ ಅಂಗವಲ್ಲ. ಅನುಷ್ಠಾನದ ಕಾಲವನ್ನು ಸೂಚಿಸಲು ಎರಡನ್ನೂ ಒಟ್ಟಿಗೇ ಶ್ರುತಿಯು ನಿರ್ದೇಶಿಸಿದೆ.

೨) ಸೋಮಯಾಗವನ್ನು ದರ್ಶ-ಪೂರ್ಣಮಾಸದ ಪೂರ್ವದಲ್ಲಿ ಮಾಡಬಹುದೇ? [ಜೈ.ಸೂ. 5.4]

'ದರ್ಶ-ಪೂರ್ಣಮಾಸಾಭ್ಯಾಮಿಷ್ಟ್ವಾ ಸೋಮೇನ ಯಜೇತ' ಎಂದು ವಚನ ವಿರುವುದರಿಂದ ದರ್ಶ-ಪೂರ್ಣಮಾಸೇಷ್ಟಿಗಳನ್ನು ಅನುಷ್ಠಿಸಿದ ನಂತರವೇ ಸೋಮಯಾಗ ವನ್ನು ಮಾಡಬೇಕು. ಇಲ್ಲಿನ ಪೂರ್ವಪಕ್ಷವಿದು.

ಇಲ್ಲಿಯ ಸಿದ್ಧಾಂತವು ಹೀಗಿದೆ : 'ಸೋಮೇನ ಯಕ್ಷ್ಯಮಾಣಃ ಅಗ್ನೀನಾದಧೀತ'

'ಯದ್ವೈವೈನಂ ಯಜ್ಞ ಉಪನಮೇತ್। ಅಥಾದಧೀತ।' [ತೈ.ಬ್ರಾ. 1.2]

[ಸೋಮಯಾಗವನ್ನು ಮಾಡುವವನು ಅಗ್ನ್ಯಾಧಾನ ಮಾಡಬೇಕು. ಸೋಮಯಾಗ ವನ್ನು ಮಾಡಬೇಕೆಂಬ ಇಚ್ಛೆಯು ಬಂದಾಗ ಅಗ್ನ್ಯಾಧಾನವನ್ನು ಮಾಡಬಹುದು. ಅದೂ ಯುಕ್ತವಾದ ಕಾಲವೇ.] ಎಂಬ ವಚನಗಳಿರುವುದರಿಂದ ಇಷ್ಟಿಯ ನಂತರವೇ ಸೋಮಯಾಗವೆಂಬ ಪೌರ್ವಾಪರ್ಯವು ಅನಿಯತ.

ಈ ವಿಚಾರವು ಜೈಮಿನಿಸೂತ್ರದ ಐದನೆಯ ಅಧ್ಯಾಯದ ನಾಲ್ಕನೆಯ ಪಾದದಲ್ಲಿದೆ. ಅಲ್ಲಿಯೇ ಇದಕ್ಕೆ ಸಂಬಂಧಿಸಿದ ಇನ್ನೊಂದು ವಿಚಾರವೂ ಇದೆ.

೩) ಬ್ರಾಹ್ಮಣನಿಗೆ ಆಧಾನವು ಸೋಮಯಾಗಪೂರ್ವಕವೇ? [ಜೈ.ಸೂ. 5.4]

ತ್ರೈವರ್ಣಿಕರಿಗೂ ಅಗ್ನ್ಯಾಧಾನದಲ್ಲಿ ಅಧಿಕಾರವಿರುವುದರಿಂದ ಕ್ಷತ್ರಿಯ ಮತ್ತು ವೈಶ್ಯರಿಗೆ ಇಷ್ಟಿಯ ನಂತರ ಆಧಾನವಾಗಬಹುದಾದರೂ ಬ್ರಾಹ್ಮಣನಿಗೆ ಸೋಮಪೂರ್ವಕ ಆಧಾನವೇ ನಿಯತ. ಏಕೆಂದರೆ ಶ್ರುತಿಯಲ್ಲಿ 'ಆಗ್ನೇಯೋ ವೈ ಬ್ರಾಹ್ಮಣೋ ದೇವತಯಾ

**ಸ ಸೋಮೇನೇಷ್ವಾ ಅಗ್ನೀಷೋಮೀಯೋ ಭವತಿ, ಯದೇವಾದಃ ಪೌರ್ಣಮಾಸಂ ಹವಿಃ ತತ್ ತರ್ಹ್ಯನುನಿರ್ವಪೇತ್ ತರ್ಹ್ಯುಭಯದೇವತೋ ಭವತಿ' [ಕಾಠಕ ಸಂಹಿತಾ 8 - 10]**
"ಬ್ರಹ್ಮನ ಮುಖದಿಂದ ಅಗ್ನಿಯೂ ಬ್ರಾಹ್ಮಣನೂ ಜನಿಸಿದರು. ಆದರಿಂದ ಬ್ರಾಹ್ಮಣನಿಗೆ ಅಗ್ನಿಯು ದೇವತೆ. ಬ್ರಾಹ್ಮಣನು ಸೋಮಯಾಗವನ್ನು ಮಾಡಿದ ಮೇಲೆ ಅವನಿಗೆ ಸೋಮನೂ ದೇವತೆಯಾಗುತ್ತಾನೆ. ಆದಕ್ಕೆ ತಕ್ಕಂತೆ ಪೂರ್ಣಮಾಸಯಾಗದಲ್ಲಿ ಅಗ್ನೀಷೋಮೀಯ ಹವಿಸ್ಸನ್ನು ದೇವತೆಗೆ ಕೊಡುವುದರಿಂದ ಬ್ರಾಹ್ಮಣನು ಅಗ್ನೀಷೋಮೀಯನಾಗುತ್ತಾನೆ." ಎಂದು ಹೇಳಿದೆ. ಮೇಲಿನ ವಾಕ್ಯದಲ್ಲಿ 'ಪೌರ್ಣಮಾಸಂ ಹವಿಃ' ಎಂಬುದು ದರ್ಶಯಾಗಕ್ಕೂ ಉಪಲಕ್ಷಣ. ಆದುದರಿಂದ ಅಗ್ನೀಷೋಮೀಯ ನಾದ ಮೇಲೆಯೇ ದರ್ಶ-ಪೂರ್ಣಮಾಸೇಷ್ಟಿಯನ್ನು ಮಾಡಬೇಕೆಂದು ತಿಳಿಯುವುದರಿಂದ ದರ್ಶ-ಪೂರ್ಣಮಾಸಗಳಿಗಿಂತಲೂ ಮೊದಲಿನ ಅಗ್ನ್ಯಾಧಾನ ಮಾಡುವಾಗಲೇ ಸೋಮಯಾಗವನ್ನು ಮಾಡಬೇಕೆಂದು ತಿಳಿಯುತ್ತದೆ. ಕ್ಷತ್ರಿಯ ಮತ್ತು ವೈಶ್ಯರಿಗೆ ಇಷ್ಟಿಪೂರ್ವಕಾಧಾನವೂ ಆಗಬಹುದು. ಸೋಮಪೂರ್ವಕ ಆಧಾನವೂ ಆಗಬಹುದು. ಇದು ಇಲ್ಲಿನ ಪೂರ್ವಪಕ್ಷ.

ಇಲ್ಲಿಯ ಸಿದ್ಧಾಂತವು ಹೀಗಿದೆ : ಶ್ರುತಿಯಲ್ಲಿರುವ 'ಪೌರ್ಣಮಾಸಂ'ಎಂಬುದು ಹವಿಸ್ಸಿಗೆ ವಿಶೇಷಣವಾಗಿದೆ. ಆದುದರಿಂದ ಪೂರ್ಣಮಾಸೇಷ್ಟಿಯಲ್ಲಿ ಬರುವ ಅಗ್ನೀಷೋಮೀಯಪುರೋಡಾಶದಿಂದ ಮಾಡುವ ಹವಿರ್ಯಾಗವನ್ನು ಮಾತ್ರ ಸೋಮಯಾಗದ ನಂತರ ಮಾಡಬೇಕು. ಅಲ್ಲಿಯವರೆಗೆ ಆಗ್ನೇಯ, ಉಪಾಂಶುಯಾಜ ಮುಂತಾದವುಗಳನ್ನು ಮಾಡಬೇಕೆಂದು ಅರ್ಥವಾಗುತ್ತದೆ. ಆದುದರಿಂದ ಕ್ಷತ್ರಿಯ-ವೈಶ್ಯ ರಂತೆಯೇ ಬ್ರಾಹ್ಮಣನಿಗೂ ಇಷ್ಟಿಪೂರ್ವಾಧಾನವೂ, ಸೋಮಪೂರ್ವಾಧಾನವೂ ಉಂಟು. ಪೂರ್ಣಮಾಸಯಾಗದ ಅಗ್ನೀಷೋಮೀಯ ಹವಿಸ್ಸನ್ನು ಮಾತ್ರ ಸೋಮಯಾಗದ ನಂತರ ಮಾಡಬೇಕು.

**೪) ಸೋಮಯಾಗದಲ್ಲಿ ಮನುಷ್ಯರಿಗೆ ದಿಗ್ವಿಧಿ ಇದೆಯೇ? [ಜೈ.ಸೂ. 3.4]**
**ಜ್ಯೋತಿಷ್ಟೋಮ ಪ್ರಕರಣದಲ್ಲಿ**

**"ಪ್ರಾಚೀನವಗ್ಂಶಂ ಕರೋತಿ ದೇವಮನುಷ್ಯಾ ದಿಶೋ ವ್ಯಭಜಂತ ಪ್ರಾಚೀಂ ದೇವಾ ದಕ್ಷಿಣಾ ಪಿತರಃ ಪ್ರತೀಚೀಂ ಮನುಷ್ಯಾ ಉದೀಚೀಗ್ಂ ರುದ್ರಾಃ"**

**[ತೈ.ಸಂ. 6.1.1]**

ಎಂಬ ವಚನವಿದೆ. ಇಲ್ಲಿ ದೇವತೆಗಳು ಮತ್ತು ಮನುಷ್ಯರು ದಿಕ್ಕುಗಳ ವಿಭಾಗವನ್ನು ಮಾಡಿಕೊಂಡರೆಂದೂ ಮನುಷ್ಯರಿಗೆ ಪಶ್ಚಿಮ ದಿಕ್ಕು ಎಂಬುದಾಗಿಯೂ ತಿಳಿಯುತ್ತದೆ. ಈ ವಚನವು ಅರ್ಥವಾದವೇ (ವಿಧಿಸ್ತಾವಕ) ಎಂಬ ಸಂಶಯ ಬಂದರೆ ಇದು ಭೂತಾರ್ಥವಾದವಾದುದರಿಂದ, ಈ ಅರ್ಥವಾದಕ್ಕೆ ಸ್ವಾರ್ಥದಲ್ಲಿಯೂ ತಾತ್ಪರ್ಯವಿರುವುದರಿಂದ, ಈ ಅರ್ಥವಾದದಿಂದ ಮನುಷ್ಯರಿಗೆ ಪಶ್ಚಿಮದಿಕ್ಕಿನ ವಿಧಿಯಿದೆಯೆಂದು ತಿಳಿಯುತ್ತದೆ. ಅಲ್ಲದೆ ದೇವಾದಿಗಳಿಗೆ ದಿಗ್ವಿಭಾಗವನ್ನು ಹೇಳಲು ಸಾಧ್ಯವಿಲ್ಲ. ಮನುಷ್ಯರಿಗೆ ಈ ಪುರಾಕಲ್ಪಾರ್ಥವಾದದಿಂದ ದಿಗ್ವಿಧಿಯನ್ನು ಹೇಳಬೇಕಾಗುತ್ತದೆ. ಪುರಾಕಲ್ಪವೆಂದರೆ '**ಪೂರ್ವಪುರುಷಾಚರಿತತ್ವಾಭಿಧಾನಮ್**' ಅಂದರೆ ಹಿಂದಿನವರು ಈ ರೀತಿ ಮಾಡಿದರು ಎಂದು ತಿಳಿಸುವಿಕೆ. ಆದುದರಿಂದ '**ಪ್ರಾಚೀನವಗ್ಂಶಂ**'ಎಂಬ ವಚನದಿಂದ ಮನುಷ್ಯರಿಗೆ ಪಶ್ಚಿಮದಿಗ್ವಿಧಿಯೆಂದು ತಿಳಿಯುತ್ತದೆ. ಇದು ಇಲ್ಲಿನ ಪೂರ್ವಪಕ್ಷ.

ಇಲ್ಲಿಯ ಸಿದ್ಧಾಂತವು ಹೀಗಿದೆ : '**ಪ್ರಾಚೀನವಗ್ಂಶಂ**'ಎಂಬ ಈ ವಾಕ್ಯದಿಂದ ಯಾಗಶಾಲೆಯ ಒಂದು ಮಂಟಪಕ್ಕೆ ಬಿದಿರುಗಳನ್ನು ಪೂರ್ವಾಗ್ರವಾಗಿ ಹಾಕಬೇಕು ಎಂದು ವಿಧಿಯಿದೆ. ಪೂರ್ವದಿಕ್ಕು ದೇವತೆಗಳಿಗೆ ಸಂಬಂಧಿಸಿರುವುದರಿಂದ ಇದು ಪ್ರಶಸ್ತವೆಂಬುದಾಗಿ ಅರ್ಥವಾದವು ಹೇಳುತ್ತದೆ. ಇಲ್ಲಿ ಮನುಷ್ಯರಿಗೆ ಪಶ್ಚಿಮ ದಿಗ್ವಿಧಿಯಿದೆಯೆಂದು ಹೇಳುವುದಾದರೆ ವಾಕ್ಯಭೇದವು ಒದಗುತ್ತದೆ. ಆದುದರಿಂದ '**ನಿವೀತಂ ಮನುಷ್ಯಾಣಾಂ**' ಎಂಬ ವಾಕ್ಯದಲ್ಲಿ ಕೇವಲ ಉಪವೀತವಿಧಿಯೆಂದು ಹೇಳಿರುವಂತೆ ಇಲ್ಲಿಯೂ '**ಪ್ರಾಚೀನವಂಶಂ ಕರೋತಿ**' ಎಂಬುದು ಮಾತ್ರ ವಿಧಿ. '**ಪ್ರತೀಚೀಂ ಮನುಷ್ಯಾಃ**' ಎಂಬ ವಚನವು ಸಾಯಂಸಂಧ್ಯೆಯಲ್ಲಿ- ಅರ್ಘ್ಯದಾನ ಜಪಾದಿಗಳಲ್ಲಿ ಪಶ್ಚಿಮದಿಕ್ಕನ್ನು ಹೇಳಿರುವುದರಿಂದ ಪ್ರಕೃತದಲ್ಲಿ-ಸಮನ್ವಯವನ್ನು ಪಡೆಯುತ್ತದೆ. ಆದುದರಿಂದ ಸೋಮಯಾಗದಲ್ಲಿ ಮನುಷ್ಯರಿಗೆ ದಿಗ್ವಿಧಿಯಿಲ್ಲ.

**೫) ವಪನಾದಿಗಳು ಯಾವುದಕ್ಕೆ ಉಪಕಾರಕಗಳು?** **[ಜೈ.ಸೂ. 3.7]**

ಜ್ಯೋತಿಷ್ಟೋಮಪ್ರಕರಣದಲ್ಲಿ ಕೇಶಶ್ಮಶ್ರುವಪನ, ಪಯೋವ್ರತ ಮೊದಲಾದ ಯಜಮಾನಸಂಸ್ಕಾರಗಳು ಹೇಳಲ್ಪಟ್ಟಿವೆ. ಗ್ರಹ (ಪಾತ್ರವಿಶೇಷ)ಗಳಿಂದ ಸೋಮ ರಸವನ್ನು ಅಗ್ನಿಯಲ್ಲಿ ಹೋಮ ಮಾಡುವುದು ಸೋಮಯಾಗದಲ್ಲಿ ಮುಖ್ಯವಾದುದು (ಪ್ರಧಾನ). ಅಗ್ನೀಷೋಮೀಯಪಶುಯಾಗ, ಉಪಸತ್ತು ಮೊದಲಾದವುಗಳು ಅಂಗಗಳು. ವಪನ ಮೊದಲಾದವು ಮುಖ್ಯ ಮತ್ತು ಅಂಗ ಇವೆಲ್ಲಕ್ಕೂ ಉಪಕಾರಕಗಳೇ? ಅಥವಾ ಮುಖ್ಯಕ್ಕೆ ಮಾತ್ರ ಉಪಕಾರಕಗಳೇ? ಎಂಬುದು ಇಲ್ಲಿನ ಸಂಶಯ.

ಇಲ್ಲಿಯ ಪೂರ್ವಪಕ್ಷವು ಹೀಗಿದೆ; ಯಜಮಾನನು ಪ್ರಧಾನಕ್ಕೆ ಹೇಗೆ ಕರ್ತನೋ ಹಾಗೆಯೇ ಅಂಗಗಳಿಗೂ ಕರ್ತೃವಾಗಿದ್ದಾನೆ. ಒಬ್ಬನೇ ಎಲ್ಲವನ್ನೂ ಮಾಡಲು ಸಾಧ್ಯವಿಲ್ಲದುದರಿಂದ ಋತ್ವಿಜರನ್ನು ಸಹಾಯಕರನ್ನಾಗಿ ತೆಗೆದುಕೊಂಡರೂ ಮುಖ್ಯಕರ್ತನು ಯಜಮಾನನೇ. ವಪನಾದಿಗಳು ಯಜಮಾನನಿಗೆ ಸಂಸ್ಕಾರಕಗಳು. ಯಜಮಾನನು ಪ್ರಧಾನ ಮತ್ತು ಅಂಗಗಳು ಎರಡಕ್ಕೂ ಕರ್ತನಾದುದರಿಂದ ಅವನಿಗೆ ಸಂಸ್ಕಾರಕಗಳಾದವುಗಳು ಪ್ರಧಾನ ಮತ್ತು ಅಂಗ ಎರಡಕ್ಕೂ ಉಪಕಾರಕಗಳೇ. ಸಾಂಗಪ್ರಧಾನಕ್ಕೇ ಅವು ಸಂಬಂಧಿಸಿವೆ.

ಇಲ್ಲಿಯ ಸಿದ್ಧಾಂತವು ಹೀಗಿದೆ ; ಯಜಮಾನನಲ್ಲಿ ಕರ್ತೃತ್ವವು ಇದೆ. ಫಲಭೋಕ್ತೃತ್ವ (ಫಲದ ಅನುಭವ)ವೂ ಇದೆ. ಇವೆರಡರಲ್ಲಿ ಅವನ ಕ್ರಿಯಾನಿಷ್ಪತ್ತಿಯು ಕಾಣುತ್ತದೆ. ಫಲಭೋಗವು ಕಾಣುವುದಿಲ್ಲ. ವಪನಾದಿಗಳಿಂದ ಉಂಟಾಗುವ ಸಂಸ್ಕಾರವೂ ಅದೃಷ್ಟವೇ. ಆದುದರಿಂದ ಅದೃಷ್ಟವಾದ ಫಲಭೋಗಕ್ಕೆ ಸಾಧನವಾದ ಪ್ರಧಾನಯಾಗದಲ್ಲಿಯೇ ವಪನಾದಿಗಳಿಂದ ಉಂಟಾದ ಅದೃಷ್ಟವಾದ ಸಂಸ್ಕಾರವು ಸಂಬಂಧಿಸುತ್ತದೆ. ದೃಷ್ಟವಾದ ಕರ್ತೃತ್ವಾಂಶವುಳ್ಳವರಲ್ಲಿ ಅದೃಷ್ಟದ ಅಂಶವು ಸೇರುವುದಿಲ್ಲ. ಏಕೆಂದರೆ ವಪನಾದಿಸಂಸ್ಕಾರವನ್ನು ಪಡೆಯದ ಋತ್ವಿಜರೂ ಸಹ ಯಾಗಕ್ಕೆ ಸಂಬಂಧಿಸಿದ ಕಾರ್ಯಗಳನ್ನು ಮಾಡುತ್ತಾರೆ. ಯಾಗಕ್ಕೆ ಬೇಕಾದ ಧಾನ್ಯವನ್ನು ರೈತರೂ ಬೆಳೆಯುತ್ತಾರೆ. ಆದುದರಿಂದ ಯಜಮಾನನ ಕರ್ತೃತ್ವಾಂಶದಲ್ಲಿ ವಪನಾದಿಗಳು ಉಪಕಾರಕಗಳಲ್ಲ. ಭೋಕ್ತೃತ್ವಾಂಶದಲ್ಲಿ ಮಾತ್ರ. ಆದುದರಿಂದ ವಪನಾದಿಗಳು ಪ್ರಧಾನಕ್ಕೆ ಉಪಕಾರಕಗಳೇ ಹೊರತು ಅಂಗಗಳಿಗಲ್ಲ. ವಚನವಿದ್ದರೆ ಮಾತ್ರ ಸಾಂಗಪ್ರಧಾನಕ್ಕೆ ಸಂಸ್ಕಾರಗಳು ಸಂಬಂಧಿಸುತ್ತವೆಯೆಂದು ಹೇಳಬಹುದು. ಪ್ರಕರಣವು ಪ್ರಧಾನಕ್ಕೇ ಹೊರತು ಅಂಗಗಳಿಗಲ್ಲ.

೬) ಅಧ್ವರ್ಯುವಿಗೂ ವಪನಾದಿಗಳುಂಟೇ? [ಜೈ.ಸೂ. 3. 8.]

ಸೋಮಯಾಗದ ದೀಕ್ಷಾಂಗವಾದ ವಪನಾದಿಗಳು ಯಜಮಾನನಂತೆಯೇ ಅಧ್ವರ್ಯುವಿಗೂ ಉಂಟೇ? ಇದು ಸಂಶಯ.

ಅಧ್ವರ್ಯುವೇದ(ಯಜುರ್ವೇದ)ವಿಹಿತವಾದ ಈ ಸಂಸ್ಕಾರಗಳು ಅಧ್ವರ್ಯುವಿಗೇ ಎಂಬುದು ಉಚಿತ. ಅಲ್ಲದೆ ಅಧ್ವರ್ಯುವಿಗೆ ವಪನಾದಿಸಂಸ್ಕಾರಾರ್ಹತೆಯೂ ಇದೆ. ಇದು ಇಲ್ಲಿನ ಪೂರ್ವಪಕ್ಷ.

ಇಲ್ಲಿಯ ಸಿದ್ಧಾಂತವು ಹೀಗಿದೆ ; "ಕೇಶ ಮತ್ತು ಶ್ಮಶ್ರುವಪನದಿಂದ ಅಶುದ್ಧವಾದ

ಕೇಶಶ್ಮಶ್ರುರೂಪವಾದ ತ್ವಚ(ಚರ್ಮ)ವನ್ನು ಕಳೆದುಕೊಂಡು ಯಜಮಾನನು ಯಜ್ಞಾರ್ಹನಾಗುತ್ತಾನೆ, ಪವಿತ್ರನಾಗುತ್ತಾನೆ"ಎಂದು ಅರ್ಥವಾದದಲ್ಲಿದೆ. **[ತೈ. ಸಂ. 6.1.1.]** ಅಲ್ಲದೆ ಯಜ್ಞವನ್ನು ಅನುಷ್ಠಿಸುವವನು ಯಜಮಾನನಾದುದರಿಂದ ಅಧ್ವರ್ಯುವಿನ ವಪನದಿಂದ ಯಜಮಾನನು ಶುದ್ಧನಾಗುವುದು ಹೇಗೆ? ಆದುದರಿಂದ ಹೀಗೆ ಸಂಸ್ಕಾರಗಳನ್ನು ಪಡೆದು ಪರಿಶುದ್ಧನಾದ ಯಜಮಾನನು ಯಜ್ಞಸಂಬಂಧಿಯಾದ ಕಾರ್ಯಗಳನ್ನು ಮಾಡುವುದಕ್ಕಾಗಿ ಋತ್ವಿಜರನ್ನು ಆಯ್ಕೆ ಮಾಡಿಕೊಳ್ಳುತ್ತಾನೆ. ಋತ್ವಿಜರು ಕಾರ್ಯಕಾರಿಗಳು. ಅವರು ಸಂಸ್ಕಾರ್ಯರಲ್ಲ. ರೋಗಿಯಾದ ಒಡೆಯನು ಔಷಧವನ್ನು ತರಲು ಸೇವಕನನ್ನು ಕಳಿಸಬಹುದು. ಸೇವಕನು ಔಷಧವನ್ನು ತರುವನೇ ಹೊರತು ಕುಡಿಯುವುದಿಲ್ಲ. ಅವನು ಕುಡಿದರೆ ಯಜಮಾನನಿಗೆ ರೋಗಪರಿಹಾರವೂ ಆಗುವುದಿಲ್ಲ. ಒಂದು ವೇಳೆ **'ಲೋಹಿತೋಷ್ಣೀಷಾಃ ಋತ್ವಿಜಃ ಪ್ರಚರಂತಿ'** (ಕೆಂಬಣ್ಣದ ಶಿರೋವೇಷ್ಟನ (ರುಮಾಲು)ವನ್ನು ಧರಿಸಿದ ಋತ್ವಿಜರು ಕರ್ಮಾನುಷ್ಠಾನವನ್ನು ಮಾಡುತ್ತಾರೆ] ಮುಂತಾದ ವಾಕ್ಯಗಳಿದ್ದರೆ ಅಲ್ಲಿ ಋತ್ವಿಜರಿಗೂ ಸಂಸ್ಕಾರವಿರುತ್ತದೆ.

**೭) 'ಯಸ್ಯ ಪರ್ಣಮಯೀ........'ಮುಂತಾದವುಗಳು ಕ್ರತ್ವರ್ಥವಿಧಿಯೇ? ಪುರುಷಾರ್ಥವಿಧಿಯೇ? [ಜೈ.ಸೂ. 4.3]**

**'ಯಸ್ಯ ಪರ್ಣಮಯೀ ಜುಹೂರ್ಭವತಿ ನ ಪಾಪಗ್ಂ ಶ್ಲೋಕಗ್ಂ ಶೃಣೋತಿ'**
**[ತೈ.ಸಂ. 3.5.7]**

[ಮುತ್ತುಗದ ಮರದಿಂದ ಜುಹೂವನ್ನು ಮಾಡಿದರೆ ಅಪಕೀರ್ತಿಯನ್ನು ಪಡೆಯುವುದಿಲ್ಲ],

**'ಯದಾಜ್ಯೇ ಚಕ್ಷುರೇವ ಭ್ರಾತೃವ್ಯಸ್ಯ ವೃಙ್ಕ್ತೇ' [ತೈ. ಸಂ. 6.1.1]**

[ಯಜಮಾನನ ಕಣ್ಣಿಗೆ ಕಾಡಿಗೆಯನ್ನು ಹಚ್ಚುವುದರಿಂದ ವೈರಿಯ ಕಣ್ಣು ನಾಶವಾಗುತ್ತದೆ],

**'ಯತ್ಪ್ರಯಾಜಾನೂಯಾಜಾ ಇಜ್ಯಂತೇ ವರ್ಮೈವ ತದ್ಯಜ್ಞಾಯ ಕ್ರಿಯತೇ ವರ್ಮ ಯಜಮಾನಾಯ ಭ್ರಾತೃವ್ಯಾಭಿಭೂತ್ಯೈ [ತೈ.ಸಂ. 2.6.1]**

[ಪ್ರಯಾಜ, ಅನೂಯಾಜಗಳನ್ನು ಮಾಡುವುದರಿಂದ ಯಜ್ಞಕ್ಕೂ, ಯಜಮಾನನಿಗೂ ರಕ್ಷಣೆಯ ಕವಚವು ಉಂಟಾಗಿ ಶತ್ರುಪರಾಜಯವುಂಟಾಗುತ್ತದೆ] ಎಂಬ ವಾಕ್ಯಗಳು ಶ್ರುತಿಯಲ್ಲಿವೆ. ಇವು ಪುರುಷಾರ್ಥವಿಧಿಗಳೇ? [ಕ್ರತುವನ್ನು ಅನುಷ್ಠಾನ ಮಾಡುವವನಿಗೆ ಫಲವನ್ನು ತಿಳಿಸುತ್ತವೆಯೇ?] ಅಥವಾ ಕ್ರತ್ವರ್ಥವಿಧಿಗಳೇ? [ಕ್ರತ್ವರ್ಥವಿಧಿಗಳಿಗೆ ಪ್ರತ್ಯೇಕ ಫಲವಿರುವುದಿಲ್ಲ. ಪ್ರಧಾನಫಲವೇ ಅವಕ್ಕೂ ಫಲ.] ಇದು ಸಂಶಯ.

ಇಲ್ಲಿಯ ಪೂರ್ವಪಕ್ಷವು ಹೀಗಿದೆ : ಸ್ಪಷ್ಟವಾಗಿ ಇಂತಹ ಫಲವು ಉಂಟಾಗುತ್ತದೆಯೆಂದು ಶ್ರುತಿಯೇ ಹೇಳುತ್ತಿರುವುದರಿಂದ ಈ ವಿಧಿಗಳು ಪುರುಷಾರ್ಥವಿಧಿಗಳೇ ಹೊರತು ಕ್ರತ್ವರ್ಥವಿಧಿಗಳಲ್ಲ.

ಇಲ್ಲಿಯ ಸಿದ್ಧಾಂತವು ಹೀಗಿದೆ ; ವಿಧಿಯನ್ನು ಬೋಧಿಸುವ 'ವಿಧಿಲಿಙ್' ಮುಂತಾದವು ಈ ವಾಕ್ಯಗಳಲ್ಲಿಲ್ಲ. ವರ್ತಮಾನ ಕಾಲದ ಲಟ್ ಲಕಾರದ 'ನ ಶೃಣೋತಿ' 'ವೃಙ್ಕ್ತೇ' 'ಕ್ರಿಯತೇ' ಇಂತಹ ಕ್ರಿಯಾಪದಗಳೇ ಈ ವಾಕ್ಯಗಳಲ್ಲಿವೆ. ಆದುದರಿಂದ ಯಾವುದೇ ಒಂದು ಕ್ರತುಪ್ರಕರಣದಲ್ಲಿ ಇಲ್ಲದೆ ಹೇಳಲ್ಪಟ್ಟ (ಅನಾರಭ್ಯಾಧೀತ) ಜುಹೂವು ಪರ್ಣಮಯವಾಗಿರಬೇಕೆಂಬ ವಿಧಿಯು ಜುಹೂವಿನ ಮೂಲಕ ಕ್ರತ್ವಂಗವಾಗುತ್ತದೆ. ಸೋಮಯಾಗಪ್ರಕರಣದ ಆಂಜನ, ದರ್ಶ-ಪೂರ್ಣಮಾಸ ಪ್ರಕರಣದ ಪ್ರಯಾಜಾನೂಯಾಜಗಳು ಆಯಾ ಕ್ರತುವಿಗೆ ಅಂಗವಾಗುತ್ತವೆ. ಈ ವಾಕ್ಯಗಳು ಪ್ರಶಂಸಾಪರವಾದ ಅರ್ಥವಾದಗಳು ಮಾತ್ರವೇ ಹೊರತು ಫಲಾರ್ಥವಾಗಿ ವಿಧಾಯಕಗಳಲ್ಲ.

೮) 'ಅಚ್ಛಿದ್ರೇಣ.........' ಎಂಬ ಮಂತ್ರವು ಯಾವುದಕ್ಕೆ ಅನುಷಂಗ?

[ಜೈ.ಸೂ. 2.1.]

ಜ್ಯೋತಿಷ್ಟೋಮದ ದೀಕ್ಷಾಪ್ರಕರಣದಲ್ಲಿ ಈ ಮಂತ್ರಗಳಿವೆ.

'ಚಿತ್ಪತಿಸ್ತ್ವಾ ಪುನಾತು ವಾಕ್ಪತಿಸ್ತ್ವಾ ಪುನಾತು ದೇವಸ್ತ್ವಾ ಸವಿತಾ

ಪುನಾತ್ವಚ್ಛಿದ್ರೇಣ ಪವಿತ್ರೇಣ ವಸೋಃ ಸೂರ್ಯಸ್ಯ ರಶ್ಮಿಭಿಃ [ತೈ.ಸಂ.1.2.1.]

ಈ ಮಂತ್ರಗಳಲ್ಲಿ ಕೊನೆಯಲ್ಲಿರುವ

'ಅಚ್ಛಿದ್ರೇಣ ಪವಿತ್ರೇಣ ವಸೋಃ ಸೂರ್ಯಸ್ಯ ರಶ್ಮಿಭಿಃ'

ಎಂಬ ಭಾಗವು ಕೊನೆಯ ಮಂತ್ರಕ್ಕೆ ಮಾತ್ರವೇ ಸಂಬಂಧಿಸಬೇಕೇ? ಅಥವಾ ಮೊದಲನೆಯ ಮತ್ತು ಎರಡನೆಯ ಮಂತ್ರಗಳಿಗೂ ಅನುಷಂಗ ಹೊಂದಿ ಸಂಬಂಧಿಸಬೇಕೆ? ಎಂದು ಸಂಶಯ.

ಇಲ್ಲಿಯ ಪೂರ್ವಪಕ್ಷವು ಹೀಗಿದೆ ;

'ಚಿತ್ಪತಿಸ್ತ್ವಾ ಪುನಾತು' ವಾಕ್ಪತಿಸ್ತ್ವಾ ಪುನಾತು'

ಎಂಬಲ್ಲಿ 'ಪುನಾತು' ಎಂಬ ಕ್ರಿಯಾಪದವನ್ನು ಪ್ರತ್ಯೇಕವಾಗಿ ಹೊಂದಿ ನಿರಾಕಾಂಕ್ಷವಾದ ಈ ವಾಕ್ಯಗಳಿಗೆ 'ಅಚ್ಛಿದ್ರೇಣ.............. ರಶ್ಮಿಭಿಃ' ಎಂಬ ಭಾಗದ ಅನುಷಂಗವು ಬೇಕಾಗಿಲ್ಲ.

ಇಲ್ಲಿಯ ಸಿದ್ಧಾಂತವು ಇದು : 'ಚಿತ್ಪತಿಸ್ತ್ವಾ.......' 'ವಾಕ್ಪತಿಸ್ತ್ವಾ......'; ಎಂಬ ವಾಕ್ಯಗಳಿಗೆ ಆಕಾಂಕ್ಷೆಯಿಲ್ಲದಿರಬಹುದು. ಆದರೆ 'ಅಚ್ಛಿದ್ರೇಣ' 'ರಶ್ಮಿಭಿಃ' ಮುಂತಾದ ಕರಣವಿಭಕ್ತಿ(ತೃತೀಯಾವಿಭಕ್ತಿ)ಯಿಂದ ಕೂಡಿದ ಪದಗಳಿಗೆ ಕ್ರಿಯಾಪದದ ಅಪೇಕ್ಷೆಯಿದೆ. ಮೂರನೆಯ ಮಂತ್ರದಲ್ಲಿರುವ 'ಪುನಾತು' ಎಂಬ ಕ್ರಿಯಾಪದದೊಡನೆ ಈ ಕರಣಪದಗಳು ಸಂಬಂಧಿಸುತ್ತವೆ. ಕೊನೆಯ ಮಂತ್ರದಲ್ಲಿರುವಂತೆಯೇ ಮೊದಲಿನ ಎರಡು ಮಂತ್ರಗಳಲ್ಲಿಯೂ ಸಹ 'ಪುನಾತು' ಎಂಬ ಕ್ರಿಯಾಪದವಿದೆ. ಆದುದರಿಂದ ಎಲ್ಲ ಮೂರು ಮಂತ್ರಗಳಿಗೂ 'ಅಚ್ಛಿದ್ರೇಣ.......ರಶ್ಮಿಭಿಃ' ಎಂಬುದರ ಅನುಷಂಗವಿದೆ.

ಮೊದಲನೆಯ ಈ ಅನುವಾಕದಲ್ಲಿ ಪ್ರಾಚೀನವಂಶಪ್ರವೇಶವನ್ನು ಹೇಳಿದ್ದಾಯಿತು. ಯಾಗಶಾಲೆಗೆ ಬಂದ ಯಜಮಾನನ ದೇಹಶುದ್ಧಿಗಾಗಿ ದೀಕ್ಷಾನಿಯಮರೂಪವಾದ ತಪಸ್ಸನ್ನು ಎರಡನೆಯ ಅನುವಾಕದಲ್ಲಿ ಹೇಳಲಾಗಿದೆ. ದೀಕ್ಷಣೀಯೇಷ್ಟಿಯಲ್ಲಿ ಅತಿದೇಶದಿಂದ ಆಧ್ವರ್ಯವಮಂತ್ರಗಳೂ, ಕ್ರಿಯೆಗಳೂ ಬರುತ್ತವೆ. ವಿಶೇಷವಾದ ದೀಕ್ಷಾಹುತಿ ಮುಂತಾದವುಗಳ ಮಂತ್ರಗಳು ಮುಂದಿನ ಅನುವಾಕದಲ್ಲಿ ಹೇಳಲ್ಪಟ್ಟಿವೆ.

---

## ॥ ದ್ವಿತೀಯೋऽನುವಾಕಃ ॥

ಆಕೂತ್ಯೈ ಪ್ರಯುಜೇऽಗ್ನಯೇ ಸ್ವಾಹಾ
ಮೇಧಾಯೈ ಮನಸೇऽಗ್ನಯೇ ಸ್ವಾಹಾ ದೀಕ್ಷಾಯೈ

---

ಆಕೂತ್ಯಾ ಇತ್ಯಾ - ಕೂತ್ಯೈ । ಪ್ರಯುಜ ಇತಿ ಪ್ರ-ಯುಜೇ। ಅಗ್ನಯೇ। ಸ್ವಾಹಾ। ಮೇಧಾಯೈ। ಮನಸೇ। ಅಗ್ನಯೇ। ಸ್ವಾಹಾ। ದೀಕ್ಷಾಯೈ।

---

| ಮಂತ್ರ | ವಿನಿಯೋಗ |
|---|---|
| ಆಕೂತ್ಯೈ............ಸ್ವಾಹಾ | ಆಜ್ಯಪಾತ್ರೆಯಿಂದ ತುಪ್ಪವನ್ನು |
| ಮೇಧಾಯೈ..........ಸ್ವಾಹಾ | ಸ್ರುವದಿಂದ ತೆಗೆದುಕೊಂಡು |
| ದೀಕ್ಷಾಯೈ..........ಸ್ವಾಹಾ | ನಾಲ್ಕು ಬಾರಿ ಹೋಮ |

---

ಆಕೂತ್ಯೈ = [ಯಜ್ಞವನ್ನು ಮಾಡುವೆನೆಂಬ] ಮಾನಸಸಂಕಲ್ಪ ಪರಿಪೂರ್ತಿಗಾಗಿ; ಪ್ರಯುಜೇ = [ವಿಘ್ನವಿಲ್ಲದಂತೆ ನನ್ನನ್ನು] ಪ್ರೇರಿಸುವ; ಅಗ್ನಯೇ = ಅಗ್ನಿದೇವನಿಗೆ; ಸ್ವಾಹಾ = [ಈ ಆಜ್ಯದ್ರವ್ಯವು] ಹುತವಾಗಲಿ; +ಮೇಧಾಯೈ = ಫಲಸಾಧನಗಳ ಧಾರಣಾಶಕ್ತಿರೂಪವಾದ ಮೇಧೆಗಾಗಿ; (ಮೇಧಾಸಿದ್ಧಿಗಾಗಿ) ಮನಸೇ = ಮನೋಭಿಮಾನಿ ದೇವತೆಯಾದ; ಅಗ್ನಯೇ = ಅಗ್ನಿದೇವನಿಗೆ; ಸ್ವಾಹಾ = [ಇದು (ಆಜ್ಯ)] ಹುತವಾಗಲಿ; +ದೀಕ್ಷಾಯೈ = [ವ್ರತನಿಯಮರೂಪವಾದ] ದೀಕ್ಷೆಯ ಸಿದ್ಧಿಗಾಗಿ;

---

ಯಜ್ಞವನ್ನು ಮಾಡುವೆನೆಂಬ ನನ್ನ ಮನಸ್ಸಿನ ಸಂಕಲ್ಪವು ಪೂರ್ಣವಾಗುವಂತೆ ನನ್ನನ್ನು ಪ್ರೇರಿಸುವ ಅಗ್ನಿದೇವನಿಗೆ ಈ ಆಜ್ಯದ್ರವ್ಯವು ಹುತವಾಗಲಿ. ಯಾಗನಿರ್ವೃತಿಗೆ ತಕ್ಕ ಮೇಧಾಶಕ್ತಿಯ ಸಿದ್ಧಿಗಾಗಿ ಮನೋಭಿಮಾನದೇವತೆಯಾದ ಅಗ್ನಿದೇವನಿಗೆ ಈ

**ತಪಸೇಽಗ್ನಯೇ ಸ್ವಾಹಾ ಸರಸ್ವತ್ಯೈ ಪೂಷ್ಣೇಽಗ್ನಯೇ**

**ಸ್ವಾಹಾಽಽಪೋ ದೇವೀರ್ಬೃಹತೀರ್ವಿಶ್ವಶಂಭುವೋ**

---

ತಪಸೇ। ಅಗ್ನಯೇ। ಸ್ವಾಹಾ। ಸರಸ್ವತ್ಯೈ। ಪೂಷ್ಣೇ। ಅಗ್ನಯೇ। ಸ್ವಾಹಾ। ಆಪಃ। ದೇವೀಃ। ಬೃಹತೀಃ। ವಿಶ್ವಶಂಭುವ ಇತಿ ವಿಶ್ವ-ಶಂಭುವಃ।

---

| ಮಂತ್ರ | ವಿನಿಯೋಗ |
| --- | --- |
| ಸರಸ್ವತ್ಯೈ..........ಸ್ವಾಹಾ। | ಹೋಮ ಮಾಡಲು; ಇವು ದೀಕ್ಷಾಹುತಿ ಮಂತ್ರಗಳು. |

---

ತಪಸೇ = [ನನ್ನ ಶರೀರದ] ತಪೋಭಿಮಾನದೇವತೆಯಾದ; ಅಗ್ನಯೇ = ಅಗ್ನಿದೇವನಿಗೆ; ಸ್ವಾಹಾ = [ಇದು] ಹುತವಾಗಲಿ; ಸರಸ್ವತ್ಯೈ = [ಮಂತ್ರೋಚ್ಚಾರಣಶಕ್ತಿರೂಪ] ವಾಕ್ಸಿದ್ಧಿಗಾಗಿ; ಪೂಷ್ಣೇ = [ವಾಗಿಂದ್ರಿಯಕ್ಕೆ] ಪೋಷಕನಾದ; ಅಗ್ನಯೇ = [illegible]ನಿಗೆ; ಸ್ವಾಹಾ = [ಇದು]ಹುತವಾಗಲಿ; ದೇವೀಃ = [ವೃಷ್ಟಿರೂಪವಾಗಿ] ದ್ಯುಲೋಕದಿಂದ ಬಂದಿರುವ; ಬೃಹತೀಃ = ಬಹಳವಾಗಿರುವ; ವಿಶ್ವಶಂಭುವಃ = [ಸಸ್ಯಪೋಷಣೆಯಿಂದ] ಲೋಕಕ್ಕೆ ಸುಖವನ್ನುಂಟುಮಾಡುವ; ಆಪಃ = ಜಲದೇವತೆಯರೇ! [ನೀವು]

---

ಆಜ್ಯದ್ರವ್ಯವು ಹುತವಾಗಲಿ. ಯಾಗದ ಫಲವು ಸಿದ್ಧಿಸಬೇಕಾದರೆ ದೀಕ್ಷಾದಿಗಳೂ, ಪಯೋವ್ರತಾದಿನಿಯಮಗಳೂ ಆವಶ್ಯಕ. ಅಂತಹ ದೀಕ್ಷಾಸಿದ್ಧಿಗಾಗಿ ಶಾರೀರತಪಸ್ಸಿನ ಅಧಿದೇವತೆಯಾದ ಅಗ್ನಿಗೆ ಈ ಆಜ್ಯದ್ರವ್ಯವು ಹುತವಾಗಲಿ. ಮಂತ್ರೋಚ್ಚಾರಣಶಕ್ತಿಯೇ ಸರಸ್ವತಿ. ಸರಿಯಾಗಿ ಮಂತ್ರವನ್ನು ಉಚ್ಚರಿಸದಿದ್ದರೆ ಯಾಗದ ಫಲವು ಸಿದ್ಧಿಸುವುದಿಲ್ಲ. ಆ ಸರಸ್ವತಿಯು (ವಾಕ್ಕಿನ) ಸಿದ್ಧಿಗಾಗಿ ವಾಗಿಂದ್ರಿಯ ಪೋಷಕನಾದ ಅಗ್ನಿಗೆ ಈ ದ್ರವ್ಯವು ಹುತವಾಗಲಿ.

ದ್ಯುಲೋಕದಿಂದ ವೃಷ್ಟಿರೂಪವಾಗಿ ಭೂಮಿಗೆ ಬಂದು ಎಲ್ಲೆಲ್ಲಿಯೂ ವ್ಯಾಪಿಸಿ,

ದ್ಯಾವಾಪೃಥಿವೀ ಉರ್ವಂತರಿಕ್ಷಂ ಬೃಹಸ್ಪತಿರ್ನೋ

ಹವಿಷಾ ವೃಧಾತು ಸ್ವಾಹಾ

---

ದ್ಯಾವಾಪೃಥಿವೀ ಇತಿ ದ್ಯಾವಾ - ಪೃಥಿವೀ। ಉರು । ಅಂತರಿಕ್ಷಮ್ । ಬೃಹಸ್ಪತಿಃ ।

ನಃ। ಹವಿಷಾ। ವೃಧಾತು। ಸ್ವಾಹಾ।

---

| ಮಂತ್ರ | ವಿನಿಯೋಗ |
|---|---|
| ಆಪೋ...........ಸ್ವಾಹಾ। | ತುಪ್ಪವನ್ನು ಸ್ರುಕ್ಕಿನಿಂದ ತೆಗೆದುಕೊಂಡು ಐದನೆಯ ಹೋಮವನ್ನು ಮಾಡಲು. |

---

**ನಃ** = ನಮ್ಮ; **ಹವಿಷಾ** = ಹವಿಸ್ಸಿನಿಂದ; [ವರ್ಧಧ್ವಮ್ = ವೃದ್ಧಿ ಹೊಂದಿರಿ] **ದ್ಯಾವಾಪೃಥಿವೀ** = ದ್ಯುಲೋಕ ಭೂಲೋಕಗಳು; **ನಃ ಹವಿಷಾ** [ವರ್ಧೇತಾಮ್] =ನಮ್ಮ ಹವಿಸ್ಸಿನಿಂದ ವೃದ್ಧಿ ಹೊಂದಲಿ; **ಉರು** = ವಿಸ್ತೀರ್ಣವಾದ; **ಅಂತರಿಕ್ಷಮ್** [ಚ] = ಅಂತರಿಕ್ಷವೂ; [ವರ್ಧತಾಮ್ = ವೃದ್ಧಿ ಹೊಂದಲಿ]. **ಬೃಹಸ್ಪತಿಃ** = [ದೇವಾಚಾರ್ಯನಾದ] ಬೃಹಸ್ಪತಿಯು; **ನಃ ಹವಿಷಾ** = ನಮ್ಮ ಹವಿಸ್ಸಿನಿಂದ; **ವೃಧಾತು** = ವೃದ್ಧಿ ಹೊಂದಲಿ **ಸ್ವಾಹಾ** = [ಜಲದೇವತೆಗಳಿಗೂ, ದ್ಯಾವಾಪೃಥಿವೀಗಳಿಗೂ, ಅಂತರಿಕ್ಷಕ್ಕೂ, ಬೃಹಸ್ಪತಿದೇವನಿಗೂ ಈ ಆಜ್ಯದ್ರವ್ಯವು] ಹುತವಾಗಲಿ.

---

ಸಸ್ಯರಕ್ಷಣೆಯನ್ನು ಮಾಡಿ ಲೋಕಕ್ಕೆ ಸುಖವನ್ನುಂಟುಮಾಡುವ ಜಲದೇವತೆಗಳೇ ! ನಾವು ಕೊಡುವ ಹವಿಸ್ಸಿನಿಂದ ನೀವು ವೃದ್ಧಿ ಹೊಂದಿರಿ. ದ್ಯುಲೋಕ, ಭೂಲೋಕಗಳೂ ಅಂತರಿಕ್ಷವೂ ನಮ್ಮ ಹವಿಸ್ಸಿನಿಂದ ವೃದ್ಧಿ ಪಡೆಯಲಿ. ಬೃಹಸ್ಪತಿದೇವನೂ ನಮ್ಮ ಹವಿಸ್ಸಿನಿಂದ ತೃಪ್ತನಾಗಿ ವೃದ್ಧಿ ಹೊಂದಲಿ.

ವಿಶ್ವೇ ದೇವಸ್ಯ ನೇತುರ್ಮರ್ತೋ ವೃಣೀತ ಸಖ್ಯಂ

ವಿಶ್ವೇ ರಾಯ ಇಷುಧ್ಯಸಿ ದ್ಯುಮ್ನಂ ವೃಣೀತ ಪುಷ್ಯಸೇ

---

ವಿಶ್ವೇ। ದೇವಸ್ಯ। ನೇತುಃ । ಮರ್ತಃ । ವೃಣೀತ। ಸಖ್ಯಮ್। ವಿಶ್ವೇ। ರಾಯಃ । ಇಷುಧ್ಯಸಿ।

ದ್ಯುಮ್ನಮ್। ವೃಣೀತ। ಪುಷ್ಯಸೇ। ಸ್ವಾಹಾ।

---

| ಮಂತ್ರ | ವಿನಿಯೋಗ |
| --- | --- |
| ವಿಶ್ವೇ..........ಸ್ವಾಹಾ । | ಪೂರ್ಣಾಹುತಿಯನ್ನು ಮಾಡಲು. ಅಥವಾ ಇದಕ್ಕೇ ಇರುವ ಇನ್ನೊಂದು ಹೆಸರಾದ 'ಓದ್ಗ್ರಹಣಹೋಮ'ವನ್ನು ಮಾಡಲು. |

---

ವಿಶ್ವೇ = ಸರ್ವಾತ್ಮಕನಾದ; ನೇತುಃ = [ಜಗತ್ತಿನ ಸೃಷ್ಟಿ-ಸ್ಥಿತ್ಯಾದಿಗಳನ್ನು] ನಿರ್ವಹಿಸುವ; ದೇವಸ್ಯ = ಒಡೆಯನ (ಪರಮಾತ್ಮನ); ಸಖ್ಯಮ್ = ಅನುಗ್ರಹವನ್ನು; ಮರ್ತಃ = ಮನುಷ್ಯನು (ಯಜಮಾನನು) ವೃಣೀತ = ಕೇಳಿಕೊಳ್ಳಬೇಕು. ವಿಶ್ವೇ = ಎಲ್ಲೆ ವಿಶ್ವಾತ್ಮಕನೇ!; ರಾಯಃ = ಧನಕ್ಕೆ; ಇಷುಧ್ಯಸಿ = ಒಡೆಯನಾಗಿದ್ದೀಯೆ. (ನಿನ್ನನ್ನು ಸ್ತುತಿಸಿ) ಪುಷ್ಯಸೇ = [ಯಜ್ಞ]ಪುಷ್ಟಿಗಾಗಿ; ದ್ಯುಮ್ನಮ್ = ಧನವನ್ನು; ವೃಣೀತ = ಪ್ರಾರ್ಥಿಸಿ ಕೊಳ್ಳಬೇಕು; ಸ್ವಾಹಾ = [ಆ ದೇವನಿಗೆ ಈ ಆಜ್ಯದ್ರವ್ಯವು]ಹುತವಾಗಲಿ.

---

ವಿಶ್ವಾತ್ಮಕನಾದ ಪರಮಾತ್ಮನು ಜಗತ್ತಿನ ಸೃಷ್ಟಿ-ಸ್ಥಿತ್ಯಾದಿಗಳ ನಿಯಾಮಕ ನಾಗಿದ್ದಾನೆ. ಮರಣಧರ್ಮನಾದ ಯಜಮಾನನು ಆ ಪರಮಾತ್ಮನ ಅನುಗ್ರಹವನ್ನು ಪಡೆಯಬೇಕು(ಮುಕ್ತನಾಗಬೇಕು). ಆ ಪರಮಾತ್ಮನನ್ನು ಸ್ತುತಿಸಿ ಯಾಗಪೋಷಣೆಗಾಗಿ ಧನವನ್ನು ಪ್ರಾರ್ಥಿಸಿಕೊಳ್ಳಬೇಕು. ಏಕೆಂದರೆ ಅವನೇ ಸಮಸ್ತಧನಕ್ಕೂ ಸ್ವಾಮಿಯಾಗಿರುತ್ತಾನೆ. ಆ ಪರಮಾತ್ಮನಿಗೆ ಈ ಆಜ್ಯದ್ರವ್ಯವು ಹುತವಾಗಲಿ.

ಋಕ್ಸಾಮಯೋಃ ಶಿಲ್ಪೇ ಸ್ಥಸ್ತೇ ವಾಮಾರಭೇ ತೇ

ಮಾ [ಮಾ(೧) ಪಾತಮಾಸ್ಯ] ಪಾತಮಾಸ್ಯ ಯಜ್ಞಸ್ಯೋದೃಚ

---

ಋಕ್ಸಾಮಯೋರಿತ್ಯೃಕ್ - ಸಾಮಯೋಃ । ಶಿಲ್ಪೇ ಇತಿ। ಸ್ಥಃ। ತೇ ಇತಿ। ವಾಮ್। ಏತಿ। ರಭೇ। ತೇ ಇತಿ। ಮಾ [೧] ಪಾತಮ್। ಏತಿ। ಅಸ್ಯ। ಯಜ್ಞಸ್ಯ। ಉದೃಚ ಇತ್ಯುತ್ - ಋಚಃ।

---

| ಮಂತ್ರ | ವಿನಿಯೋಗ |
|---|---|
| ಋಕ್ಸಾಮಯೋಃ.........ಯಜ್ಞಸ್ಯೋದೃಚ | ಯಜಮಾನನು ಕುಳಿತುಕೊಳ್ಳುವ ಕೃಷ್ಣಾಜಿನದ ಬಿಳಿ-ಕರಿ ರೇಖೆಗಳನ್ನು ಸ್ಪರ್ಶಿಸಲು. ಅಂಗುಷ್ಠದಿಂದ ಬಿಳಿರೇಖೆಯನ್ನೂ ಬೆರಳುಗಳಿಂದ ಕೃಷ್ಣರೇಖೆಯನ್ನು ಸ್ಪರ್ಶಿಸಬೇಕು. |



---

[ಎಲೈ ಕೃಷ್ಣಾಜಿನದ ಶುಕ್ಲ -ಕೃಷ್ಣರೇಖೆಗಳೇ!] [ನೀವು] ಋಕ್ಸಾಮಯೋಃ = ಋಕ್ಕು ಮತ್ತು ಸಾಮಗಳ; ಶಿಲ್ಪೇ = ಚಿತ್ರಗಳಾಗಿ; ಸ್ಥಃ = ಇದ್ದೀರಿ; ತೇ ವಾಮ್ = ಅಂತಹ ನಿಮ್ಮಿಬ್ಬರನ್ನು; ಆ ರಭೇ = ಸ್ಪರ್ಶಿಸುತ್ತೇನೆ. ತೇ = ಆ ನೀವಿಬ್ಬರೂ; ಅಸ್ಯ ಯಜ್ಞಸ್ಯ = ಈ ಸೋಮಯಾಗದ; ಆ ಉದೃಚಃ = ಕೊನೆಯ ಋಕ್ಕಿನವರೆಗೂ; (ಸಮಾಪ್ತಿಯವರೆಗೂ)

---

ಜಿಂಕೆಯ ರೂಪವನ್ನು ಧರಿಸಿರುವ ಋಕ್ಸಾಮಗಳ ಚಿತ್ರರೂಪವಾಗಿರುವ ಕೃಷ್ಣಾಜಿನದ ಶುಕ್ಲ-ಕೃಷ್ಣರೇಖೆಗಳೇ! ನಿಮ್ಮನ್ನು ನಾನು ಮುಟ್ಟುತ್ತೇನೆ. ಈ ಯಜ್ಞದ ಕೊನೆಯ ಋಕ್ಕನ್ನು ಹೇಳುವವರೆಗೂ ಅಂದರೆ ಯಜ್ಞವು ಮುಕ್ತಾಯಗೊಳ್ಳುವವರೆಗೂ ನೀವು ನನ್ನನ್ನು ರಕ್ಷಿಸಿರಿ.

**ಇಮಾಂ ಧಿಯಗ್ಂ ಶಿಕ್ಷಮಾಣಸ್ಯ ದೇವ ಕ್ರತುಂ ದಕ್ಷಂ ವರುಣ ಸಗ್ಂಶಿಶಾಧಿ ಯಯಾऽತಿ ವಿಶ್ವಾ ದುರಿತಾ ತರೇಮ ಸುತರ್ಮಾಣಮಧಿ ನಾವಗ್ಂ ರುಹೇಮೋರ್ಗ**

---

ಇಮಾಮ್। ಧಿಯಮ್। ಶಿಕ್ಷಮಾಣಸ್ಯ। ದೇವ। ಕ್ರತುಮ್। ದಕ್ಷಮ್। ವರುಣ। ಸಮಿತಿ ಶಿಶಾಧಿ। ಯಯಾ। ಅತೀತಿ। ವಿಶ್ವಾ। ದುರಿತೇತಿ ದುಃ-ಇತಾ। ತರೇಮ। ಸುತರ್ಮಾಣಮಿತಿ ಸು-ತರ್ಮಾಣಮ್। ಅಧೀತಿ। ನಾವಮ್। ರುಹೇಮ। ಊರ್ಕ್।

---

| ಮಂತ್ರ | ವಿನಿಯೋಗ |
|---|---|
| ಇಮಾಂ............ ರುಹೇಮ। | ಫಲಮಂಡಿಯನ್ನೇರಿ ಯಜಮಾನನು ಕೃಷ್ಣಾಜಿನದ ಬಳಿ ಹೋಗಲು. |

---

ಮಾ = ನನ್ನನ್ನು; ಘಾತಮ್ = ರಕ್ಷಿಸಿರಿ. ದೇವ = ಪ್ರಕಾಶಮಾನನಾದ; ವರುಣ = ವರುಣನೇ!; ಇಮಾಂ ಧಿಯಮ್ = ಈ ಜ್ಯೋತಿಷ್ಟೋಮಯಾಗಕ್ಕೆ ಸಂಬಂಧಿಸಿದ ಬುದ್ಧಿಯನ್ನು; ಶಿಕ್ಷಮಾಣಸ್ಯ = ಹೊಂದಬೇಕೆಂದಿರುವ [ಪಡೆದಿರುವ] [ಯಜಮಾನನಿಗೆ]; ದಕ್ಷಮ್ = ಸಮೃದ್ಧವಾದ; ಕ್ರತುಮ್ = ಅಗ್ನಿಷ್ಟೋಮಯಾಗವನ್ನು; ಸಂ ಶಿಶಾಧಿ = ಚೆನ್ನಾಗಿ ಉಪದೇಶಿಸಿ [ಕೊನೆ ಮುಟ್ಟಿಸು]. ಯಯಾ = ಯಾವ ನೌಕಾರೂಪವಾದ ಕೃಷ್ಣಾಜಿನದಿಂದ; ವಿಶ್ವಾ ದುರಿತಾ = ಎಲ್ಲ ವಿಘ್ನರೂಪವಾದ ಪಾಪಗಳನ್ನೂ; ಅತಿ ತರೇಮ = ದಾಟಿ ಕೊನೆಯನ್ನು ಮುಟ್ಟುತ್ತೇವೆಯೋ; [ಅಂತಹ] ಸುತರ್ಮಾಣಮ್ ನಾವಮ್= ಸುಖವಾಗಿ ದಾಟಿಸಲು ಸಮರ್ಥವಾದ [ಕೃಷ್ಣಾಜಿನವೆಂಬ] ನಾವೆಯನ್ನು;

---

ಎಲೈ ವರುಣದೇವನೆ! ಈ ಯಜಮಾನನು (ನಾನು) ಅಗ್ನಿಷ್ಟೋಮಯಾಗವನ್ನು ಮಾಡಬೇಕೆಂಬ ಬುದ್ಧಿಯನ್ನು ಹೊಂದಿದ್ದಾನೆ. ಈತನಿಗೆ ಸಮೃದ್ಧವಾದ ಆ ಯಾಗವನ್ನು ಚೆನ್ನಾಗಿ ತಿಳಿಸಿಕೊಟ್ಟು ಕೊನೆಯನ್ನು ಮುಟ್ಟುವಂತೆ (ಫಲವನ್ನು ಪಡೆಯುವಂತೆ)ಮಾಡು. ಅಗ್ನಿಷ್ಟೋಮವು ಮಹಾಯಾಗ. ಅದರ ಕೊನೆಯನ್ನು ಮುಟ್ಟುವುದು ಸಮುದ್ರವನ್ನು

ಸ್ಯಾಂಗಿರಸ್ಯೂರ್ಣಮ್ರದಾ ಊರ್ಜಂ ಮೇ ಯಚ್ಛ

ಪಾಹಿ ಮಾ ಮಾ ಮಾ ಹಿಗ್ಂಸೀರ್ವಿಷ್ಣೋಃ ಶರ್ಮಾಸಿ

ಅಸಿ। ಆಂಗಿರಸೀ। ಊರ್ಣಮ್ರದಾ ಇತ್ಯೂರ್ಣ - ಮ್ರದಾಃ। ಊರ್ಜಮ್। ಮೇ। ಯಚ್ಛ।

ಪಾಹಿ। ಮಾ। ಮಾ। ಮಾ। ಹಿಗ್ಂಸೀಃ। ವಿಷ್ಣೋಃ। ಶರ್ಮ। ಅಸಿ।

| ಮಂತ್ರ | ವಿನಿಯೋಗ |
|---|---|
| ಊರ್ಗ............ಮಾ ಹಿಗ್ಂಸೀಃ। | ಪ್ರದಕ್ಷಿಣವಾಗಿ ಮೇಖಲೆಯನ್ನು ಯಜಮಾನನಿಗೆ ಕಟ್ಟಲು. |

ಅಧಿರುಹೇಮ = ಏರೋಣ. +[ಎಲೈ ಮೇಖಲೆಯೇ!] [ಶರವೆಂಬ ಹುಲ್ಲಿನಿಂದ ಅಥವಾ ನೊಜೆಗಳಿಂದ ನಿರ್ಮಿತವಾದ ಹುರಿ] [ನೀನು] ಆಂಗಿರಸೀ = ಅಂಗಿರೋಮುನಿಗಳಿಗೆ ಸಂಬಂಧಿಸಿದ; ಊರ್ಕ್ = ಅನ್ನರಸ ರೂಪಳೂ; ಊರ್ಣಮ್ರದಾಃ =ಉಣ್ಣೆಯಂತೆ ಮೃದುವಾಗಿರುವವಳೂ; ಅಸಿ = ಆಗಿರುವೆ. ಮೇ = ನನಗೆ; ಊರ್ಜಮ್ = ಅನ್ನರಸವನ್ನು; ಯಚ್ಛ = ಕೊಡು. ಮಾ = ನನ್ನನ್ನು; ಪಾಹಿ = ರಕ್ಷಿಸು. ಮಾ = ನನ್ನನ್ನು; ಮಾ ಹಿಂಸೀಃ = ಹಿಂಸಿಸಬೇಡ. +[ಎಲೈ ವಸ್ತ್ರವೇ!] [ನೀನು] ವಿಷ್ಣೋಃ = ಯಜ್ಞಸ್ವರೂಪನಾದ ವಿಷ್ಣುವಿಗೆ; ಶರ್ಮ =ಸುಖಸ್ವರೂಪನಾಗಿ; ಅಸಿ = ಇರುವೆ.

ದಾಟುವಂತೆ ಕಷ್ಟಸಾಧ್ಯವಾದದ್ದು. ಕೃಷ್ಣಾಜಿನವು ಸುಲಭವಾಗಿ–ಸಾಗರವನ್ನು ದಾಟಿಸಬಲ್ಲ ನಾವೆಯಂತೆ– ಎಲ್ಲ ವಿಘ್ನಗಳನ್ನೂ ದಾಟಿಸಿ ಯಾಗವನ್ನು ಕೊನೆ ಮುಟ್ಟಿಸಿ ಫಲವನ್ನು ಕೊಡಿಸಿಕೊಡಬಲ್ಲದು. ಇದನ್ನು ನಾವು ಏರೋಣ.

ಎಲೈ ಶರಮಯಿಯಾದ ಮೇಖಲೆಯೇ! ಅಂಗಿರಸನು ಅನ್ನರಸವನ್ನು ವಿಭಾಗ ಮಾಡುವಾಗ ಉಳಿದ ರಸದಿಂದ ಜನಿಸಿದ ನೀನು ಆಂಗಿರಸಿಯಾಗಿರುವೆ. ಉಣ್ಣೆಯಂತೆ ಮೃದುವೂ ಆಗಿರುವೆ. ನನಗೆ ಅನ್ನರಸವನ್ನು ಕೊಡು. ನನ್ನನ್ನು ರಕ್ಷಿಸು. ಗಟ್ಟಿಯಾಗಿ ಕಟ್ಟಿಕೊಳ್ಳುವುದರಿಂದ ನನ್ನನ್ನು ನೋಯಿಸಬೇಡ.

ಎಲೈ ವಸ್ತ್ರವೇ! ನೀನು ವಿಷ್ಣುವಿಗೂ ಸುಖಸ್ವರೂಪನಾಗಿರುವೆ. ಯಜಮಾನನಿಗೆ

**ಶರ್ಮ ಯಜಮಾನಸ್ಯ ಶರ್ಮ ಮೇ ಯಚ್ಛ**

**ನಕ್ಷತ್ರಾಣಾಂ ಮಾಽತೀಕಾಶಾತ್ಪಾಹೀಂದ್ರಸ್ಯ**

---

ಶರ್ಮ। ಯಜಮಾನಸ್ಯ। ಶರ್ಮ। ಮೇ। ಯಚ್ಛ। ನಕ್ಷತ್ರಾಣಾಮ್। ಮಾ। ಅತೀಕಾಶಾತ್।

ಪಾಹಿ। ಇಂದ್ರಸ್ಯ।

---

| ಮಂತ್ರ | ವಿನಿಯೋಗ |
|---|---|
| ವಿಷ್ಣೋಃ............ ಯಚ್ಛ। | ಯಜಮಾನನಿಗೆ ವಸ್ತ್ರವನ್ನು ಸುತ್ತಲು. |
| ನಕ್ಷತ್ರಾಣಾಮ್..........ಪಾಹಿ। | ಯಜಮಾನನ ಶಿರೋವೇಷ್ಟನದಲ್ಲಿ—ಆಪಸ್ತಂಬ. ಯಜಮಾನನು ಹೇಳಲು—ಬೌಧಾಯನ. |
| ೧) ಇಂದ್ರಸ್ಯ ಯೋನಿರಸಿ। | ಕೃಷ್ಣವಿಷಾಣ(ಜಿಂಕೆಯ ಕೊಂಬು)ವನ್ನು ಯಜಮಾನನಿಗೆ ಕೊಡಲು |

---

ಯಜಮಾನಸ್ಯ = ಯಜಮಾನನಿಗೆ; ಶರ್ಮ = ಸುಖವನ್ನು; [ಯಚ್ಛ = ಕೊಡು]; ಮೇ = ನನಗೂ; ಶರ್ಮ = ಸುಖವನ್ನು; ಯಚ್ಛ = ಕೊಡು. +[ಎಲೈ ವಸ್ತ್ರವೇ! (ಉಷ್ಣೀಷವೇ!) ನಕ್ಷತ್ರಾಣಾಮ್ = ನಕ್ಷತ್ರಗಳ; ಅತೀಕಾಶಾತ್ = ಪ್ರಕಾಶದಿಂದ; ಮಾ = ನನ್ನನ್ನು; ಪಾಹಿ = ಪರಿಪಾಲಿಸು. +[ಎಲೈ ಕೃಷ್ಣವಿಷಾಣವೇ!] ನೀನು; ಇಂದ್ರಸ್ಯ = ಇಂದ್ರನಿಗೆ;

---

ಸುಖವನ್ನು ಕೊಡು. ನನಗೂ ಸುಖವನ್ನು ಕೊಡು.

ಎಲೈ ವಸ್ತ್ರವೇ! [ಶಿರೋವೇಷ್ಟನವೇ!] ನಕ್ಷತ್ರಗಳ ಬೆಳಕು ರಂಧ್ರಗಳನ್ನೂ ದಾಟಿ ಪ್ರಕಾಶಿಸಬಲ್ಲದು. ಅಂತಹ ಅತೀಕಾಶದಿಂದ ನನಗೆ ತೊಂದರೆಯಾಗದಂತೆ ಮಾಡಿ ರಕ್ಷಿಸು.

ಎಲೈ ಕೃಷ್ಣವಿಷಾಣೆಯೇ! ನೀನು ಇಂದ್ರನ ಜನ್ಮಸ್ಥಾನವು. ನೀನು ನನ್ನನ್ನು ತೊಂದರೆ ಪಡಿಸಬೇಡ. [ನವೆಯುಂಟಾದಾಗ ಯಜಮಾನನು ಈ ಕೃಷ್ಣವಿಷಾಣದಿಂದಲೇ ತುರಿಸಿಕೊಳ್ಳಬೇಕು.]

**ಯೋನಿರಸಿ [ಯೋನಿರಸಿ(೨)] ಮಾ ಮಾ ಹಿಗ್ಂಸೀಃ ಕೃಷ್ಯೈ ತ್ವಾ ಸುಸಸ್ಯಾಯೈ ಸುಪಿಪ್ಪಲಾಭ್ಯಸ್ತ್ವೌಷಧೀಭ್ಯಃ ಸೂಪಸ್ಥಾ**

ಯೋನಿಃ। ಅಸಿ। [೨] *ಮಾ। ಮಾ। ಹಿಗ್ಂಸೀಃ*। ಕೃಷ್ಯೈ। ತ್ವಾ। ಸುಸಸ್ಯಾಯಾ ಇತಿ ಸು-ಸಸ್ಯಾಯೈ। ಸುಪಿಪ್ಪಲಾಭ್ಯ ಇತಿ ಸು-ಪಿಪ್ಪಲಾಭ್ಯಃ। ತ್ವಾ। ಓಷಧೀಭ್ಯ ಇತ್ಯೋಷಧಿ-ಭ್ಯಃ। ಸೂಪಸ್ಥಾ ಇತಿ ಸು-ಉಪಸ್ಥಾಃ।

| ಮಂತ್ರ | ವಿನಿಯೋಗ |
|---|---|
| ೨) ಮಾ ಮಾ ಹಿಗ್ಂಸೀಃ। | ಯಜಮಾನನು ಅದನ್ನು ತೆಗೆದುಕೊಳ್ಳಲು —ಬೌಧಾಯನ |
| ಇಂದ್ರಸ್ಯ.........ಹಿಗ್ಂಸೀಃ। | ಕೃಷ್ಣವಿಷಾಣವನ್ನು ಯಜಮಾನನಿಗೆ ಕೊಡಲು —ಆಪಸ್ತಂಬ |
| ಕೃಷ್ಯೈ...........ಸುಸಸ್ಯಾಯೈ। ಸುಪಿಪ್ಪಲಾಭ್ಯಸ್ತ್ವೌಷಧೀಭ್ಯಃ। | ವೇದಿಯಿಂದ ಮಣ್ಣು ಹೆಂಟೆಯನ್ನು ಎತ್ತಿ ಹಾಕಲು ನವೆಯುಂಟಾದಾಗ ಕೃಷ್ಣವಿಷಾಣದಿಂದ ತುರಿಸಿಕೊಳ್ಳಲು |

ಯೋನಿಃ = ಜನ್ಮಸ್ಥಾನವು; ಅಸಿ = ಆಗಿದ್ದೀಯೆ. +ಮಾ = ನನ್ನನ್ನು; ಮಾ ಹಿಗ್ಂಸೀಃ = ಹಿಂಸಿಸಬೇಡ. +[ಎಲ್ಲೈ ಲೋಷ್ಟವೇ!] ಸುಸಸ್ಯಾಯೈ = ಒಳ್ಳೆಯ ಸಸ್ಯಗಳನ್ನು ಬೆಳೆಸುವ; ಕೃಷ್ಯೈ = ಕೃಷಿಗೋಸ್ಕರ; ತ್ವಾ = ನಿನ್ನನ್ನು; [ಉದ್ಧನ್ಮಿ = ಎತ್ತಿ ಹಾಕುತ್ತೇನೆ]. +[ಎಲ್ಲೆ ಶಿರವೇ!] ಸುಪಿಪ್ಪಲಾಭ್ಯಃ = ಒಳ್ಳೆಯ ಫಲವುಳ್ಳ; ಓಷಧೀಭ್ಯಃ = ಬತ್ತವೇ ಮೊದಲಾದ ಓಷಧಿಗಳಿಗಾಗಿ; ತ್ವಾ = ನಿನ್ನನ್ನು [ಕಂಡೂಯೇ = ತುರಿಸುತ್ತೇನೆ]. +[ಈ ದಂಡವು] ದೇವಃ = ಕಾಂತಿಯುಳ್ಳದ್ದೂ; ಸೂಪಸ್ಥಾಃ = ಒರಗಿ ನಿಲ್ಲಲು ತಕ್ಕುದಾದುದೂ;

ಎಲ್ಲೈ ಲೋಷ್ಟವೇ! (ಭೂಮಿಯೇ!) ಒಳ್ಳೆಯ ಸಸ್ಯಸಂಪತ್ತನ್ನು ಕೊಡುವ ಕೃಷಿಗಾಗಿ ಈ ಜಿಂಕೆಯ ಕೊಂಬಿನಿಂದ ಎತ್ತಿಹಾಕುತ್ತೇನೆ.

**ದೇವೋ ವನಸ್ಪತಿರೂರ್ಧ್ವೋ ಮಾ ಪಾಹ್ಯೋದೃಚಃ**

**ಸ್ವಾಹಾ ಯಜ್ಞಂ ಮನಸಾ ಸ್ವಾಹಾ ದ್ಯಾವಾಪೃಥಿವೀಭ್ಯಾಗ್ಂ**

---

ದೇವಃ। ವನಸ್ಪತಿಃ।* ಊರ್ಧ್ವಃ। ಮಾ। ಪಾಹಿ। ಆ। ಇತಿ। ಉದೃಚ ಇತ್ಯುತ್-ಋಚಃ। ಸ್ವಾಹಾ।

ಯಜ್ಞಮ್। ಮನಸಾ। ಸ್ವಾಹಾ। ದ್ಯಾವಾಪೃಥಿವೀಭ್ಯಾಮಿತಿ ದ್ಯಾವಾ-ಪೃಥಿವೀಭ್ಯಾಮ್।

---

| ಮಂತ್ರ | ವಿನಿಯೋಗ |
|---|---|
| ಸೂಪಸ್ಥಾ.....ಪಾಹ್ಯೋದೃಚಃ | ಯಜಮಾನನಿಗೆ ಅತ್ತಿಮರದ ದಂಡವನ್ನು ಕೊಡಲು —ಆಪಸ್ತಂಬ |
| ೧) ಸೂಪಸ್ಥಾ......ವನಸ್ಪತಿಃ। | ಅತ್ತಿಯಮರದ ದಂಡವನ್ನು ಯಜಮಾನನಿಗೆ ಕೊಡಲು |
| ೨) ಊರ್ಧ್ವೋ....ಪಾಹ್ಯೋದೃಚಃ | ಯಜಮಾನನು ದಂಡವನ್ನು ತೆಗೆದುಕೊಳ್ಳಲು —ಬೌಧಾಯನ |



---

ವನಸ್ಪತಿಃ = ವನಸ್ಪತಿಯಿಂದ ಉಂಟಾದುದಾಗಿದೆ. +(ಎಲೈ ದಂಡವೇ!) ಊರ್ಧ್ವಃ = ಎತ್ತರದಲ್ಲಿ ಇದ್ದುಕೊಂಡವನಾಗಿ; ಮಾ = ನನ್ನನ್ನು ಆ ಉದೃಚಃ = ಕೊನೆಯ ಋಕ್ಕಿನವರೆಗೂ; (ಯಾಗವು ಮುಗಿಯುವವರೆಗೂ) ಪಾಹಿ = ರಕ್ಷಿಸು. +ಮನಸಾ = ಮನಸ್ಸಿನಿಂದ; ಯಜ್ಞಮ್ = ಯಜ್ಞವನ್ನು; ಸ್ವಾಹಾ = (ಅಧಿಗಚ್ಛಾಮಿ) = ಹೊಂದುತ್ತೇನೆ. +ದ್ಯಾವಾಪೃಥಿವೀಭ್ಯಾಮ್ = ದ್ಯುಲೋಕಭೂಲೋಕಗಳಲ್ಲಿ;

---

ಎಲೈ ಶಿರಸ್ಸೇ! ಒಳ್ಳೆಯ ಫಲವುಳ್ಳ ಓಷಧಿಗಳಿಗಾಗಿ ಈ ಕೃಷ್ಣವಿಷಾಣೆಯಿಂದ ನಿನ್ನನ್ನು ತುರಿಸುತ್ತೇನೆ.

ಎಲೈ ದಂಡವೇ! (ಅತ್ತಿಯ ಮರದ ಕೋಲೇ!) ನೀನು ಕಾಂತಿಯುಳ್ಳವನು. ವನಸ್ಪತಿಯಾದ* ಔದುಂಬರದಿಂದ ಜನಿಸಿದವನು. ಒರಗಿ ನಿಲ್ಲಲು ತಕ್ಕಂತೆ ಇರುವವನು.

---

* ಹೂಗಳಿಲ್ಲದೆ ಫಲವನ್ನು ಕೊಡುವುದು ವನಸ್ಪತಿ.

## ಸ್ವಾಹೋರೋರಂತರಿಕ್ಷಾತ್ಸ್ವಾಹಾ ಯಜ್ಞಂ

## ವಾತಾದಾರಭೇ ॥೨-5॥

## [ಮಾ ಯೋನಿರಸಿ ತ್ರಿಗ್ಂಶಚ್ಚ]

---

ಸ್ವಾಹಾ। ಉರೋಃ। ಅಂತರಿಕ್ಷಾತ್। ಸ್ವಾಹಾ। ಯಜ್ಞಮ್। ವಾತಾತ್। ಏತಿ। ರಭೇ ॥೨॥

---

| ಮಂತ್ರ | ವಿನಿಯೋಗ |
|---|---|
| ಸ್ವಾಹಾ............ರಭೇ। | ಯಜಮಾನನು ವಾಚನ ಮಾಡಲು—ಬೌಧಾಯನ<br>ಯಜಮಾನನು ಬೆರಳುಗಳನ್ನು ಮಡಿಚಿಕೊಳ್ಳಲು*<br>—ಆಪಸ್ತಂಬ |

---

ಸ್ವಾಹಾ = (ಯಜ್ಞ ಆಶ್ರಿತಃ) = ಯಜ್ಞವು ಆಶ್ರಯವನ್ನು ಹೊಂದಿದೆ; +ಉರೋಃ ಅಂತರಿಕ್ಷಾತ್ = ವಿಸ್ತೀರ್ಣವಾದ ಅಂತರಿಕ್ಷದಲ್ಲಿ; ಸ್ವಾಹಾ = (ಯಜ್ಞ ಆಶ್ರಿತಃ) = ಯಜ್ಞವು ಆಶ್ರಯವನ್ನು ಹೊಂದಿದೆ; +ಸ್ವಾಹಾ = ಸಾಕ್ಷಾತ್ತಾಗಿ; ವಾತಾತ್ = ವಾಯುದೇವನ ಅನುಗ್ರಹದಿಂದ; ಯಜ್ಞಮ್ = ಯಜ್ಞವನ್ನು; ಆರಭೇ = ಆರಂಭಿಸುತ್ತೇನೆ; ['ಸ್ವಾಹಾ' ಎಂಬ ಅವ್ಯಯಕ್ಕೆ 'ಅವ್ಯಯಾನಾಮನೇಕಾರ್ಥತ್ವಮ್' ಎಂಬಂತೆ ಮಂತ್ರದ ಬ್ರಾಹ್ಮಣವನ್ನನುಸರಿಸಿ ಹಲವು ಅರ್ಥಗಳನ್ನು ಹೇಳಿದೆ.]

---

ನೀನು ನನ್ನನ್ನು ಈ ಅಗ್ನಿಷ್ಟೋಮಯಾಗವು ಮುಗಿಯುವವರೆಗೂ ರಕ್ಷಿಸು.

ನಾನು ಯಜ್ಞದಲ್ಲಿಯೇ ಮನಸ್ಸನ್ನು ಇಡುತ್ತೇನೆ. ಯಜ್ಞವು ದ್ಯಾವಾಪೃಥಿವೀಗಳಿಗೆ ಸಂಬಂಧಿಸಿದೆ. ವಿಸ್ತೀರ್ಣವಾದ ಅಂತರಿಕ್ಷಕ್ಕೆ ಸಂಬಂಧಿಸಿದೆ. ಇಂತಹ ವಾಯುರೂಪವಾದ ಈ ಯಜ್ಞವನ್ನು ವಾಯುದೇವನ ಅನುಗ್ರಹದಿಂದ ಆರಂಭಿಸುತ್ತೇನೆ.

---

* ಸ್ವಾಹಾ ಯಜ್ಞಂ ಮನಸಾ। ಸ್ವಾಹಾ ದಿವೇ। ಸ್ವಾಹಾ ಪೃಥಿವ್ಯೈ। ಸ್ವಾಹೋರೋರಂತರಿಕ್ಷಾತ್। ಸ್ವಾಹಾ ಯಜ್ಞಂ ವಾತಾದಾರಭೇ। ಈ ಐದು ಮಂತ್ರಗಳಿಂದ ಎರಡು ಕೈಗಳ ಬೆರಳುಗಳನ್ನು ಕಿರುಬೆರಳಿನಿಂದ ಆರಂಭಿಸಿ ಮಡಿಚಿ ಮುಷ್ಟಿ ಮಾಡಬೇಕು.

## ವಿನಿಯೋಗ ಸಂಗ್ರಹ

ಆಕೂತ್ಯೈ[1-6] ಜುಹುಯಾತ್ ಷಡ್ಭಿಃ [7]ಋಕ್ಸಾಮೇತ್ಯಜಿನಂ ಸ್ಪೃಶೇತ್ ।
[8]ಇಮಾಮಜಿನಮಾರೋಹೇತ್ ಬಧ್ನಾತ್ಯೂರ್ಗಿ[9]ತಿ ಮೇಖಲಾಮ್॥
[10]ವಿಷ್ಣೋರ್ವಸ್ತ್ರೇಣೋರ್ಣುತೇ ತಂ ನಕ್ಷ್ಯೇ[11]ತ್ಯಾವೇಷ್ಟಯೇಚ್ಛಿರಃ ।
[12]ಇಂದ್ರ ದದ್ಯಾತ್ ಕೃಷ್ಣಶೃಂಗಂ ಕೃಷ್ಯೈ[13] ಲೋಷ್ಟೋದ್ಧತಿಸ್ತಥಾ॥
ಸುಪಿ[14] ಕಂಡೂಯನಂ ಮೂರ್ಧ್ನಿ ಸೂಪ[15]ದಂಡಪರಿಗ್ರಹಃ ।
[16-20]ಸ್ವಾಹಾಂಗುಲೀರ್ದ್ವಯೋರ್ನ್ಯಂಚೇತ್ ಪಂಚ ಭೇದೇನ ವಿಂಶತಿಃ ॥

ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ — ಬೌಧಾಯನ - 18
ಆಪಸ್ತಂಬ - 20

## ಅನುವಾಕದ ವಿಶೇಷವಿಷಯಗಳು

### ಅ) ಭ.ಭಾ. ಭಾಷ್ಯ

**ಮಂತ್ರಸಂಖ್ಯೆ**

೧-೪) **ಆಕೂತ್ಯೈ.......ಸ್ವಾಹಾ।** "ಆಕೂತ್ಯೈ' 'ಮೇಧಾಯ್ಯೆ' 'ಸರಸ್ವತ್ಯೈ' ಈ ಪದಗಳು ಚತುರ್ಥೀವಿಭಕ್ತಿಯಲ್ಲಿವೆ. ಸಾಯಣಾಚಾರ್ಯರು **'ತಾದರ್ಥ್ಯೇ ಚತುರ್ಥೀ'** ಎಂಬ ವಚನದಿಂದ ಚತುರ್ಥೀವಿಭಕ್ತಿಯಿದೆಯೆಂದು ಅದರಂತೆ 'ಆಕೂತಿಗಾಗಿ' ಮುಂತಾಗಿ ಅರ್ಥವನ್ನು ವಿವರಿಸಿರುತ್ತಾರೆ. ಮಿಶ್ರರು ಅಗ್ನಿಗೆ ಈ ಪದಗಳನ್ನು ವಿಶೇಷಣಗಳನ್ನಾಗಿ ಮಾಡಿ ಸಂಕಲ್ಪರೂಪನಾಗಿಯೂ, ಪ್ರೇರಕನಾಗಿಯೂ (ಆಕೂತ್ಯೈ ಪ್ರಯುಜೇ) ಇರುವ ಅಗ್ನಿಗೆ ಹುತವಾಗಲಿ; **ಮೇಧಾಯ್ಯೆ ಮನಸೇ** =ಅರ್ಥಧಾರಣಶಕ್ತಿಯಿಂದ ಮೇಧಾ ಸ್ವರೂಪನೂ, ಎಲ್ಲವನ್ನೂ ತಿಳಿದಿರುವ ಮನಃಸ್ವರೂಪನೂ ಆಗಿರುವ; **ದೀಕ್ಷಾಯ್ಯೆ ತಪಸೇ** = ಮೌಂಡ್ಯಸ್ನಾನಾದಿರೂಪವಾದ ದೀಕ್ಷಾರೂಪನೂ, ದುಃಖಗೊಳಿಸುವ ತಪಃಸ್ವರೂಪನೂ ಆಗಿರುವ; **ಸರಸ್ವತ್ಯೈ ಪೂಷ್ಣೇ** = ವಾಗ್ರೂಪನೂ ಸರ್ವಪೋಷಕನಾದ ಪೃಥಿವೀರೂಪನೂ ಆಗಿ ಯಜ್ಞವನ್ನು ನಿರ್ವಹಿಸುವ ಅಗ್ನಿಗೆ ಹುತವಾಗಲಿ ಎಂದು ವಿವರಿಸಿದ್ದಾರೆ.

೫) **ಆಪೋ..........ಸ್ವಾಹಾ।** ಸಾಯಣಾಚಾರ್ಯರು ಜಲದೇವತೆ, ದ್ಯುಲೋಕ ಮೊದಲಾದವುಗಳಿಗೆ 'ವೃಧಾತು' ಎಂಬುದರೊಡನೆ ಪ್ರತ್ಯೇಕ ಪ್ರತ್ಯೇಕವಾಗಿ ಅನ್ವಯ ಮಾಡಿರುತ್ತಾರೆ. ಮಿಶ್ರರು ಒಂದೇ ಅನ್ವಯವನ್ನು ಮಾಡಿ ಅರ್ಥವನ್ನು ವಿವರಿಸಿರುತ್ತಾರೆ. ಎಲೈ ಜಲದೇವತೆಗಳೇ! ನೀವು ಯಾವ ಲೋಕಗಳಿಗೆ ಸುಖವನ್ನುಂಟುಮಾಡುತ್ತೀರೋ, ಆ ದ್ಯುಲೋಕ, ಭೂಲೋಕ ಮತ್ತು ಅಂತರಿಕ್ಷಲೋಕಗಳನ್ನು ನಮ್ಮ ಹವಿಸ್ಸಿನಿಂದ

ತೃಪ್ತನಾದ ಬೃಹಸ್ಪತಿಯು (ಬ್ರಹ್ಮನು) ವೃದ್ಧಿಗೊಳಿಸಲಿ. ನಿಮಗೂ, ಲೋಕಗಳಿಗೂ ಮತ್ತು ಬೃಹಸ್ಪತಿಗೂ ಈ ಹವಿಸ್ಸು ಹುತವಾಗಲಿ.

೬) ವಿಶ್ವೇ.............ಸ್ವಾಹಾ। ಎಲ್ಲ ಪ್ರಾಣಿಗಳೂ ಪ್ರೇರಕನಾದ ಸವಿತೃದೇವನ ವಶವರ್ತಿಗಳು. ಮರಣಧರ್ಮವುಳ್ಳ ಮನುಷ್ಯನು ಆ ಸವಿತೃದೇವನ ಸಖ್ಯವನ್ನು ಹೊಂದಿ ಸ್ವತಂತ್ರನಾಗಿ ಬಂಧಮುಕ್ತನಾಗಬೇಕು. ಅಗ್ನಿದೇವನೇ! ಬತ್ತಳಿಕೆಯು ಬಾಣಗಳಿಂದ ತುಂಬಿರುವಂತೆ ನೀನು ಈ ಯಜಮಾನನು ಸರ್ವಸಿದ್ಧಿಗಳಿಂದ ಪೂರ್ಣನಾಗುವಂತೆ ಮಾಡು. ಎಲ್ಲ ಪ್ರಾಣಿಗಳೂ ಹಣಕ್ಕೆ ಅಧೀನರು. ಯಜಮಾನನು ಆ ಹಣಕ್ಕಾಗಿ ನಿನ್ನನ್ನು (ಅಗ್ನಿಯನ್ನು) ಪ್ರಾರ್ಥಿಸಬೇಕು. ನೀನು ಸರ್ವಾಭಿಮತಧನಸಂಪತ್ತಿರೂಪವಾದ ಪುಷ್ಟಿಯನ್ನು ಯಜಮಾನನಿಗೆ ಕೊಡು. ನಿನಗೆ ಈ ಆಜ್ಯವು ಹುತವಾಗಲಿ.

೮) ಇಮಾಂ.........ರುಹೇಮ। ದಕ್ಷಂ ಕ್ರತುಂ ಸಂಶಿಶಾಧಿ = ಅಭಿವೃದ್ಧಿಕರವಾದ ಯಾಗವನ್ನು ಸ್ವಕಾರ್ಯಸಮರ್ಥವನ್ನಾಗಿ ಮಾಡು. ಎಲ್ಲ ವಿಘ್ನಗಳನ್ನೂ ದಾಟಿ ಸಿದ್ಧಿಯನ್ನು ಕೊಡುವಂತಹ ಬುದ್ಧಿಯನ್ನು ನಾವು ಅಪೇಕ್ಷಿಸುತ್ತೇವೆ. ಎಲ್ಲ ಪಾಪಗಳನ್ನೂ ದಾಟುವ ನಾವೆಯಂತಿರುವ ಯಜ್ಞವನ್ನು ನಾವು ಏರಿರುತ್ತೇವೆ. (ಏರೋಣ).

೧೦) ವಿಷ್ಣೋ.............ಯಚ್ಛ। ಯಜಮಾನಸ್ಯ ಶರ್ಮ ಅಸಿ = ಯಜಮಾನನಿಗೂ ಸುಖಸ್ವರೂಪನಾಗಿದ್ದೀಯೆ.

೧೬) ಸ್ವಾಹಾ.............ಆರಭೇ। ಸ್ವಾಹಾ = ಸ್ವಯಮೇವ ವಾಕ್ ಆಹ। ವಾಕ್ಕು ಹೇಳಿದಂತೆ 'ಮನಸಾ ಯಜ್ಞಮಾರಭೇ' ಮನಸ್ಸನ್ನು ಯಜ್ಞಾಭಿಮುಖವನ್ನಾಗಿ ಮಾಡುತ್ತೇನೆ. ದ್ಯುಲೋಕ, ಭೂಲೋಕಗಳ ಸ್ಥಿತಿಗಾಗಿ ಯಾಗವನ್ನು ಮೊದಲು ಮಾಡುತ್ತೇನೆ. ಕ್ರಿಯಾಶಕ್ತಿರೂಪಪ್ರಾಣಾತ್ಮಕನಾದ ವಾಯುವಿನಿಂದ ಅನುಗೃಹೀತನಾಗಿ ಯಜ್ಞವನ್ನು ಆರಂಭಿಸುತ್ತೇನೆ.

## ಆ) ಛಂದಸ್ಸು

ಮಂತ್ರಸಂಖ್ಯೆ

| | | |
|---|---|---|
| 6) | ವಿಶ್ವೇ ದೇವಸ್ಯ.........ಸ್ವಾಹಾ | ಅನುಷ್ಟುಪ್ |
| 8) | ಇಮಾಂ ಧಿಯಗ್ಂ.......ರುಹೇಮ। | ಚತುಷ್ಪದಾ ತ್ರಿಷ್ಟುಪ್ |
| 5) | ಆಪೋ............ಸ್ವಾಹಾ | ತ್ರಿಪದಾ ವಿರಾಟ್ |

ಐದನೆಯ ಮಂತ್ರವಾದ, 'ಆಪೋ ದೇವೀ .........' ಎಂಬಲ್ಲಿ ಕೊನೆಯಲ್ಲಿ , 'ಸ್ವಾಹಾ' ಎಂಬ ಎರಡು ಅಕ್ಷರಗಳು ಹೆಚ್ಚಾಗಿರುವುದರಿಂದ ಅದನ್ನು 'ಯಜುಸ್ಸು' ಎಂದು ಪರಿಗಣಿಸಿ **'ಯಜುರಂತಾ ವಿರಾಟ್'** ಎಂದು ಹೇಳಬಹುದು . ಅಥವಾ ಈ ರೀತಿಯ ಋಕ್- ಯಜುಸ್ಸುಗಳ ಸಮುದಾಯವನ್ನು ಒಟ್ಟಾಗಿ ಯಜುಸ್ಸೆಂದೂ ಹೇಳಬಹುದು. ಆದುದರಿಂದಲೇ **'ಯದೇತದ್ಯಜುರ್ನ ಬ್ರೂಯಾತ್'** ಎಂದು ಈ ಮಂತ್ರಗಳ ಬ್ರಾಹ್ಮಣ ವಿರುವ ಸಂಹಿತೆಯ ಆರನೆಯ ಕಾಂಡದಲ್ಲಿ ಶ್ರುತಿಯಲ್ಲಿಯೇ ಇದೆ.

### ೩) ಮೀಮಾಂಸಾ

**೧) ದೀಕ್ಷಾಸಿದ್ಧಿಯು ಯಾವುದರಿಂದ? [ಜೈ.ಸೂ. 5-3]**

ಜ್ಯೋತಿಷ್ಟೋಮದಲ್ಲಿ ದೀಕ್ಷಾಪ್ರಕರಣದಲ್ಲಿ ದೀಕ್ಷಣೀಯೇಷ್ಟಿಯನ್ನು ಹೇಳಿದ್ದಾರೆ. **'ದಂಡೇನ ದೀಕ್ಷಯತಿ'** ಮೊದಲಾದವುಗಳನ್ನು ದೀಕ್ಷಾಸಾಧನಗಳನ್ನಾಗಿಯೂ ಹೇಳಿದ್ದಾರೆ. ದೀಕ್ಷೆಯು ಈ ಎಲ್ಲವುಗಳಿಂದಲೂ ಸಿದ್ಧಿಸುವುದೇ? ಅಥವಾ ಇಷ್ಟಿಯಿಂದಲೇ ಎಂದು ಸಂಶಯ.

ದಂಡ, ಕೃಷ್ಣಾಜಿನಗಳೆಲ್ಲವೂ ದೀಕ್ಷೆಯ ಸಾಧನಗಳು. ಆದುದರಿಂದ ಎಲ್ಲದರಿಂದಲೂ ದೀಕ್ಷೆಯು ಸಂಪನ್ನವಾಗುತ್ತದೆ. ಇಲ್ಲಿನ ಪೂರ್ವಪಕ್ಷ.

ಇಲ್ಲಿಯ ಸಿದ್ಧಾಂತವು ಹೀಗಿದೆ;ಇಷ್ಟಿಯು ಕ್ರಿಯಾರೂಪವಾದುದರಿಂದ ಅದೇ ಯಜಮಾನನ ಸಂಸ್ಕಾರಹೇತುವಾಗಬಲ್ಲುದು. ದಂಡಾದಿಗಳು ದ್ರವ್ಯಗಳು. ಅವು ಸಂಸ್ಕಾರ ಸಮರ್ಥಗಳಲ್ಲ.ಆದರೆ ಅವು ವ್ಯರ್ಥಗಳಲ್ಲ. ಅವುಗಳನ್ನು ಧರಿಸಿರುವ ಯಜಮಾನನು ದೀಕ್ಷಿತನೆಂದು ತಿಳಿಸುವ ದೃಷ್ಟಪ್ರಯೋಜನವು ಅವುಗಳಿಗೆ ಇದೆ.

**೨) ದೀಕ್ಷಾ-ದಕ್ಷಿಣೆಗಳು ಯಾವುದಕ್ಕೆ ಉಪಕಾರಕಗಳು? [ಜೈ.ಸೂ. 3-7]**

ಜ್ಯೋತಿಷ್ಟೋಮದಲ್ಲಿ ಯಜಮಾನನ ದೀಕ್ಷೆಯ ಪ್ರಕರಣವಿದೆ. **'ತಸ್ಯ ದ್ವಾದಶಶತಂ ದಕ್ಷಿಣಾ'** [ತಾಂ.ಬ್ರಾ.16.1.11.] ಎಂಬ ವಚನದಿಂದ ದಕ್ಷಿಣೆಯು ವಿಹಿತವಾಗಿದೆ. ಈ ದೀಕ್ಷಾ-ದಕ್ಷಿಣೆಗಳು ಅಂಗ-ಪ್ರಧಾನಕ್ಕೆ ಎರಡಕ್ಕೂ ಸೇರಿವೆಯೋ, ಅಥವಾ ಪ್ರಧಾನಕ್ಕೆ ಮಾತ್ರವೋ? ಎಂದು ಸಂಶಯ.

ಸೋಮಯಾಗವೆಂದರೆ ಅಂಗಸಹಿತವಾದುದೇ. ಆದುದರಿಂದ ಅಂಗ-ಪ್ರಧಾನಗಳೆರಡಕ್ಕೂ ದೀಕ್ಷಾ-ದಕ್ಷಿಣೆಗಳು ಉಪಕಾರಕವಾಗುತ್ತವೆಯೆಂಬುದು ಇಲ್ಲಿನ ಪೂರ್ವಪಕ್ಷ.

ಇಲ್ಲಿಯ ಸಿದ್ಧಾಂತವು ಹೀಗಿದೆ ; **'ದೀಕ್ಷಾ ಸೋಮಸ್ಯ' 'ದಕ್ಷಿಣಾ ಸೋಮಸ್ಯ'** ಎಂಬ ವಚನಗಳು ದೀಕ್ಷೆ-ದಕ್ಷಿಣೆಗಳೆರಡೂ ಸೋಮಯಾಗಕ್ಕೆ ಸಂಬಂಧಿಸಿವೆಯೆಂದು ತಿಳಿಸುತ್ತವೆ. ಸೋಮವೆಂದರೆ ಪ್ರಧಾನವಾದ ಸೋಮಯಾಗವೆಂದೇ ಅರ್ಥ. ಅಂಗಸಹಿತವಾದ ಸೋಮಯಾಗವೆಂದು ಲಕ್ಷಣಾದಿಂದ ಅರ್ಥವನ್ನು ಹೇಳುವುದು ಸರಿಯಲ್ಲ. ಆದುದರಿಂದ ದೀಕ್ಷಾ-ದಕ್ಷಿಣೆಗಳು ಪ್ರಧಾನಕ್ಕೇ ಸಂಬಂಧಿಸುತ್ತವೆ.

**೩) ದಂಡದಾನವು ಪ್ರತಿಪತ್ತಿಯೇ? ಸಂಸ್ಕಾರಕರ್ಮವೇ?** **[ಜೈ.ಸೂ. 4.2.]**

**ಜ್ಯೋತಿಷ್ಟೋಮಪ್ರಕರಣದಲ್ಲಿ**

**'ಕ್ರೀತೇ ಸೋಮೇ ಮೈತ್ರಾವರುಣಾಯ ದಂಡಂ ಪ್ರಯಚ್ಛತಿ'** [ತೈ.ಸಂ. 6.1.4.]

ಎಂಬ ವಾಕ್ಯವು 'ಸೋಮಕ್ರಯಾನಂತರ ಯಜಮಾನನು ತಾನು ಧರಿಸಿರುವ ಔದುಂಬರದಂಡವನ್ನು ಮೈತ್ರಾವರುಣನಿಗೆ ಕೊಡಬೇಕು' ಎಂದು ದಂಡದಾನವನ್ನು ವಿಧಿಸುತ್ತದೆ. ಈ ದಂಡದಾನವು ಪ್ರತಿಪತ್ತಿಕರ್ಮವೇ? ಸಂಸ್ಕಾರಕರ್ಮವೇ?

**'ದಂಡೇನ ದೀಕ್ಷಯತಿ'** ಎಂಬುದಾಗಿ ಯಜಮಾನನ ದೀಕ್ಷೆಯಲ್ಲಿ ದಂಡವು ವಿಹಿತವಾಗಿದೆ. ಯಜಮಾನನಿಗೆ ದೀಕ್ಷಾಸಂಸ್ಕಾರವಾದ ಮೇಲೆ ದಂಡದ ಕಾರ್ಯವು ಮುಗಿಯಿತು. ಆದುದರಿಂದ ಮೈತ್ರಾವರುಣನಿಗೆ ದಂಡವನ್ನು ಕೊಡುವುದು **'ಪ್ರತಿಪತ್ತಿಕರ್ಮ'**. ಪ್ರತಿಪತ್ತಿಕರ್ಮವೆಂದರೆ **'ಉಪಯುಕ್ತಸ್ಯ ಆಕೀರ್ಣಕರತಾ-ನಿವರ್ತಕಂ ಕರ್ಮ'**. ಅಂದರೆ ಒಂದು ವಸ್ತುವಿನ ಉಪಯೋಗವಾದ ಮೇಲೆ ಅದರಿಂದ ತೊಂದರೆಯಾಗದಂತೆ ಅದನ್ನು ಎಲ್ಲಿಯಾದರೂ ನಿರ್ದಿಷ್ಟವಾದಲ್ಲಿ ಹಾಕುವುದು ಎಂದರ್ಥ. ಮೈತ್ರಾವರುಣನಿಗೆ ನೀಡುವ ಈ ದಂಡದಿಂದ ಮೈತ್ರಾವರುಣನಿಗೆ ಯಾವ ಸಂಸ್ಕಾರವೂ ಇಲ್ಲವಾದುದರಿಂದ ಈ ದಂಡದಾನವು ಪ್ರತಿಪತ್ತಿಕರ್ಮವೇ ವಿನಃ ಸಂಸ್ಕಾರಕರ್ಮವಲ್ಲ. ಇದು ಇಲ್ಲಿನ ಪೂರ್ವಪಕ್ಷ.

ಇಲ್ಲಿಯ ಸಿದ್ಧಾಂತವು ಹೀಗಿದೆ ; **'ದಂಡೀ ಪ್ರೈಷಾನನ್ವಾಹ'** ಎಂಬ ವಚನವು ಮೈತ್ರಾವರುಣನು ನಿಂತುಕೊಂಡು ದಂಡವನ್ನು ಆಶ್ರಯಿಸಿ ಪ್ರೈಷಗಳನ್ನು ಹೇಳಬೇಕೆಂದು ವಿಧಿಸುತ್ತದೆ. ಆದುದರಿಂದ ಯಜಮಾನನು ದಂಡವನ್ನಿತ್ತರೂ ದಂಡದ ಕಾರ್ಯವು ಮುಗಿದಿಲ್ಲ. ಇದು ಮೈತ್ರಾವರುಣನ **ಸಂಸ್ಕಾರಕರ್ಮವೂ** ಆಗುತ್ತದೆ.

ಹೀಗೆ ದಂಡದಾನವು ಸಂಸ್ಕಾರಕರ್ಮವಾದುದರಿಂದಲೇ ದೀಕ್ಷೆಯಿಲ್ಲದ ನಿರೂಢಪಶುಬಂಧಯಾಗದಲ್ಲಿಯೂ ಮೈತ್ರಾವರುಣನಿಗೆ ದಂಡದಾನವುಂಟು.

**೪) ಉತ್ತಿಷ್ಠನ್.....ಮುಂತಾದವು ಕಾಲವಿಧಿಯೇ? ಮಂತ್ರವಿಧಿಯೇ? [ಜೈ.ಸೂ.3.2]**

ಜ್ಯೋತಿಷ್ಟೋಮಪ್ರಕರಣದಲ್ಲಿ ಈ ವಾಕ್ಯಗಳಿವೆ. **'ಉತ್ತಿಷ್ಠನ್ನಾಹಾಗ್ನೀದಗ್ನೀನ್ ವಿಹರ' 'ವ್ರತಂ ಕೃಣುತೇತಿ ವಾಚಂ ವಿಸೃಜತಿ'** [ತೈ.ಸಂ. 6-3-1, 6-1-4] ಈ ವಾಕ್ಯಗಳಲ್ಲಿ ಮಂತ್ರವಿಧಿಯೇ? ಕಾಲವಿಧಿಯೇ? ಎಂದು ಸಂಶಯ. ಈ ವಾಕ್ಯಗಳಲ್ಲಿ ಮೊದಲನೆಯ ವಾಕ್ಯವು 'ಉತ್ತಿಷ್ಠನ್ನಾಹ' ಎಂದು ಆಗ್ನೀಧ್ರನನ್ನು ಸಂಬೋಧಿಸಿ 'ಅಗ್ನೀನ್ ವಿಹರ' ಮೊದಲಾದ ಪ್ರೈಷವು ಉತ್ಥಾನಾಂಗವಾಗಿ ವಿಹಿತವಾಗಿದೆ. 'ವ್ರತಂ ಕೃಣುತ' ಎಂಬ ಮಂತ್ರವು 'ವಾಚಂ ವಿಸೃಜತಿ' ಎಂಬುದಾಗಿ ಯಜಮಾನನ ವಾಗ್ವಿಸರ್ಗದಲ್ಲಿ ವಿಹಿತವಾಗಿದೆ. ಇದು ಮಂತ್ರವಿಧಿಯೇ ಹೊರತು ಕಾಲವಿಧಿಯಲ್ಲ. ಕಾಲವಾಚಕವಾದ ಪದವು ಇಲ್ಲವಾದುದರಿಂದ 'ಉತ್ತಿಷ್ಠನ್' ಎಂಬುದಕ್ಕೆ ಉತ್ಥಾನಕಾಲ(ಏಳುವ ಸಮಯ)ವೆಂಬುದ್ಧಾಗಿ ಲಕ್ಷಣಾವೃತ್ತಿಯನ್ನು ಆಶ್ರಯಿಸಬೇಕಾಗುತ್ತದೆ. ಆದುದರಿಂದ ಇವು ಮಂತ್ರವಿಧಿಗಳಾಗುತ್ತವೆ. ಇದು ಇಲ್ಲಿನ ಪೂರ್ವಪಕ್ಷ.

ಇಲ್ಲಿಯ ಸಿದ್ಧಾಂತವು ಹೀಗಿದೆ ; ಈ ಮಂತ್ರಗಳಲ್ಲಿ ಉತ್ಥಾನವಾಗಲೀ, ವಾಗ್ವಿಮೋಕ(ಮೌನವನ್ನು ಬಿಡುವುದು)ವಾಗಲೀ ಪ್ರತಿಪಾದಿತವಾಗಿಲ್ಲ. 'ಅಗ್ನೀನ್ ವಿಹರ' 'ವ್ರತಂ ಕೃಣುತ' ಎಂಬುವು ಈ ಮಂತ್ರಗಳು. ಅನುಷ್ಠೇಯಾರ್ಥವಾದ ಉತ್ಥಾನ ಮತ್ತು ವಾಗ್ವಿಮೋಕಗಳನ್ನು ಈ ಮಂತ್ರಗಳು ಪ್ರಕಾಶಪಡಿಸಲಾರವು. ಆದುದರಿಂದ ಲಕ್ಷಣಾವೃತ್ತಿಯನ್ನು ಆಶ್ರಯಿಸಿ ಉತ್ಥಾನಕಾಲ, ವಾಗ್ವಿಮೋಕಕಾಲಗಳೇ ಇಲ್ಲಿ ವಿಹಿತವಾಗಿವೆ ಎಂದು ತಿಳಿಯಬೇಕು. ಏಳುವಾಗ ಈ ಮಂತ್ರವನ್ನು ಹೇಳಬೇಕು. ವಾಗ್ವಿಮೋಕದ ಸಮಯದಲ್ಲಿ ಈ ಮಂತ್ರಗಳನ್ನು ಹೇಳಬೇಕೆಂಬುದಾಗಿ ಕಾಲವಿಧಿ. ಮಂತ್ರವಿಧಿಯಲ್ಲ.

ಈ ಎರಡನೆಯ ಅನುವಾಕದಲ್ಲಿ ದೀಕ್ಷೆಯನ್ನು ಹೇಳಿದುದಾಯಿತು. ದೀಕ್ಷಿತನಾದ ಯಜಮಾನನು ದೇವಯಜನವನ್ನು ಸ್ವೀಕಾರ ಮಾಡಿ ಸೋಮಕ್ರಯಣಾದಿಗಳನ್ನು ಮಾಡಬೇಕು. ಈ ದೇವಯಜನಸ್ವೀಕಾರವು ಮೂರನೆಯ ಅನುವಾಕದಲ್ಲಿ ಹೇಳಲ್ಪಟ್ಟಿದೆ. ದೇವಯಜನಸ್ವೀಕಾರಕ್ಕೆ ಮೊದಲಿನ ವ್ರತಪಾನ, ದ್ರವ್ಯಸಂಪಾದನಗಳೂ ಹೇಳಲ್ಪಟ್ಟಿವೆ.

---

## ॥ ತೃತೀಯೋಽನುವಾಕಃ ॥

ದೈವೀಂ ಧಿಯಂ ಮನಾಮಹೇ ಸುಮೃಡೀಕಾಮ

ಭಿಷ್ಟಯೇ ವರ್ಚೋಧಾಂ ಯಜ್ಞವಾಹಸಗ್‌ಂ ಸುಪಾರಾ ನೋ

---

ದೈವೀಮ್। ಧಿಯಮ್। ಮನಾಮಹೇ। ಸುಮೃಡೀಕಾಮಿತಿ ಸು-ಮೃಡೀಕಾಮ್। ಅಭಿಷ್ಟಯೇ। ವರ್ಚೋಧಾಮಿತಿ ವರ್ಚಃ-ಧಾಮ್। ಯಜ್ಞವಾಹಸಮಿತಿ ಯಜ್ಞ-ವಾಹಸಮ್। ಸುಪಾರೇತಿ ಸು-ಪಾರಾ। ನಃ।

---

| ಮಂತ್ರ | ವಿನಿಯೋಗ (ಬೌಧಾಯನ) |
|---|---|
| ದೈವೀಂ.........ವಶೇ। | ಯಜಮಾನನು ಆಚಮನವನ್ನು ಮಾಡಲು.<br>ಯಜಮಾನನು ಕೈ ತೊಳೆದುಕೊಳ್ಳಲು—ಆಪಸ್ತಂಬ |

---

(ನಾವು) ಅಭಿಷ್ಟಯೇ = ನಮ್ಮ ಇಷ್ಟಾರ್ಥಸಿದ್ಧಿಗಾಗಿ (ದೇವತೆಗಳ ಯಾಗಸಿದ್ಧಿಗಾಗಿ); ಸುಮೃಡೀಕಾಮ್ = ಒಳ್ಳೆಯ ಸುಖಕ್ಕೆ ಕಾರಣವಾಗಿರುವ; ವರ್ಚೋಧಾಮ್ = ವರ್ಚಸ್ಸನ್ನು ಧರಿಸುವ(ಬ್ರಹ್ಮಚರ್ಯಸಾಧಕವಾದ) ಯಜ್ಞವಾಹಸಮ್ = ಯಜ್ಞನಿರ್ವಹಣ ಸಮರ್ಥವಾದ; ದೈವೀಮ್ = ದೇವವಿಷಯಕವಾದ; ಧಿಯಮ್ = [ಕರ್ಮಾನುಷ್ಠಾನದ] ಬುದ್ಧಿಯನ್ನು; ಮನಾಮಹೇ = [ನಮ್ಮ ಈ ಬುದ್ಧಿಯಿಂದ] ಸಂಪಾದಿಸುತ್ತೇವೆ. [ಅಭ್ಯಸಿಸುತ್ತೇವೆ]. [ಸಾ = ಆ ಬುದ್ಧಿಯು] ಸುಪಾರಾ = ಒಳ್ಳೆಯ ಕೊನೆಯನ್ನು ಮುಟ್ಟಿದುದಾಗಿ (ಸಮಾಪ್ತಿ ಸಾಧನವಾಗಿ) ನಃ = ನಮ್ಮ; ವಶೇ = ಅಧೀನದಲ್ಲಿ ;

---

ನಾವು ಇಷ್ಟಾರ್ಥಸಿದ್ಧಿಗಾಗಿ ಈಗ ದೇವತೆಗಳ ಯಾಗಕ್ಕೆ ಸಂಬಂಧಿಸಿದ ದೈವೀ ಬುದ್ಧಿಯನ್ನು ಈ ನಮ್ಮ ಬುದ್ಧಿಯಿಂದ ಸಂಪಾದಿಸುತ್ತೇವೆ. (ನಮ್ಮ ಬುದ್ಧಿಯು ದೇವವಿಷಯಕವಾದ ಯಾಗದ ಕಡೆಗೇ ಇರಲಿ.) ಆ ದೈವೀಬುದ್ಧಿಯು ಸುಖಕ್ಕೆ ಕಾರಣ

## ಅಸದ್ವಶೇ । ಯೇ ದೇವಾ ಮನೋಜಾತಾ ಮನೋಯುಜಃ ಸುದಕ್ಷಾ ದಕ್ಷಪಿತಾರಸ್ತೇ ನಃ ಪಾಂತು

---

ಅಸತ್। ವಶೇ। ಯೇ। ದೇವಾಃ। ಮನೋಜಾತಾ ಇತಿ ಮನಃ - ಜಾತಾಃ। ಮನೋಯುಜ ಇತಿ ಮನಃ - ಯುಜಃ। ಸುದಕ್ಷಾ ಇತಿ ಸು-ದಕ್ಷಾಃ। ದಕ್ಷಪಿತಾರ ಇತಿ ದಕ್ಷ-ಪಿತಾರಃ। ತೇ। ನಃ। ಪಾಂತು।

---

| ಮಂತ್ರ | ವಿನಿಯೋಗ |
|---|---|
| ಯೇ ದೇವಾಃ.........ಸ್ವಾಹಾ। | ಯಜಮಾನನು ಪಯೋವ್ರತಪಾನವನ್ನು ಮಾಡಲು |

---

**ಅಸತ್** = (ಅಸ್ತು) = ಇರಲಿ. **ಯೇ** = ಯಾವ; **ಮನೋಜಾತಾಃ** =ಮನಸ್ಸಿನೊಡನೆಯೇ ಜನಿಸಿದವರೂ; **ಮನೋಯುಜಃ** = ವ್ಯವಹಾರಕಾಲದಲ್ಲಿಯೂ ಮನಸ್ಸಿನೊಡನೆಯೇ ಸೇರಿದವರೂ; **ಸುದಕ್ಷಾಃ**=ತಮ್ಮ ಕಾರ್ಯಗಳಲ್ಲಿ ಸಮರ್ಥರೂ; **ದಕ್ಷಪಿತಾರಃ** =ಪ್ರಜಾಪತಿಯಿಂದ ಉತ್ಪನ್ನರಾದವರೂ (ಆದ); **ದೇವಾಃ** = [ಚಕ್ಷುರಾದಿಪ್ರಾಣಾಭಿಮಾನಿ] ದೇವತೆಗಳು [ಇದ್ವಾರೆಯೋ]; **ತೇ** = ಅವರು; **ನಃ** = [ಪಯಃಪಾನರೂಪವಾದ ವ್ರತವನ್ನು ಮಾಡಿದ] ನಮ್ಮನ್ನು; **ಪಾಂತು** = [ಒಳಗೂ ಹೊರಗೂ ಶುದ್ಧಿಯನ್ನುಂಟುಮಾಡಿ] ರಕ್ಷಿಸಲಿ.

---

ವಾದುದು. ಬ್ರಹ್ಮವರ್ಚಸಕ್ಕೆ ಸಾಧನವಾದುದು. ಯಜ್ಞವನ್ನು ಸರಿಯಾದ ರೀತಿಯಲ್ಲಿ ನಡೆಸಲು ಸಮರ್ಥವಾದುದು. ಆ ಬುದ್ಧಿಯು ಯಜ್ಞಸಮಾಪ್ತಿಪರ್ಯಂತವಾಗಿಯೂ ನಮ್ಮ ವಶದಲ್ಲಿರಲಿ.

ಚಕ್ಷುರಾದಿಪ್ರಾಣಾಭಿಮಾನಿ ದೇವತೆಗಳು ಮನಸ್ಸಿನೊಡನೆಯೇ ಹುಟ್ಟಿರುತ್ತಾರೆ. ಮನಸ್ಸಿನ ಸಹಕಾರದಿಂದಲೇ ತಮ್ಮ ತಮ್ಮ ಕಾರ್ಯಗಳನ್ನು ನಿರ್ವಹಿಸುತ್ತಾರೆ.

**ತೇ ನೋಽವಂತು ತೇಭ್ಯೋ ನಮಸ್ತೇಭ್ಯಃ ಸ್ವಾಹಾಗ್ನೇ**
**ತ್ವಗ್ಂ ಸು ಜಾಗೃಹಿ ವಯಗ್ಂ ಸು ಮಂದಿಷೀಮಹಿ**
**ಗೋಪಾಯ ನಃ ಸ್ವಸ್ತಯೇ ಪ್ರಬುಧೇ ನಃ ಪುನರ್ದದಃ।**

---

ತೇ। ನಃ। ಅವಂತು। ತೇಭ್ಯಃ। ನಮಃ। ತೇಭ್ಯಃ। ಸ್ವಾಹಾ। ಅಗ್ನೇ। ತ್ವಮ್। ಸ್ವಿತಿ।ಜಾಗೃಹಿ। ವಯಮ್। ಸ್ವಿತಿ। ಮಂದಿಷೀಮಹಿ। ಗೋಪಾಯ। ನಃ। ಸ್ವಸ್ತಯೇ। ಪ್ರಬುಧ ಇತಿ ಪ್ರ-ಬುಧೇ। ನಃ। ಪುನಃ। ದದಃ।

---

| ಮಂತ್ರ | ವಿನಿಯೋಗ (ಬೌಧಾಯನ) |
|---|---|
| ಅಗ್ನೇ......ದದಃ। | ಮಲಗುವಾಗ ಯಜಮಾನನು ಹೇಳಲು.<br>ಆಪಸ್ತಂಬ<br>ಆಹವನೀಯವನ್ನು ಅಭಿಮಂತ್ರಿಸಲು |

---

**ತೇ** = ಅವರು; **ನಃ** = ನಮ್ಮನ್ನು; **ಅವಂತು** = ಅನುಸರಿಸಿ ಪ್ರವೇಶಿಸಲಿ; [ನಮ್ಮಲ್ಲಿ ಯಾವಾಗಲೂ ಇರಲಿ] **ತೇಭ್ಯಃ** =ಅವರಿಗೆ; **ನಮಃ** = ನಮಸ್ಕಾರ; **ತೇಭ್ಯಃ** = ಅವರಿಗೆ; **ಸ್ವಾಹಾ** = [ನಾನು ಕುಡಿದ ಹಾಲು] ಹುತವಾಗಲಿ. ❖**ಅಗ್ನೇ!** = ಆಹವನೀಯಾಗ್ನಿದೇವನೇ! **ತ್ವಮ್** =ನೀನು; **ಸು ಜಾಗೃಹಿ** = ಚೆನ್ನಾಗಿ ಎಚ್ಚರವಾಗಿರು; **ವಯಮ್** = ನಾವು; **ಸು ಮಂದಿಷೀಮಹಿ** = ಭಯವಿಲ್ಲದವರಾಗಿ ನಿದ್ರಿಸುತ್ತೇವೆ; **ನಃ** = ನಮ್ಮನ್ನು; **ಗೋಪಾಯ** =ರಕ್ಷಿಸು;**ನಃ**=ನಮ್ಮ; **ಸ್ವಸ್ತಯೇ**=ಅವಿನಾಶಕ್ಕಾಗಿ; (ಮಂಗಲಕ್ಕಾಗಿ) **ಪುನಃ ಪ್ರಬುಧೇ** = ಮತ್ತೆ ಎಚ್ಚರಗೊಳ್ಳುವುದಕ್ಕಾಗಿ; **ದದಃ** = (ಸಾಮರ್ಥ್ಯವನ್ನು) ಕೊಡು.

---

(ಇಂದ್ರಿಯಗಳು ನೋಡುವುದು ಮೊದಲಾದ ತಮ್ಮ ತಮ್ಮ ಕಾರ್ಯಗಳನ್ನು ಮಾಡಬೇಕಾದರೆ ಮನಸ್ಸಿನ ಸಹಕಾರವು ಬೇಕು.) ತಮ್ಮ ಕೆಲಸದಲ್ಲಿ ಸಮರ್ಥರು. ಪ್ರಜಾಪತಿಯೇ ಇವುಗಳ ತಂದೆ. ಇವರು ಪಯೋವ್ರತಾನುಷ್ಠಾನ ಮಾಡುತ್ತಿರುವ

ತ್ವಮಗ್ನೇ ವ್ರತಪಾ ಅಸಿ ದೇವ ಆ ಮರ್ತ್ಯೇಷ್ವಾ ।

ತ್ವಂ(೧)ಯಜ್ಞೇಷ್ವೀಡ್ಯಃ ।

ತ್ವಮ್। ಅಗ್ನೇ। ವ್ರತಪಾ ಇತಿ ವ್ರತ-ಪಾಃ । ಅಸಿ। ದೇವಃ । ಏತಿ। ಮರ್ತ್ಯೇಷು। ಆ।

ತ್ವಮ್(೧)। ಯಜ್ಞೇಷು । ಈಡ್ಯಃ॥

| ಮಂತ್ರ | ವಿನಿಯೋಗ |
|---|---|
| ತ್ವಮಗ್ನೇ........ಈಡ್ಯಃ । | ಯಜಮಾನನು ಎಚ್ಚರಗೊಂಡ ಮೇಲೆ ಅಧ್ವರ್ಯುವು ಯಜಮಾನನಿಂದ ವಾಚನ ಮಾಡಿಸಲು |

ಅಗ್ನೇ = ಎಲೈ ಅಗ್ನಿದೇವನೇ! **ತ್ವಮ್** = ನೀನು; **ವ್ರತಪಾಃ ಅಸಿ** = ವ್ರತರಕ್ಷಕ ನಾಗಿದ್ದೀಯೆ; **ದೇವಃ ಆ ಮರ್ತ್ಯೇಷು ಆ** = ದೇವನಾದ (ನೀನು) ಬಂದು ಮಾನವರಲ್ಲಿ (ವ್ರತಲೋಪಗಳನ್ನು) ಎಲ್ಲ ಕಡೆಗಳಲ್ಲಿಯೂ (ಪರಿಹರಿಸುತ್ತೀಯೆ). **ತ್ವಮ್** = ನೀನು; **ಯಜ್ಞೇಷು** = ಯಾಗಗಳಲ್ಲಿ; **ಈಡ್ಯಃ** = ('ಅಗ್ನಿಮೂರ್ಧಾ' ಇತ್ಯಾದಿಯಾಗಿ) ಸ್ತೋತ್ರ

---

ನಮ್ಮನ್ನು ಒಳಗೂ, ಹೊರಗೂ ಶುದ್ಧಿಗೊಳಿಸಿ ರಕ್ಷಿಸಲಿ. ಯಾವಾಗಲೂ ನಮ್ಮಲ್ಲಿ ನೆಲಸಿರಲಿ. ಅವರಿಗೆ ನಮಸ್ಕಾರ. ಈ ಪಯಸ್ಸು ಅವರಿಗೆ ಹುತವಾಗಲಿ.

ಅಗ್ನಿದೇವನೇ! ನೀನು ಚೆನ್ನಾಗಿ ಎಚ್ಚರವಾಗಿರು. ನೀನು ರಕ್ಷಕನಾಗಿದ್ದೀಯೆಂದು ನಂಬಿ ನಾವು ನಿರ್ಭಯರಾಗಿ ನಿದ್ದೆ ಮಾಡುತ್ತೇವೆ. ಮಂಗಲಗಳನ್ನು ಪಡೆಯುವುದಕ್ಕಾಗಿ ನಮ್ಮನ್ನು ರಾಕ್ಷಸಾದಿಗಳ ದೆಸೆಯಿಂದ ರಕ್ಷಿಸು.

ಅಗ್ನಿದೇವನೇ! ಪ್ರಾರ್ಥಿಸಿದಾಗ ಬಂದು ಮನುಷ್ಯರ ವ್ರತಗಳನ್ನು ರಕ್ಷಿಸುವ ದೇವನೇ ನೀನಾಗಿದ್ದೀಯೆ. ನಿನ್ನನ್ನು ಎಲ್ಲೆಲ್ಲಿಯೂ ಯಜ್ಞಗಳಲ್ಲಿ ಸ್ತುತಿಸುತ್ತಾರೆ. ನೀನು ವ್ರತವಿರುದ್ಧವಾದ ನಮ್ಮ ಆಚರಣೆಗಳ ದೋಷಗಳನ್ನು ಪರಿಹರಿಸು.

ದೇವತೆಗಳೆಲ್ಲರೂ ರಕ್ಷಿಸುವುದಕ್ಕಾಗಿ ನನ್ನನ್ನು ಆವರಿಸಿ ನಿಲ್ಲಲಿ. ಪೂಷದೇವನು

ವಿಶ್ವೇ ದೇವಾ ಅಭಿ ಮಾಮಾಽವವೃತ್ರನ್ಪೂಷಾ ಸನ್ಯಾ
ಸೋಮೋ ರಾಧಸಾ ದೇವಃ ಸವಿತಾ ವಸೋರ್ವಸುದಾವಾ

---

ವಿಶ್ವೇ। ದೇವಾಃ । ಅಭೀತಿ। ಮಾಮ್। ಏತಿ। ಅವವೃತ್ರನ್। *ಪೂಷಾ। ಸನ್ಯಾ। ಸೋಮಃ। ರಾಧಸಾ* । ದೇವಃ। ಸವಿತಾ। ವಸೋಃ। ವಸುದಾವೇತಿ ವಸು-ದಾವಾ।

---

| ಮಂತ್ರ | ವಿನಿಯೋಗ |
|---|---|
| 1) ವಿಶ್ವೇ ದೇವಾ.....ವಸುದಾವಾ। | ಸನಿಹಾರರನ್ನು (ಯಜ್ಞಕ್ಕೆ ಬೇಕಾದ ವಸ್ತುಗಳನ್ನು ತರುವವರು) ಕಳುಹಿಸಲು. —ಬೌಧಾಯನ |
| ೧) ವಿಶ್ವೇ............ವೃತ್ರನ್। | ಎದ್ದ ಮೇಲೆ ಯಜಮಾನನು ಜಪಿಸಲು |
| ೨) ಪೂಷಾ..........ರಾಧಸಾ। | ವಸ್ತುಗಳನ್ನು ತರುವವರನ್ನು ಕಳುಹಿಸಲು —ಆಪಸ್ತಂಬ |

---

ಮಾಡಲ್ಪಡುತ್ತೀಯೆ. +ವಿಶ್ವೇ ದೇವಾಃ = ಎಲ್ಲಾ ದೇವತೆಗಳೂ; ಅಭಿ = [ಅಭಿತಃ) ಸುತ್ತಲೂ(ರಕ್ಷಿಸುವುದಕ್ಕಾಗಿ); ಮಾಮ್ = ನನ್ನನ್ನು; ಆ ಅವವೃತ್ರನ್ = ಆವರಿಸಿ ನಿಲ್ಲಲಿ; +ಪೂಷಾ =ಪೋಷಕನಾದ ಪೂಷದೇವನು; ಸನ್ಯಾ = ಕೊಡಬೇಕಾದ ಹಿರಣ್ಯದ್ರವ್ಯದೊಡನೆ (ಆಗಚ್ಛತು = ಬರಲಿ); ಸೋಮಃ = ಸೋಮದೇವನು; ರಾಧಸಾ = [ಯಾಗಸಾಧಕವಾದ) ವಸ್ತ್ರದೊಡನೆ [ಬರಲಿ]; +ವಸೋಃ ಸವಿತಾ ದೇವಃ = ಬೇರೆಯ ಗವಾದಿವಸ್ತುಗಳಿಗೆ ಪ್ರೇರಕನಾದ ಸವಿತೃದೇವನು; ವಸುದಾವಾ = ಐಶ್ವರ್ಯಪ್ರದನಾಗಿ [ಆ ವಸ್ತುಗಳನ್ನು ಕೊಡುವವನಾಗಿ ಬರಲಿ]; +ಸೋಮ! =ಸೋಮದೇವನೇ!; ಇಯತ್ = [ಯಜ್ಞಕ್ಕೆ ಬೇಕಾದ]

---

ಹಿರಣ್ಯವನ್ನು ತೆಗೆದುಕೊಂಡು ಬರಲಿ. ಸೋಮನು ವಸ್ತ್ರವನ್ನು ತರಲಿ. ಸವಿತೃದೇವನು ಗವಾದಿವಸ್ತುಗಳನ್ನು ತರಲಿ. ಸೋಮದೇವನೇ! ನೀನು ಯಾಗಕ್ಕೆ ಬೇಕಾದ ಇಷ್ಟು ದ್ರವ್ಯವನ್ನೂ ಕೊಡು. ಇನ್ನೂ ಅಧಿಕವಾಗಿ ತೆಗೆದುಕೊಂಡು ಬಾ. ನನ್ನಲ್ಲಿ ಧನಪುಷ್ಟಿಯು ಎಂದೂ ಹೋಗದಿರಲಿ. ಆಯುಸ್ಸಿನ ವಿಯೋಗವೂ ನನಗೆ ಆಗದಿರಲಿ.

ಎಲೈ ಹಿರಣ್ಯವೇ! ನೀನು ಎಲ್ಲರಿಗೂ ಸಂತೋಷವನ್ನು ಉಂಟುಮಾಡುವವನಾಗಿ

**ರಾಸ್ವೇಯತ್ಸೋಮಾ ಭೂಯೋ ಭರ ಮಾ ಪೃಣನ್**
**ಪೂರ್ತ್ಯಾ ವಿರಾಧಿ ಮಾಹಮಾಯುಷಾ ಚಂದ್ರಮಸಿ**
**ಮಮ ಭೋಗಾಯ ಭವ**

---

ರಾಸ್ವ। ಇಯತ್। ಸೋಮ। ಏತಿ। ಭೂಯಃ। ಭರ। ಮಾ। ಪೃಣನ್। ಪೂರ್ತ್ಯಾ। ವೀತಿ। ರಾಧಿ। ಮಾ। ಅಹಮ್। ಆಯುಷಾ। ಚಂದ್ರಮ್। ಅಸಿ। ಮಮ। ಭೋಗಾಯ। ಭವ।

---

| ಮಂತ್ರ | ವಿನಿಯೋಗ (ಬೌಧಾಯನ) |
| --- | --- |
| 2) ರಾಸ್ವೇಯತ್....ಆಯುಷಾ। | ವಸ್ತುಗಳನ್ನು ತರುತ್ತಿರುವವರನ್ನು ನೋಡಿ ಜಪಿಸಲು |
| ೩) ದೇವಃ....ಆಯುಷಾ। | 'ಚಂದ್ರಮಸಿ' ಮುಂತಾದ ಆರು ಮಂತ್ರಗಳಲ್ಲಿ ಹೇಳಲ್ಪಟ್ಟಿರದ ವಸ್ತುಗಳ ಪರಿಗ್ರಹದಲ್ಲಿ—(ಆಪ) |
| ಚಂದ್ರಮಸಿ..........ಭವ। | ಹಿರಣ್ಯವನ್ನು ಪ್ರತಿಗ್ರಹ ಮಾಡಲು |

---

ಇಷ್ಟು [ದ್ರವ್ಯವನ್ನು]; ರಾಸ್ವ = ಕೊಡು; ಭೂಯಃ= [ಇದಕ್ಕಿಂತಲೂ] ಅಧಿಕವಾದ [ದ್ರವ್ಯವನ್ನು]; ಆ ಭರ = ತಂದುಕೊಡು; ಪೃಣನ್ = [ಧನಸಮೃದ್ಧಿಯಿಂದ ನನ್ನನ್ನು] ಪೂರ್ಣಗೊಳಿಸುತ್ತಾ; ಪೂರ್ತ್ಯಾ = ಧನಪುಷ್ಟಿಯಿಂದ (ಧನದಿಂದ) ಮಾ* ವಿರಾಧಿ = ವಿಯುಕ್ತನನ್ನಾಗಿ ಮಾಡಬೇಡ; ಅಹಮ್ = ನಾನು; ಆಯುಷಾ = ದೀರ್ಘಾಯುಸ್ಸಿನಿಂದ; ಮಾ[ವಿರಾಧಿ] = ವಿಯುಕ್ತನಾಗಿ ಮಾಡಲ್ಪಡುವುದು ಬೇಡ. +[ಎಲೈ ಹಿರಣ್ಯವೇ! ನೀನು] ಚಂದ್ರಮ್ = ಎಲ್ಲರಿಗೂ ಸಂತೋಷವನ್ನುಂಟುಮಾಡುವವನಾಗಿ; ಅಸಿ = ಇದ್ದೀಯೆ; ಮಮ = ನನ್ನ; ಭೋಗಾಯ = ದಾನವೇ ಮೊದಲಾದ ಉಪಭೋಗಕ್ಕಾಗಿ; ಭವ =ಆಗು.

---

ದ್ದೀಯೆ. ನನ್ನ ದಾನವೇ ಮೊದಲಾದ ಉಪಭೋಗಕ್ಕಾಗಿ ಆಗು.

---

*ಇಲ್ಲಿ ಸಾಯಣರು 'ಮಾ' ಎಂಬುದನ್ನು 'ಪೃಣನ್' ಎಂಬುದರೊಡನೆ ಅನ್ವಯ ಮಾಡಿ ಮಾ ಪೃಣನ್ = ಮಾಂ ಪೂರಯನ್ = ನನ್ನನ್ನು ಪೂರ್ಣಗೊಳಿಸುತ್ತಾ ಎಂಬ ಅರ್ಥವನ್ನೂ ನಿರ್ದೇಶಿಸಿದ್ದಾರೆ. ಆದರೆ 'ನನ್ನನ್ನು' ಎಂಬ ಅರ್ಥ ಕೊಡುವ 'ಮಾ' ಎಂಬುದು ಅನುದಾತ್ತವಾಗಿರಬೇಕಾಗುತ್ತದೆ [ಪಾ.ಸೂ. 8.1.18, 23]. ಆದರೆ 'ಮಾ' ಎಂಬುದು ಛಾಂದಸಪ್ರಯೋಗವಾದುದರಿಂದ ಉದಾತ್ತವಾದರೂ ಆ ಅರ್ಥವನ್ನು ಕೊಡುತ್ತದೆ ಎಂದು ಒಪ್ಪಿಕೊಳ್ಳಬೇಕಾಗುವುದು.

## ವಸ್ತ್ರಮಸಿ ಮಮ ಭೋಗಾಯ ಭವೋಸ್ರಾಸಿ ಮಮ ಭೋಗಾಯ ಭವ ಹಯೋಽಸಿ ಮಮ ಭೋಗಾಯ ಭವ

---

ವಸ್ತ್ರಮ್। ಅಸಿ। ಮಮ। ಭೋಗಾಯ। ಭವ। ಉಸ್ರಾ। ಅಸಿ। ಮಮ। ಭೋಗಾಯ। ಭವ । ಹಯಃ। ಅಸಿ। ಮಮ। ಭೋಗಾಯ। ಭವ [೨]

---

| ಮಂತ್ರ | ವಿನಿಯೋಗ |
|---|---|
| ವಸ್ತ್ರಮಸಿ.........ಭವ । | ವಸ್ತ್ರದ ಪ್ರತಿಗ್ರಹವನ್ನು ಮಾಡಲು |
| ಉಸ್ರಾಸಿ.........ಭವ । | ಗೋವಿನ ಪ್ರತಿಗ್ರಹವನ್ನು ಮಾಡಲು |
| ಹಯೋಽಸಿ.........ಭವ । | ಅಶ್ವದ ಪ್ರತಿಗ್ರಹವನ್ನು ಮಾಡಲು |

---

+[ಎಲೈ ವಸ್ತ್ರವೇ! ನೀನು] **ವಸ್ತ್ರಮ್ ಅಸಿ** = ದೇಹವನ್ನು ಮುಚ್ಚಿ ಅಲಂಕರಿಸುವವನಾಗಿದ್ದೀಯೆ; **ಮಮ ಭೋಗಾಯ ಭವ** = ನನ್ನ ದಾನವೇ ಮೊದಲಾದ ಉಪಭೋಗಕ್ಕಾಗಿ ಆಗು. +[ಎಲೈ ಗೋವೇ! ನೀನು] **ಉಸ್ರಾ ಅಸಿ** = [ಕ್ಷೀರಾದಿಪ್ರದಾನದಿಂದ ಪ್ರಾಣಿಗಳಿಗೆ] ವಾಸಹೇತುವಾಗಿದ್ದೀಯೆ; **ಮಮ ಭೋಗಾಯ ಭವ** = ನನ್ನ ದಾನವೇ ಮೊದಲಾದ ಉಪಭೋಗಕ್ಕಾಗಿ ಆಗು. +[ಎಲೈ ಅಶ್ವವೇ! ನೀನು] **ಹಯಃ** = ಶೀಘ್ರವಾಗಿ ಹೋಗುವವನು; **ಅಸಿ** = ಆಗಿದ್ದೀಯೆ; **ಮಮ ಭೋಗಾಯ ಭವ** = ನನ್ನ ದಾನಾದ್ಯುಪಭೋಗಕ್ಕೆ ಆಗು.

---

ಎಲೈ ವಸ್ತ್ರವೇ! ನೀನು ದೇಹವನ್ನು ಆಚ್ಛಾದಿಸಿ ಅಲಂಕರಿಸುತ್ತೀಯೆ. ನೀನು ನನ್ನ ಉಪಭೋಗಕ್ಕಾಗಿ ಇರು.

ಎಲೈ ಗೋವೇ! ನೀನು ಹಾಲು ಮೊದಲಾದವುಗಳನ್ನಿತ್ತು ಪ್ರಾಣಿಗಳ ಇರುವಿಕೆಗೆ ಕಾರಣ. ನೀನು ನನ್ನ ಈ ಯಜ್ಞಾಂಗ ಉಪಭೋಗಕ್ಕೆ ಇರು.

ಎಲೈ ಅಶ್ವವೇ ! ನೀನು ಶೀಘ್ರಗಾಮಿ. ನನ್ನ ಉಪಭೋಗಕ್ಕೆ ಇರು.

## [ಭವ (೨)] ಭಾಗೋಽಸಿ ಮಮ ಭೋಗಾಯ ಭವ ಮೇಷೋಽಸಿ ಮಮ ಭೋಗಾಯ ಭವ

---

ಭಾಗಃ। ಅಸಿ। ಮಮ। ಭೋಗಾಯ। ಭವ। ಮೇಷಃ। ಅಸಿ। ಮಮ। ಭೋಗಾಯ। ಭವ।

---

| ಮಂತ್ರ | ವಿನಿಯೋಗ |
|---|---|
| ಭಾಗೋಽಸಿ........ಭವ । | ಹೋತವನ್ನು ಪ್ರತಿಗ್ರಹ ಮಾಡಲು |
| ಮೇಷೋಽಸಿ..........ಭವ । | ಟಗರನ್ನು ಪ್ರತಿಗ್ರಹ ಮಾಡಲು |

---

+[ಎಲೈ ಹೋತವೇ! ನೀನು]. ಭಾಗಃ ಅಸಿ =ಭೇದನವನ್ನು ತಿಳಿದವನಾಗಿರುವೆ; ಮಮ ಭೋಗಾಯ ಭವ = ದಾನವೇ ಮೊದಲಾದ ನನ್ನ ಉಪಭೋಗಕ್ಕೆ ಇರು. +[ಎಲೈ! ಟಗರೇ! ನೀನು] ಮೇಷಃ ಅಸಿ =ಸ್ಪರ್ಧೆಯಲ್ಲಿ ಜಯಿಸುವವನಾಗಿರುವೆ; ಮಮ ಭೋಗಾಯ ಭವ = ನನ್ನ ದಾನವೇ ಮೊದಲಾದ ಉಪಭೋಗಕ್ಕಾಗಿ ಇರು. +ತ್ವಾ = [ಕಳೆದುಹೋದ ಅಥವಾ ಮೃತಿಹೊಂದಿದ] ನಿನ್ನನ್ನು;

---

ಎಲೈ ಹೋತವೇ! ನೀನು ಭೇದನವನ್ನು ತಿಳಿದವನಾಗಿರುತ್ತೀಯೆ. ನೀನು ನನ್ನ ಉಪಭೋಗಕ್ಕಾಗಿ ಇರು.

ಎಲೈ ಟಗರೇ! ನೀನು ಕಾಳಗದಲ್ಲಿ ಜಯಶೀಲನು. ನೀನು ಈ ಯಜ್ಞದಲ್ಲಿ ಉಪಭೋಗಕ್ಕಾಗಿ ಇರು.

ಯಾಗಕ್ಕಾಗಿ ಬಂದಿರುವ ವಸ್ತುಗಳನ್ನೂ, ಪ್ರಾಣಿಗಳನ್ನೂ ಅವುಗಳ ವಿನಿಯೋಗ ವಾಗುವವರೆಗೂ ರಕ್ಷಿಸಬೇಕು. ಆಕಸ್ಮಿಕವಾಗಿ ರೋಗ, ಮರಣ-ನಾಶಾದಿಗಳು ಸಂಭವಿಸಿದರೆ ಆಗ ಅವುಗಳನ್ನು ದೇವತೆಗಳಿಗೆ ಸಮರ್ಪಿಸಿರುತ್ತೇನೆಂದು ಹೇಳಬೇಕು. ಕಳೆದು ಹೋದರೆ, ತಪ್ಪಿಸಿಕೊಂಡು ಹೋದರೆ, ಅಥವಾ ಸತ್ತರೆ ವಾಯುದೇವನಿಗೆ ಕೊಡುತ್ತೇನೆಂದೂ, ನೀರಿನಲ್ಲಿ ಬಿದ್ದು ಸತ್ತರೆ ಅಥವಾ ಹಗ್ಗವು ಸುತ್ತಿಕೊಂಡು ಸತ್ತರೆ ವರುಣನಿಗೆಂದೂ, ರೋಗಪೀಡಿತವಾಗಿ ಕೃಶವಾದರೆ ಅಥವಾ ಹಳ್ಳದಲ್ಲಿ ಬಿದ್ದು ಸತ್ತರೆ

ವಾಯವೇ ತ್ವಾ ವರುಣಾಯ ತ್ವಾ ನಿರ್‌ಋತ್ಯೈತ್ವಾ ರುದ್ರಾಯ ತ್ವಾ ದೇವೀರಾಪೋ ಅಪಾಂ ನಪಾದ್ಯ ಊರ್ಮಿರ್ ಹವಿಷ್ಯ

ವಾಯವೇ। ತ್ವಾ। ವರುಣಾಯ। ತ್ವಾ। ನಿರ್‌ಋತ್ಯಾ ಇತಿ ನಿಃ-ಋತ್ಯೈ। ತ್ವಾ। ರುದ್ರಾಯ। ತ್ವಾ। ದೇವೀಃ। ಆಪಃ। ಅಪಾಮ್। ನಪಾತ್। ಯಃ। ಊರ್ಮಿಃ। ಹವಿಷ್ಯಃ।

| ಮಂತ್ರ | ವಿನಿಯೋಗ |
|---|---|
| ವಾಯವೇ ತ್ವಾ । | ಯಾಗಕ್ಕೆ ತಂದಿರುವ ವಸ್ತುಗಳು ಕಳೆದುಹೋದರೆ ಅಥವಾ ಮೃತಿ ಹೊಂದಿದರೆ ಅದನ್ನು ಸಮರ್ಪಿಸಲು. |
| ವರುಣಾಯ ತ್ವಾ । | ನೀರಿನಲ್ಲಿ ಸತ್ತರೆ ಅಥವಾ ಹಗ್ಗ ಸುತ್ತಿಕೊಂಡು ಸತ್ತರೆ ಅದನ್ನು ಸಮರ್ಪಿಸಲು. |
| ನಿರ್‌ಋತ್ಯೈ ತ್ವಾ। | ರೋಗದಿಂದ ಶೀರ್ಣವಾದರೆ, ಅಥವಾ ಆಳವಾದ ಹಳ್ಳದಲ್ಲಿ ಬಿದ್ದು ಸತ್ತರೆ ಅದನ್ನು ಸಮರ್ಪಿಸಲು. |
| ರುದ್ರಾಯ ತ್ವಾ। | ಹಾವು ಕಚ್ಚಿ ಸತ್ತರೆ, ಅಥವಾ ಹುಲಿಯು ತಿಂದರೆ ಅದನ್ನು ಸಮರ್ಪಿಸಲು. |

ವಾಯವೇ = ವಾಯುದೇವನಿಗೆ; [ಅನುದಿಶಾಮಿ = ಕೊಡುತ್ತೇನೆ]. +ತ್ವಾ = [ನೀರಿನಲ್ಲಿ ಸತ್ತ ಅಥವಾ ಹಗ್ಗವು ಸುತ್ತಿಕೊಂಡು ಸತ್ತ] ನಿನ್ನನ್ನು; ವರುಣಾಯ = ವರುಣದೇವನಿಗೆ (ಅನುದಿಶಾಮಿ = ಕೊಡುತ್ತೇನೆ]. +ತ್ವಾ =[ರೋಗಾದಿಗಳಿಂದ ಶೀರ್ಣವಾಗಿರುವ ಅಥವಾ ಆಳವಾದ ಹಳ್ಳದಲ್ಲಿ ಬಿದ್ದು ಸತ್ತ] ನಿನ್ನನ್ನು; ನಿರ್‌ಋತ್ಯೈ = ನಿರ್‌ಋತಿದೇವತೆಗೆ; (ಅನುದಿಶಾಮಿ = ಕೊಡುತ್ತೇನೆ). +ತ್ವಾ = [ಹಾವು ಕಚ್ಚಿ ಸತ್ತ ಅಥವಾ ಹುಲಿಯು ತಿಂದ] ನಿನ್ನನ್ನು; ರುದ್ರಾಯ = ರುದ್ರದೇವನಿಗೆ; (ಅನುದಿಶಾಮಿ= ಕೊಡುತ್ತೇನೆ). +ಅಪಾಂ ನಪಾತ್ = ಎಲೈ ಅಗ್ನಿದೇವನೇ!; ದೇವೀಃ ಆಪಃ = ಎಲೈ ಜಲದೇವಿಯರೇ!; ಯಃ ಊರ್ಮಿಃ = ಯಾವ [ನಿಮ್ಮ] ಅಲೆಯು; ಹವಿಷ್ಯಃ = [ವ್ರೀಹಿ ಮುಂತಾದುವುಗಳನ್ನು

ನಿರ್‌ಋತಿಗೆಂದೂ, ಹಾವಿನಿಂದಲೋ, ಹುಲಿಯಿಂದಲೋ ಸತ್ತರೆ ರುದ್ರದೇವನಿಗೆ ಕೊಡುತ್ತೇನೆಂದೂ ನಿರ್ದೇಶಿಸಬೇಕು.

ಇಂದ್ರಿಯಾವಾನ್ಮದಿಂತಮಸ್ತಂ ವ್ರೋ

ಮಾಽವಕ್ರಮಿಷಮಚ್ಛಿನ್ನಂ ತಂತುಂ ಪೃಥಿವ್ಯಾ ಅನು ಗೇಷಂ

---

ಇಂದ್ರಿಯಾವಾನಿತೀಂದ್ರಿಯ-ವಾನ್। ಮದಿಂತಮಃ। ತಮ್। ವಃ। ಮಾ। ಅವೇತಿ।

ಕ್ರಮಿಷಮ್। * ಅಚ್ಛಿನ್ನಮ್। ತಂತುಮ್। ಪೃಥಿವ್ಯಾಃ। ಅನ್ವಿತಿ। ಗೇಷಮ್* ।

---

| ಮಂತ್ರ | ವಿನಿಯೋಗ (ಬೌಧಾಯನ) |
|---|---|
| ದೇವಿರಾಪೋ.......ಗೇಷಮ್। | ಯಜ್ಞದೀಕ್ಷಿತನು ನೀರನ್ನು ದಾಟುವಾಗ ಹೇಳಲು |
| | (ಆಪಸ್ತಂಬ) |
| ೧)ದೇವೀರಾಪೋ......ಕ್ರಮಿಷಮ್। | ಯಜ್ಞದೀಕ್ಷಿತನು ನೀರಿಗೆ ಇಳಿಯುವಾಗ ಹೇಳಲು |
| ೨)ಅಚ್ಛಿನ್ನಂ......ಗೇಷಮ್। | ದಾಟುವಾಗ ಕೈಯಲ್ಲಿ ಹಿಡಿದಿರುವ ಮಣ್ಣಿನ ಹೆಂಟೆಯನ್ನು ಮತ್ತೊಂದು ದಡದವರೆಗೆ ಪುಡಿ ಮಾಡುತ್ತಾ ಹೋಗುವಾಗ ಹೇಳಲು |

---

ಬೆಳೆಸುವುದರಿಂದ] ಹವಿಃಸಂಬಂಧಿಯಾಗಿದೆಯೋ, ಇಂದ್ರಿಯಾವಾನ್ = [ಪಾನದಿಂದ] ಇಂದ್ರಿಯಶಕ್ತಿಗಳನ್ನು ಉಜ್ಜೀವನಗೊಳಿಸುತ್ತದೆಯೋ, ಮದಿಂತಮಃ = [ಬಾಯಾರಿಕೆಯನ್ನು ಹೋಗಲಾಡಿಸುತ್ತಾ] ಅತ್ಯಂತ ಸಂತೋಷವನ್ನು ಕೊಡುತ್ತದೆಯೋ, ವಃ = ನಿಮ್ಮ; **ತಮ್** = ಆ ಅಲೆಯನ್ನು; **ಮಾ ಅವಕ್ರಮಿಷಮ್** = ಕಾಲಿನಿಂದ ತುಳಿದು ದಾಟುವುದಿಲ್ಲ. +**ಪೃಥಿವ್ಯಾಃ** = ಭೂಮಿಯ; **ಅಚ್ಛಿನ್ನಂ ತಂತುಮ್** = ಲೋಷ್ಟಮಯವಾದ ಸೇತುವೆಯನ್ನು; **ಅನು** =ಅನುಸರಿಸಿ ಹೊಂದಿ; **ಗೇಷಮ್** = ಅದರ ಮೇಲೆ ಹೋಗುವೆನು.

---

ಯಜಮಾನನು ಬೇರೆಯ ಪ್ರದೇಶದಲ್ಲಿ ದೀಕ್ಷಾಸಂಸ್ಕಾರವನ್ನು ಹೊಂದಿ ದೇವಯಜನಕ್ಕೆ ಹೋಗಬೇಕಾದರೆ ಅಗ್ನಿಗಳನ್ನು ಅರಣಿಗಳಲ್ಲಿ ಸಮಾರೋಪ ಮಾಡಿಕೊಂಡು ಹೋಗಬೇಕು. ದಾರಿಯಲ್ಲಿ ನದಿಯು ಸಿಕ್ಕಿದರೆ ಈ ಕ್ರಮದಲ್ಲಿ ದಾಟಬೇಕು. 'ಎಲೈ! ಅಗ್ನಿದೇವನೇ! ನೀನೂ ನೀರಿಗೆ ಸಂಬಂಧಿಸಿದವನು (ನೀನು ನೀರಿನ ನಪ್ತಾ = ಮೊಮ್ಮಗ - ನಪಾತ್). ಎಲೈ ಜಲದೇವತೆಗಳೇ! ನಿಮ್ಮ ಅಲೆಗಳು (ಅಲೆಗಳನ್ನು

# ಭದ್ರಾದಭಿ ಶ್ರೇಯಃ ಪ್ರೇಹಿ ಬೃಹಸ್ಪತಿಃ ಪುರಏತಾ

ಭದ್ರಾತ್। ಅಭೀತಿ। ಶ್ರೇಯಃ। ಪ್ರೇತಿ। ಇಹಿ। ಬೃಹಸ್ಪತಿಃ। ಪುರಏತೇತಿ ಪುರಃ- ಏತಾ।

| ಮಂತ್ರ | ವಿನಿಯೋಗ (ಆಪಸ್ತಂಬ) |
|---|---|
| ಭದ್ರಾತ್.........ಸರ್ವವೀರಃ। | ಅರಣಿಗಳಲ್ಲಿ ಅಗ್ನಿಗಳನ್ನು ಸಮಾರೋಪ ಮಾಡಿ ರಥದಲ್ಲಿ ಪ್ರಯಾಣವನ್ನು ಮಾಡಲು * |
| ೧) ಭದ್ರಾತ್...ಪುರಏತಾ ತೇ। | ಬೃಹಸ್ಪತಿಶಬ್ದವುಳ್ಳ ಈ ಮಂತ್ರವು ಪ್ರಯಾಣಿಸುವಾಗ.—ಬೌಧಾಯನ |

+[ಎಲೈ ರಥವೇ!] ಭದ್ರಾತ್ = ಮಂಗಲಕರವಾದ [ಈ ನಿತ್ಯಾಗ್ನಿಹೋತ್ರ] ಸ್ಥಾನದಿಂದ; ಶ್ರೇಯಃ =ಅತ್ಯಂತ ಪ್ರಶಸ್ತವಾದ [ದೇವಯಜನವನ್ನು] (ಕ್ಕೆ) ಅಭಿ ಪ್ರೇಹಿ = ಎದುರಾಗಿ ಪ್ರಯಾಣ ಮಾಡು; ಬೃಹಸ್ಪತಿಃ = ದೇವಾಚಾರ್ಯನಾದ ಬೃಹಸ್ಪತಿಯು; ತೇ = ನಿನ್ನ; ಪುರಏತಾ = ಮುಂದೆ ಹೋಗುವವನಾಗಿ; ಅಸ್ತು = ಆಗಲಿ.

ಹೊಂದಿರುವ ನೀರು) ಯಜ್ಞಕ್ಕೆ ಹವಿಸ್ಸಾಗಿರುವ ಭತ್ತ ಮೊದಲಾದ ಸಸ್ಯಗಳನ್ನು ಉತ್ಪತ್ತಿ ಮಾಡುತ್ತದೆ. ತಮ್ಮ ಪಾನದಿಂದ ಮಾನವರ ಇಂದ್ರಿಯಶಕ್ತಿಯನ್ನು ಉತ್ತೇಜನಗೊಳಿಸುತ್ತವೆ. ಬಾಯಾರಿಕೆಯನ್ನು ಹೋಗಲಾಡಿಸಿ ಅತ್ಯಂತವಾದ ಸಂತೋಷವನ್ನು ಉಂಟು ಮಾಡುತ್ತವೆ. ಅಂತಹ ನಿಮ್ಮ ಅಲೆಯನ್ನು ಕಾಲಿನಿಂದ ತುಳಿದು ನದಿಯನ್ನು ದಾಟುವುದಿಲ್ಲ. ನೀರಿನಲ್ಲಿ ಮಣ್ಣಿನ ಹೆಂಟೆಯನ್ನು ಹಾಕುತ್ತಾ ಅದನ್ನೇ ಬಿರುಕು ಇರದ ಸೇತುವೆಯನ್ನಾಗಿ ಮಾಡಿಕೊಂಡು ನದಿಯನ್ನು ದಾಟುವೆನು.'

ಎಲೈ ರಥವೇ! ಈ ನಿತ್ಯಾಗ್ನಿಹೋತ್ರಸ್ಥಾನವು ಮಂಗಲಕರವಾದುದು. ಇದರಿಂದ ಅತ್ಯಂತ ಪ್ರಶಸ್ತವಾದ ಸೌಮಿಕದೇವಯಜನದ ಕಡೆಗೆ ಪ್ರಯಾಣ ಮಾಡು. ಬೃಹಸ್ಪತಿಯು ನಿನ್ನ ಅಗ್ರಗಾಮಿಯಾಗಿರಲಿ (ಮುಂದೆ ಇದ್ದು ರಕ್ಷಕನಾಗಿರಲಿ). ಅನಂತರ ಭೂಮಿಯ ಶ್ರೇಷ್ಠ ಸ್ಥಾನವಾದ ದೇವಯಜನದಲ್ಲಿ ಈ ಪ್ರಯಾಣವನ್ನು ಮುಗಿಸು.

*ಪ್ರಯಾಣದ ನಂತರದಲ್ಲಿ ಮಧ್ಯದಲ್ಲಿ ನದಿಯು ಬಂದರೆ ದಾಟುವಾಗ ಹೇಳಬೇಕಾದ ಮಂತ್ರವು ಪಾಠಕ್ರಮದಲ್ಲಿ ಮೊದಲೇ ಬಂದಿದೆ (ದೇವೀರಾಪಃ). ಆದರೆ ಅರ್ಥವನ್ನೂ ವಿನಿಯೋಗವನ್ನೂ ಅನುಸರಿಸಿ 'ಭದ್ರಾತ್' ಮಂತ್ರವು ಮೊದಲು ವಿನಿಯೋಗಿಸಲ್ಪಡಬೇಕೆಂದು ಸಾಯಣಾಚಾರ್ಯರು ತಿಳಿಸಿದ್ದಾರೆ.

ತೇ ಅಸ್ತ್ವಥೇಮವ ಸ್ಯ ವರ ಆ ಪೃಥಿವ್ಯಾ ಆರೇ ಶತ್ರೂ-
ನ್ಕೃಣುಹಿ ಸರ್ವವೀರ ಏದಮಗನ್ಮ ದೇವಯಜನಂ ಪೃಥಿವ್ಯಾ

ತೇ। ಅಸ್ತು । ಅಥ। ಈಮ್। ಅವೇತಿ। ಸ್ಯ। ವರೇ। ಏತಿ। ಪೃಥಿವ್ಯಾಃ। ಆರೇ। ಶತ್ರೂನ್।

ಕೃಣುಹಿ। ಸರ್ವವೀರ ಇತಿ ಸರ್ವ-ವೀರಃ। ಏತಿ। ಇದಮ್। ಅಗನ್ಮ। ದೇವಯಜನ

ಮಿತಿ ದೇವ-ಯಜನಮ್। ಪೃಥಿವ್ಯಾಃ।

| ಮಂತ್ರ | ವಿನಿಯೋಗ |
|---|---|
| ೨) ಅಥೇಮವ...............ಪೃಥಿವ್ಯಾಃ। | ವಾಸಮಾಡುವ ಸ್ಥಳದಲ್ಲಿ ಜಪಿಸಲು. |
| ೩) ಆರೇ..........ಸರ್ವವೀರಃ। | ಉದಿಸುತ್ತಿರುವ ಸೂರ್ಯನ ಉಪಸ್ಥಾನದಲ್ಲಿ. |
| ಏದಮಗನ್ಮ..........ಮದೇಮ। | ಯಾಗ ಮಾಡುವ ಸ್ಥಳಕ್ಕೆ (ದೇವಯಜನ) ಬರುವಾಗ ಹೇಳಲು |

❖**ಅಥ** = ಅನಂತರ; **ಪೃಥಿವ್ಯಾಃ** = ಭೂಮಿಯ; **ಆ**=ಸುತ್ತಲೂ [ಎಲ್ಲ ಕಡೆಗಳಲ್ಲಿಯೂ] **ವರೇ** = ಶ್ರೇಷ್ಠವಾದ ಸ್ಥಾನದಲ್ಲಿ; **ಈಮ್** = ಈ ಗಮನವನ್ನು; **ಅವ ಸ್ಯ** = ಮುಗಿಸು. ❖[ಎಲೈ ರಥಾಭಿಮಾನಿದೇವತೆಯಾದ ಆದಿತ್ಯನೇ!]; **ಶತ್ರೂನ್** = ವೈರಿಗಳಾದ ರಾಕ್ಷಸಾದಿಗಳನ್ನು; **ಸರ್ವವೀರಃ** = ಎಲ್ಲರಲ್ಲಿಯೂ ವೀರನಾದ [ಸರ್ವವೀರ ಪರಿವಾರಯುಕ್ತನಾದ] ನೀನು; **ಆರೇ** = ದೂರದಲ್ಲಿ; **ಕೃಣುಹಿ** = ಇಟ್ಟಿರು. ❖**ಪೂರ್ವೇ** = ಹಿಂದಿನವರಾದ; **ವಿಶ್ವೇ ದೇವಾಃ** = ಎಲ್ಲ ದೇವತೆಗಳೂ; **ಯತ್** = ಯಾವ; **ದೇವಯಜನಮ್** = ದೇವತೆಗಳ ಯಾಗಸ್ಥಳವಾದ ಯಾಗಶಾಲೆಯನ್ನು; **ಅಜುಷಂತ** =ಸೇವಿಸಿದರೋ; **ಪೃಥಿವ್ಯಾಃ** = ಭೂಮಿಯ; **ಇದಮ್** = [ದೇವಯಜನಮ್] = **ಈ**

ಎಲೈ! ರಥಾಭಿಮಾನಿದೇವನಾದ ಆದಿತ್ಯನೇ! ನೀನು ಸರ್ವರಲ್ಲಿಯೂ ವೀರನು. ನಿನ್ನವರೆಲ್ಲರೂ ವೀರರು. ಅಂತಹ ನೀನು ನಮ್ಮ ಶತ್ರುಗಳಾದ ರಾಕ್ಷಸಾದಿಗಳು ಯಾಗ ಶಾಲೆಯ ಸಮೀಪಕ್ಕೆ ಬರದಂತೆ ದೂರವಿಡು.

ವಿಶ್ವೇ ದೇವಾ ಯದಜುಷಂತ ಪೂರ್ವ ಋಕ್ಸಾಮಾಭ್ಯಾಂ

ಯಜುಷಾ ಸಂತರಂತೋ ರಾಯಸ್ಪೋಷೇಣ

ಸಮಿಷಾ ಮದೇಮ ॥ ೩-8 ॥

[ಆ ತ್ವಗ್ಂ ಹಯೋಽಸಿ ಮಮ ಭೋಗಾಯ ಭವ ಸ್ತ್ಯ

ಪಂಚವಿಗ್ಂಶತಿಶ್ಚ ॥]

---

ವಿಶ್ವೇ। ದೇವಾಃ। ಯತ್। ಅಜುಷಂತ। ಪೂರ್ವೇ। ಋಕ್ಸಾಮಾಭ್ಯಾಮಿತ್ಯೃಕ್ಸಾಮ-ಭ್ಯಾಮ್।

ಯಜುಷಾ। ಸಂತರಂತ ಇತಿ ಸಮ್-ತರಂತಃ। ರಾಯಃ। ಪೋಷೇಣ। ಸಮಿತಿ। ಇಷಾ।

ಮದೇಮ ॥ ೩ ॥



---

ದೇವಯಜನಪ್ರದೇಶಕ್ಕೆ; ಆ ಅಗನ್ಮ = ಬಂದೆವು; ಋಕ್ಸಾಮಾಭ್ಯಾಮ್ = ಋಕ್, ಸಾಮಗಳಿಂದಲೂ; ಯಜುಷಾ =ಯಜುಸ್ಸಿನಿಂದಲೂ; ಸಂತರಂತಃ = [ಸೋಮಯಾಗದ] ಕೊನೆ ಮುಟ್ಟಿದವರಾಗಿ; ರಾಯಃ ಪೋಷೇಣ =ಧನಸಮೃದ್ಧಿಯಿಂದಲೂ; ಸಮ್ ಇಷಾ = ಉತ್ತಮವಾದ ಅನ್ನದಿಂದಲೂ; ಮದೇಮ =ಸಂತೋಷಿಸೋಣ.

---

ಪ್ರಾಚೀನರಾದ ಸಮಸ್ತ ದೇವತೆಗಳೂ ಯಾವ ದೇವಯಜನವನ್ನು ಸೇವಿಸಿದರೋ, ಭೂಮಿಯ ಆ ದೇವಯಜನಪ್ರದೇಶಕ್ಕೆ ಬಂದೆವು. ಈ ದೇವಯಜನದಲ್ಲಿ ಋಗ್ಯಜುಃ-ಸಾಮಗಳಿಂದ ಸೋಮಯಾಗವನ್ನು ಪೂರ್ಣಗೊಳಿಸಿ ಧನಸಮೃದ್ಧಿಯಿಂದಲೂ, ಉತ್ತಮವಾದ ಅನ್ನದಿಂದಲೂ ಸಂತೋಷಪಡೋಣ. ನಾವು ಸಂತೋಷಿಸುವಂತೆ ಆಗಲಿ.

## ವಿನಿಯೋಗಸಂಗ್ರಹಃ

ದೈವೀಂ[1] ಹಸ್ತೌ ಶೋಧಯಿತ್ವಾ ಯೇ ದೇ[2] ವ್ರತಪಯಃ ಪಿಬೇತ್।
ಅಗ್ನೇ[3] ಸ್ವಪ್ಸ್ಯನ್ನಗ್ನಿಮಾಹ ತ್ವಂ[4] ಪ್ರಬುದ್ಧೋ ಜಪೇತ್ತಥಾ॥
ವಿಶ್ವೆ[5] ಇತ್ಯಪಿ ಪೂಷೇತಿ[6] ಸನಿಹಾರಾನುಶಾಸನಮ್।
ದೇವೋ[7] ವಸುಗ್ರಹಶ್ಚಂದ್ರಂ[8-13] ಷಡ್ಭಿಸ್ತತ್ರ ಪರಿಗ್ರಹಃ॥
ವಾಯ[14-17] ನಷ್ಟಾಮಪ್ಸು ಮೃತಾಂ ಸನ್ನಾಮೃಗ್ಭ್ಯಾಂ ಚ ಗಾಂ ಸ್ಪೃಶೇತ್।
[18]ದೇವಿರಾಪೋ ವಿಗಾಹ್ಯಾಚ್ಛಿ[19] ಲೋಷ್ಟಮಪ್ಸು ವಿಮರ್ದಯೇತ್॥
[20]ಭದ್ರಾದ್ರಥೇನ ಯಾತ್ಯೇದಂ[21] ಯಾಗಭೂಮಿವ್ಯವಸ್ಥಿತಿಃ।
ಅನುವಾಕೇ ತೃತೀಯೇಽಸ್ಮಿನ್ನುದಿತಾ ಏಕವಿಂಶತಿಃ॥

ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ ಆಪಸ್ತಂಬ - 21
ಬೌಧಾಯನ - 21



### ಅನುವಾಕದ ವಿಶೇಷವಿಷಯಗಳು

ಅ) ಟ.ಬ್ರಾ.ಭಾಷ್ಯ

ಮಂತ್ರಸಂಖ್ಯೆ

೧) ದೈವೀಂ........ಆಸದ್ವಶೇ। ಅಭಿಷ್ಟಯೇ = ಆಭಿಮುಖ್ಯೇನ ದೇವಾನಾಂ ಯಾ ಇಷ್ಟಿಃ -ಅಭಿಷ್ಟಿಃ-ತಸ್ಯೈ = ತದರ್ಥಮ್ = ದೇವತೆಗಳ ಯಾಗಕ್ಕಾಗಿ;

೨) ಯೇ ದೇವಾಃ...........ಸ್ವಾಹಾ॥ ಮನೋಯುಜಃ = ಮನಸಾ = ಮನನೇನ/ವಿಷಯಾವಧಾರಣಲಕ್ಷಣೇನ - ಯುಜ್ಯಂತೇ ಇತಿ = ವಿಷಯಗಳನ್ನು ತಿಳಿದ ಮನಸ್ಸಿನಿಂದ ಕೂಡಿರುವ; ದಕ್ಷಪಿತಾರಃ = ದಕ್ಷಂ ಪಿತಾ ಯೇಷಾಂ ತೇ/ಮನಃ ಪಿತೃಸ್ಥಾನೀಯಂ ಯೇಷಾಂ ತೇ = ಮನಸ್ಸೇ ತಂದೆಯಂತಿರುವ.

೩) ಅಗ್ನೇ...........ದದಃ। ಸ್ವಸ್ತಯೇ=ಒಳ್ಳೆಯ ಗತಿಗಾಗಿ.

೪) ವಿಶ್ವೇ..........ಮಾ ಮಾವವೃತ್ರನ್। ಎಲ್ಲ ದೇವತೆಗಳೂ ಧನಾದಿಗಳನ್ನು

ತೆಗೆದುಕೊಂಡು ನನ್ನ ಬಳಿಗೆ ಬರಲಿ.

೬) ಪೂಷಾ..........ರಾಧಸಾ। ರಾಧಃ / ರಾಧ್ಯತೇ = ಪ್ರಸಾಧ್ಯತೇ [ಅಲಂಕ್ರಿಯತೇ] ಅನೇನ ದೇಹ ಇತಿ ರಾಧಃ = ದೇಹವನ್ನು ಅಲಂಕರಿಸುವ ವಸ್ತ್ರ.

೭) ದೇವಃ.........ಆಯುಷಾ । ವಸೋಃ /ವಸುನಾ ಸಹ = ಧನದೊಡನೆ ಬರಲಿ; ರಾಸ್ವ = ಎಲೈ ಸೋಮದೇವನೇ! ಯಜ್ಞಾರ್ಥವಾಗಿ ಬಂದುದೆಲ್ಲವೂ ನನ್ನದು (ಯಜಮಾನನದು) ಎಂದು ಹೇಳು.

೧೮) ದೇವೀರಾಪೋ.......ಗೇಷಮ್। ಅಪಾಂ ನಪಾತ್/ನಪ್ತಾ = ಅಗ್ನಿಯು ನೀರಿನ ಮೊಮ್ಮಗ. ಅದ್ಭ್ಯಃ ಓಷಧಯಃ = ನೀರಿನಿಂದ ಓಷಧಿಗಳು; ಓಷಧೀಭ್ಯೋಽನ್ನಮ್ = ಓಷಧಿಗಳಿಂದ ಅನ್ನ, ಅನ್ನಾದಗ್ನಿಃ = ಅನ್ನದಿಂದ ಜಾಠರಾಗ್ನಿ; ಹೀಗೆ ಅಗ್ನಿಯು ನೀರಿನ ಮೊಮ್ಮಗ.

ಅಚ್ಛಿನ್ನಂ ತಂತುಂ ಅನುಗೇಷಮ್ = ಅವಿಚ್ಛಿನ್ನತಂತುರೂಪವಾದ ಯಜ್ಞವನ್ನು ವಿಘ್ನವಿಲ್ಲದೆ ಹೊಂದುವೆನು. ಅದಕ್ಕಾಗಿ ನದಿಯನ್ನು ದಾಟುವೆನು. ಅಥವಾ ಭೂಮಿಯ ಅಚ್ಛಿನ್ನತಂತುರೂಪವಾದ ಯಜ್ಞವನ್ನು ಸೇತುವನ್ನಾಗಿ ಮಾಡಿಕೊಂಡು ದಾಟುವೆನು.

೨೦) ಭದ್ರಾತ್.........ಸರ್ವವೀರಃ। ಎಲೈ ಆತ್ಮನೇ! [ಅಥವಾ] ಅರಣಿಗಳಲ್ಲಿ ಸಮಾರೂಢನಾದ ಅಗ್ನಿಯೇ! ನೀನು ದೇವಯಜನಕ್ಕೆ ಹೋಗು. (ಸಾಯಣರು ರಥವನ್ನು ಸಂಬೋಧಿಸಿ ಅರ್ಥವನ್ನು ವಿವರಿಸಿರುತ್ತಾರೆ.) ಹೇ ಆತ್ಮನ್! ಅವ ಸ್ಯ = ಆತ್ಮನೇ! ನೀನು ಇಲ್ಲಿ ವಾಸಿಸು.

೨೧) ಐದಂ........ಮದೇಮ। ಪೃಥಿವ್ಯಾಃ = ಕೇವಲ ಭೂಮಿಯಾಗಿದ್ದ ಪ್ರದೇಶದಿಂದ; ದೇವಯಜನಮ್ ಆ ಅಗನ್ಮ = ದೇವಯಜನರೂಪವಾದ ದೇವಭೂಮಿಗೆ ಬಂದೆವು. ಇಷಾ ಸಂಮದೇಮ = ಅನ್ನದ ಸಮೃದ್ಧಿಯಿಂದಲೂ ಹೆಚ್ಚಾಗಿ ಸಂತೋಷಪಡೋಣ.

ಆ) ಛಂದಸ್ಸು

ಮಂತ್ರಸಂಖ್ಯೆ

೧) ದೈವೀಂ.........ಆಸದ್ವಶೇ॥ ಅನುಷ್ಟುಪ್

೩) ಆಗ್ನೇ........ದದಃ ॥ ಅನುಷ್ಟುಪ್

೪) ತ್ವಮಗ್ನೇ...ಯಜ್ಞೇಷ್ವೀಡ್ಯಃ ॥ ಗಾಯತ್ರೀ [ಸಾಯಣ]
ಪ್ರತಿಷ್ಠಾಗಾಯತ್ರೀ [ಮಿಶ್ರ]

೫) ವಿಶ್ವೇ.........ವೃತ್ರನ್ ॥ ಏಕಪದಾತ್ರಿಷ್ಟುಪ್ [ಸಾ]
ಏಕಪದಾತ್ರಿಷ್ಟುಪ್ ಯಜುರಂತಾ (ಮಿ)

೨೧) ಏದಮಗನ್ಮ......ಮದೇಮ । ತ್ರಿಷ್ಟುಪ್

ಬೌಧಾಯನರು ತಿಳಿಸಿರುವ ವಿನಿಯೋಗವನ್ನು ಅನುಸರಿಸಿ ಮಂತ್ರಗಳನ್ನು ವಿಭಾಗ ಮಾಡಿಕೊಂಡಾಗ ಆಗುವ ಮಂತ್ರಗಳನ್ನು ಕುರಿತು ಮಿಶ್ರರು ಇನ್ನೂ ಕೆಲವು ಛಂದಸ್ಸುಗಳನ್ನು ತಿಳಿಸಿರುತ್ತಾರೆ.

ದೇವೀರಾಪಃ............ಗೇಷಮ್। ಉಪರಿಷ್ಟಾತ್ ಜ್ಯೋತಿಸ್ತ್ರಿಷ್ಟುಪ್
ಅಷ್ಟಾಕ್ಷರಚತುರ್ಥಾ ಅಥವಾ
ಯಜುರಂತಾ ಅನುಷ್ಟುಪ್.

ಭದ್ರಾದಭಿ...........ಪುರಏತಾ ಹಿ। ವಿರಾಟ್ ಗಾಯತ್ರೀ

ಅಥೇಮವ ಸ್ಯ.......ಪೃಥಿವ್ಯಾಃ। ಏಕಪದಾತ್ರಿಷ್ಟುಪ್

ಆರೇ.......ಸರ್ವವೀರಃ । ಏಕಪದಾತ್ರಿಷ್ಟುಪ್

## ೯) ಮೀಮಾಂಸಾ

ದೀಕ್ಷಿತನು ಹೇಳಬೇಕಾದ ಮಂತ್ರಗಳಿಗೆ ಆವೃತ್ತಿ ಇದೆಯೇ? [ಜೈ.ಸೂ. 11.4.]

ದೀಕ್ಷಿತನು ಮಲಗುವಾಗ, ನದಿಯನ್ನು ದಾಟುವಾಗ, ಮಳೆಯು ಬಂದಾಗ ಮತ್ತು ಅಮೇಧ್ಯವಸ್ತುಗಳನ್ನು ನೋಡಿದಾಗ ಕ್ರಮವಾಗಿ—

'ತ್ವಮಗ್ನೇ......ಯಜ್ಞೇಷ್ವೀಡ್ಯಃ ।' 'ದೇವೀರಾಪೋ.......ಗೇಷಮ್'।

'ಉಂದತೀಃ.......ನಿರ್ವಧಿಷ್ಟ'     'ಅಬದ್ಧಂ..........ಚಕ್ಷುಃ'

[ತೈ.ಸಂ. 3.1.1]

ಎಂಬ ಮಂತ್ರಗಳನ್ನು ಹೇಳಬೇಕು. ನಿದ್ರೆಯ ಮಧ್ಯದಲ್ಲಿ ಎಚ್ಚರವಾದರೆ, ನದಿಯ ಮಧ್ಯೆ ನಡುಗಡ್ಡೆಯು ಬಂದು ಅದನ್ನು ದಾಟಿದ ಬಳಿಕ, ಮಳೆಯು ನಿಂತು ಪುನಃ ಬಂದಾಗ, ಅಮೇಧ್ಯವಾದ ವಸ್ತುಗಳನ್ನು ಮತ್ತೆ ಮತ್ತೆ ನೋಡಿದಾಗ ಈ ಮಂತ್ರಗಳಿಗೆ ಮತ್ತೆ ಮತ್ತೆ ಆವೃತ್ತಿ ಇದೆಯೇ? ಇದು ಸಂಶಯ.

ಎಚ್ಚರವಾದರೆ ಮೊದಲನೆಯ ನಿದ್ರೆಯು ಮುಗಿದಂತಾಯಿತು. ಹಾಗೆಯೇ ಉಳಿದೆಡೆಯಲ್ಲಿಯೂ ಸಹ. ಆದುದರಿಂದ ಮಂತ್ರಾವೃತ್ತಿಯು ಉಂಟು. ಇದು ಇಲ್ಲಿನ ಪೂರ್ವಪಕ್ಷ.



ಇಲ್ಲಿಯ ಸಿದ್ಧಾಂತವು ಹೀಗಿದೆ: ರಾತ್ರಿಯಲ್ಲಿ ಮಾಡುವ ನಿದ್ರೆಯು ಒಂದೇ ಆಗಿದೆ. ಆದುದರಿಂದ ಒಮ್ಮೆ ಮಂತ್ರೋಚ್ಚಾರಣೆಯು ಸಾಕು. ಇಡೀ ರಾತ್ರಿಯ ನಿದ್ರೆಯ ನಿಮಿತ್ತವಾಗಿ ಮಂತ್ರೋಚ್ಚಾರಣೆಯನ್ನು ಮಾಡಬೇಕೆಂದು ವಿಧಿ. ಇದರಂತೆಯೇ ಉಳಿದ ಕಡೆಗಳಲ್ಲಿಯೂ ಮಂತ್ರೋಚ್ಚಾರಣೆಗೆ ಅವು ಪೂರ್ಣನಿಮಿತ್ತಗಳಾದುದರಿಂದ ಒಮ್ಮೆ ಮಂತ್ರಪಾಠವು ಸಾಕು.

ಇದರಂತೆಯೇ ಪ್ರಯಾಣಕಾಲದಲ್ಲಿ— ದೀಕ್ಷಿತನು ಹೇಳಬೇಕಾಗಿರುವ

'ಭದ್ರಾದಭಿ ಶ್ರೇಯಃ........ಸರ್ವವೀರಃ'

ಎಂಬ ಮಂತ್ರವನ್ನು ದೀಕ್ಷಿತನು ವಿಶ್ರಾಂತಿಗಾಗಿ ಮಧ್ಯದಲ್ಲಿ ನಿಂತು ಮತ್ತೆ ಹೊರಟಾಗ ಪ್ರಯಾಣವು ದೇವಯಜನವನ್ನು ತಲುಪುವವರೆಗೆ ಒಂದೇ ಆದುದರಿಂದ ಅದು ದೇವಯಜನವನ್ನು ಮುಟ್ಟಿದಾಗಲೇ ಮುಗಿಯುವುದರಿಂದ— ಒಮ್ಮೆ ಮಂತ್ರಪಾಠ ಸಾಕು.

---

## ॥ ಚತುರ್ಥೋಽನುವಾಕಃ ॥

**ಇಯಂ ತೇ ಶುಕ್ರ ತನೂರಿದಂ ವರ್ಚಸ್ತಯಾ ಸಂಭವ**

**ಭ್ರಾಜಂ ಗಚ್ಛ**

---

**ಇಯಮ್। ತೇ। ಶುಕ್ರ। ತನೂಃ। ಇದಮ್। ವರ್ಚಃ। ತಯಾ। ಸಮಿತಿ। ಭವ। ಭ್ರಾಜಮ್। ಗಚ್ಛ।**

---

ಮೂರನೆಯ ಅನುವಾಕದಲ್ಲಿ ದೇವಯಜನಸ್ವೀಕಾರವನ್ನು ಹೇಳಿಯಾಯಿತು. ಆ ದೇವಯಜನದಲ್ಲಿ ಮಾಡಬೇಕಾದ ಸೋಮಕ್ರಯಣೀವಿಷಯಕವಾದ ಹೋಮಾದಿಗಳು ಈ ನಾಲ್ಕನೆಯ ಅನುವಾಕದಲ್ಲಿ ಹೇಳಲ್ಪಟ್ಟಿವೆ. ಯಾಗಕ್ಕೆ ಬೇಕಾದ ಸೋಮಲತೆಯನ್ನು ಕೊಳ್ಳಲು ನೀಡಬೇಕಾದ ಗೋವು ಮುಂತಾದವುಗಳು ಸೋಮಕ್ರಯಣಿಗಳು. ಈ ಹೋಮಕ್ಕೆ ಪ್ರಾಯಣೀಯೇಷ್ಟಿಯಲ್ಲಿನ ಧ್ರುವಾಜ್ಯವೇ ಸಾಧನ. ಆದುದರಿಂದ ಬ್ರಾಹ್ಮಣದಲ್ಲಿ **[ತೈ. ಸಂ. 6.1.5.6]** ಈ ಹೋಮವನ್ನು ಹೇಳುವ ಮೊದಲು ಪ್ರಾಯಣೀಯೇಷ್ಟಿ ಮತ್ತು ಸೋಮಕ್ರಯಣಿಗಳನ್ನು ಶ್ರುತಿಯು ತಿಳಿಸುತ್ತದೆ.

| **ಮಂತ್ರ** | **ವಿನಿಯೋಗ** |
|---|---|
| **ಇಯಂ ತೇ..............ಗಚ್ಛ।** | ದರ್ಭೆಯಿಂದ ಕಟ್ಟಿದ ಹಿರಣ್ಯವನ್ನು ಸ್ರುಕ್‌ನಲ್ಲಿ ಇಡಲು |

---

**ಶುಕ್ರ!** = ಎಲೈ! ಪ್ರಕಾಶಮಾನವಾದ ಹಿರಣ್ಯವೇ!; **ಇಯಮ್** = ಈ ಜುಹುವು; **ತೇ** = ನಿನ್ನ; **ತನೂಃ** = ಶರೀರವಾಗಿದೆ. **ಇದಮ್** = [ಈ ಸ್ರುಕ್ಕಿನಲ್ಲಿರುವ] ಆಜ್ಯವು; **ವರ್ಚಃ** = [ನಿನ್ನ] ತೇಜಸ್ಸಾಗಿದೆ; **ತಯಾ** = ಆ ಜುಹೂವಿನೊಡನೆ; **ಸಮ್ ಭವ** = ಚೆನ್ನಾಗಿ ಸೇರು; **ಭ್ರಾಜಮ್** = ಆಜ್ಯರೂಪವಾದ ದೀಪ್ತಿಯನ್ನು; **ಗಚ್ಛ** = ಹೊಂದು.

---

ಎಲೈ ಹೊಳೆಯುವ ಚಿನ್ನವೇ! ಈ ಜುಹೂಪಾತ್ರವು ನಿನ್ನ ಶರೀರ. ಈ ಸ್ರುಕ್ಕಿನಲ್ಲಿರುವ ತುಪ್ಪವು ನಿನ್ನ ತೇಜಸ್ಸು. ನೀನು ಸ್ರುಕ್ಕಿನೊಡನೆ ಸೇರು. ಆಜ್ಯರೂಪ-

## ಜೂರಸಿ ಧೃತಾ ಮನಸಾ ಜುಷ್ಟಾ ವಿಷ್ಣವೇ ತಸ್ಯಾಸ್ತೇ ಸತ್ಯಸವಸಃ ಪ್ರಸವೇ ವಾಚೋ ಯಂತ್ರಮಶೀಯ ಸ್ವಾಹಾ

---

ಜೂಃ । ಅಸಿ । ಧೃತಾ । ಮನಸಾ । ಜುಷ್ಟಾ । ವಿಷ್ಣವೇ । ತಸ್ಯಾಃ । ತೇ । ಸತ್ಯಸವಸ ಇತಿ ಸತ್ಯ-ಸವಸಃ । ಪ್ರಸವ ಇತಿ ಪ್ರ-ಸವೇ। ವಾಚಃ । ಯಂತ್ರಮ್। ಅಶೀಯ। ಸ್ವಾಹಾ।

---

| ಮಂತ್ರ | ವಿನಿಯೋಗ |
| --- | --- |
| ಜೂರಸಿ.............ಸ್ವಾಹಾ । | ಸ್ರುಕ್ಕಿನಲ್ಲಿರುವ ಆಜ್ಯದಿಂದ ಆಹವನೀಯಾಗ್ನಿಯಲ್ಲಿ ಹೋಮವನ್ನು ಮಾಡಲು |

---

ಬ್ರಾಹ್ಮಣವನ್ನು ಅನುಸರಿಸಿದ ಎರಡನೆಯ ರೀತಿಯ ವಿವರಣೆ ಈ ರೀತಿ ಇರುತ್ತದೆ:- ಶುಕ್ರ! = ಎಲೈ ಅಗ್ನಿಯೇ! ಇಯಮ್ = ಈ ಆಜ್ಯರೂಪವಾದುದು; ತೇ = ನಿನ್ನ; ತನೂಃ = ಶರೀರವು; ಇದಮ್ = ಈ ಹಿರಣ್ಯವು; ವರ್ಚಃ = (ನಿನ್ನ) ತೇಜಸ್ಸು. +[ಎಲೈಸೋಮಕ್ರಯಣಿಯಾದ ಗೋವೇ!] [ನೀನು] **ಜೂಃ** = ವೇಗಯುಕ್ತಳಾಗಿ; **ಅಸಿ** = ಇರುವೆ; [ವಾಗ್ರೂಪಳಾದ ನೀನು] **ಮನಸಾ** = ಮನಸ್ಸಿನಿಂದ; **ಧೃತಾ** = ಧರಿಸಲ್ಪಟ್ಟವಳು; [ನಿಯಮಿಸಲ್ಪಟ್ಟವಳು] **ವಿಷ್ಣವೇ** = [ಯಜ್ಞಸ್ವರೂಪನಾದ] ವಿಷ್ಣುವಿಗೆ; **ಜುಷ್ಟಾ** = ಪ್ರಿಯಳಾದವಳು; **ತಸ್ಯಾಃ** = ಅಂತಹ; **ಸತ್ಯಸವಸಃ** = ಅಮೋಘಪ್ರೇರಣೆಯುಳ್ಳ; **ತೇ** = ನಿನ್ನ; **ಪ್ರಸವೇ(ಸತಿ)** = ಪ್ರೇರಣೆ ಉಂಟಾಗಲು; **ವಾಚಃ** = [ಮಂತ್ರೋಚ್ಚಾರಣರೂಪ] ವಾಕ್ಕಿನ; **ಯಂತ್ರಮ್** = ಸ್ವಾಮ್ಯವನ್ನು (ಹತೋಟಿಯನ್ನು); **ಅಶೀಯ** = ಹೊಂದುವೆನು. **ಸ್ವಾಹಾ** = [ಈ ಆಜ್ಯವು ] ಹುತವಾಗಲಿ.

---

ವರ್ಚಸ್ಸನ್ನೂ ಹೊಂದು. ಅಥವಾ ಪ್ರಕಾಶಿಸುವ ಅಗ್ನಿಯೇ! ಈ ಆಜ್ಯವು ನಿನ್ನ ದೇಹ. ಈ ಚಿನ್ನವು ನಿನ್ನ ವರ್ಚಸ್ಸು. ನೀನು ಆಜ್ಯದೊಡನೆ ಸೇರು. ಹಿರಣ್ಯವೆಂಬ ವರ್ಚಸ್ಸನ್ನು ಹೊಂದು.

**'ಏಕಹಾಯನ್ಯಾ ಗವಾ ಸೋಮಂ ಕ್ರೀಣಾತಿ'** ಎಂದು ಸೋಮವನ್ನು ಕೊಳ್ಳುವುದರಲ್ಲಿ

# ಶುಕ್ರಮಸ್ಯಮೃತಮಸಿ ವೈಶ್ವದೇವಗ್ಂ ಹವಿಃ

ಶುಕ್ರಮ್। ಅಸಿ। ಅಮೃತಮ್। ಅಸಿ। *ವೈಶ್ವದೇವಮಿತಿ ವೈಶ್ವ-ದೇವಮ್। ಹವಿಃ * ।

| ಮಂತ್ರ | ವಿನಿಯೋಗ (ಬೌಧಾಯನ) |
|---|---|
| ಶುಕ್ರಮಸಿ.....ಹವಿಃ । | ಅಧ್ವರ್ಯುವು ಯಜಮಾನನಿಂದ ಆಜ್ಯಾವಲೋಕನವನ್ನು ಮಾಡಿಸಲು. |
| ೧) ಶುಕ್ರಮಸ್ಯಮೃತಮಸಿ । | ಹಿರಣ್ಯವನ್ನು ಮೇಲಕ್ಕೆ ಎತ್ತಲು. |
| ೨) ವೈಶ್ವದೇವಗ್ಂ ಹವಿಃ । | ಆಜ್ಯಾವೇಕ್ಷಣವನ್ನು ಮಾಡಲು. —ಆಪಸ್ತಂಬ. |

[ಎಲೈ! ಆಜ್ಯವೇ! ನೀನು] ಶುಕ್ರಮ್ = ಪ್ರಕಾಶಮಾನನಾಗಿ; ಅಸಿ = ಇರುವೆ; ಅಮೃತಮ್ ಅಸಿ =ನಾಶರಹಿತನಾಗಿರುವೆ; ವೈಶ್ವದೇವಂ ಹವಿಃ = ಸರ್ವದೇವಪ್ರಿಯನಾದ ಹವಿಸ್ಸಾಗಿರುವೆ. ಅಥವಾ [ಎಲೈ ಹಿರಣ್ಯವೇ! ನೀನು] ಶುಕ್ರಮ್ ಅಸಿ = ದೀಪ್ತಿ ಯುಕ್ತನಾಗಿರುವೆ; ಅಮೃತಮ್ ಅಸಿ =ನಾಶರಹಿತನಾಗಿರುವೆ.



ಸಾಧನವಾಗಿರುವ ಎಲೈ! ಸೋಮಕ್ರಯಣಿಯಾದ ಗೋವೇ! ನೀನು ವೇಗವಾಗಿ ಹೋಗಬಲ್ಲವಳು. ವಾಗ್ರೂಪಳಾದ ನೀನು ಮನಸ್ಸಿನಿಂದ ನಿಯಂತ್ರಿಸಲ್ಪಡತಕ್ಕವಳು. [ಮನಸ್ಸಿನ ಹತೋಟಿಯಲ್ಲಿರುವವಳು] ವಿಷ್ಣುರೂಪನಾದ ಯಜ್ಞಕ್ಕೆ ಪ್ರಿಯಳಾದವಳು. ನಿನ್ನ ಪ್ರೇರಣೆಯು ಅಮೋಘವಾದುದು. ಅಂತಹ ನಿನ್ನ ಪ್ರೇರಣೆಯಾಗಲು ನಾನು ಮಂತ್ರರೂಪವಾದ ವಾಕ್ಕಿನ(ಮಂತ್ರೋಚ್ಚಾರಣದ) ಮೇಲೆ ಸ್ವಾಧೀನತೆಯನ್ನು ಹೊಂದುವೆನು. ಈ ಆಜ್ಯದ್ರವ್ಯವು ಹುತವಾಗಲಿ.

ಎಲೈ ಆಜ್ಯವೇ! ನೀನು ದೀಪ್ತಿಯುಕ್ತನೂ ಜ್ವಾಲಾಸಾಧನನೂ ಆಗಿದ್ದೀಯೆ. ನಾಶರಹಿತನೂ[ನಾಶವಿಲ್ಲದ ಫಲವನ್ನು ಕೊಡುವವನೂ] ಆಗಿರುವೆ. ಎಲ್ಲ ದೇವತೆಗಳಿಗೂ ಪ್ರಿಯವಾದ ಹವಿಸ್ಸೂ ನೀನೇ ಆಗಿರುವೆ. ಅಥವಾ ಎಲೈ ಹಿರಣ್ಯವೇ! ನೀನು ಶುಕ್ರನೂ ಅಮೃತನೂ ಆಗಿರುವೆ.

**ಸೂರ್ಯಸ್ಯ ಚಕ್ಷುರಾऽರುಹಮಗ್ನೇರಕ್ಷ್ಣಃ ಕನೀನಿಕಾಂ**

**ಯದೇತಶೇಭಿರೀಯಸೇ ಭ್ರಾಜಮಾನೋ ವಿಪಶ್ಚಿತಾ**

---

ಸೂರ್ಯಸ್ಯ। ಚಕ್ಷುಃ। ಏತಿ। ಅರುಹಮ್। ಅಗ್ನೇಃ । ಅಕ್ಷ್ಣಃ । ಕನೀನಿಕಾಮ್। ಯತ್। ಏತಶೇಭಿಃ । ಈಯಸೇ। ಭ್ರಾಜಮಾನಃ । ವಿಪಶ್ಚಿತಾ ।

---

| ಮಂತ್ರ | ವಿನಿಯೋಗ |
| --- | --- |
| ಸೂರ್ಯಸ್ಯ.........ವಿಪಶ್ಚಿತಾ । | ಚಿನ್ನವನ್ನು ಅಡ್ಡವಾಗಿಟ್ಟು ಯಜಮಾನನಿಗೆ ಸೂರ್ಯನನ್ನು ತೋರಿಸುವುದಕ್ಕಾಗಿ. |

---

[ನಾನು] ಸೂರ್ಯಸ್ಯ = ಸೂರ್ಯದೇವನ ಸಂಬಂಧಿಯಾದ; ಚಕ್ಷುಃ = ಚಕ್ಷುರಿಂದ್ರಿಯವನ್ನೂ; ಅಗ್ನೇಃ = ಅಗ್ನಿದೇವನ ಸಂಬಂಧಿಯಾದ; ಅಕ್ಷ್ಣಃ ಕನೀನಿಕಾಮ್ = ಕಣ್ಣುಗುಡ್ಡೆಯನ್ನೂ; ಆ ಅರುಹಮ್ = ಹೊಂದಿರುವೆನು. [ಎಲೈ ಸೂರ್ಯದೇವನೇ!] [ನೀನು] ಯತ್ = ಯಾವ ಕಾರಣದಿಂದ; ಏತಶೇಭಿಃ = ಏತಶವೆಂಬ ಹೆಸರುಳ್ಳ ಕುದುರೆಗಳಿಂದ; ಈಯಸೇ = ಹೋಗುತ್ತೀಯೋ; [ಎಲೈ ಅಗ್ನಿಯೇ! ನೀನು] ವಿಪಶ್ಚಿತಾ = ತೇಜಸ್ಸಿನಿಂದ; ಭ್ರಾಜಮಾನಃ = ಪ್ರಕಾಶಮಾನನಾಗಿರುವೆಯೋ [ಆದುದರಿಂದ ರಕ್ಷೋಬಾಧಾಪರಿಹಾರಕ್ಕಾಗಿ ನಿಮ್ಮಿಬ್ಬರನ್ನೂ ಆಶ್ರಯಿಸಿರುತ್ತೇನೆ].

---

ಎಲೈ ಸೂರ್ಯದೇವನೇ! ನೀನು 'ಏತಶ'ವೆಂಬ ಹೆಸರುಳ್ಳ ಕುದುರೆಗಳನ್ನು ಕಟ್ಟಿದ ರಥದಲ್ಲಿ ಸಂಚರಿಸುತ್ತೀಯೆ. ಎಲೈ! ಅಗ್ನಿದೇವನೇ! ನೀನು ತೇಜಸ್ಸಿನಿಂದ ಹೊಳೆಯುವವನಾಗಿದ್ದೀಯೆ. ನಿಮ್ಮಿಬ್ಬರ ಮಾರ್ಗವು ರಕ್ಷೋಬಾಧಾರಹಿತವಾದುದು. ನನ್ನಲ್ಲಿರುವ ಚಕ್ಷುರಿಂದ್ರಿಯವು ಸೂರ್ಯನಿಗೆ ಸಂಬಂಧಿಸಿದುದು. ಕಣ್ಣುಗುಡ್ಡೆಯು ಅಗ್ನಿಗೆ ಸಂಬಂಧಿಸಿದುದು. ಈ ಕಣ್ಣಿನಿಂದ ಸೂರ್ಯನನ್ನು ನೋಡುವುದರಿಂದ ರಕ್ಷೋಬಾಧಾರಹಿತವಾದ ಸೂರ್ಯಾಗ್ನಿಗಳ ಮಾರ್ಗವನ್ನು ಹೊಂದಿರುತ್ತೇನೆ. ನೀವಿಬ್ಬರೂ ರಕ್ಷೋಬಾಧೆಯನ್ನು ಪರಿಹರಿಸಿರಿ.

ಚಿದಸಿ ಮನಾಸಿ ಧೀರಸಿ ದಕ್ಷಿಣಾ [(೧)ಅಸಿ]ಸಿ ಯಜ್ಞಿಯಾಸಿ

ಕ್ಷತ್ರಿಯಾಸ್ಯದಿತಿರಸ್ಯುಭಯತಃಶೀರ್ಷ್ಣೀ ಸಾ ನಃ

---

ಚಿತ್। ಅಸಿ। ಮನಾ। ಅಸಿ। ಧೀಃ। ಅಸಿ। ದಕ್ಷಿಣಾ (೧) ಅಸಿ। ಯಜ್ಞಿಯಾ। ಅಸಿ। ಕ್ಷತ್ರಿಯಾ।

ಅಸಿ । ಅದಿತಿಃ । ಅಸಿ। ಉಭಯತಃಶೀರ್ಷ್ಣೀತ್ಯುಭಯತಃ-ಶೀರ್ಷ್ಣೀ । ಸಾ । ನಃ ।

---

| ಮಂತ್ರ | ವಿನಿಯೋಗ (ಬೌಧಾಯನ) |
|---|---|
| ೧) ಚಿದಸಿ.........ರಯ್ಯಾ। | ಸೋಮಕ್ರಯಣಿಯ ಅನುಮಂತ್ರಣ ಮಾಡಲು |
| ೨) ಚಿದಸಿ.........ಸಂಭವ | ಸೋಮಕ್ರಯಣಿಯ ಅಭಿಮಂತ್ರಣದಲ್ಲಿ —ಆಪಸ್ತಂಬ. |



---

[ಎಲ್ಪೆ! ವಾಗ್ರೂಪಳಾದ ಸೋಮಕ್ರಯಣಿಯೇ! [ನೀನು] ಚಿತ್ ಅಸಿ = ಅಂತಃಕರಣದ ಚಿತ್ತವೆಂಬ ವೃತ್ತಿಯಾಗಿರುವೆ; ಮನಾ ಅಸಿ = ಮನೋವೃತ್ತಿಯೂ ಆಗಿರುವೆ; ಧೀಃ ಅಸಿ = ನಿಶ್ಚಯರೂಪಬುದ್ಧಿವೃತ್ತಿಯೂ ಆಗಿರುವೆ; ದಕ್ಷಿಣಾ ಅಸಿ = ಸಮರ್ಥಳಾಗಿದ್ದೀಯೆ. [ಕೊಡಲ್ಪಡತಕ್ಕವಳಾಗಿದ್ದೀಯೆ] ಯಜ್ಞಿಯಾ ಅಸಿ = [ಸೋಮಕ್ರಯಕ್ಕೆ ಸಾಧನವಾಗಿ] ಯಜ್ಞಕ್ಕೆ ಸಂಬಂಧಿಸಿದವಳೂ ಆಗಿರುವೆ; ಕ್ಷತ್ರಿಯಾ ಅಸಿ = [ದೇವತೆಗಳಲ್ಲಿ ಕ್ಷತ್ರಿಯ ಜಾತ್ಯಭಿಮಾನಿದೇವನಾದ ಸೋಮನ ಸಂಬಂಧದಿಂದ] ಕ್ಷತ್ರಿಯೆಯೂ ಆಗಿರುವೆ; ಉಭಯತಃಶೀರ್ಷ್ಣೀ = ಸೋಮಯಾಗದ ಆದ್ಯಂತೇಷ್ಟಿಗಳಾದ ಪ್ರಾಯಣೀಯ-ಉದಯನಿಯೇಷ್ಟಿಗಳಲ್ಲಿ ಪ್ರಧಾನದೇವತೆಯಾದ; ಅದಿತಿಃ ಅಸಿ =ಅದಿತಿ ದೇವತಾಸ್ವರೂಪಳೇ ಆಗಿರುತ್ತೀಯೆ. ಸಾ = ಅಂತಹ (ನೀನು) ನಃ = ನಮಗಾಗಿ;

---

ಎಲ್ಪೆ! ಸೋಮಕ್ರಯಣಿಯೇ! ನೀನು ವಾಗ್ರೂಪಳು. ಅಂತಃಕರಣದ ಮೂರು ವೃತ್ತಿಗಳಾದ ಚಿತ್ತ, ಮನಸ್ಸು, ಬುದ್ಧಿಗಳೂ ನೀನಾಗಿರುವೆ. ಚಿತ್ತವು ಒಂದು ವಸ್ತುವಿದೆಯೆಂಬ ಜ್ಞಾನವನ್ನುಂಟುಮಾಡುತ್ತದೆ. ಮನೋವೃತ್ತಿಯು ಅದರ ವಿಷಯದಲ್ಲಿ

**ಸುಪ್ರಾಚೀ ಸುಪ್ರತೀಚೀ ಸಂಭವ ಮಿತ್ರಸ್ತ್ವಾಪದಿ ಬಧ್ನಾತು ಪೂಷಾಧ್ವನಃ ಪಾತ್ವಿಂದ್ರಾಯಾಧ್ಯಕ್ಷಾಯಾನು ತ್ವಾ ಮಾತಾ**

---

ಸುಪ್ರಾಚೀತಿ ಸು-ಪ್ರಾಚೀ। ಸುಪ್ರತೀಚೀತಿ ಸು-ಪ್ರತೀಚೀ। ಸಮಿತಿ ಭವ। *ಮಿತ್ರಃ। ತ್ವಾ। ಪದಿ। ಬಧ್ನಾತು*। *ಪೂಷಾ। ಅಧ್ವನಃ। ಪಾತು। ಇಂದ್ರಾಯ। ಅಧ್ಯಕ್ಷಾಯೇತ್ಯಧಿ-ಅಕ್ಷಾಯ। ಅನ್ವಿತಿ। ತ್ವಾ। ಮಾತಾ।

---



| ಮಂತ್ರ | ವಿನಿಯೋಗ (ಆಪಸ್ತಂಬ) |
|---|---|
| ೨) ಮಿತ್ರಸ್ತ್ವಾ......ಬಧ್ನಾತು। | ಗೋವಿನ ಮುಂದುಗಡೆಯ ಬಲಗಾಲನ್ನು ನೋಡಲು। |
| ೩) ಪೂಷಾ................ರಯ್ಯಾ। | ಪೂರ್ವಕ್ಕೆ ಬರುತ್ತಿರುವ ಸೋಮಕ್ರಯಣಿಯ ಅನುಮಂತ್ರಣದಲ್ಲಿ। |

---

**ಸುಪ್ರಾಚೀ** = [ಸೋಮಕ್ರಯಣ ಮಾಡುವವನ ಬಳಿಗೆ] ಪ್ರಾಙ್ಮುಖಳಾಗಿ [ಹೋಗಿ]; **ಸುಪ್ರತೀಚೀ** = [ಅನಂತರ] ಪ್ರತ್ಯಙ್ಮುಖಳಾಗಿ [ಬಂದು] **ಸಂ ಭವ** = [ನಮ್ಮೊಡನೆ] ಸೇರಿಕೋ. +[ಎಲೈ! ಸೋಮಕ್ರಯಣಿಯೇ!] **ಮಿತ್ರಃ**= ಹಿತಕಾರಿಯಾದ ಮಿತ್ರದೇವನು; **ತ್ವಾ** = ನಿನ್ನನ್ನು; **ಪದಿ** = ಕಾಲಿನಲ್ಲಿ; **ಬಧ್ನಾತು** = ಕಟ್ಟಲಿ. +**ಪೂಷಾ** = [ಪೋಷಕನಾದ] ಪೂಷದೇವನು; **ಅಧ್ವನಃ** = ಮಾರ್ಗದ ದೆಸೆಯಿಂದ (ಮಾರ್ಗದಲ್ಲಿರುವ ಅಪಾಯದಿಂದ) **ಪಾತು** = [ನಿನ್ನನ್ನು] ರಕ್ಷಿಸಲಿ. **ಅಧ್ಯಕ್ಷಾಯ ಇಂದ್ರಾಯ** = ಸೋಮಯಾಗಾಧ್ಯಕ್ಷನಾದ ಇಂದ್ರನಿಗಾಗಿ; **ತ್ವಾ** = ನಿನ್ನನ್ನು; **ಮಾತಾ** = [ನಿನ್ನ] ತಾಯಿಯೂ;

---

ವಿಚಾರ ಮಾಡುತ್ತದೆ. ಬುದ್ಧಿವೃತ್ತಿಯು ಆ ವಸ್ತುವಿನ ನಿಶ್ಚಯವನ್ನುಂಟುಮಾಡುತ್ತದೆ. ಈ ಮೂರೂ ಅಂತಃಕರಣದ ವೃತ್ತಿಗಳು. ನೀನು ಕ್ರಯಸಮರ್ಥಳು. ಕ್ರಯಕ್ಕಾಗಿ ಕೊಡಲ್ಪಡತಕ್ಕವಳೂ ಆಗಿದ್ದೀಯೆ.

ಮನ್ಯತಾಮನು ಪಿತಾಽನು ಭ್ರಾತಾ ಸಗರ್ಭ್ಯೋಽನು ಸಖಾ

ಸಯೂಥ್ಯಃ ಸಾ ದೇವಿ ದೇವಮಚ್ಛೇಹೀಂದ್ರಾಯ

---

ಮನ್ಯತಾಮ್। ಅನ್ವಿತಿ। ಪಿತಾ। ಅನ್ವಿತಿ। ಭ್ರಾತಾ। ಸಗರ್ಭ್ಯ ಇತಿ ಸ-ಗರ್ಭ್ಯಃ। ಅನ್ವಿತಿ। ಸಖಾ। ಸಯೂಥ್ಯ ಇತಿ ಸ-ಯೂಥ್ಯಃ। ಸಾ। ದೇವಿ। ದೇವಮ್। ಅಚ್ಛ। ಇಹಿ। ಇಂದ್ರಾಯ।

---

ಅನು ಮನ್ಯತಾಮ್ = [ಸೋಮಕ್ರಯಸಾಧನವಾಗಲು] ಅನುಮತಿಸಲಿ; ಪಿತಾ ಅನು [ಮನ್ಯತಾಮ್] = ನಿನ್ನ ತಂದೆಯೂ ಅನುಮತಿಸಲಿ; ಸಗರ್ಭ್ಯಃ = ನಿನ್ನೊಡನೆ ಒಂದೇ ಗರ್ಭದಲ್ಲಿ ಜನಿಸಿದ; ಭ್ರಾತಾ = ಸೋದರನು, ಅನು [ಮನ್ಯತಾಮ್] =ಅನುಮತಿಸಲಿ. ಸಯೂಥ್ಯಃ = ಒಂದೇ ಹಿಂಡಿನಲ್ಲಿರುವ; ಸಖಾ ಅನು [ಮನ್ಯತಾಮ್] = ಸ್ನೇಹಿತನೂ ಅನುಮತಿಸಲಿ. ದೇವಿ! = ದಿವ್ಯದೇವತಾರೂಪಳಾದವಳೇ!; ಸಾ = [ಹೀಗೆ ಅನುಮತಿ ಪಡೆದ] ಆ [ನೀನು] ಇಂದ್ರಾಯ = ಇಂದ್ರನಿಗೋಸ್ಕರ;



---

ಕ್ರಯಸಾಧನಳಾದ ನೀನು ಯಜ್ಞಸಂಬಂಧಿಯು. ಕ್ಷತ್ರಿಯನಾದ ಸೋಮದೇವನ ಸಂಬಂಧದಿಂದ ಕ್ಷತ್ರಿಯೆಯೂ ಹೌದು. ಸೋಮಯಾಗದ ಮೊದಲ ಮತ್ತು ಕಡೆಯ ಇಷ್ಟಿಗಳಾದ ಪ್ರಾಯಣೀಯ-ಉದಯನೀಯಗಳಲ್ಲಿ ಪ್ರಧಾನದೇವತೆಯಾದ ಅದಿತಿ ರೂಪಿಯೂ ನೀನೇ. ಇಂತಹ ನೀನು ಪೂರ್ವಮುಖಳಾಗಿ ಸೋಮಕ್ರಯಿ(ಸೋಮವನ್ನು ಕೊಳ್ಳುವವನು)ಯ ಬಳಿಗೆ ಹೋಗು. ಸೋಮಕ್ರಯಾನಂತರ ಪಶ್ಚಿಮಮುಖಳಾಗಿ ಹಿಂದಿರುಗಿ ಬಂದು ನಮ್ಮೊಡನೆ ಸೇರು.

ಮಿತ್ರದೇವನು ನಿನ್ನನ್ನು ಕಾಲಿನಲ್ಲಿ ಬಂಧಿಸಲಿ.

ಪೂಷದೇವನು ದಾರಿಯಲ್ಲಿ ಒದಗಬಹುದಾದ ಅಪಾಯಗಳಿಂದ ನಿನ್ನನ್ನು ಕಾಪಾಡಲಿ. ಯಾಗಾಧ್ಯಕ್ಷನಾದ ಇಂದ್ರನಿಗಾಗಿಯೂ, ಸೋಮಕ್ರಯಣಕ್ಕಾಗಿಯೂ ಹೋಗುವ ನಿನಗೆ ತಂದೆಯೂ, ತಾಯಿಯೂ, ಒಡಹುಟ್ಟಿದ ಸೋದರನೂ ಮತ್ತು ಒಂದೇ

**ಸೋಮಗ್ಂ ರುದ್ರಸ್ತ್ವಾಽಽವರ್ತಯತು ಮಿತ್ರಸ್ಯ ಪಥಾ**

**ಸ್ವಸ್ತಿ ಸೋಮಸಖಾ ಪುನರೇಹಿ ಸಹ ರಯ್ಯಾ ॥ ಳ-10 ॥**

**[ದಕ್ಷಿಣಾ ಸೋಮಸಖಾ ಪಂಚ ಚ]**

---

ಸೋಮಮ್। ರುದ್ರಃ । ತ್ವಾ। ಏತಿ। ವರ್ತಯತು। ಮಿತ್ರಸ್ಯ। ಪಥಾ। ಸ್ವಸ್ತಿ। ಸೋಮಸಖೇತಿ

ಸೋಮ-ಸಖಾ। ಪುನಃ । ಏತಿ । ಇಹಿ। ಸಹ । ರಯ್ಯಾ ॥ ಳ ॥

---



ಸೋಮಂ ದೇವಮ್ = ಸೋಮದೇವನನ್ನು; ಅಚ್ಛ ಇಹಿ =ಅನುಸರಿಸಿ ಹೋಗು; [ಅಚ್ಛ ಇಹಿ = ಪಡೆಯಲು ಹೋಗು]; ರುದ್ರಃ = ರುದ್ರದೇವನು; ತ್ವಾ = ನಿನ್ನನ್ನು; ಮಿತ್ರಸ್ಯ ಪಥಾ = ಶಾಂತನಾದವನ ಮಾರ್ಗದಿಂದ; ಆ ವರ್ತಯತು = [ನಮ್ಮ ಬಳಿಗೆ] ಹಿಂದಿರುಗಿಸಲಿ; ಸ್ವಸ್ತಿ = (ನಿನಗೆ) ಮಂಗಳವಾಗಲಿ; ಸೋಮಸಖಾ = ಸೋಮದೇವನೇ ಜೊತೆಯಾಗಿ ಉಳ್ಳ ನೀನು; ರಯ್ಯಾ ಸಹ = ಧನದೊಡನೆ; ಪುನಃ ಏಹಿ = ಮತ್ತೆ (ನಮ್ಮ ಬಳಿಗೆ) ಬಾ.

---

ಹಿಂಡಿನಲ್ಲಿರುವ ಸ್ನೇಹಿತನೂ ಅನುಮತಿಸಲಿ. ಹೀಗೆ ಅನುಮತಿಯನ್ನು ಪಡೆದ ದೇವಿಯಾದ ನೀನು ಇಂದ್ರನಿಗೋಸ್ಕರ ಸೋಮದೇವನನ್ನು ಪಡೆಯಲು ಅನುಸರಿಸಿ (ಎದುರಾಗಿ) ಸೋಮನ ಬಳಿಗೆ ಹೋಗು. ಸೋಮಕ್ರಯವಾದ ಮೇಲೆ ರುದ್ರದೇವನು ಶಾಂತವಾದ ಮಿತ್ರನ ಮಾರ್ಗದಿಂದ (ರೀತಿಯಿಂದ) ನಿನ್ನನ್ನು ನಮ್ಮ ಬಳಿಗೆ ಹಿಂದಿರುಗಿಸಲಿ. ನಿನಗೆ ಮಂಗಳವಾಗಲಿ. ಸೋಮನ ಸಖ್ಯವನ್ನು ಪಡೆದ (ಸೋಮನಿಂದೊಡಗೂಡಿದ) ನೀನು ಧನದೊಡನೆ ನಮ್ಮ ಬಳಿಗೆ ಮತ್ತೆ ಹಿಂದಿರುಗಿ ಬಾ.

## ವಿನಿಯೋಗ ಸಂಗ್ರಹ

ಇಯಂ[1] ಕ್ಷಿಪ್ತ್ವಾ ಘೃತೇ ಸ್ವರ್ಣಂ [2]ಜೂರಸೀತಿ ಜುಹೋತಿ ಹಿ।
[3]ಶುಕ್ರೇತಿ ಸ್ವರ್ಣಮುದ್ಧೃತ್ಯ [4]ವೈಶ್ವೇತ್ಯಾಜ್ಯಮವೇಕ್ಷತೇ ॥

[5]ಸೂರ್ಯ ಸೂರ್ಯಮುಪಸ್ಥಾಯ [6]ಚಿತ್ತ್ವೋಮಕ್ರಯಣೀಂ ಜಪೇತ್ ।
[7]ಮಿತ್ರೋ ದೃಷ್ಟ್ವಾ ಬದ್ಧಪಾದಂ [8]ಪೂಷಾ ತಾಮನುಮಂತ್ರಯೇತ್ ।
ರುದ್ರಸ್ತ್ವಾಮಾವರ್ತಯೀತ ಮಂತ್ರಾಃ ಸಂಕೀರ್ತಿತಾ ನವ * ॥

ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ ಆಪಸ್ತಂಬ - 8
ಬೌಧಾಯನ - 5

### ಅನುವಾಕದ ವಿಶೇಷ ವಿಷಯಗಳು

#### ಅ) ಭ. ಭಾ. ಭಾಷ್ಯ

**ಮಂತ್ರಸಂಖ್ಯೆ**

೧) ಇಯಂ..........ಗಚ್ಛ ಘೃತಂ ಗಚ್ಛ = ಪ್ರಜ್ವಲೀಭವ = ಬಲರೂಪವಾದ ಆಜ್ಯವನ್ನು ಹೊಂದಿ ಪ್ರಜ್ವಲಿಸು.

೨) ಜೂರಸಿ.......ಸ್ವಾಹಾ ಜುಷ್ಟಾ = ವಿದ್ವಾಂಸರಿಂದ ಸೇವಿಸಲ್ಪಟ್ಟಿದ್ದೀಯೆ; ಸತ್ಯಸವಸಃ =ಅಮೋಘವಾದ ಪ್ರೇರಣೆಯುಳ್ಳ ಸವಿತೃದೇವನ; ಪ್ರಸವೇ = ಅನುಮತಿಯಾಗಲು; ವಾಗ್ದೇವಿಯನ್ನು ಅಧೀನ ಮಾಡಿಕೊಳ್ಳಬಹುದು.

೩) ಶುಕ್ರಮಸ್ಯಮೃತಮಸಿ । ಅಮೃತಮಸಿ = ದೇವಾನಾಮಮರಣಹೇತುತ್ವಾತ್ = ದೇವತೆಗಳನ್ನು ಅಮರರನ್ನಾಗಿ ಮಾಡುವುದರಿಂದ ಅಮೃತವಾಗಿರುವೆ.

೪) ಸೂರ್ಯಸ್ಯ..........ವಿಚಕ್ಷಿತಾ ॥ ಸೂರ್ಯಸ್ಯ ಚಕ್ಷುಃ = ಆದಿತ್ಯ ಮಂಡಲಾಂತರ್ಗತವಾದ—ಸ್ಥಾವರ ಜಂಗಮಗಳಿಗೆ ಆತ್ಮನಾದ—ಪರಮಾತ್ಮನ ಕಣ್ಣಾಗಿರುವ ಮಂಡಲವನ್ನು ಹೊಂದಿರುತ್ತೇನೆ. ಅಗ್ನೇಃ ಅಕ್ಷ್ಣಃ ಕನೀನಿಕಾಮ್ = ನನ್ನ

---

*ವಿನಿಯೋಗಸಂಗ್ರಹಕಾರರು ಸಾಮಾನ್ಯವಾಗಿ ಆಪಸ್ತಂಬರ ಮತವನ್ನು ಅನುಸರಿಸಿಯೇ ಮಂತ್ರಗಳ ಸಂಖ್ಯೆಯನ್ನು ನೀಡುತ್ತಾರೆ. ಇಲ್ಲಿ ಮಾತ್ರ ಆ ಸಂಖ್ಯೆಯು ವ್ಯತ್ಯಾಸವಾಗಿದೆ.

ಕಣ್ಣಿನ ಗುಡ್ಡೆಯಲ್ಲಿರುವ ಆತ್ಮನೊಡನೆ ಐಕ್ಯವನ್ನು ಹೊಂದಿರುತ್ತೇನೆ. ಆದುದರಿಂದ ನನಗೆ ರಕ್ಷೋಬಾಧೆಯು ಉಂಟಾಗಲಾರದು. + ಯತ್ = ಯಃ = ಯಾವ ಸೂರ್ಯನಾದ ನೀನು; ಏತಶೇಭಿಃ = ವೇಗಯುಕ್ತವಾದ ಶುಕ್ಲವರ್ಣವುಳ್ಳ ಕುದುರೆಗಳಿಂದ; ವಿಪಶ್ಚಿತಾ =ಮೇಧಾವಿಯಾದ ಮುನಿಸಮೂಹದಿಂದ; [ಮುನಿಸಮೂಹದೊಡನೆ] ಭ್ರಾಜಮಾನಃ = ಪ್ರಕಾಶಮಾನನಾಗಿ; ಈಯಸೇ = ಬರುತ್ತೀಯೋ; (ಆ ನಿನ್ನ ಮಂಡಲವನ್ನು ಏರಿರುತ್ತೇನೆ.)

೬) ಚಿದಸಿ.................ಸಂಭವ । ಧೀಃ = ಕರ್ಮ ಅಸಿ = ಸರ್ವಾರ್ಥಸಾಧನ ವಾಗಿದ್ದೀಯೆ. ದಕ್ಷಿಣಾ = ಶೀಘ್ರಗಾಮಿನೀ = ವೇಗವಾಗಿ ಹೋಗುವವಳಾಗಿದ್ದೀಯೆ.

ಆ) ಛಂದಸ್ಸು

ಸೂರ್ಯಸ್ಯ..........ವಿಪಶ್ಚಿತಾ । ಅನುಷ್ಟುಪ್

ಇ) ಮೀಮಾಂಸಾ

೧) ನಿಷ್ಕಾಸನಿರ್ವಾಪವು ಯಾವ ವಿಧಿ? [ಜೈ.ಸೂ. 11.2]

ಜ್ಯೋತಿಷ್ಟೋಮದಲ್ಲಿ 'ಪ್ರಾಯಣೀಯಸ್ಯ ನಿಷ್ಕಾಸ ಉದಯನೀಯಮಭಿ ನಿರ್ವಪತಿ' [ತೈ.ಸಂ. 6.1.5] ಎಂದು ಹೇಳಲಾಗಿದೆ. ಪ್ರಾಯಣೀಯೇಷ್ಟಿಯಲ್ಲಿ ಉಳಿದ ನಿಷ್ಕಾಸದ್ರವ್ಯವನ್ನು ಉದಯನೇಷ್ಟಿಗಾಗಿ ನಿರ್ವಾಪ ಮಾಡಬೇಕು ಎಂದು ಇದರ ಅರ್ಥ. ಈ ನಿರ್ವಾಪವು ಅರ್ಥಕರ್ಮವಿಧಿಯೇ? ಪ್ರತಿಪತ್ತಿಯೇ? ಸಂಸ್ಕಾರಕರ್ಮವಿಧಿಯೇ? ಎಂಬುದು ಇಲ್ಲಿನ ಸಂಶಯ.

ಇಲ್ಲಿಯ ಪೂರ್ವಪಕ್ಷವು ಹೀಗಿದೆ; ಪ್ರಾಯಣೀಯನಿಷ್ಕಾಸವೇ ಹೋಮ ದ್ರವ್ಯವಾಗಿರುವ ಈ ವಿಧಿಯು ಉದಯನೀಯಧರ್ಮಗಳನ್ನು ಹೊಂದಿರುವ ಯಾಗಾಂತರ ವಿಧಿ ಎನ್ನಬಹುದು. ಆದರೆ ಅತಿದೇಶದ ಧರ್ಮವು ಇಲ್ಲಿ ಪ್ರವರ್ತಿಸುವುದಿಲ್ಲ ವಾದುದರಿಂದ, ಮಂತ್ರ-ದ್ರವ್ಯ-ದೇವತಾದಿಗಳಿಲ್ಲದಿರುವುದರಿಂದ ಇದು ಯಾಗಾಂತರ ವಿಧಿಯಾಗಲಾರದು. ಹಾಗಾದರೆ ಪ್ರಾಯಣೀಯೇಷ್ಟಿಯಲ್ಲಿ ಉಳಿದಿರುವ ನಿಷ್ಕಾಸಕ್ಕೆ ಇದು ಪ್ರತಿಪತ್ತಿವಿಧಿಯೆನಿಸುತ್ತದೆ.

ಉಪಯುಕ್ತಸಂಸ್ಕಾರ(ಬಳಸಿರುವುದರ ಸಂಸ್ಕಾರ)ಎನ್ನುವುದಕ್ಕಿಂತ ಉಪಯೋಕ್ಷ್ಯ-ಮಾಣಸಂಸ್ಕಾರ(ಮುಂದೆ ಬಳಸುವ ವಸ್ತುಗಳ ಸಂಸ್ಕಾರ) ಎನ್ನುವುದು ಶ್ರೇಷ್ಠವಾದುದು. ಆದುದರಿಂದ. ನಿಷ್ಕಾಸನಿರ್ವಾಪವು ಉದಯನೀಯಹವಿಸ್ಸಿನ ಸಂಸ್ಕಾರವಿಧಿ. ಇದು ಇಲ್ಲಿಯ ಸಿದ್ಧಾಂತ.

೨) ಆರುಣ್ಯವು ಯಾವುದರ ಸಂಬಂಧಿ? [ಜೈ.ಸೂ. 5-3]

ಜ್ಯೋತಿಷ್ಟೋಮದಲ್ಲಿ 'ಅರುಣಯಾ ಪಿಂಗಾಕ್ಷ್ಯಾ ಏಕಹಾಯನ್ಯಾ ಸೋಮಂ ಕ್ರೀಣಾತಿ [ತೈ. ಸಂ.6.1.6.] ಎಂಬ ವಚನವಿದೆ. ಸೋಮಕ್ರಯಣಕ್ಕೆ ಎಳೆಗೆಂಪಾದ ಬಣ್ಣದಿಂದ ಕೂಡಿದುದನ್ನು ಬಳಸಬೇಕು. ಎಂದು ಅರ್ಥ. ಈ ಆರುಣ್ಯವು ಯಾಗದ ಸರ್ವವಸ್ತುಗಳಲ್ಲಿಯೂ ಇರಬೇಕೇ? ಅಥವಾ ಸೋಮವನ್ನು ಕೊಳ್ಳುವ ಸಾಧನವಾದ ಗೋವಿನಲ್ಲಿ ಮಾತ್ರವೇ? ಎಂಬುದು ಇಲ್ಲಿನ ಸಂಶಯ.

ಇಲ್ಲಿಯ ಪೂರ್ವಪಕ್ಷ ಹೀಗಿದೆ; 'ಅರುಣಯಾ ಕ್ರೀಣಾತಿ' [ಎಳೆಗೆಂಪಾದ ಬಣ್ಣದಿಂದ ಸೋಮಕ್ರಯವನ್ನು ಮಾಡಬೇಕು.] ಎಂಬಲ್ಲಿ ಅಮೂರ್ತವಾದ ಆರುಣ್ಯವೆಂಬ ಗುಣವು ಕ್ರಯದ ಸಾಧನವಾಗಲಾರದು. ಆದುದರಿಂದ ಪ್ರಕರಣದಿಂದ ಇಲ್ಲಿ ವಿನಿಯೋಗವನ್ನು ಹೇಳಬೇಕು. ಹೀಗಾಗಿ ಈ ಪ್ರಕರಣದಲ್ಲಿರುವ ಗ್ರಹ-ಚಮಸಾದಿಗಳೆಲ್ಲವೂ ಅರುಣ ವಾಗಿರಬೇಕು ಎಂದು ವಿಧಿ. 'ಪಿಂಗಾಕ್ಷ್ಯಾ' (ಪಿಂಗಲವರ್ಣದ ಕಣ್ಣುಳ್ಳ) 'ಏಕಹಾಯನ್ಯಾ' (ಒಂದು ವರ್ಷ ವಯಸ್ಸಿನ) ಈ ಶಬ್ದಗಳು ದ್ರವ್ಯವಾದ ಗೋವಾಚಕಗಳಾದುದರಿಂದ ಕ್ರಯಸಾಧನಕ್ಕೆ ಅರ್ಹಗಳಾಗಿವೆ. ಆದರೆ ಅರುಣಾ ಎಂಬ ಶಬ್ದವು ಗುಣವಾಚಕವಾದುದರಿಂದ 'ಅರುಣಯಾ' ಎಂಬ ವಾಕ್ಯವನ್ನು ಬೇರೆ ಮಾಡಿ ಗ್ರಹ-ಚಮಸಾದಿಗಳೆಲ್ಲವೂ ಅರುಣವಾಗಿರಬೇಕೆಂದು ಈ ವಿಧಿಯು ತಿಳಿಸುತ್ತದೆ.

ಇಲ್ಲಿಯ ಸಿದ್ಧಾಂತವು ಹೀಗಿದೆ: ಇಲ್ಲಿ ಆರುಣ್ಯಾದಿವಿಶಿಷ್ಟದಿಂದ ಕ್ರಯವು ವಿಹಿತ ವಾಗಿದೆ. 'ಅರುಣಯಾ' ಎಂಬಲ್ಲಿ ತೃತೀಯಾವಿಭಕ್ತಿಯ ಶ್ರುತಿಯಿಂದ ಆರುಣ್ಯಗುಣವು ಕ್ರಯಣದಲ್ಲಿ ಸಾಧನವೆಂದು ತಿಳಿಯುತ್ತದೆ. ಅದೂ ದ್ರವ್ಯದ ಮೂಲಕವೇ ಸಾಧನ ವಾಗಬೇಕು. ದ್ರವ್ಯವು ಯಾವುದೆಂದರೆ 'ಸಮಾನವಾಕ್ಯದಲ್ಲಿಯೇ ಉಕ್ತವಾದ ಏಕಹಾಯನಿ ಯಾದ ಗೋವೇ ಅದು'ಎಂದು ಅನಂತರ ತಿಳಿಯುತ್ತದೆ. ಆದುದರಿಂದ ವಾಕ್ಯಭೇದವನ್ನು ಅಂಗೀಕರಿಸಿ ಗ್ರಹ-ಚಮಸಾದಿಗಳಲ್ಲಿ ಆರುಣ್ಯವಿಧಿಯನ್ನು ಮಾಡಬೇಕಾಗಿಲ್ಲ. ಅಲ್ಲದೆ 'ವಾಸಸಾ ಕ್ರೀಣಾತಿ' (ಬಟ್ಟೆಯನ್ನಿತ್ತು ಕೊಳ್ಳುತ್ತಾನೆ). ಮುಂತಾದವುಗಳೂ [ತೈ.ಸಂ.6.1.10] ಕ್ರಯಾಂತರವಿಧಿಗಳು. ಆದುದರಿಂದ ಅಲ್ಲಿಯೂ ಆರುಣ್ಯವು ಸಂಬಂಧಿಸುವುದಿಲ್ಲ.

ಈ ನಾಲ್ಕನೆಯ ಅನುವಾಕದಲ್ಲಿ ಸೋಮವನ್ನು ಕೊಳ್ಳುವ ಪ್ರದೇಶ ಅಂದರೆ ಕ್ರಯಪ್ರದೇಶಕ್ಕೆ ಸೋಮಕ್ರಯಣಿಯ (ಗೋವಿನ) ಗಮನವನ್ನು ಹೇಳಿದೆ. ಗಮನದ ಮಧ್ಯದಲ್ಲಿಯೇ ಮಾಡಬೇಕಾದ ಪದಸಂಗ್ರಹವನ್ನು ಐದನೆಯ ಅನುವಾಕದಲ್ಲಿ ಹೇಳಲಾಗಿದೆ.

---

## ॥ ಪಂಚಮೋಽನುವಾಕಃ ॥

ವಸ್ವ್ಯಸಿ ರುದ್ರಾಸ್ಯದಿತಿರಸ್ಯಾದಿತ್ಯಾಸಿ ಶುಕ್ರಾಸಿ ಚಂದ್ರಾಸಿ

---

ವಸ್ವೀ। ಅಸಿ। ರುದ್ರಾ। ಅಸಿ। ಅದಿತಿಃ। ಅಸಿ। ಆದಿತ್ಯಾ। ಅಸಿ। ಶುಕ್ರಾ। ಅಸಿ। ಚಂದ್ರಾ। ಅಸಿ।

---

| ಮಂತ್ರ | ವಿನಿಯೋಗ |
|---|---|
| ವಸ್ವ್ಯಸಿ। ರುದ್ರಾಸಿ। ಅದಿತಿರಸಿ। ಆದಿತ್ಯಾಸಿ। ಶುಕ್ರಾಸಿ। ಚಂದ್ರಾಸಿ। | ಸೋಮಕ್ರಯಣಿಯು ಹೋಗುವಾಗ ಅದರ ಮೊದಲಿನ ಆರು ಹೆಜ್ಜೆಗಳನ್ನು ಅನುಸರಿಸಿ ಹೆಜ್ಜೆಯಿಡುತ್ತಾ ಕ್ರಮವಾಗಿ ಹೇಳಲು. |

---

[ಎಲೈ ಸೋಮಕ್ರಯಣಿಯೇ! ನೀನು] ವಸ್ವೀ ಅಸಿ =[ಪ್ರಾತಃಸವನದೇವತೆಗಳಾದ] ವಸುಗಳ ಸ್ವರೂಪವೂ ಆಗಿರುವೆ; ರುದ್ರಾ ಅಸಿ = [ಮಾಧ್ಯಂದಿನಸವನದೇವತೆಗಳಾದ] ರುದ್ರರ ಸ್ವರೂಪವೂ ಆಗಿರುವೆ; ಅದಿತಿಃ ಅಸಿ = [ಪ್ರಾಯಣೀಯ ಮತ್ತು ಉದಯನೀಯ ದೇವತೆಯಾದ] ಅದಿತಿಯ ಸ್ವರೂಪಳೂ ಆಗಿರುತ್ತೀಯೆ; ಆದಿತ್ಯಾ ಅಸಿ = [ತೃತೀಯ-ಸವನದೇವತೆಗಳಾದ] ಆದಿತ್ಯರ ಸ್ವರೂಪಳೂ ಆಗಿರುತ್ತೀಯೆ; ಶುಕ್ರಾ ಅಸಿ = ಸೋಮರೂಪಳೂ ಆಗಿರುತ್ತೀಯೆ; ಚಂದ್ರಾ ಅಸಿ =ಸಂತೋಷಕಾರಿಯಾದ ಸುವರ್ಣದ ಸ್ವರೂಪಳೂ ಆಗಿರುತ್ತೀಯೆ.

---

ಎಲೈ ಸೋಮಕ್ರಯಣಿಯೇ! ಸೋಮಕ್ರಯದ ಮೂಲಕ ಯಜ್ಞಕ್ಕೆ ಉಪಕಾರಕಳಾದ ನೀನು ಸವನತ್ರಯದೇವತೆಗಳಾದ ವಸುಗಳ, ರುದ್ರರ ಮತ್ತು ಆದಿತ್ಯರ ಸ್ವರೂಪಳು. ಪ್ರಾಯಣೀಯ ಮತ್ತು ಉದಯನೀಯೇಷ್ಟಿಗಳ ಪ್ರಧಾನದೇವತೆಯಾದ ಅದಿತಿಯ ಸ್ವರೂಪಳೂ ಆಗಿರುವೆ. ಪ್ರಕಾಶಮಾನನಾದ ಸೋಮನ ಸ್ವರೂಪಳೂ ನೀನು. ಸಂತೋಷಕಳವಾದ ಹಿರಣ್ಯದ ಸ್ವರೂಪಳೂ ಆಗಿರುವೆ.

# ಬೃಹಸ್ಪತಿಸ್ತ್ವಾ ಸುಮ್ನೇ ರಣ್ವತು ರುದ್ರೋ ವಸುಭಿರಾಚಿಕೇತು ಪೃಥಿವ್ಯಾಸ್ತ್ವಾ ಮೂರ್ಧನ್ನಾಜಿಘರ್ಮಿ ದೇವಯಜನ ಇಡಾಯಾಃ ಪದೇ ಘೃತವತಿ ಸ್ವಾಹಾ

---

ಬೃಹಸ್ಪತಿಃ । ತ್ವಾ। ಸುಮ್ನೇ । ರಣ್ವತು । ರುದ್ರಃ । ವಸುಭಿರಿತಿ ವಸು- ಭಿಃ। ಏತಿ। ಚಿಕೇತು। ಪೃಥಿವ್ಯಾಃ । ತ್ವಾ । ಮೂರ್ಧನ್ನ್ । ಏತಿ। ಜಿಘರ್ಮಿ । ದೇವಯಜನ ಇತಿ ದೇವ- ಯಜನೇ। ಇಡಾಯಾಃ । ಪದೇ। ಘೃತವತೀತಿ ಘೃತ-ವತಿ। ಸ್ವಾಹಾ।

---

| ಮಂತ್ರ | ವಿನಿಯೋಗ |
|---|---|
| ಬೃಹಸ್ಪತಿಸ್ತ್ವಾ..... ಚಿಕೇತು। | ಸೋಮಕ್ರಯಣಿಯ ಏಳನೆಯ ಹೆಜ್ಜೆಯನ್ನು ಬೊಗಸೆಯಿಂದ ತೆಗೆದುಕೊಳ್ಳಲು |
| ಪೃಥಿವ್ಯಾಸ್ತ್ವಾ..... ಸ್ವಾಹಾ। | ಸೋಮಕ್ರಯಣಿಯ ಏಳನೆಯ ಹೆಜ್ಜೆಯ ಸ್ಥಳದಲ್ಲಿ ಹಿರಣ್ಯವನ್ನಿಟ್ಟು ಹೋಮ ಮಾಡಲು. |

---

[ಎಲೈ ಸೋಮಕ್ರಯಣೀಪಾದವೇ!] **ತ್ವಾ** = ನಿನ್ನನ್ನು; **ಬೃಹಸ್ಪತಿಃ** = ಬೃಹಸ್ಪತಿದೇವನು; **ಸುಮ್ನೇ** = ಸುಖವಾದ ಪ್ರದೇಶದಲ್ಲಿ; **ರಣ್ವತು** = ಸಂತೋಷಪಡಿಸಲಿ; [ಇಡಿಸಲಿ]. **ರುದ್ರಃ** = ರುದ್ರದೇವನು; **ವಸುಭಿಃ** = ವಸುಗಳೊಡನೆ ಕೂಡಿದವನಾಗಿ; **ಆ ಚಿಕೇತು** =ಅನುಮತಿಸಲಿ (ಹಿಂದಿರುಗಿಸಲಿ). ❖[ಎಲೈ ಘೃತವೇ!] **ತ್ವಾ**= ನಿನ್ನನ್ನು; **ಪೃಥಿವ್ಯಾಃ** =ಭೂಮಿಯ; **ಮೂರ್ಧನ್**= ತಲೆಯಾಗಿರುವ (ತಲೆಯಂತೆ ಶ್ರೇಷ್ಠವಾಗಿರುವ ); **ದೇವಯಜನೇ** = ದೇವತಾಯಾಗಭೂಮಿಯಾಗಿರುವ; **ಘೃತವತಿ** = ಘೃತದಿಂದ ಕೂಡಿರುವ; **ಇಡಾಯಾಃ** = ಸೋಮಕ್ರಯಣಿಯ; **ಪದೇ** = ಹೆಜ್ಜೆಯಲ್ಲಿ; **ಆ ಜಿಘರ್ಮಿ** =ಸುತ್ತಲೂ ಸುರಿಸುತ್ತೇನೆ. **ಸ್ವಾಹಾ= ಈ** ಆಜ್ಯವು ಹುತವಾಗಲಿ; [ನೀನು ಹುತನಾಗು]

---

ಎಲೈ ಸೋಮಕ್ರಯಣಿಯ ಪಾದವೇ! ಬೃಹಸ್ಪತಿಯು ನಿನ್ನನ್ನು ಸುಖಕರವಾದ ಪ್ರದೇಶದಲ್ಲಿಡಿಸಿ ಸುಖಪಡಿಸಲಿ. ವಸುಗಳಿಂದೊಡಗೂಡಿದ ಪಶುಪತಿಯಾದ ರುದ್ರನು

# ಪರಿಲಿಖಿತಗ್ಂ ರಕ್ಷಃ ಪರಿಲಿಖಿತಾ ಅರಾತಯ

# ಇದಮಹಗ್ಂ ರಕ್ಷಸೋ ಗ್ರೀವಾ ಅಪಿ ಕೃಂತಾಮಿ

---

ಪರಿಲಿಖಿತಮಿತಿ ಪರಿ-ಲಿಖಿತಮ್। ರಕ್ಷಃ । ಪರಿಲಿಖಿತಾ ಇತಿ ಪರಿ-ಲಿಖಿತಾಃ । ಅರಾತಯಃ।

ಇದಮ್ । ಅಹಮ್ । ರಕ್ಷಸಃ । ಗ್ರೀವಾಃ । ಅಪೀತಿ । ಕೃಂತಾಮಿ ।

---

| ಮಂತ್ರ | ವಿನಿಯೋಗ |
|---|---|
| ಪರಿಲಿಖಿತಂ...ಅಸ್ಯಗ್ರೀವಾ...ಕೃಂತಾಮಿ । | ಬಂಗಾರದ ಖಂಡದಿಂದ ಅಥವಾ ಜಿಂಕೆಯ ಕೊಂಬಿನಿಂದ ಏಕಹಾಯನಿಯ ಹೆಜ್ಜೆಯ ಸ್ಥಳವನ್ನು ಸುತ್ತಲೂ ಗೀರಲು. |

---

+ರಕ್ಷಃ = ರಕ್ಷೋಜಾತಿಯು, ಪರಿಲಿಖಿತಮ್ = ನಾಶಗೊಳಿಸಲ್ಪಟ್ಟುದಾಗಿ; (ಆಗಲಿ); ಅರಾತಯಃ = ಶತ್ರುಗಳು; ಪರಿಲಿಖಿತಾಃ =ನಾಶಗೊಳಿಸಲ್ಪಟ್ಟವರಾಗಿ (ಆಗಲಿ); ಅಹಮ್ = ನಾನು; ರಕ್ಷಸಃ =ರಾಕ್ಷಸಜಾತಿಯ; ಗ್ರೀವಾಃ = ಕುತ್ತಿಗೆಗಳನ್ನು; ಇದಮ್ = ಇದೋ (ಈ ರೀತಿಯಲ್ಲಿ) ಅಪಿ ಕೃಂತಾಮಿ = ಕತ್ತರಿಸುತ್ತೇನೆ; ಯಃ = ಯಾವನು; ಅಸ್ಮಾನ್ = ನಮ್ಮನ್ನು; ದ್ವೇಷ್ಟಿ = ದ್ವೇಷಿಸುತ್ತಾನೆಯೋ; ಚ = ಮತ್ತು; ಯಮ್ = ಯಾವನನ್ನು; ವಯಮ್ = ನಾವು; ದ್ವಿಷ್ಮಃ = ದ್ವೇಷಿಸುತ್ತೇವೆಯೋ; ಅಸ್ಯ = ಈ ದ್ವೇಷಿಯ ಮತ್ತು ದ್ವೇಷ್ಯನ; ಗ್ರೀವಾಃ=ಕುತ್ತಿಗೆಗಳನ್ನು; ಇದಮ್ ಅಪಿಕೃಂತಾಮಿ=ಇದೋ ಹೀಗೆ ಕತ್ತರಿಸುತ್ತೇನೆ.

---

ನಿನಗೆ ಅನುಮತಿಕೊಡಲಿ (ಅಥವಾ ಹಿಂದಿರುಗಿಸಲಿ). ಆಎಲೈ ಘೃತವೇ! ಈ ಸೋಮಕ್ರಯಣಿಯ ಏಳನೆಯ ಹೆಜ್ಜೆಯು ಪೃಥಿವಿಯ ಶಿರಸ್ಸಿನಂತೆ ಶ್ರೇಷ್ಠ ಸ್ಥಾನವಾಗಿದೆ. ದೇವತೆಗಳಿಗಾಗಿ ಯಾಗ ಮಾಡುವ ಪ್ರದೇಶವಾಗಿದೆ. ಘೃತವುಳ್ಳದ್ದಾಗಿದೆ. ಇಂತಹ ಪದದಲ್ಲಿ ನಿನ್ನನ್ನು ಸುತ್ತಲೂ ಸುರಿಸುತ್ತೇನೆ. ನೀನು ಹುತವಾಗು. [ಹೀಗೆಂದು ವಾಗ್ದೇವಿಯು ಹೇಳುತ್ತಾಳೆ].

ರಾಕ್ಷಸರು ಈ ಪರಿಲೇಖನದಿಂದ ನಾಶಹೊಂದಲಿ. ಶತ್ರುಗಳು ನಾಶಹೊಂದಲಿ. ನಾನು ಹೀಗೆ ಪರಿಲೇಖನ ಮಾಡಿ ರಾಕ್ಷಸರ ಕುತ್ತಿಗೆಗಳನ್ನು ಕತ್ತರಿಸುತ್ತೇನೆ. ನಮ್ಮನ್ನು ಯಾರು ದ್ವೇಷಿಸುವರೋ, ಯಾವನನ್ನು ನಾವು ದ್ವೇಷಿಸುತ್ತೇವೆಯೋ ಅಂತಹವರ

**ಯೋಽಸ್ಮಾನ್ ದ್ವೇಷ್ಟಿ ಯಂ ಚ ವಯಂ ದ್ವಿಷ್ಮ**

**ಇದಮಸ್ಯ ಗ್ರೀವಾ (ಗ್ರೀವಾಃ [೧] ಅಪಿ)**

**ಅಪಿ ಕೃಂತಾಮ್ಯಸ್ಮೇ ರಾಯಸ್ತ್ವೇ ರಾಯಸ್ತೋತೇ ರಾಯಃ**

---

ಯಃ । ಅಸ್ಮಾನ್ । ದ್ವೇಷ್ಟಿ । ಯಮ್ । ಚ । ವಯಮ್ । ದ್ವಿಷ್ಮಃ । ಇದಮ್।
ಅಸ್ಯ। ಗ್ರೀವಾಃ(೧)। ಅಪೀತಿ। ಕೃಂತಾಮಿ। ಅಸ್ಮೇ ಇತಿ। ರಾಯಃ । ತ್ವೇ ಇತಿ। ರಾಯಃ।
ತೋತೇ। ರಾಯಃ।

---

| ಮಂತ್ರ | ವಿನಿಯೋಗ |
| --- | --- |
| ಅಸ್ಮೇ ರಾಯಃ । | ಸೋಮಕ್ರಯಣಿಯ ಏಳನೆಯ ಹೆಜ್ಜೆಯ ಧೂಳನ್ನು ಸ್ಥಾಲಿಯಲ್ಲಿ ತುಂಬಲು. |
| ತ್ವೇ ರಾಯಃ । | ಪದರಜಸ್ಸನ್ನು (ಧೂಳು) ಯಜಮಾನನಿಗೆ ನೀಡಲು. |
| ತೋತೇ ರಾಯಃ । | ಪದರಜಸ್ಸನ್ನು (ಧೂಳು) ಯಜಮಾನನ ಪತ್ನಿಗೆ ಕೊಡಲು. |

---

**ಅಸ್ಮೇ** = (ಅಸ್ಮಾಸು) = ನಮ್ಮಲ್ಲಿ; **ಅಥವಾ** ಅಸ್ಮೇ (ಅಸ್ಮಿನ್ ಅಧ್ವರ್ಯೌ) = **ಈ** ಅಧ್ವರ್ಯುವಿನಲ್ಲಿ; **ರಾಯಃ** = ಪಶುರೂಪಧನಗಳು (ರಜೋರೂಪಧನಗಳು) (ಸಂತು = ಇರಲಿ) **+ತ್ವೇ** = (ತ್ವಯಿ) =ನಿನ್ನಲ್ಲಿ (ಯಜಮಾನನಲ್ಲಿ) **ರಾಯಃ** (ಸಂತು) = ರಜೋರೂಪಧನವಿರಲಿ. **+ತೋತೇ** = ಕಲತ್ರವಾದ(ನಿನ್ನಲ್ಲಿ); **ರಾಯಃ** (ಸಂತು) = ರಜೋರೂಪವಾದ ಧನವಿರಲಿ.

---

ಕಂಠಗಳನ್ನೂ ಹೀಗೆ ಪರಿಲೇಖನ ಮಾಡಿ ಕತ್ತರಿಸುತ್ತೇನೆ. ❁ ಈ ಅಧ್ವರ್ಯುವಿನಲ್ಲಿ ಪದಪಾಂಸುಸಂಗ್ರಹದಿಂದ ಪಶುರೂಪಧನಗಳು, ರಜೋರೂಪಧನಗಳು ಹೆಚ್ಚಾಗಿರಲಿ. ❁ಯಜಮಾನನಾದ ನಿನ್ನಲ್ಲಿ ಸೋಮಕ್ರಯಣೀಪದರಜೋರೂಪವಾದ ಧನವಿರಲಿ. ❁ಎಲೈ! ಯಜಮಾನಪತ್ನಿಯೇ! ಯಜಮಾನನ ಕಲತ್ರವಾದ ನಿನ್ನಲ್ಲಿ ಗೋಪದರಜೋ-ರೂಪವಾದ ಧನವಿರಲಿ.

**ಸಂ ದೇವಿ ದೇವ್ಯೋರ್ವಶ್ಯಾ ಪಶ್ಯಸ್ವ ತ್ವಷ್ಟ್ರೀಮತೀ ತೇ**
**ಸಪೇಯ ಸುರೇತಾ ರೇತೋ ದಧಾನಾ ವೀರಂ**
**ವಿದೇಯ ತವ ಸಂದೃಶಿ**

---

ಸಮಿತಿ। ದೇವಿ। ದೇವ್ಯಾ। ಉರ್ವಶ್ಯಾ। ಪಶ್ಯಸ್ವ। ತ್ವಷ್ಟ್ರೀಮತೀ। ತೇ। ಸಪೇಯ। ಸುರೇತಾ ಇತಿ ಸು-ರೇತಾಃ। ರೇತಃ। ದಧಾನಾ। ವೀರಮ್। ವಿದೇಯ। ತವ। ಸಂದೃಶೀತಿ ಸಮ್-ದೃಶಿ।

---

| ಮಂತ್ರ | ವಿನಿಯೋಗ |
|---|---|
| ಸಂ ದೇವಿ..........ಪಶ್ಯಸ್ವ। | ಸೋಮಕ್ರಯಣಿಯಿಂದ ಪತ್ನಿಯನ್ನು ನೋಡಿಸಲು |
| ತ್ವಷ್ಟ್ರೀಮತೀ........ಸಂದೃಶಿ। | ಪತ್ನಿಯು ಯಜಮಾನನನ್ನು ನೋಡಲು–ಬೌಧಾಯನ. |
| | ಪತ್ನಿಯು ಸೋಮಕ್ರಯಣಿಯನ್ನು ನೋಡಲು–ಆಪ. |

---

+ದೇವಿ = ದೇವಿಯಾದ [ಸೋಮಕ್ರಯಣಿಯೇ!] ಉರ್ವಶ್ಯಾ ದೇವ್ಯಾ = ಉರ್ವಶೀ ದೇವಿಯೊಡನೆ; [ಇಮಾಮ್ = ಈ ಯಜಮಾನ ಪತ್ನಿಯನ್ನು;] ಸಂ ಪಶ್ಯಸ್ವ = ಚೆನ್ನಾಗಿ ನೋಡು. + [ಹೇ ಪತಿಯೇ!] ತ್ವಷ್ಟ್ರೀಮತೀ = [ಸ್ತ್ರೀ ಪುರುಷರ ಶರೀರನಿರ್ಮಾತೃವಾದ] ತ್ವಷ್ಟೃದೇವನ [ಅನುಗ್ರಹದಿಂದ] ಕೂಡಿದವಳಾಗಿ; ತೇ = ನಿನ್ನೊಡನೆ; ಸಪೇಯ = ಸೇರುವೆನು. ಸುರೇತಾಃ = ಅಮೋಘವಾದ ರೇತಸ್ಸುಳ್ಳವಳಾದ ನಾನು; ರೇತಃ = ನಿನ್ನ ರೇತಸ್ಸನ್ನು; ದಧಾನಾ = ಧರಿಸಿದವಳಾಗಿ; ತವ = ನಿನ್ನ; ಸಂದೃಶಿ = [ಯಾವಾಗಲೂ ನಿನ್ನ] ಶುಭವಾದ ನೋಟದಲ್ಲಿ ಇರುವವಳಾಗಿ; ವೀರಮ್ = [ನಿನಗೆ ತಕ್ಕ ಗುಣಗಳಿಂದ ಕೂಡಿದ] ಶೂರನಾದ ಮಗನನ್ನು; ವಿದೇಯ = ಹೊಂದುವೆನು. ಅಥವಾ

---

ಎಲ್ಲೈ! ಸೋಮಕ್ರಯಣೀದೇವಿಯೇ! ಹೆಚ್ಚಾದ ಶ್ರೇಯಸ್ಸನ್ನು ಹೊಂದುವ ಉರ್ವಶೀದೇವಿಯೊಡನೆ ನೀನು ಈ ಯಜಮಾನಪತ್ನಿಯನ್ನು ಚೆನ್ನಾಗಿ ನೋಡು. ನಿನ್ನ ನೋಟದಿಂದ ಈಕೆಯೂ ಹೆಚ್ಚಾದ ಶ್ರೇಯಸ್ಸನ್ನು ಹೊಂದಲಿ.

# ಮಾಹಗ್ಂ ರಾಯಸ್ಪೋಷೇಣ ವಿ ಯೋಷಮ್ ॥೫-12॥

## [ಅಸ್ಯ ಗ್ರೀವಾ ಏಕಾನ್ನತ್ರಿಗ್ಂಶಚ್ಚ। ]

---

ಮಾ। ಅಹಮ್ । ರಾಯಃ । ಪೋಷೇಣ । ವೀತಿ । ಯೋಷಮ್ ॥ ೫ ॥

---

| ಮಂತ್ರ | ವಿನಿಯೋಗ (ಬೌಧಾಯನ) |
| --- | --- |
| ಮಾ.......ಯೋಷಮ್ । | ಯಜಮಾನನು ಸೋಮಕ್ರಯಣಿಯನ್ನು ನೋಡಲು ಅಧ್ವರ್ಯುವು ನೀಡುವ ಸೋಮಕ್ರಯಣೀಪದರಜಸ್ಸಿನ ತೃತೀಯಾಂಶವನ್ನು ಪತ್ನಿಯು ಅಭಿಮಂತ್ರಿಸಲು—ಆಪ. |

---

[ಹೇ! ಸೋಮಕ್ರಯಣಿಯೇ!] ತ್ವಷ್ಟೀಮತೀ = [ಸ್ತ್ರೀ ಪುರುಷರ ಶರೀರನಿರ್ಮಾತನಾದ] ತ್ವಷ್ಟೃದೇವನ ಅನುಗ್ರಹದಿಂದ ಕೂಡಿದವಳಾಗಿ; ತೇ = ನಿನ್ನ ಅನುಗ್ರಹದಿಂದ (ಯಜಮಾನನೊಡನೆ) ಸಪೇಯ = ಸೇರುವೆನು. ಸುರೇತಾಃ = ಅಮೋಘವಾದ ರೇತಸ್ಸುಳ್ಳವಳಾದ ನಾನು; ರೇತಃ = (ನಿನ್ನ) ರೇತಸ್ಸನ್ನು; ದಧಾನಾ = ಧರಿಸಿದವಳಾಗಿ; ತವ = ನಿನ್ನ; ಸಂದೃಶಿ = ಶುಭವಾದ ನೋಟದಲ್ಲಿ ಇರುವವಳಾಗಿ; ವೀರಮ್ ವಿದೇಯ = ವೀರನಾದ ಪುತ್ರನನ್ನು ಪಡೆಯುವೆನು. + ಅಹಮ್ = ನಾನು; ರಾಯಃ ಪೋಷೇಣ = ಧನದ ಸಮೃದ್ಧಿಯಿಂದ; ಮಾ ವಿ ಯೋಷಮ್ = [ಸೋಮಕ್ರಯಣಿಯ ಅನುಗ್ರಹದಿಂದ] ವಿಯುಕ್ತನಾಗದಂತಾಗಲಿ.

---

ಎಲೈ! ಪತಿಯೇ! ಸ್ತ್ರೀಪುರುಷ ಮಿಥುನಗಳ ಶರೀರನಿರ್ಮಾತನಾದ ತ್ವಷ್ಟೃದೇವನ ಅನುಗ್ರಹವನ್ನು ಹೊಂದಿದ ನಾನು ನಿನ್ನೊಡನೆ ಸೇರುವೆನು. ಅಮೋಘವಾದ ರೇತಸ್ಸುಳ್ಳ ನಾನು ಅಮೋಘವಾದ ನಿನ್ನ ರೇತಸ್ಸನ್ನು ಧರಿಸಿದವಳಾಗಿ, ನಿನ್ನ ಶುಭದೃಷ್ಟಿಯಲ್ಲಿ ಇರುವವಳಾಗಿ, ನಿನಗೆ ತಕ್ಕ ಗುಣಗಳಿಂದ ಕೂಡಿದ ಶೂರನಾದ ಮಗನನ್ನು ಹೊಂದುವೆನು. ಅಥವಾ ಸೋಮಕ್ರಯಣಿಯೇ! ನಿನ್ನ ಅನುಗ್ರಹದಿಂದ ಪತಿಯೊಡನೆ ಸೇರುವೆನು. ನಿನ್ನ ಶುಭದೃಷ್ಟಿಯನ್ನು ಪಡೆದು ಪತಿಗೆ ತಕ್ಕ ಪುತ್ರನನ್ನು ಹೊಂದುವೆನು.

ಎಲೈ ಸೋಮಕ್ರಯಣಿಯೇ! ನಿನ್ನ ಅನುಗ್ರಹದಿಂದ ನಾನು ಯಾವಾಗಲೂ ಧನ ಸಮೃದ್ಧಿಯಿಂದ ವಿಯುಕ್ತನಾಗದಂತೆ ಆಗಲಿ. (ಎರಡು ವಿನಿಯೋಗಗಳಲ್ಲಿಯೂ ಈ ಮಂತ್ರಾರ್ಥವು ಸಮಾನವಾಗಿರುತ್ತದೆ).

## ವಿನಿಯೋಗಸಂಗ್ರಹ

ಷಟ್ಪದಾನುಕ್ರಮೋ ವಸ್ವೀ[1-6] ಬೃಹ[7]ಸ್ತತ್ಪದಸಂಗ್ರಹಃ ।
[8]ಪೃಥಿವ್ಯಾಸ್ತತ್ಪದೇ ಹುತ್ವಾ ಪರಿ[9] ಸಂವೇಷ್ಟ್ಯ ರೇಖಯಾ ॥
[10]ಅಸ್ಮೇ ಸ್ಥಾಲ್ಯಾಂ ಪದಂ ಕ್ಷಿಪ್ತ್ವಾ ತ್ವೇ[11] ದದ್ಯಾತ್ ಸ್ವಾಮಿನೇ ಪದಮ್ ।
[12]ತೋತೇ ಪತ್ನ್ಯೈ ಪದಂ ದದ್ಯಾತ್ [13]ಸಂ ಕ್ರಯಣ್ಯಾಹ್ಯವೇಕ್ಷಯೇತ್ ॥
[14]ತ್ವಷ್ಟೀ ತಾಂ ಮಂತ್ರಯೇತ್ ಪತ್ನೀ ಮಾಹಂ[15] ತದ್ದೀಯತೇ ಯದಾ ।
ಪದಂ ತದಾ ಮಂತ್ರಯೇತ ಮಂತ್ರಾಃ ಪಂಚದಶೇರಿತಾಃ ॥

ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ — ಬೌಧಾಯನ - 15
ಆಪಸ್ತಂಬ - 15

## ಅನುವಾಕದ ವಿಶೇಷ ವಿಷಯಗಳು

### ಅ) ಭ.ಭಾ. ಭಾಷ್ಯ

**ಮಂತ್ರಸಂಖ್ಯೆ**

೧-೬) ವಸ್ವೀ..........ಚಂದ್ರಾಸಿ । ವಸ್ವೀ = ವಸುಮತೀ / ಪ್ರಶಸ್ತಾ ; ರುದ್ರಾ = ರುದ್ರವತೀ; ಅದಿತಿಃ = ಅದಿತಿಮತೀ; ಆದಿತ್ಯಾ = ಆದಿತ್ಯವತೀ; ಶುಕ್ರಾ = ಶುಕ್ರವತೀ/ ದೀಪ್ತಿಮತೀ ವಾ. ಚಂದ್ರಾ = ಚಂದ್ರವತೀ/ ಆಹ್ಲಾದಿನೀ ವಾ.

ಸೋಮಕ್ರಯಣಿಯೇ! ನೀನು ವಸು, ರುದ್ರ, ಅದಿತಿ, ಆದಿತ್ಯ, ಸೋಮ ಮತ್ತು ಹಿರಣ್ಯವುಳ್ಳವಳಾಗಿರುವೆ. ಸೋಮಕ್ರಯಣಿಯು ಯಜ್ಞದ ಸಾಧನವಾದುದರಿಂದ ಯಜ್ಞಧರ್ಮಗಳು ಅದರಲ್ಲಿ ಆರೋಪಿಸಲ್ಪಟ್ಟಿವೆ.

೭) ಬೃಹಸ್ಪತಿಃ.........ರಣ್ವತು । ರಣ್ವತು = ಗಮಯತು, ಪದಂ ಕಾರಯತು = ಬೃಹಸ್ಪತಿಯು ಸುಖಪ್ರದೇಶದಲ್ಲಿ ಹೆಜ್ಜೆ ಇಡಿಸಲಿ.

೮) ಪೃಥಿವ್ಯಾಸ್ತ್ವಾ..........ಸ್ವಾಹಾ । ಸ್ವಾಹಾ = ಸ್ವಾಹುತಂ ಭವ = ಚೆನ್ನಾಗಿ ಹುತವಾಗು ಅಥವಾ ಇತ್ಥಂ ಕರ್ತವ್ಯಮಿತಿ ಸ್ವಯಮೇವ ಖಿಲು ಸರಸ್ವತ್ಯಾಹ = ಅಥವಾ ಹೀಗೆ ಮಾಡಬೇಕೆಂದು ಸರಸ್ವತಿಯು ತಾನೇ ಹೇಳುತ್ತಾಳೆ.

೯) ಪರಿ..........ಕೃಂತಾಮಿ। ಗ್ರೀವಾ = ಧಮನಿಃ [ನಾಡೀ ತು ಧಮನಿಃ ಸಿರಾ। ಅಮರಕೋಶ. ಮನುಷ್ಯವರ್ಗ] ನರಗಳು.

೧೦) ಅಸ್ಮೇ ರಾಯಃ । ಅಸ್ಮೇ = ಅಸ್ಮಾಸು = ನಮ್ಮಲ್ಲಿ.

೧೨) ತೋತೇ ರಾಯಃ । ತ್ವಯಾ ಊತೇ = ರಕ್ಷಿತೇ-ಗೃಹೇ ರಾಯಃ ಸಂತು. ಯಜಮಾನಪತ್ನಿಯೇ! ನಿನ್ನಿಂದ ರಕ್ಷಿಸಲ್ಪಟ್ಟ ಮನೆಯಲ್ಲಿ ಧನಗಳಿರಲಿ.

೧೩) ಸಂ.........ಪಶ್ಯಸ್ವ। ಉರೂಣಿ = ಮಹಾಂತಿ, ಶ್ರೇಯಾಂಸಿ ಅಶ್ನುತೇ = ಪ್ರಾಪ್ನೋತಿ ಇತಿ ಉರ್ವಶೀ = ಹೆಚ್ಚಾದ ಶ್ರೇಯಸ್ಸನ್ನು ಹೊಂದತಕ್ಕವಳು.

೧೪) ತ್ವಷ್ಟೀಮತಿ..........ಸಂದೃಶಿ । ತ್ವಷ್ಟಿಃ = ಪ್ರಜನನವಿಷಯೇ ನೈಶಿತ್ಯಮ್ (ಸಾಮರ್ಥ್ಯವಿಶೇಷಃ) = ಉತ್ಪಾದಕಶಕ್ತಿ. ತದ್ವತೀ = ತ್ವಷ್ಟೀಮತೀ ಅಥವಾ ತ್ವಷ್ಟುರ್ವ್ಯಾಪಾರಾಃ ತ್ವಷ್ಟಯಃ = ವಿವಿಧ ಪ್ರಜೆಗಳನ್ನು ನಿರ್ಮಿಸುವ ಶಕ್ತಿಗಳು. ತದ್ವತೀ = ಅವುಗಳನ್ನು ಹೊಂದಿರುವವಳು.

ಸಂದೃಶಿ = ಸಂದರ್ಶನೇ = ಸಸ್ನೇಹದೃಷ್ಟಿಲಾಭೇ = ಸ್ನೇಹದಿಂದ ಕೂಡಿದ ನೋಟವನ್ನು ಪಡೆದಾಗ.

## ಆ) ಛಂದಸ್ಸು

ಈ ಅನುವಾಕದಲ್ಲಿ ಎಲ್ಲವೂ ಯಜುಸ್ಸುಗಳೇ. ಆದುದರಿಂದ ಇಲ್ಲಿ ಛಂದಸ್ಸು ಇಲ್ಲ ಎಂಬುದು ಸಾಯಣಾಚಾರ್ಯರ ಮತ.

ಭಟ್ಟಭಾಸ್ಕರರು 'ತ್ವಷ್ಟೀಮತೀ.........ವಿ ಯೋಷಮ್।' ಎಂಬುದನ್ನು ಆಸ್ತಾರ-ಬೃಹತೀಛಂದಸ್ಸೆಂದು ತಿಳಿಸಿರುತ್ತಾರೆ. ಈ ಛಂದಸ್ಸಿನಂತೆ ನಾಲ್ಕು ಪಾದಗಳಲ್ಲಿ ಕ್ರಮವಾಗಿ 8-8-10-10 ಈ ರೀತಿ ಅಕ್ಷರಗಳಿರುತ್ತವೆ. ಇದು ನಾಲ್ಕು ಪಾದಗಳಿಂದ ಕೂಡಿದ ಒಂದೇ ಛಂದಸ್ಸಿನ ಮಂತ್ರವಾದರೂ ನಾಲ್ಕನೆಯ ಪಾದಕ್ಕೆ [ಮಾಹಂ .......ವಿ ಯೋಷಮ್।] ಬೇರೆ ವಿನಿಯೋಗವಿದೆಯೆಂದು ತಿಳಿಸಿರುತ್ತಾರೆ.

## ಇ) ಮೀಮಾಂಸಾ

೧) ಸೋಮಕ್ರಯಣಿಯನ್ನು ತರಲು ಯಾವುದು ಪ್ರಯೋಜಕ? [ಜೈ.ಸೂ. 4.1.]

ಜ್ಯೋತಿಷ್ಟೋಮದಲ್ಲಿ ಸೋಮಕ್ರಯವನ್ನು 'ಏಕಹಾಯನ್ಯಾ ಕ್ರೀಣಾತಿ' ಎಂಬ

ವಾಕ್ಯದಿಂದ ಹೇಳಿರುತ್ತಾರೆ. ಸೋಮಕ್ರಯಣಿಯಾದ ಗೋವು ಕ್ರಯಪ್ರದೇಶಕ್ಕೆ ಹೋಗುವಾಗ ಅಧ್ವರ್ಯುವು ಹಿಂಬಾಲಿಸಿ ಆರು ಹೆಜ್ಜೆಗಳನ್ನಿಡಬೇಕು. ಏಳನೆಯ ಹೆಜ್ಜೆಯಲ್ಲಿ ಹಿರಣ್ಯವನ್ನಿಟ್ಟು ಹೋಮ ಮಾಡಿ ಧೂಳನ್ನು ಸಂಗ್ರಹಿಸಬೇಕು. ಆ ಧೂಳಿನ ವಿನಿಯೋಗಪ್ರಕಾರವನ್ನು ಈ ಅನುವಾಕದಲ್ಲಿ ಹೇಳಲಾಗಿದೆ. ಹಾಗೆಯೇ ಆ ಧೂಳಿನಿಂದ ಯುಕ್ತವಾದ ಅಂಜನದಿಂದ ಹವಿರ್ಧಾನಶಕಟಗಳ (ಸೋಮಲತೆಯನ್ನು ಇಡುವ ಬಂಡಿ) ಅಕ್ಷ(ಅಚ್ಚು)ಗಳನ್ನು ಲೇಪಿಸಬೇಕು ಎಂದು ಬೇರೆಯ ಕಡೆಯಲ್ಲಿ ವಿನಿಯೋಗವಿದೆ. ಸೋಮಕ್ರಯಣಿಯನ್ನು ತರಲು ಯಾವುದು ಪ್ರಯೋಜಕ? ಅಕ್ಷಾಂಜನವೂ ಪ್ರಯೋಜಕವೇ? ಅಥವಾ ಕ್ರಯವೇ ಪ್ರಯೋಜಕವೇ? ಎಂಬುದು ಇಲ್ಲಿನ ಸಂಶಯ.

ಇಲ್ಲಿಯ ಪೂರ್ವಪಕ್ಷವು ಹೀಗಿದೆ: ಕ್ರಯವು ಸನ್ನಿಹಿತವಾಗಿರುವಂತೆಯೇ ಅಕ್ಷಾಂಜನವೂ ಸನ್ನಿಹಿತವಾಗಿದೆ. ಆದುದರಿಂದ ಅಕ್ಷಾಂಜನವೂ ಸೋಮಕ್ರಯಣಿಯನ್ನು ತರುವುದಕ್ಕೆ ಪ್ರಯೋಜಕವಾಗುತ್ತದೆ.

**'ಏಕಹಾಯನ್ಯಾ ಸೋಮಂ ಕ್ರೀಣಾತಿ'** ಎಂಬ ಶ್ರುತಿವಾಕ್ಯದಿಂದ ಸೋಮಕ್ರಯಣಿಯು ಕ್ರಯದಲ್ಲಿ ಸಾಧನವಾಗಿ ವಿಹಿತವಾಗಿದೆ. ಗೋವನ್ನು ಕರೆದುಕೊಂಡು ಹೋಗುವುದೂ ಸೋಮಕ್ರಯಕ್ಕಾಗಿಯೇ. ಪದಕರ್ಮದಲ್ಲಿ (ರಜಃಸಂಗ್ರಹ) ಗೋವು ಕರಣವಾಗಿ ವಿಹಿತವಾಗಿಲ್ಲ. ಆದುದರಿಂದ ಪದಕರ್ಮವು ಸೋಮಕ್ರಯಣಿಯನ್ನು ತರಲು ಪ್ರಯೋಜಕವಾಗುವುದಿಲ್ಲ. ಕ್ರಯವೇ ಸೋಮಕ್ರಯಣಿಯನ್ನು ತರಲು ಪ್ರಯೋಜಕವಾಗುತ್ತದೆ. ಇದು ಇಲ್ಲಿನ ಸಿದ್ಧಾಂತ.

ಈ ಐದನೆಯ ಅನುವಾಕದಲ್ಲಿ ಪದಸಂಗ್ರಹವನ್ನು ಹೇಳಿಯಾಯಿತು. ಸೋಮಕ್ರಯಣಿಯನ್ನಿತ್ತು ಸೋಮಲತೆಯನ್ನು ಕೊಳ್ಳಬೇಕು. ಇದಕ್ಕೆ **'ಸೋಮಕ್ರಯ'**ವೆಂದು ಹೆಸರು. ಸೋಮಲತೆಯನ್ನು ಅಳತೆ ಮಾಡಿಯೇ ತೆಗೆದುಕೊಳ್ಳಬೇಕಾದುದರಿಂದ ಮುಂದಿನ ಆರನೆಯ ಅನುವಾಕದಲ್ಲಿ ಸೋಮೋನ್ಮಾನವನ್ನು(ಸೋಮಲತೆಯ ಅಳತೆ ಮಾಡುವಿಕೆ) ಹೇಳಿರುತ್ತಾರೆ.

---

## ॥ ಷಷ್ಠೋಽನುವಾಕಃ ॥

ಅಗ್ಂಶುನಾ ತೇ ಅಗ್ಂಶುಃ ಪೃಚ್ಯತಾಂ ಪರುಷಾ

ಪರುರ್ಗಂಧಸ್ತೇ ಕಾಮಮವತು ಮದಾಯ ರಸೋ

---

ಅಗ್ಂಶುನಾ । ತೇ । ಅಗ್ಂಶುಃ । ಪೃಚ್ಯತಾಮ್ । ಪರುಷಾ । ಪರುಃ । ಗಂಧಃ।

ತೇ । ಕಾಮಮ್ । ಅವತು । ಮದಾಯ । ರಸಃ ।

---

| ಮಂತ್ರ | ವಿನಿಯೋಗ |
|---|---|
| ಅಗ್ಂಶುನಾ.... ಗ್ರಹಃ । | ಅಧ್ವರ್ಯುವು ಚಿನ್ನವನ್ನು ಕೈಯಲ್ಲಿಟ್ಟುಕೊಂಡು ಸೋಮಲತೆಯನ್ನು ಸ್ಪರ್ಶಿಸಲು—ಬೌಧಾಯನ. ಸೋಮನನ್ನು ಅಭಿಮಂತ್ರಿಸಲು —ಆಪಸ್ತಂಬ. |

---

[ಎಲೈ ಸೋಮವೇ!] ತೇ = ನಿನ್ನ; ಅಗ್ಂಶುನಾ = ತುಣುಕಿನಿಂದ; ಅಗ್ಂಶುಃ = ಮತ್ತೊಂದು ಚೂರು; ಪೃಚ್ಯತಾಮ್ = ಸೇರಿಕೊಳ್ಳಲಿ; ಪರುಷಾ = [ನಿನ್ನ] ಒಂದು ಗೆಣ್ಣಿನಿಂದ; ಪರುಃ = [ಮತ್ತೊಂದು] ಗೆಣ್ಣು; [ಪೃಚ್ಯತಾಮ್ = ಸೇರಿಕೊಳ್ಳಲಿ, ಬೇರೆಯಾಗುವುದು ಬೇಡ]; ತೇ =ನಿನ್ನ; ಗಂಧಃ = ಸುವಾಸನೆಯು; ಕಾಮಮ್ = [ಯಜಮಾನನ] ಇಷ್ಟಾರ್ಥವನ್ನು; ಅವತು = ಪಾಲಿಸಲಿ (ಸಫಲಗೊಳಿಸಲಿ.) ರಸಃ = [ನಿನ್ನ] ರಸವು; ಮದಾಯ = [ದೇವತೆಗಳ] ಸಂತೋಷಕ್ಕಾಗಿ / ತೃಪ್ತಿಗಾಗಿ;

---

ಎಲೈ! ಸೋಮರಾಜನೇ! ನಿನ್ನ ಕಣಗಳು ಬೇರೆ ಬೇರೆಯಾಗದೇ ಒಟ್ಟುಗೂಡಿರಲಿ. ನಿನ್ನ ಒಂದು ಗೆಣ್ಣು ಮತ್ತೊಂದು ಗೆಣ್ಣಿನೊಡನೆ ಕೂಡಿರಲಿ, ಬೇರೆಯಾಗದಿರಲಿ. ನಿನ್ನ ಸುವಾಸನೆಯು ಯಜಮಾನನ ಯಾಗವನ್ನು ಪೂರ್ಣಗೊಳಿಸಬೇಕೆಂಬ ಇಚ್ಛೆಯನ್ನು ಪೂರ್ಣಗೊಳಿಸಲಿ.

ಅಚ್ಯುತೋಽಮಾತ್ಯೋಽಸಿ ಶುಕ್ರಸ್ತೇ ಗ್ರಹೋಽಭಿ ತ್ಯಂ

ದೇವಗ್ಂ ಸವಿತಾರಮೂಣ್ಯೋಃ ಕವಿಕ್ರತುಮರ್ಚಾಮಿ

ಅಚ್ಯುತಃ । ಅಮಾತ್ಯಃ । ಅಸಿ। ಶುಕ್ರಃ । ತೇ । ಗ್ರಹಃ । ಅಭೀತಿ । ತ್ಯಮ್ । ದೇವಮ್।
ಸವಿತಾರಮ್ । ಊಣ್ಯೋಃ । ಕವಿಕ್ರತುಮಿತಿ ಕವಿ-ಕ್ರತುಮ್ । ಅರ್ಚಾಮಿ ।

| ಮಂತ್ರ | ವಿನಿಯೋಗ |
|---|---|
| ಅಭಿ ತ್ಯಂ...... ಸುವಃ । | ಸೋಮಲತೆಯನ್ನು ಐದು ಬಾರಿ ಅಳೆಯಲು. [ಹೆಬ್ಬೆರಳಿನಿಂದ ಮತ್ತೊಂದು ಬೆರಳಿನೊಡಗೂಡಿ ಐದು ಸಲ ಮಂತ್ರಪೂರ್ವಕವಾಗಿ, ಐದು ಬಾರಿ ಮಂತ್ರರಹಿತ ವಾಗಿ ಸೋಮಲತೆಯನ್ನು ಅಳೆದು ಹಾಕಬೇಕು.] |

**ಅಚ್ಯುತಃ** = ವಿನಾಶರಹಿತವಾಗಿರಲಿ; [ನೀನು] **ಅಮಾತ್ಯಃ ಅಸಿ** = ಯಜಮಾನನೊಡನೆ ಮತ್ತು ದೇವತೆಗಳೊಡನೆ ಇರುವವನಾಗಿರುವೆ. **ತೇ** = ನಿನ್ನ; **ಗ್ರಹಃ** = ಸ್ವೀಕಾರವು; **ಶುಕ್ರಃ** = ಹಿರಣ್ಯಸಾಧ್ಯವಾಗಿದೆ. + **ಊಣ್ಯೋಃ** = ದ್ಯಾವಾಪೃಥಿವೀರೂಪವಾದ ಕೈಗಳಿಗೆ; **ಸವಿತಾರಮ್** = ಪ್ರೇರಕನಾದ; **ಕವಿಕ್ರತುಮ್** = ವೇದಾರ್ಥವನ್ನು ತಿಳಿದಿರುವವರ ಯಾಗಗಳನ್ನು ಪ್ರಚೋದಿಸುವವನಾದ; **ಸತ್ಯಸವಸಮ್** = ಸತ್ಯವಾದ ಪ್ರೇರಣೆ ಯುಳ್ಳವನಾದ; **ರತ್ನಧಾಮ್** = ರತ್ನಗಳನ್ನು ಧರಿಸಿರುವ; **ಅಭಿಪ್ರಿಯಮ್** = ಎಲ್ಲರಿಗೂ ಎದುರಾಗಿದ್ದುಕೊಂಡು (ಪ್ರತ್ಯಕ್ಷನಾಗಿ) ಪ್ರಿಯನಾಗಿರುವ; **ಮತಿಮ್** = ಎಲ್ಲರಿಂದಲೂ ತಿಳಿಯಲ್ಪಡಬೇಕಾಗಿರುವ; **ತ್ಯಮ್ ದೇವಮ್** = ಆ ಸವಿತೃದೇವನನ್ನು/ ಸೂರ್ಯದೇವನನ್ನು; **ಅಭಿ ಅರ್ಚಾಮಿ** = ಎದುರಿನಲ್ಲಿ ಇದ್ದುಕೊಂಡು ಪೂಜಿಸುತ್ತೇನೆ.

ನಿನ್ನ ರಸವು ದೇವತೆಗಳನ್ನು ತೃಪ್ತಿಪಡಿಸಲು, ಸಂತೋಷಪಡಿಸಲು ವಿನಾಶರಹಿತ ವಾಗಿರಲಿ ಅಂದರೆ ಅಮಿತವಾಗಿರಲಿ. ನೀನು ಯಜಮಾನನೊಡನೆ ಇರತಕ್ಕವನು. ದೇವತೆಗಳೊಡನೆ ಇರತಕ್ಕವನು. ನಿನ್ನ ಸ್ವೀಕಾರವು ಹಿರಣ್ಯದಿಂದ ಸಾಧ್ಯವಾಗುತ್ತದೆ. [ಚಿನ್ನವನ್ನು ಕೈಯಲ್ಲಿ ಇಟ್ಟುಕೊಂಡು ಮುಟ್ಟಬೇಕಾದುದರಿಂದ, 'ಹಿರಣ್ಯೇನ ಕ್ರೀಣಾತಿ' ಎಂಬ ಶ್ರುತಿ ಇರುವುದರಿಂದ ಹೀಗೆ ಹೇಳಲಾಗಿದೆ.]

**ಸತ್ಯಸವಸಗ್ಂ ರತ್ನಧಾಮಭಿ ಪ್ರಿಯಂ ಮತಿಮೂರ್ಧ್ವಾ ಯಸ್ಯಾಮತಿರ್ಭಾ ಅದಿದ್ಯುತತ್ಸವೀಮನಿ ಹಿರಣ್ಯ-ಪಾಣಿರಮಿಮೀತ ಸುಕ್ರತುಃ ಕೃಪಾ ಸುವಃ । ಪ್ರಜಾಭ್ಯಸ್ತ್ವಾ**

---

ಸತ್ಯಸವಸಮಿತಿ ಸತ್ಯ-ಸವಸಮ್ । ರತ್ನಧಾಮಿತಿ ರತ್ನ-ಧಾಮ್ । ಅಭೀತಿ । ಪ್ರಿಯಮ್। ಮತಿಮ್ । ಊರ್ಧ್ವಾ । ಯಸ್ಯ । ಅಮತಿಃ । ಭಾಃ । ಅದಿದ್ಯುತತ್ । ಸವೀಮನಿ। ಹಿರಣ್ಯಪಾಣಿರಿತಿ ಹಿರಣ್ಯ-ಪಾಣಿಃ । ಅಮಿಮೀತ । ಸುಕ್ರತುರಿತಿ ಸು-ಕ್ರತುಃ । ಕೃಪಾ। ಸುವಃ । ಪ್ರಜಾಭ್ಯ ಇತಿ ಪ್ರ-ಜಾಭ್ಯಃ । ತ್ವಾ ।

---

| ಮಂತ್ರ | ವಿನಿಯೋಗ |
|---|---|
| ಪ್ರಜಾಭ್ಯಸ್ತ್ವಾ । | ಉಳಿದಿರುವ ಸೋಮಲತೆಯನ್ನು ಒಟ್ಟುಗೂಡಿಸಲು |

**ಯಸ್ಯ** = ಯಾವ ಸವಿತೃದೇವನ; **ಸವೀಮನಿ**= ಅನುಮತಿಯಾಗಲಾಗಿ; **ಊರ್ಧ್ವಾ** = ಮೇಲಿನ ಲೋಕದಲ್ಲಿರುವ; **ಅಮತಿಃ** = ಇಷ್ಟೇ ಎಂದು ತಿಳಿಸಲು ಸಾಧ್ಯವಿಲ್ಲದ; **ಭಾಃ** = ದೀಪ್ತಿಯು; **ಅದಿದ್ಯುತತ್** =[ಲೋಕಗಳನ್ನು] ಪ್ರಕಾಶಗೊಳಿಸುತ್ತದೆಯೋ; [ಅ] **ಸುವಃ** = ಸ್ವರ್ಗಲೋಕದಲ್ಲಿರುವ; **ಸುಕ್ರತುಃ** = ಒಳ್ಳೆಯ ಯಾಗಗಳುಳ್ಳ [ಯಾಗಗಳು ಸರಿಯಾಗಿ ನಡೆಯುವಂತೆ ಮಾಡುವ] [ಸವಿತೃದೇವನು] **ಕೃಪಾ**=ದಯೆಯಿಂದ; [ನನ್ನನ್ನು ಹೊಂದಿ]; **ಹಿರಣ್ಯಪಾಣಿಃ** = ಕೈಯಲ್ಲಿ ಚಿನ್ನವನ್ನು ಇಟ್ಟುಕೊಂಡವನಾಗಿ; **ಅಮಿಮೀತ** =[ಸೋಮಲತೆಯನ್ನು] ಅಳೆಯಲಿ. +[ಎಲೈ ಸೋಮಶೇಷವೇ!] **ತ್ವಾ**= ನಿನ್ನನ್ನು; **ಪ್ರಜಾಭ್ಯಃ** = ಜನರಿಗಾಗಿ/ಸದಸ್ಯರಿಗಾಗಿ; [ಉಪಸಮೂಹಾಮಿ = ಒಟ್ಟುಗೂಡಿಸುತ್ತೇನೆ] +[ಎಲೈ ಸೋಮನೇ]

---

ದ್ಯಾವಾಪೃಥಿವಿಗಳು ಸವಿತೃದೇವನ ಕೈಗಳಂತೆ. ಸರ್ವಪ್ರೇರಕನಾದ ಆ ಸವಿತೃದೇವನ ಪ್ರೇರಣೆಯಂತೆ ಕೆಲಸ ಮಾಡುತ್ತವೆ. ವೇದಾರ್ಥವನ್ನು ತಿಳಿದ ಕವಿಗಳ ಕ್ರತುಗಳು ಸಾಂಗವಾಗಿ ಸಫಲವಾಗುವಂತೆ ಮಾಡುವವನೂ ಅವನೇ. ಆತನ ಪ್ರೇರಣೆಯು ಸತ್ಯವಾದುದು. ಭಕ್ತರಿಗೆ ಕೊಡಲು ರತ್ನಗಳನ್ನು ಆತನು ಧರಿಸಿರುತ್ತಾನೆ. ಪ್ರತ್ಯಕ್ಷದೇವನಾದ ಆ ಸೂರ್ಯ

## ಪ್ರಾಣಾಯ ತ್ವಾ ವ್ಯಾನಾಯ ತ್ವಾ ಪ್ರಜಾಸ್ತ್ವಮನು ಪ್ರಾಣಿಹಿ ಪ್ರಜಾಸ್ತ್ವಾಮನು ಪ್ರಾಣಂತು ॥ ೬-13 ॥

[ಅನು ಸಪ್ತ ಚ।]

ಪ್ರಾಣಾಯೇತಿ ಪ್ರ-ಅನಾಯ । ತ್ವಾ । ವ್ಯಾನಾಯೇತಿ ವಿ-ಅನಾಯ । ತ್ವಾ । ಪ್ರಜಾ ಇತಿ ಪ್ರ-ಜಾಃ । ತ್ವಮ್ । ಅನು । ಪ್ರೇತಿ । ಅನಿಹಿ । ಪ್ರಜಾ ಇತಿ ಪ್ರ-ಜಾಃ । ತ್ವಾಮ್ । ಅನು । ಪ್ರೇತಿ । ಅನಂತು ॥ ೬ ॥

| ಮಂತ್ರ | ವಿನಿಯೋಗ |
| --- | --- |
| ಪ್ರಾಣಾಯ ತ್ವಾ । | ಸೋಮವನ್ನು ಕಟ್ಟಲು |
| ವ್ಯಾನಾಯ ತ್ವಾ । | ಗಂಟನ್ನು ಸಡಿಲಿಸುವ ಸಲುವಾಗಿ |
| ಪ್ರಜಾಃ....... ಪ್ರಾಣಂತು । | ಯಜಮಾನನಿಂದ ಸೋಮನನ್ನು ನೋಡಿಸಲು |

ತ್ವಾ=ನಿನ್ನನ್ನು; ಪ್ರಾಣಾಯ = ಪ್ರಾಣಕ್ಕಾಗಿ; [ಉಪನಹ್ಯಾಮಿ = ಕಟ್ಟುತ್ತೇನೆ] + [ಎಲೈ ಸೋಮನೇ!] ವ್ಯಾನಾಯ=[ಪಂಚಪ್ರಾಣಗಳಲ್ಲಿ ಒಂದಾದ] ವ್ಯಾನಕ್ಕಾಗಿ; ತ್ವಾ = ನಿನ್ನನ್ನು; [ಅನುಶ್ರಂಥಾಮಿ = ಸಡಿಲಿಸುತ್ತೇನೆ] + [ಎಲೈ ಸೋಮನೇ!] ಪ್ರಜಾಃ ಅನು = ಬದುಕಿರುವ ಪ್ರಜೆಗಳನ್ನನುಸರಿಸಿ [ಪ್ರಜೆಗಳಿಗಾಗಿ]; ತ್ವಮ್ = ನೀನು; ಪ್ರಾಣಿಹಿ = ಜೀವಿಸು; ಪ್ರಜಾಃ = ಪ್ರಜೆಗಳು; ತ್ವಾಮ್ ಅನು = ನಿನ್ನನ್ನು ಅನುಸರಿಸಿ; ಪ್ರಾಣಂತು = ಜೀವಿಸಲಿ.

ದೇವನು ಎಲ್ಲರಿಗೂ ಪ್ರಿಯನಾಗಿರುತ್ತಾನೆ. ಅವನನ್ನು ಎಲ್ಲರೂ ತಿಳಿದು ಧ್ಯಾನಿಸಬೇಕು. ಇಂತಹ ಸವಿತೃದೇವನನ್ನು ನಾನು ಪೂಜಿಸುತ್ತೇನೆ. ಆ ಸವಿತೃದೇವನ ಅನುಮತಿಯಿಂದ, ಆತನ ಇಚ್ಛೆಯಂತೆ ಊರ್ಧ್ವಲೋಕದಲ್ಲಿರುವ ಅಮಿತವಾದ ಪ್ರಕಾಶವು ಲೋಕಗಳನ್ನು ಬೆಳಗುತ್ತದೆ. ಆತನ ಅನುಗ್ರಹದಿಂದ ಯಾಗಗಳು ಒಳ್ಳೆಯ ಕ್ರತುಗಳಾಗುತ್ತವೆ. ಸ್ವರ್ಗ ಲೋಕದಲ್ಲಿರುವ ಆ ಸವಿತೃದೇವನು ಕೃಪೆಯಿಂದ ನನ್ನಲ್ಲಿ ಬಂದು ಸೇರಿ ಹಿರಣ್ಯಪಾಣಿ ಯಾಗಿ ಸೋಮಲತೆಯನ್ನು ಆಳೆಯಲಿ.

ಎಲೈ! ಸೋಮಶೇಷವೇ! ಸದಸ್ಯರೆಲ್ಲರಿಗೂ ಸಾಕಾಗಬೇಕೆಂದು ನಿನ್ನನ್ನು ಒಟ್ಟುಗೂಡಿಸುತ್ತೇನೆ.

ಎಲೈ! ಸೋಮರಾಜನೇ! ಎಲ್ಲರ ಪ್ರಾಣಕ್ಕೋಸ್ಕರ ನಿನ್ನನ್ನು ಕಟ್ಟುತ್ತೇನೆ.

ಎಲೈ! ಸೋಮನೇ! ಎಲ್ಲರಲ್ಲಿಯೂ ವ್ಯಾನವು ಸರಿಯಾಗಿರಲೆಂದು ನಿನ್ನ ಕಟ್ಟನ್ನು ಸಡಿಲಗೊಳಿಸುತ್ತೇನೆ. ['ವ್ಯಾನಃ ಸರ್ವಶರೀರಗಃ' ಎಂಬ ಕೋಶವಚನದಂತೆ ಶರೀರದ ಎಲ್ಲೆಡೆಯೂ ಇರುವ ವಾಯುವೇ ವ್ಯಾನ.]

ಎಲೈ ಸೋಮನೇ! ನೀನು ಪ್ರಜೆಗಳಿಗಾಗಿ ಜೀವಿಸು. ನಿನ್ನಿಂದ ಪ್ರಜೆಗಳು ಸೋಮಯಾಗವನ್ನು ಮಾಡಿದಾಗ ನೀನು ಪಡೆಯುವ ಉನ್ನತಸ್ಥಿತಿಗಾಗಿ ಜೀವಿಸು. ಪ್ರಜೆಗಳು ನಿನ್ನನ್ನು ಅನುಸರಿಸಿ ಬದುಕಲಿ. ಸೋಮಯಾಗವನ್ನು ಮಾಡಿ ದೇವತೆಗಳ ಅನುಗ್ರಹವನ್ನು ಪಡೆದು ಚೆನ್ನಾಗಿ ಬಾಳಲಿ.

### ವಿನಿಯೋಗ ಸಂಗ್ರಹ

ಅಂಶು[1] ಸೋಮಂ ಮಂತ್ರಯೇತಾಭಿ ತ್ಯಂ[2] ಕ್ರೀತುಂ ಮಿಮೀತ ತಮ್ ।
ಪ್ರಜಾ[3] ಸಮುಹ್ಯ ತಚ್ಛೇಷಂ [4]ಪ್ರಾಣಾಯೇತ್ಯೇಷ ಬಧ್ಯತೇ ।
ವ್ಯಾ[5] ವಿಸ್ರಸ್ಯ [6]ಪ್ರಜೇಕ್ಷೇತ ಷಣ್ಮಂತ್ರಾ ಇಹ ವರ್ಣಿತಾಃ ॥

ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ - 6

### ಅನುವಾಕದ ವಿಶೇಷ ವಿಷಯಗಳು

#### ಅ) ಭ.ಭಾ. ಭಾಷ್ಯ

**ಮಂತ್ರಸಂಖ್ಯೆ**

೧) ಅಗ್ಂಶುನಾ.........ಗ್ರಹಃ । ಅಮಾತ್ಯಃ ಅಸಿ = ಯಜ್ಞಕ್ಕೆ ಅಥವಾ ಇಂದ್ರನಿಗೆ ಅಥವಾ ಯಜಮಾನನಿಗೆ ಸಹಾಯನಾಗಿದ್ದೀಯೆ.

೨) ಅಭಿ ತ್ಯಂ......... ಸುವಃ । ಊಣ್ಯೋಃ = ಸರ್ವಸ್ಯ ಅವಿತ್ರ್ಯೋಃ = ಎಲ್ಲಕ್ಕೂ ರಕ್ಷಕರಾಗಿರುವ (ದ್ಯಾವಾಪೃಥಿವ್ಯೋಃ); ಕವಿಕ್ರತುಮ್ = ಮೇಧಾವಿಗಳ ಕರ್ಮಗಳಂತೆ

ಕರ್ಮಗಳುಳ್ಳವನು; ಅಥವಾ ಪ್ರಾರ್ಥಿಸಬೇಕಾದ ಕರ್ಮಗಳುಳ್ಳವನು; ಪ್ರಿಯಮ್ ಅಭಿ = ಎಲ್ಲರಿಗೂ ಪ್ರಿಯವನ್ನುಂಟುಮಾಡಬೇಕೆಂದು; ರತ್ನಧಾಮ್ = ರತ್ನಗಳನ್ನು ಧರಿಸಿರುವ; ಮತಿಮ್ = ಎಲ್ಲವನ್ನೂ ತಿಳಿದಿರುವ; ಅಮತಿಃ = ವ್ಯಾಪನಶೀಲವಾದ;

ಯಸ್ಯ ದೇವಸ್ಯ ಸವೀಮನಿ = ಪ್ರಸವೇ = ಅಭ್ಯನುಜ್ಞಾಯಾಮ್ । ಯೇನ ಅಭ್ಯನುಜ್ಞಾತಃ ಸನ್ ಅಸ್ಮದಾದಿಃ ಸೋಮಸ್ಯ ಮಾತಾ ಹಿರಣ್ಯಪಾಣಿಃ ಅಮಿಮೀತ = ಮಿಮೀತೇ ಸೋಮಮ್ = ಯಾವ ಸವಿತೃದೇವನ ಅಭ್ಯನುಜ್ಞೆಯಾಗಲಾಗಿ ಅನುಜ್ಞೆ ಹೊಂದಿದ ನಮ್ಮಂತಹವರು ಹಿರಣ್ಯಪಾಣಿಯಾಗಿ ಸೋಮನನ್ನು ಅಳೆಯುತ್ತಾರೆಯೋ ಅಂತಹ ದೇವನನ್ನು ಅರ್ಚಿಸುತ್ತೇನೆ.

ಸುಕ್ರತುಃ = ೧) ಶೋಭನಕರ್ಮಾ ಮಾತಾ । ಕೃಪಾ = ಕಲ್ಪನಯಾ ಅಂಗುಲ್ಯಾದಿವಿಷಯಯಾ । ಸುವಃ = ಸುಷ್ಠು ವೃತಃ ಆಗತೋಽಹಮ್ ಅಮಿಮಿ = ಒಳ್ಳೆಯ ಕಾರ್ಯವಾದ ಸೋಮಮಾನವನ್ನು ಮಾಡುವ ಅಂಗುಲಿವಿಷಯವಾದ ಕಲ್ಪನೆಯುಳ್ಳ ನಾನು ಸೋಮವನ್ನು ಅಳೆಯುತ್ತೇನೆ. ಅಥವಾ ೨) ಕೃಪಾ = ಸಾಮರ್ಥ್ಯೇನ; ಸುವಃ = ಸುಷ್ಠು ಪ್ರಾಪ್ತಃ ಅಹಮ್ ಅಮಿಮಿ = ಸಾಮರ್ಥ್ಯಯುಕ್ತನಾದ ನಾನು ಹಿರಣ್ಯಪಾಣಿಯಾಗಿ ಸೋಮವನ್ನು ಅಳೆಯುತ್ತೇನೆ. ಅಥವಾ ೩) ಸುಕ್ರತುಃ = ಶೋಭನಕರ್ಮಾ; ಸುವಃ = ಆದಿತ್ಯಃ ಕೃಪಾ = ಕೃಪಯಾ; ಮಾಮಧ್ವರ್ಯುಮಾವಿಶ್ಯ ಸ್ವಯಮೇವ ಸೋಮಂ ಮಿಮೀತೆ = ಒಳ್ಳೆಯ ಕರ್ಮಗಳುಳ್ಳ ಆದಿತ್ಯನು ದಯೆಯಿಂದ ಅಧ್ವರ್ಯುವಾದ ನನ್ನನ್ನು ಸೇರಿ ಸೋಮವನ್ನು ಅಳೆಯಲಿ.

ಆ) ಛಂದಸ್ಸು

| | |
|---|---|
| ಅಭಿ ತ್ಯಮ್......ಸುವಃ । | ಅತಿಚ್ಛಂದಸ್ಸು<br>[ಇದು ಅತ್ಯಷ್ಟಿ. ಹದಿನಾರು ಅಕ್ಷರಗಳ ನಾಲ್ಕು ಪದಗಳು.] |
| 1ನೆಯ ಪಾದ | ಅಭಿ ತ್ಯಂ.......... ಕವಿಕ್ರತುಮ್ । |
| 2ನೆಯ ಪಾದ | ಅರ್ಚಾಮಿ.........ಮತಿಮ್ । |
| 3ನೆಯ ಪಾದ | ಊರ್ಧ್ವಾ........... ಸವೀಮನಿ । |
| 4ನೆಯ ಪಾದ | ಹಿರಣ್ಯಪಾಣಿಃ.........ಸುವಃ । |

## ೩) ಮೀಮಾಂಸಾ

ಸಾಯಣಾಚಾರ್ಯರು ಈ ಅನುವಾಕದಲ್ಲಿ ಮೀಮಾಂಸೆಯನ್ನು ಪ್ರಸ್ತಾಪ ಮಾಡಿಲ್ಲ. ಸಂಶಯಕ್ಕೆ ಎಡೆಮಾಡಿಕೊಡುವ ಅರ್ಥವುಳ್ಳ ಯಾವ ಉದಾಹರಣೆಯೂ ಈ ಅನುವಾಕದಲ್ಲಿ ಇಲ್ಲವಾದುದರಿಂದ ಯಾವ ವಿಶೇಷಮೀಮಾಂಸೆಯೂ ಇಲ್ಲಿ ಪ್ರಸಕ್ತ ವಾಗುವುದಿಲ್ಲ. ಆದರೆ ಮೊದಲನೆಯ ಪ್ರಪಾಠಕದ ಮೊದಲನೆಯ ಅನುವಾಕದಲ್ಲಿ ತಿಳಿಸಿರುವ ಸಾಧಾರಣವಿಚಾರಗಳನ್ನು ಸಂದರ್ಭಕ್ಕೆ ತಕ್ಕಂತೆ ಅನ್ವಯಿಸಿಕೊಳ್ಳಬೇಕೆಂದು ಸಾಯಣಾಚಾರ್ಯರು ತಿಳಿಸಿರುತ್ತಾರೆ. ವಿಶೇಷಮೀಮಾಂಸೆಯಿಲ್ಲದೆಡೆಯಲ್ಲಿ ಹೀಗೆಯೇ ತಿಳಿಯಬೇಕು. ಈ ಅನುವಾಕದಲ್ಲಿ ಅತಿಚ್ಛಂದಸ್ಸಿನ ಮಂತ್ರವಿದೆಯೆಂದು ಶ್ರುತಿಯೇ

‘ಅತಿಚ್ಛಂದಸ್ಸರ್ವಾ ಮಿಮೀತೇ’

ಎಂಬುದಾಗಿ ಸ್ಪಷ್ಟವಾಗಿ ತಿಳಿಸುತ್ತಿದೆಯೆಂದೂ ಸಾಯಣರು ಹೇಳಿರುತ್ತಾರೆ.



## ॥ ಸಪ್ತಮೋಽನುವಾಕಃ ॥

**ಸೋಮಂ ತೇ ಕ್ರೀಣಾಮ್ಯೂರ್ಜಸ್ವಂತಂ ಪಯಸ್ವಂತಂ**
**ವೀರ್ಯಾವಂತಮಭಿಮಾತಿಷಾಹಗ್ಂ ಶುಕ್ರಂ ತೇ**

---

**ಸೋಮಮ್** । ತೇ । ಕ್ರೀಣಾಮಿ । ಊರ್ಜಸ್ವಂತಮ್ । ಪಯಸ್ವಂತಮ್ । ವೀರ್ಯಾವಂತ ಮಿತಿ ವೀರ್ಯ-ವಂತಮ್ । ಅಭಿಮಾತಿಷಾಹಮಿತ್ಯಭಿಮಾತಿ-ಸಾಹಮ್। *ಶುಕ್ರಮ್। ತೇ।

---

ಆರನೆಯ ಅನುವಾಕದಲ್ಲಿ ಸೋಮಮಾನವನ್ನು ಹೇಳಲಾಯಿತು. ಈ ಅನುವಾಕದಲ್ಲಿ ಸೋಮಕ್ರಯವನ್ನು ಹೇಳಲಾಗಿದೆ.

| ಮಂತ್ರ | ವಿನಿಯೋಗ |
|---|---|
| ಸೋಮಂ ತೇ......ಗೋಃ । | ಹಿರಣ್ಯದಿಂದ ಸೋಮಕ್ರಯ ಮಾಡುವುದರಲ್ಲಿ ನಡೆಸುವ ಸಂವಾದದಲ್ಲಿ —ಬೌಧಾಯನ. |
| ೧) ಸೋಮಂ..ಅಭಿಮಾತಿಷಾಹಮ್। | ಸೋಮವಿಕ್ರಯಿಯೊಡನೆ ಸಂವಾದ ಮಾಡಲು. |
| ೨) ಶುಕ್ರಂ ತೇ.........ಗೋಃ । ಆಪಸ್ತಂಬ→ | ಆಗ 'ಗವಾ ತೇ ಕ್ರೀಣಾನಿ' ಮುಂತಾದವುಗಳನ್ನು ಹೇಳಿದ ನಂತರ 'ಶುಕ್ರಂ ತೇ ಶುಕ್ರೇಣ ಕ್ರೀಣಾಮಿ' ಎಂದು ಜಪಿಸಿ, ಬಳಿಕ ಹಿರಣ್ಯದಿಂದ ಕೊಳ್ಳಲು. |

---

[ಹೇ ಸೋಮವಿಕ್ರಯಿನ್! = ಸೋಮವನ್ನು ಮಾರುವವನೇ!] [ಅಹಮ್ = ನಾನು] **ಊರ್ಜಸ್ವಂತಮ್**= ಶರೀರಕ್ಕೆ ಬಲವನ್ನು ಕೊಡುವ; **ಪಯಸ್ವಂತಮ್** = ಹೆಚ್ಚಾದ ರಸದಿಂದ ತುಂಬಿರುವ; **ವೀರ್ಯಾವಂತಮ್** = ಇಂದ್ರಿಯಪಾಟವಕ್ಕೆ ಕಾರಣಭೂತವಾದ; **ಅಭಿಮಾತಿಷಾಹಮ್** = ಪಾಪರೂಪವಾದ ಶತ್ರುವನ್ನು ನಾಶಪಡಿಸುವ; **ತೇ** = ನಿನ್ನ;

---

ಎಲೈ ಸೋಮವನ್ನು ಮಾರುವವನೇ! ನಾನು ನಿನ್ನ ಸೋಮವನ್ನು ಕೊಂಡು ಕೊಳ್ಳುತ್ತೇನೆ. ಸೋಮಲತೆಯು ಶರೀರಕ್ಕೆ ಬಲವನ್ನು ಕೊಡುವಂತಹುದು. ಹೆಚ್ಚಾದ

## ಶುಕ್ರೇಣ ಕ್ರೀಣಾಮಿ ಚಂದ್ರಂ ಚಂದ್ರೇಣಾಮೃತಮಮೃ- ತೇನ ಸಮ್ಯತ್ತೇ ಗೋರಸ್ಮೇ ಚಂದ್ರಾಣಿ

---

ಶುಕ್ರೇಣ । ಕ್ರೀಣಾಮಿ । ಚಂದ್ರಮ್ । ಚಂದ್ರೇಣ । ಅಮೃತಮ್ । ಅಮೃತೇನ।
ಸಮ್ಯತ್ । ತೇ । ಗೋಃ । ಅಸ್ಮೇ ಇತಿ । ಚಂದ್ರಾಣಿ ।

---

| ಮಂತ್ರ | ವಿನಿಯೋಗ |
| --- | --- |
| ಅಸ್ಮೇ ಚಂದ್ರಾಣಿ । | ಸೋಮವಿಕ್ರಯಿಯಿಂದ ಹಿರಣ್ಯವನ್ನು ತೆಗೆದುಕೊಂಡು ಯಜಮಾನನಿಗೆ ಕೊಡಲು. |

---

**ಸೋಮಮ್** = ಸೋಮಲತೆಯನ್ನು; **ಕ್ರೀಣಾಮಿ** = ಕೊಂಡುಕೊಳ್ಳುತ್ತೇನೆ; **ತೇ** = ನಿನ್ನ **ಶುಕ್ರಮ್** = ತೇಜಸ್ಸುಳ್ಳ ಸೋಮನನ್ನು ; **ಶುಕ್ರೇಣ** = ತೇಜಸ್ಸಿನಿಂದ (ಕೂಡಿದ ಹಿರಣ್ಯದಿಂದ) **ಕ್ರೀಣಾಮಿ** = ಕೊಳ್ಳುತ್ತೇನೆ; **ಚಂದ್ರಮ್** = ಸುಖಪ್ರದವಾದ (ಆಹ್ಲಾದಕರವಾದ) ಸೋಮನನ್ನು ; **ಚಂದ್ರೇಣ** =ಸುಖಪ್ರದವಾದ (ಆಹ್ಲಾದಕರವಾದ) (ಹಿರಣ್ಯದಿಂದ ಕೊಳ್ಳುತ್ತೇನೆ); **ಅಮೃತಮ್** = ನಾಶರಹಿತವಾದ (ಸೋಮನನ್ನು) **ಅಮೃತೇನ** =ನಾಶವಿಲ್ಲದ (ಹಿರಣ್ಯದಿಂದ ಕೊಳ್ಳುತ್ತೇನೆ); [ಇಷ್ಟೇ ಅಲ್ಲ]; **ತೇ** = ನನಗೆ; **ಸಮ್ಯತ್** =ಸಮೀಚೀನ (ಉತ್ತಮ)ವಾದ; **ಗೋಃ** = [ಏಕಹಾಯನೀರೂಪವಾದ] ಗೋವಿನ [ಸ್ವರೂಪವಮ್ ದತ್ತಮ್ = ಸ್ವರೂಪವು ಕೊಡಲ್ಪಟ್ಟಿದೆ. ಆದುದರಿಂದ ಹಿರಣ್ಯಲಾಭವು ನಿನಗೆ ಅಧಿಕ.] ❖ **ಅಸ್ಮೇ** = ನಮ್ಮಲ್ಲಿಯೇ; **ಚಂದ್ರಾಣಿ** = ಹಿರಣ್ಯಗಳು; [ತಿಷ್ಠಂತು = ಇರಲಿ]

---

ರಸದಿಂದ ಪೂರ್ಣವಾದುದು. ಇಂದ್ರಿಯಪಾಟವಕ್ಕೆ ಕಾರಣಭೂತವಾದುದು. ಪಾಪರೂಪವಾದ ಶತ್ರುವನ್ನು ನಾಶಪಡಿಸಬಲ್ಲುದು. ಇಂತಹ ತೇಜೋಯುಕ್ತವಾದ ನಿನ್ನ ಸೋಮನನ್ನು ತೇಜಸ್ಸುಳ್ಳ ಹಿರಣ್ಯದಿಂದ ಕೊಳ್ಳುತ್ತೇನೆ. ಆಹ್ಲಾದ (ಸುಖ)ಕರನಾದ ಸೋಮನನ್ನು ಅಂತಹ ಹಿರಣ್ಯದಿಂದ ಕೊಳ್ಳುತ್ತೇನೆ. ಯಜಮಾನನಿಗೆ ಅಮೃತತ್ವವನ್ನು ಕೊಡುವ (ನಾಶರಹಿತವಾದ) ಸೋಮನನ್ನು ನಾಶರಹಿತವಾದ ಹಿರಣ್ಯದಿಂದ ಕೊಳ್ಳುತ್ತೇನೆ. ಇಷ್ಟೇ ಅಲ್ಲದೆ ನಿನಗೆ ಗೋವನ್ನು ಕ್ರಯಾರ್ಥವಾಗಿ ಕೊಟ್ಟಾಗಿದೆ. ಅದು ಸಮೀಚೀನ

ತಪಸಸ್ತನೂರಸಿ ಪ್ರಜಾಪತೇರ್ವರ್ಣಸ್ತಸ್ಯಾಸ್ತೇ

ಸಹಸ್ರಪೋಷಂ ಪುಷ್ಯಂತ್ಯಾಶ್ಚರಮೇಣ ಪಶುನಾ ಕ್ರೀಣಾ

---

ತಪಸಃ । ತನೂಃ । ಅಸಿ । ಪ್ರಜಾಪತೇರಿತಿ ಪ್ರಜಾ-ಪತೇಃ । ವರ್ಣಃ । ತಸ್ಯಾಃ । ತೇ । ಸಹಸ್ರಪೋಷಮಿತಿ ಸಹಸ್ರ-ಪೋಷಮ್ । ಪುಷ್ಯಂತ್ಯಾಃ । ಚರಮೇಣ । ಪಶುನಾ। ಕ್ರೀಣಾಮಿ ।

---

| ಮಂತ್ರ | ವಿನಿಯೋಗ (ಬೌಧಾಯನ) |
|---|---|
| ೧) ತಪಸಃ......ಕ್ರೀಣಾಮಿ । | ಆಡನ್ನು ಸೋಮಕ್ರಯಕ್ಕಾಗಿ ಕೊಡಲು |

---

+ ಎಲೈ ಆಡೇ! [ಅಜಾಜಾತಿಯೇ!] ನೀನು; **ತಪಸಃ** = ಪುಣ್ಯದ; **ತನೂಃ** = ಶರೀರವೇ; **ಅಸಿ** = ಆಗಿರುವೆ; **ಪ್ರಜಾಪತೇಃ** = ಪ್ರಜಾಪತಿಯ; **ವರ್ಣಃ** = ದೇಹವೂ (ಅಸಿ = ಆಗಿರುವೆ) **ಸಹಸ್ರಪೋಷಂ ಪುಷ್ಯಂತ್ಯಾಃ** = [ಮರಿಗಳ ಪರಂಪರೆಯಿಂದ] ಸಾವಿರಾರು ಸಂಖ್ಯೆಯಲ್ಲಿ [ಆಡುಗಳನ್ನು] ವೃದ್ಧಿಪಡಿಸುವ; **ತಸ್ಯಾಃ ತೇ** = ಅಂತಹ ನಿನ್ನ; **ಚರಮೇಣ ಪಶುನಾ** = ಕೊನೆಯ ಮರಿಯಿಂದ [ಆಡಿನಿಂದ] **ಕ್ರೀಣಾಮಿ** = [ಸೋಮಲತೆಯನ್ನು] ಕೊಳ್ಳುತ್ತೇನೆ.

---

ವಾಗಿದೆ. ಆದುದರಿಂದ ಹಿರಣ್ಯವನ್ನು ಪಡೆಯುವುದು ನಿನಗೆ ಅಧಿಕಲಾಭವೇ ಆಗಿದೆ.

ಹಿರಣ್ಯವು ನಮ್ಮಲ್ಲಿಯೇ ಇರಲಿ. ಸೋಮವಿಕ್ರಯಿಯಲ್ಲಿ ಅಲ್ಲ. ['ಅಸ್ಮೇ' ಎಂಬುದು 'ಅಸ್ಮದ್' ಶಬ್ದದ ಎಲ್ಲ ವಿಭಕ್ತಿಗಳ ಬಹುವಚನದ ಅರ್ಥವನ್ನೂ ಕೊಡುತ್ತದೆ.]

ಎಲೈ ಅಜಜಾತಿಯೇ! ನೀನು ಪುಣ್ಯದ ಶರೀರವಾಗಿರುವೆ. ಸರ್ವದೇವಾತ್ಮಕನಾದ ಪ್ರಜಾಪತಿದೇವನ ದೇಹವಾಗಿರುವೆ. ಅಪತ್ಯ(ಮರಿ)ಪರಂಪರೆಯಿಂದ ಸಾವಿರಾರು ಆಡುಗಳನ್ನು ಉತ್ಪಾದಿಸಿ ಪೋಷಿಸುವೆ. ನಿನ್ನ ಕೊನೆಯ (ಸಾವಿರ ಸಂಖ್ಯೆಯಲ್ಲಿ ಕೊನೆಯದಾದ) ಆಡಿನಿಂದ ಸೋಮವನ್ನು ಕೊಳ್ಳುತ್ತೇನೆ.

ಮ್ಯಸ್ಮೇ ತೇ ಬಂಧುರ್ಮಯಿ ತೇ ರಾಯಃ ಶ್ರಯಂತಾ
ಮಸ್ಮೇ ಜ್ಯೋತಿಃ ಸೋಮವಿಕ್ರಯಿಣಿ ತಮೋ ಮಿತ್ರೋ

---

*ಅಸ್ಮೇ ಇತಿ । ತೇ । ಬಂಧುಃ* । *ಮಯಿ । ತೇ । ರಾಯಃ । ಶ್ರಯಂತಾಮ್*।
ಅಸ್ಮೇ ಇತಿ। ಜ್ಯೋತಿಃ । ಸೋಮವಿಕ್ರಯಿಣೀತಿ ಸೋಮ-ವಿಕ್ರಯಿಣಿ । ತಮಃ । ಮಿತ್ರಃ।

---

| ಮಂತ್ರ | ವಿನಿಯೋಗ |
|---|---|
| ೨) ಅಸ್ಮೇ ತೇ ಬಂಧುಃ । | ಅಧ್ವರ್ಯುವು ಯಜಮಾನನನ್ನು ನೋಡಲು |
| ೩) ಮಯಿ......ಶ್ರಯಂತಾಮ್ । | ಅಧ್ವರ್ಯುವು ತನ್ನನ್ನು ನೋಡಿಕೊಳ್ಳಲು. |
| ತಪಸಃ.......ಶ್ರಯಂತಾಮ್ । | ಸೋಮಕ್ರಯವನ್ನು ಮಾಡಲು —ಆಪಸ್ತಂಬ. |
| ಅಸ್ಮೇ ಜ್ಯೋತಿಃ । | ಯಜಮಾನನ ಮೇಲೆ ಬಿಳಿಯ ಉಣ್ಣೆಯ ನೂಲನ್ನು ಹಾಕಲು. |
| ಸೋಮ..........ತಮಃ । | ಸೋಮವಿಕ್ರಯಿಯ ಮೇಲೆ ಕರಿಯ ಉಣ್ಣೆಯ ದಾರವನ್ನು ಹಾಕಿ, ಅದರಿಂದ ಹೊಡೆಯಲು |

---

+ಅಸ್ಮೇ = ನಾನು; ತೇ = ನಿನ್ನ (ಅಜೆಯ ಅಥವಾ ಯಜಮಾನನ) ಬಂಧುಃ = ಬಂಧುವಾಗಿದ್ದೇನೆ; +ಮಯಿ= ನನ್ನಲ್ಲಿ; ತೇ = ನಿನ್ನ; ರಾಯಃ = [ಅಜಜಾತಿ ಪಶುರೂಪ] ಧನಗಳು; ಶ್ರಯಂತಾಮ್ = ಇರಲಿ. + ಅಸ್ಮೇ = ನಮ್ಮಲ್ಲಿ; ಜ್ಯೋತಿಃ = ಜ್ಯೋತಿಃ ಸ್ವರೂಪವಾದ [ಬಿಳಿಯ ಉಣ್ಣೆಯ ದಾರವು] [ಅವತಿಷ್ಠತಾಮ್ = ಇರಲಿ] +ಸೋಮ ವಿಕ್ರಯಿಣಿ = ಸೋಮವನ್ನು ಮಾರುವವನಲ್ಲಿ; ತಮಃ = ಕತ್ತಲೆಯ ರೂಪವಾದ (ಕರಿಯ ಉಣ್ಣೆಯ ದಾರವು; ವರ್ತತಾಮ್ = ಇರಲಿ) + [ಹೇ ಸೋಮ! = ಎಲೈ ಸೋಮನೇ!]

---

ನಾವು ನಿನ್ನ ಬಂಧುಗಳಾಗಿದ್ದೇವೆ. ❁ ನನ್ನಲ್ಲಿ ಅಜಾರೂಪಧನವು ನೆಲಸಿರಲಿ.

ಈ ಬಿಳಿಯ ಉಣ್ಣೆಯ ದಾರವು ಜ್ಯೋತಿಃಸ್ವರೂಪವಾಗಿದೆ. ಇದು ನಮ್ಮಲ್ಲಿ ಇರಲಿ. ತಮೋರೂಪವಾದ ಕರಿಯ ಉಣ್ಣೆಯ ದಾರವು ಸೋಮವಿಕ್ರಯಿಯಲ್ಲಿರಲಿ.

**ನ ಏಹಿ ಸುಮಿತ್ರಧಾ ಇಂದ್ರಸ್ಯೋರುಮಾವಿಶ**

**ದಕ್ಷಿಣಮುಶನ್ನುಶಂತಗ್ಂ ಸ್ಯೋನಃ ಸ್ಯೋನಗ್ಂ ಸ್ವಾನ**

---

ನಃ । ಏತಿ । ಇಹಿ । ಸುಮಿತ್ರಧಾ ಇತಿ ಸುಮಿತ್ರ-ಧಾಃ । ಇಂದ್ರಸ್ಯ । ಊರುಮ್।

ಏತಿ । ವಿಶ । ದಕ್ಷಿಣಮ್ । ಉಶನ್ । ಉಶಂತಮ್ । ಸ್ಯೋನಃ । ಸ್ಯೋನಮ್।

ಸ್ವಾನ ।

---

| ಮಂತ್ರ | ವಿನಿಯೋಗ |
|---|---|
| ಮಿತ್ರಃ..........ಸುಮಿತ್ರಧಾಃ । | ಸೋಮವಿಕ್ರಯಿಯಿಂದ ಸೋಮವನ್ನು ತೆಗೆದುಕೊಳ್ಳಲು. |
| ಇಂದ್ರಸ್ಯ..........ಸ್ಯೋನಮ್ । | ಯಜಮಾನನ ಬಲತೊಡೆಯಲ್ಲಿ ಸೋಮವನ್ನು ಇಡಲು |

---

ಸುಮಿತ್ರಧಾಃ = ನಿನ್ನನ್ನೇ ಮಿತ್ರನನ್ನಾಗಿ ಪಡೆದಿರುವ ಯಜಮಾನರನ್ನು ಪೋಷಿಸುವ ನೀನು; ನಃ = ನಮಗೆ; ಮಿತ್ರಃ = ಗೆಳೆಯನಾಗಿ; ಏಹಿ = ಬಾ. +[ಹೇ ಸೋಮ! = ಎಲೈ ಸೋಮನೇ!] ಇಂದ್ರಸ್ಯ =ಯಜ್ಞಕ್ಕೆ ಒಡೆಯನಾದ ಯಜಮಾನನ; ಉಶಂತಮ್ = ನಿನ್ನನ್ನೇ ಅಪೇಕ್ಷಿಸುತ್ತಿರುವ; ಸ್ಯೋನಮ್ = ಸುಖಕರವಾದ; ದಕ್ಷಿಣಮ್ ಊರುಮ್ = ಬಲತೊಡೆಯನ್ನು ಉಶನ್ = ತಕ್ಕ ಸ್ಥಾನವನ್ನು ಅಪೇಕ್ಷಿಸುತ್ತಿರುವ; ಸ್ಯೋನಃ = ಸುಖಕರನಾದ ನೀನು; ಆ ವಿಶ = ಏರಿ ಕುಳಿತುಕೋ.

---

ಎಲೈ ಸೋಮರಾಜನೇ! ಸೋಮಯಾಗವನ್ನು ಮಾಡುವ ಯಜಮಾನರಿಗೆ ನೀನು ಒಳ್ಳೆಯ ಮಿತ್ರನು. ನಿನ್ನ ಮಿತ್ರರಾದ ಯಜಮಾನರನ್ನು ಪೋಷಿಸತಕ್ಕವನು. ನೀನು ಸಖನಾಗಿ ನಮ್ಮ ಬಳಿಗೆ ಬಾ.

ಎಲೈ ಸೋಮರಾಜನೇ! ಯಜ್ಞಕ್ಕೆ ಒಡೆಯನಾದ ಯಜಮಾನನ ತೊಡೆಯು ಯಾಗಕಾರ್ಯನಿರ್ವಹಣೆಗಾಗಿ ನಿನ್ನನ್ನು ಅಪೇಕ್ಷಿಸುತ್ತಿದೆ. ನೀನೂ ಸಹ ತಕ್ಕ ಸ್ಥಾನವನ್ನು

ಭ್ರಾಜಾಂಘಾರೇ ಬಂಭಾರೇ ಹಸ್ತ ಸುಹಸ್ತ ಕೃಶಾನ

ವೇತೇ ವಃ ಸೋಮಕ್ರಯಣಾಸ್ತಾನ್ರಕ್ಷಧ್ವಂ ಮಾ ವೋ

ದಭನ್ || ೭-14 ||

[ಊರುಂ ದ್ವಾವಿಗ್‍ಂಶತಿಶ್ಚ | ]

---

ಭ್ರಾಜ | ಅಂಘಾರೇ | ಬಂಭಾರೇ | ಹಸ್ತ | ಸುಹಸ್ತೇತಿ-ಸು-ಹಸ್ತ | ಕೃಶಾನವಿತಿ ಕೃಶ-ಅನೋ |

ಏತೇ | ವಃ | ಸೋಮಕ್ರಯಣಾ ಇತಿ ಸೋಮ-ಕ್ರಯಣಾಃ | ತಾನ್ | ರಕ್ಷಧ್ವಮ್ |

ಮಾ | ವಃ | ದಭನ್ || ೭ ||

---

| ಮಂತ್ರ | ವಿನಿಯೋಗ |
|---|---|
| ಸ್ವಾನ............ದಭನ್ | | ಸೋಮಕ್ರಯಸಾಧನವಾದ ದ್ರವ್ಯಗಳ ರಕ್ಷಣೆಗೆ ಸೋಮರಕ್ಷಕದೇವತೆಗಳನ್ನು ಪ್ರಾರ್ಥಿಸಲು. |

---

+ಸ್ವಾನ, ಭ್ರಾಜ, ಅಂಘಾರೇ, ಬಂಭಾರೇ, ಹಸ್ತ, ಸುಹಸ್ತ, ಕೃಶಾನೋ! = ಎಲೈ! ಸೋಮರಕ್ಷಕರಾದ ಸ್ವಾನಾದಿ ದೇವತೆಗಳೇ! ಏತೇ = ಈ; ಸೋಮಕ್ರಯಣಾಃ = ಸೋಮಕ್ರಯಣಸಾಧನವಾದ ಗವಾದಿಗಳು; ವಃ = ನಿಮಗೆ; [ರಕ್ಷಣಾರ್ಥಂ ಸಮರ್ಪಿತಾಃ = ರಕ್ಷಣೆಗೋಸ್ಕರ ಸಮರ್ಪಿಸಲ್ಪಟ್ಟಿವೆ] ತಾನ್ = ಅವುಗಳನ್ನು; ರಕ್ಷಧ್ವಮ್ = ರಕ್ಷಿಸಿರಿ; [ಯಾವ ವೈರಿಗಳೂ] ವಃ = ನಿಮ್ಮನ್ನು; ಮಾ ದಭನ್ = ಹಿಂಸೆಗೊಳಿಸದಿರಲಿ.

---

ಅಪೇಕ್ಷಿಸುತ್ತಿರುವೆ. ತೊಡೆಯು ಸುಖಕರವಾಗಿದೆ. ನೀನೂ ಸಹ ಸುಖಕರನಾಗಿರುವೆ. ನೀನು ಯಜಮಾನನ ಅಂತಹ ಬಲತೊಡೆಯ ಮೇಲೆ ಕುಳಿತುಕೋ.

ಎಲೈ ಸೋಮರಕ್ಷಕರಾದ ಸ್ವಾನಭ್ರಾಜಾದಿಗಳೇ ! ಸೋಮವನ್ನು ಕೊಳ್ಳಲು ಸಾಧನವಾದ ಈ ಗವಾದಿಗಳನ್ನು ರಕ್ಷಣೆಗಾಗಿ ನಿಮಗೆ ಒಪ್ಪಿಸಿರುತ್ತೇವೆ. ಅವುಗಳನ್ನು ರಕ್ಷಿಸಿರಿ. ಯಾವ ವೈರಿಗಳೂ ನಿಮ್ಮನ್ನು ಹಿಂಸಿಸದಿರಲಿ.

## ವಿನಿಯೋಗ ಸಂಗ್ರಹ

ಸೋಮಂ[1] ಜಪೇತ್ ಕ್ರಯಾತ್ಪೂರ್ವಂ ಶುಕ್ರಂ[2] ಸ್ವರ್ಣೇನ ತತ್ಕ್ರಯೇ ।
ಅಸ್ಮೇ[3] ಸ್ವರ್ಣಮಪಾದತ್ತೇ ತಪ[4] ಜಪ್ಯಂ ಕ್ರಯೇಽಜಯಾ ॥
ಅಸ್ಮೇ ಜ್యೋ[5] ಸ್ವಾಮಿನೇ ದದ್ಯಾಚ್ಛುಕ್ಲಾಮೂರ್ಣಾಸ್ತುಕಾಮಥ ।
ಸೋಮ[6] ವಿಧ್ಯೇತ್ ಕೃಷ್ಣಯೋರ್ಣಾಸ್ತುಕಯಾ ಕ್ರಯಕಾರಿಣಮ್ ॥
ಮಿತ್ರಃ[7] ಸೋಮಮುಪಾದಾಯೇಂದ್ರಸ್ಯೋ[8]ರಾವುಪವೇಶಯೇತ್ ।
ಸ್ವಾನ[9] ಮೂಲ್ಯಾನನುದಿಶೇದಿಮೇ ಮಂತ್ರಾ ನವೋದಿತಾಃ ॥

ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ - ಬೌಧಾಯನ - 10
ಆಪಸ್ತಂಬ - 9

## ಅನುವಾಕದ ವಿಶೇಷ ವಿಷಯಗಳು

### ಅ) ಭ.ಭಾ. ಭಾಷ್ಯ

**ಮಂತ್ರಸಂಖ್ಯೆ**

೧) **ಸೋಮಂ...........ಗೋಃ ।** ಪಯಸ್ವಂತಮ್ = ಕ್ಷೀರವಂತಮ್/ಉದಕವಂತಮ್ = ಹಾಲಿಗೆ ಅಥವಾ ನೀರಿಗೆ ಕಾರಣವಾದ; ವೀರ್ಯಾವಂತಮ್ = ವೀರಕರ್ಮವಂತಮ್; ಅಮೃತಮ್ = ದೇವಾನಾಂ ಯಜಮಾನಸ್ಯ ವಾ ಅಮರಣ-ಹೇತುಮ್ = ದೇವತೆಗಳಿಗೆ ಅಥವಾ ಯಜಮಾನನ ಅಮರಣಕ್ಕೆ ಸಾಧನವಾದ (ಸೋಮ)

ಹೇ ಸೋಮವಿಕ್ರಯಿನ್! ತೇ = ತವ; ಗೋಃ = ವಾಚಃ; ಸಮ್ಯತ್ = ಸಂಯತಂ = ಸಂಗತಂ ಯಥಾ ತಥಾ ಕ್ರೀಣಾಮಿ ಅಥವಾ ಸಮ್ಯತ್ = ಸಮ್ಯಕ್ = ಎಲೈ ಸೋಮವಿಕ್ರಯಿಣಿಯೇ! ನಿನ್ನ ಮಾತಿಗೆ ಚೆನ್ನಾಗಿ ಹೊಂದಿಕೊಳ್ಳುವಂತೆ ಸೋಮವನ್ನು ಕೊಳ್ಳುತ್ತೇನೆ.

ಬೌ-೩) **ತಪಸಃ......... ಕ್ರೀಣಾಮಿ ।** ತಪಸಃ = ಯಜ್ಞಸ್ಯ; ತನೂಃ = ಶರೀರ. ಎಲೈ ಆಜವೇ! ನೀನು ಯಜ್ಞದ ಶರೀರವಾಗಿರುವೆ.

ಬೌ-೫) **ಅಸ್ಮೇ ತೇ ಬಂಧುಃ** = ಬಂಧುಃ = ಅಧ್ವರ್ಯುಃ. ನಾನು ನಿನ್ನ ಅಧ್ವರ್ಯುವಾಗಿದ್ದೇನೆ.

* * * ಆರುಣಕೇತುಕಚಯನದ ಮಂತ್ರಗಳಲ್ಲಿ

'ಸ್ವಾನ ಭ್ರಾಟ್ I........... I ಕೃತಿರಿತ್ಯೇಕಾದಶ ಗಂಧರ್ವಗಣಾಃ I'

ಎಂದು ಹೇಳಿದೆ. ಇಲ್ಲಿ ಹೇಳಿರುವ ಏಳು ಜನರೂ ಆ ಹನ್ನೊಂದು ಗಂಧರ್ವಗಣದಲ್ಲಿ ಸೇರಿದವರೇ. * * *

### ಆ) ಛಂದಸ್ಸು

ಈ ಅನುವಾಕದಲ್ಲಿ ಎಲ್ಲವೂ ಯಜುಸ್ಸುಗಳೇ.

### ಇ) ಮೀಮಾಂಸಾ

[ಜೈ. ಸೂ. 12. 4]

ಸೋಮಕ್ರಯಕ್ಕಾಗಿ ಶ್ರುತಿಯಲ್ಲಿ 'ಅಜಯಾ ಕ್ರೀಣಾತಿ' 'ಹಿರಣ್ಯೇನ ಕ್ರೀಣಾತಿ' [ಆಡನ್ನಿತ್ತು, ಹಿರಣ್ಯವನ್ನಿತ್ತು ಕೊಳ್ಳಬೇಕು.] ಮೊದಲಾದ ವಚನಗಳಿವೆ. ಇವುಗಳಿಗೆ ವಿಕಲ್ಪವೇ? ಸಮುಚ್ಚಯವೇ? ಯಾವುದಾದರೊಂದು ಸಾಧನವೆಂದೋ? ಅಥವಾ ಎಲ್ಲಾ ಸಾಧನಗಳೋ? ಎಂಬ ಸಂದೇಹ.

ಅಗ್ನಿಹೋತ್ರದಲ್ಲಿ 'ದಧ್ನಾ ಜುಹೋತಿ' 'ಪಯಸಾ ಜುಹೋತಿ' ಎಂಬ ವಚನಗಳಿಂದ ವಿಕಲ್ಪವೆಂಬ ನಿರ್ಣಯದಂತೆ ಇಲ್ಲಿಯೂ ಹಾಗೆಯೇ ಎಂಬುದು ಇಲ್ಲಿನ ಪೂರ್ವಪಕ್ಷ.

ಹಲವು ವಸ್ತುಗಳನ್ನು ಕೊಡುವುದರಿಂದ ಸಂತೋಷ ಹೊಂದಿ ಸೋಮವಿಕ್ರಯಿಯು ಸೋಮವನ್ನು ಕೊಡುತ್ತಾನೆ. 'ದಶಭಿಃ ಕ್ರೀಣಾತಿ' ಎಂಬ ಶ್ರುತಿಯೂ ಸಮುಚ್ಚಯವನ್ನೇ ಬೋಧಿಸುತ್ತದೆ. ಇದು ಇಲ್ಲಿನ ಸಿದ್ಧಾಂತ.

ಈ ಅನುವಾಕದಲ್ಲಿ ಸೋಮಕ್ರಯವನ್ನು ಹೇಳಲಾಯಿತು. ಮುಂದಿನ ಎಂಟನೆಯ ಅನುವಾಕದಲ್ಲಿ ಸೋಮವನ್ನು ಯಾಗಶಾಲೆಗೆ ಒಯ್ಯಲು ಶಕಟದಲ್ಲಿ (ಬಂಡಿ) ಇಡುವುದನ್ನು ಹೇಳಲಾಗುತ್ತದೆ.

---

## ॥ ಅಷ್ಟಮೋಽನುವಾಕಃ ॥

ಉದಾಯುಷಾ ಸ್ವಾಯುಷೋದೋಷಧೀನಾಗ್ಂ ರಸೇ

ನೋತ್ಪರ್ಜನ್ಯಸ್ಯ ಶುಷ್ಮೇಣೋದಸ್ಥಾಮಮೃತಾಗ್ಂ ಅನು ।

ಉದಿತಿ । ಆಯುಷಾ । ಸ್ವಾಯುಷೇತಿ ಸು-ಆಯುಷಾ । ಉದಿತಿ। ಓಷಧೀನಾಮ್ ।

ರಸೇನ । ಉದಿತಿ । ಪರ್ಜನ್ಯಸ್ಯ । ಶುಷ್ಮೇಣ । ಉದಿತಿ । ಅಸ್ಥಾಮ್ । ಅಮೃತಾನ್।

ಅನು ॥

| ಮಂತ್ರ | ವಿನಿಯೋಗ |
|---|---|
| ಉದಾಯುಷಾ..........ಅನು । | ಸೋಮವನ್ನು ತೆಗೆದುಕೊಂಡು ಯಜಮಾನನು ಏಳಲು |

[ನಾನು] ಅಮೃತಾನ್ ಅನು = ದೇವತೆಗಳನ್ನು ಲಕ್ಷ್ಯದಲ್ಲಿಟ್ಟುಕೊಂಡು (ಉದ್ದೇಶಿಸಿ) ಆಯುಷಾ = ದೀರ್ಘಕಾಲಜೀವನರೂಪವಾದ, ಆಯುಃಸ್ವರೂಪನಾದ (ಆಯುಸ್ಸನ್ನು ಕೊಡುವ) ಸ್ವಾಯುಷಾ = [ರೋಗಾದಿ ಉಪದ್ರವರಹಿತ ಜೀವನರೂಪವಾದ] ಸ್ವಾಯುಃ ಸ್ವರೂಪನಾದ (ಸ್ವಾಯುಸ್ಸನ್ನು ಕೊಡುವ) [ಸೋಮನೊಡನೆ]; ಉದಸ್ಥಾಮ್ । [ಉತ್ + ಅಸ್ಥಾಮ್] = ಮೇಲಕ್ಕೆ ಏಳುತ್ತೇನೆ; ಓಷಧೀನಾಮ್ = ಓಷಧಿಗಳ; ರಸೇನ = ಸಾರಭೂತವಾಗಿರುವ ಸೋಮನೊಡನೆ; ಉತ್ ಅಸ್ಥಾಮ್ = ಮೇಲಕ್ಕೆ ಏಳುತ್ತೇನೆ; ಪರ್ಜನ್ಯಸ್ಯ = ವೃಷ್ಟಿದೇವನ; ಶುಷ್ಮೇಣ = ಸಾರಭೂತನಾದ (ಬಲರೂಪನಾದ) [ಸೋಮನೊಡನೆ]; ಉತ್ ಅಸ್ಥಾಮ್ = ಮೇಲಕ್ಕೆ ಏಳುತ್ತೇನೆ; ಅಮೃತಾನ್ ಅನು = ದೇವತೆಗಳನ್ನು

ಸೋಮರಾಜನು ದೀರ್ಘಾಯುಃಪ್ರದನಾದುದರಿಂದ ಆಯುಃಸ್ವರೂಪನು. ರೋಗ ರಹಿತವಾದ ಆಯುಸ್ಸನ್ನು ಕೊಡುವುದರಿಂದ ದೀರ್ಘಾಯುಃಸ್ವರೂಪನು. ಓಷಧಿಗಳ ಮತ್ತು ವೃಷ್ಟಿಯ ಸಾರವೇ ಆಗಿದ್ದಾನೆ. ಬಲವೇ ಆಗಿದ್ದಾನೆ. ಇಂತಹ ಸೋಮನೊಡನೆ

# ಉರ್ವಂತರಿಕ್ಷಮನ್ವಿಹ್ಯದಿತ್ಯಾಃ ಸದೋಽಸ್ಯದಿತ್ಯಾಃ ಸದ ಆ ಸೀದಾಸ್ತಭ್ನಾದ್ಯಾಮೃಷಭೋ

---

ಉರು । ಅಂತರಿಕ್ಷಮ್ । ಅನ್ವಿತಿ । ಇಹಿ । ಅದಿತ್ಯಾಃ । ಸದಃ । ಅಸಿ । *ಅದಿತ್ಯಾಃ । ಸದಃ । ಏತಿ । ಸೀದ* । ಅಸ್ತಭ್ನಾತ್ । ದ್ಯಾಮ್ । ಋಷಭಃ ।

---

| ಮಂತ್ರ | ವಿನಿಯೋಗ |
|---|---|
| ಉರ್ವಂತರಿಕ್ಷಮನ್ವಿಹಿ । | ಶಕಟದ ಕಡೆಗೆ ಹೋಗಲು. |
| ಅದಿತ್ಯಾಃ ಸದೋಽಸಿ । | ಶಕಟದ ಮಧ್ಯದಲ್ಲಿ ಕೃಷ್ಣಾಜಿನವನ್ನು ಹಾಸಲು. |
| ೧) ಅದಿತ್ಯಾಃ ಸದ ಆಸೀದ। | ಕೃಷ್ಣಾಜಿನದಲ್ಲಿ ಸೋಮವನ್ನು ಇಡಲು—ಬೌಧಾಯನ |
| ೨) ಅಸ್ತಭ್ನಾತ್...ವ್ರತಾನಿ। | ಸೋಮೋಪಸ್ಥಾನವನ್ನು ಮಾಡಲು —ಬೌಧಾಯನ |
| ಅದಿತ್ಯಾಃ........ವ್ರತಾನಿ । | ಸೋಮವನ್ನು ಕೃಷ್ಣಾಜಿನದಲ್ಲಿ ಇಡಲು —ಆಪಸ್ತಂಬ. |

---

ಲಕ್ಷ್ಯದಲ್ಲಿಟ್ಟುಕೊಂಡು (ಉದ್ದೇಶಿಸಿ) ಸೋಮನೊಡನೆ ಉತ್ (ಅಸ್ಥಾಮ್) = ಮೇಲಕ್ಕೆ ಏಳುತ್ತೇನೆ. [ಓಷಧ್ಯಃ ಫಲಪಾಕಾಂತಾಃ = ಫಲಪಾಕವೇ ಕೊನೆಯಾಗಿರುವ ಬತ್ತ ಮುಂತಾದ ಸಸ್ಯವರ್ಗ) + [ಎಲೈ! ಸೋಮನೇ!] ಉರು = ವಿಸ್ತೀರ್ಣವಾದ; ಅಂತರಿಕ್ಷಮ್ = ಆಕಾಶವನ್ನು; ಅನ್ವಿಹಿ = ಅನುಸರಿಸಿ ಹೋಗು. + [ಎಲೈ ಕೃಷ್ಣಾಜಿನವೇ! ನೀನು] ಅದಿತ್ಯಾಃ = ಭೂಮಿಯ; ಸದಃ ಅಸಿ = ಸ್ಥಾನವಾಗಿರುವೆ. + [ಎಲೈ! ಸೋಮರಾಜನೇ! ನೀನು] ಅದಿತ್ಯಾಃ ಸದಃ = ಭೂದೇವಿಯ ಆಶ್ರಯವಾದ ಈ ಕೃಷ್ಣಾಜಿನದಲ್ಲಿ; ಆ ಸೀದ = ಕುಳಿತುಕೋ; [ಕೃಷ್ಣಾಜಿನವನ್ನು ಆ ಸೀದ = ಹೊಂದು.] + ಋಷಭಃ = ಶ್ರೇಷ್ಠನಾದ [ಸೋಮನು] ದ್ಯಾಮ್ = ದ್ಯುಲೋಕವನ್ನು; ಅಸ್ತಭ್ನಾತ್ = ಬೀಳದಂತೆ ತಡೆಹಿಡಿದನು.

---

ದೇವತೆಗಳನ್ನು ಉದ್ದೇಶಿಸಿ ಯಾಗ ಮಾಡಲು ಮೇಲಕ್ಕೆ ಏಳುತ್ತಿದ್ದೇನೆ.

ಎಲೈ! ಸೋಮರಾಜನೇ! ವಿಸ್ತೀರ್ಣವಾದ ಆಕಾಶದಲ್ಲಿ ಯಾವ ತಡೆಯೂ ಇಲ್ಲದೆ ಮುಂದೆ ಮುಂದೆ ಹೋಗು.

# ಅಂತರಿಕ್ಷಮಮಿಮೀತ ವರಿಮಾಣಂ ಪೃಥಿವ್ಯಾ ಆ ಸೀದ-ದ್ವಿಶ್ವಾ ಭುವನಾನಿ ಸಮ್ರಾಡ್ವಿಶ್ವೇತ್ತಾನಿ ವರುಣಸ್ಯ ವ್ರತಾನಿ

ಅಂತರಿಕ್ಷಮ್ । ಅಮಿಮೀತ । ವರಿಮಾಣಮ್ । ಪೃಥಿವ್ಯಾಃ । ಏತಿ । ಅಸೀದತ್। ವಿಶ್ವಾ । ಭುವನಾನಿ । ಸಮ್ರಾಡಿತಿ ಸಮ್-ರಾಟ್ । ವಿಶ್ವಾ । ಇತ್ । ತಾನಿ । ವರುಣಸ್ಯ। ವ್ರತಾನಿ ।

ಅಂತರಿಕ್ಷಮ್ = ಆಕಾಶವನ್ನು; ಅಮಿಮೀತ = ಇಷ್ಟೆಂದು ಅಳೆದನು. ಪೃಥಿವ್ಯಾಃ = ಭೂಮಿಯ; ವರಿಮಾಣಮ್ = ತೂಕವನ್ನೂ; [ಅಮಿಮೀತ = ತೂಗಿದನು.] ಸಮ್ರಾಟ್ = ತನ್ನ ಮಹಿಮೆಯಿಂದ ವಿರಾಜಿಸುತ್ತಿರುವ [ಆ ಸೋಮನು]; ವಿಶ್ವಾ = ಎಲ್ಲಾ; ಭುವನಾನಿ = ಲೋಕಗಳನ್ನೂ; ಆ ಅಸೀದತ್ = ವ್ಯಾಪಿಸಿದನು; ವಿಶ್ವಾ ಇತ್ ತಾನಿ = ಮೇಲೆ ಹೇಳಿದ ಕಾರ್ಯಗಳೆಲ್ಲವೂ; ವರುಣಸ್ಯ = [ಎಲ್ಲವನ್ನೂ ಆವರಿಸಿ ಇರುವುದರಿಂದ] ವರುಣ ನೆಂಬ ಹೆಸರುಳ್ಳ ಸೋಮರಾಜನ; ವ್ರತಾನಿ = ವ್ರತದಂತೆ ನಿಯತವಾದವುಗಳಾಗಿವೆ.

ಎಲೈ! ಕೃಷ್ಣಾಜಿನವೇ! ನೀನು ಭೂದೇವಿಯ ಸ್ಥಾನವಾಗಿರುವೆ.

ಎಲೈ! ಸೋಮನೇ! ನೀನು ಭೂಮಿಯ ಆಶ್ರಯಸ್ಥಾನವಾಗಿರುವ ಈ ಕೃಷ್ಣಾಜಿನವನ್ನು ಹೊಂದು. ಇದರಲ್ಲಿ ಕುಳಿತುಕೋ.

ಶ್ರೇಷ್ಠನಾದ ಸೋಮರಾಜನು ದ್ಯುಲೋಕವು ಬೀಳದಂತೆ ತಡೆದಿದ್ದಾನೆ. ಅಂತರಿಕ್ಷವನ್ನು ಅಳೆದಿರುತ್ತಾನೆ. ಭೂಮಿಯ ಗುರುತ್ವವನ್ನು ಅಳೆದಿರುತ್ತಾನೆ. ತನ್ನ ಮಹಿಮೆಯಿಂದ ಎಲ್ಲ ಕಡೆಗಳಲ್ಲಿಯೂ ಪ್ರಕಾಶಿಸುತ್ತಿರುವ ಈ ಸೋಮರಾಜನು ಎಲ್ಲ ಲೋಕಗಳನ್ನೂ ವ್ಯಾಪಿಸಿರುತ್ತಾನೆ. ಎಲ್ಲವನ್ನೂ ಆವರಿಸಿರುವುದರಿಂದ ವರುಣನಾಗಿರುವ ಸೋಮರಾಜನ ನಿಯತವಾದ ಸಾಹಸಕಾರ್ಯಗಳೇ ಇವೆಲ್ಲವೂ ಆಗಿವೆ.

[ಮುಂದೆ ಸೋಮನನ್ನು ಜಗದೀಶ್ವರನಿಂದ ಅಭಿನ್ನನಾದ ವರುಣನೆಂದು ವರ್ಣಿಸಿ, ಆತನು ಎಲ್ಲವನ್ನೂ ನಿರ್ಮಿಸಿರುತ್ತಾನೆಂದು ಹೇಳಿದೆ.]

**ವನೇಷು ವ್ಯಂತರಿಕ್ಷಂ ತತಾನ ವಾಜಮರ್ವತ್ಸು ಪಯೋ**
**ಅಘ್ನಿಯಾಸು ಹೃತ್ಸು (೧) ಕ್ರತುಂ ವರುಣೋ ವಿಕ್ಷ್ವಗ್ನಿಂ**
**ದಿವಿ ಸೂರ್ಯಮದಧಾತ್ಸೋಮಮದ್ರಾವುದು ತ್ಯಂ**

---

ವನೇಷು । ವೀತಿ । ಅಂತರಿಕ್ಷಮ್ । ತತಾನ । ವಾಜಮ್ । ಅರ್ವತ್ಸ್ವಿತ್ಯರ್ವತ್-ಸು।
ಪಯಃ । ಅಘ್ನಿಯಾಸು । ಹೃತ್ಸು । (೧) ಕ್ರತುಮ್ । ವರುಣಃ । ವಿಕ್ಷು । ಅಗ್ನಿಮ್।
ದಿವಿ। ಸೂರ್ಯಮ್ । ಅದಧಾತ್ । ಸೋಮಮ್ । ಅದ್ರೌ । ಉದಿತಿ । ಉ। ತ್ಯಮ್।

---

| ಮಂತ್ರ | ವಿನಿಯೋಗ |
|---|---|
| ವನೇಷು.......ಸೋಮಮದ್ರೌ । | ಸೋಮನನ್ನು ವಸ್ತ್ರದಿಂದ ಸುತ್ತಲು. |
| ಉದು ತ್ಯಂ.... ಸೂರ್ಯಮ್ । | ಕೃಷ್ಣಾಜಿನದಿಂದ ಸೋಮಲತೆಯನ್ನು ಮುಚ್ಚಿ ಕಟ್ಟಲು. |

---

**ವರುಣಃ** = ವರುಣನೆಂಬ ಹೆಸರಿನ ಸೋಮದೇವನು [ಜಗದೀಶ್ವರನಿಂದ ಅಭಿನ್ನನಾಗಿ] **ವಿ ತತಾನ** = ಎಲ್ಲವನ್ನೂ ನಿರ್ಮಿಸಿದನು. **ವನೇಷು** = ವೃಕ್ಷಗಳ ಮಧ್ಯಗಳಲ್ಲಿ; **ಅಂತರಿಕ್ಷಮ್** = ಅವಕಾಶವನ್ನು ; [ವಿತತಾನ =ನಿರ್ಮಿಸಿದನು /ವಿಸ್ತರಿಸಿದನು. ] **ಅರ್ವತ್ಸು** = ಕುದುರೆಗಳಲ್ಲಿ; **ವಾಜಮ್** = ಗತಿವಿಶೇಷವನ್ನೂ [ವೇಗವನ್ನೂ; ವಿತತಾನ = ವಿಸ್ತರಿಸಿದನು ]. **ಅಘ್ನಿಯಾಸು** = ಗೋವುಗಳಲ್ಲಿ; **ಪಯಃ** = ಹಾಲನ್ನು [ ವಿತತಾನ=ವಿಸ್ತರಿಸಿದನು ]. **ಹೃತ್ಸು** =ಮನಸ್ಸುಗಳಲ್ಲಿ ; **ಕ್ರತುಮ್** = ಸಂಕಲ್ಪವನ್ನು [ ವಿತತಾನ ]; **ವಿಕ್ಷು** = ಮನುಷ್ಯರಲ್ಲಿ ; **ಅಗ್ನಿಮ್** = ಜಾಠರಾಗ್ನಿಯನ್ನು ಅಥವಾ ಭೌಮಾಗ್ನಿಯನ್ನು; [ವಿತತಾನ]; ದಿವಿ = ದ್ಯುಲೋಕದಲ್ಲಿ; **ಸೂರ್ಯಮ್** = ಸೂರ್ಯನನ್ನು; **ಅದಧಾತ್** = ಇಟ್ಟನು; **ಸೋಮಮ್** = ಸೋಮಲತೆಯನ್ನು; **ಅದ್ರೌ** = ಬಂಡೆಗಳಿಂದ ತುಂಬಿರುವ ಬೆಟ್ಟದಲ್ಲಿ;

---

ವರುಣನಾಮಕನಾದ ಸೋಮದೇವನು ಕಾಡುಗಳಲ್ಲಿ ಅವಕಾಶವನ್ನೂ, ಕುದುರೆಗಳಲ್ಲಿ ವೇಗಯುಕ್ತಗತಿಯನ್ನೂ, ಗೋವುಗಳಲ್ಲಿ ಹಾಲನ್ನೂ, ಮಾನವ ಮನಸ್ಸುಗಳಲ್ಲಿ ಸಂಕಲ್ಪ

**ಜಾತವೇದಸಂ ದೇವಂ ವಹಂತಿ ಕೇತವಃ । ದೃಶೇ ವಿಶ್ವಾಯ**

**ಸೂರ್ಯಮ್ । ಉಸ್ರಾವೇತಂ ಧೂರ್‌ಷಾಹಾ**

ಜಾತವೇದಸಮಿತಿ ಜಾತ-ವೇದಸಮ್ । ದೇವಮ್ । ವಹಂತಿ । ಕೇತವಃ । ದೃಶೇ । ವಿಶ್ವಾಯ । ಸೂರ್ಯಮ್ ॥ ಉಸ್ರೌ । ಏತಿ । ಇತಮ್ । ಧೂರ್‌ಷಾಹಾವಿತಿ ಧೂಃ-ಸಾಹೌ।

| ಮಂತ್ರ | ವಿನಿಯೋಗ |
| --- | --- |
| ಉಸ್ರಾವೇತಂ........ಚೋದನಾ । | ಸೋಮಶಕಟಕ್ಕೆ ಕಟ್ಟಲು ತರುತ್ತಿರುವ ಎತ್ತುಗಳ ಅಭಿಮಂತ್ರಣದಲ್ಲಿ —ಬೌಧಾಯನ<br>ನೊಗಕ್ಕೆ ಕಟ್ಟಲು ಎತ್ತುಗಳನ್ನು ನೊಗದ ಹತ್ತಿರಕ್ಕೆ ತರಲು —ಆಪಸ್ತಂಬ |

[ಅದಧಾತ್ = ಇಟ್ಟನು/ಬೆಳೆಯುವಂತೆ ಮಾಡಿದನು.] + ಕೇತವಃ = ಕಿರಣಗಳು; ತ್ಯಮ್ = ಆ ಪ್ರಸಿದ್ಧನಾದ; ಜಾತವೇದಸಮ್ = ಉತ್ಪನ್ನವಾದ ಜಗತ್ತೆಲ್ಲವನ್ನೂ ತಿಳಿದಿರುವ; ಸೂರ್ಯಂ ದೇವಮ್ = ಸೂರ್ಯದೇವನನ್ನು; ವಿಶ್ವಾಯ ದೃಶೇ = ಲೋಕವೆಲ್ಲವನ್ನೂ ನೋಡುವುದಕ್ಕಾಗಿ (ಲೋಕವೆಲ್ಲವೂ ನೋಡುವುದಕ್ಕಾಗಿ) ಉತ್ ಉ ವಹಂತಿ = ಮೇಲಕ್ಕೇ ಒಯ್ಯುತ್ತವೆ. +ಉಸ್ರಾ = ಎಲೈ! ಎತ್ತುಗಳೇ!; ಧೂರ್‌ಷಾಹೌ = ಭಾರವನ್ನು ಸಹಿಸಿ ಕೊಳ್ಳಲು ಸಮರ್ಥರಾದ;

---

ವನ್ನೂ ಅಥವಾ ವಿಜ್ಞಾನವನ್ನೂ, ಮನುಷ್ಯರಲ್ಲಿ ಜಾಠರಾಗ್ನಿಯನ್ನೂ (ಭೌಮಾಗ್ನಿ) ವಿಸ್ತರಿಸಿದ್ದಾನೆ [ಉಂಟುಮಾಡಿದ್ದಾನೆ]. ದ್ಯುಲೋಕದಲ್ಲಿ ಸೂರ್ಯನನ್ನು ಸ್ಥಾಪಿಸಿರುತ್ತಾನೆ. ಸೋಮಲತೆಯನ್ನು ಬೆಟ್ಟಗಳ ಬಂಡೆಗಳ ಸಂಧಿಯಲ್ಲಿ ಬೆಳೆಯುವಂತೆ ಮಾಡಿದ್ದಾನೆ. ಆತನನ್ನು ವಸ್ತ್ರದಿಂದ ಆಚ್ಛಾದಿಸುತ್ತೇನೆ.

ಆ ಸೂರ್ಯದೇವನು ಹುಟ್ಟಿದುದೆಲ್ಲವನ್ನೂ ತಿಳಿದಿರುವವನು. ಸರ್ವಜ್ಞನು. ಕಿರಣಗಳು ಆ ಸೂರ್ಯದೇವನನ್ನು ಎಲ್ಲಾ ಲೋಕವನ್ನೂ ನೋಡುವುದಕ್ಕಾಗಿಯೂ, ಅಥವಾ ಎಲ್ಲರೂ ಸೂರ್ಯನನ್ನು ನೋಡುವಂತೆ ಮಾಡುವುದಕ್ಕಾಗಿಯೇ ಮೇಲಕ್ಕೇ ಒಯ್ಯುತ್ತವೆ.

ಎಲೈ ! ಎತ್ತುಗಳೇ ! ನೀವು ಭಾರವನ್ನು ಸಹಿಸಿ ಹೊರಬಲ್ಲಿರಿ. ಬಂಡಿಯನ್ನು

# ವನಶ್ರೂ ಅವೀರಹಣೌ ಬ್ರಹ್ಮಚೋದನೌ ವರುಣಸ್ಯ ಸ್ಕಂಭನಮಸಿ ವರುಣಸ್ಯ ಸ್ಕಂಭಸರ್ಜನಮಸಿ

---

ಅನಶ್ರೂ ಇತಿ । ಅವೀರಹಣಾವಿತ್ಯವೀರ-ಹನೌ । ಬ್ರಹ್ಮಚೋದನಾವಿತಿ ಬ್ರಹ್ಮ-ಚೋದನೌ । ವರುಣಸ್ಯ । ಸ್ಕಂಭನಮ್ । ಅಸಿ । ವರುಣಸ್ಯ । ಸ್ಕಂಭಸರ್ಜನಮಿತಿ ಸ್ಕಂಭ-ಸರ್ಜನಮ್ । ಅಸಿ ।

---

| ಮಂತ್ರ | ವಿನಿಯೋಗ |
| --- | --- |
| ವರುಣಸ್ಯ..........ಅಸಿ । | ಬಲಗಡೆಯ ಎತ್ತನ್ನು ಕಟ್ಟಲು —ಬೌಧಾಯನ<br>ಶಮ್ಯೆ(ಗೂಟಕೋಲು/ಹಗಡು)ಯನ್ನು ಹಾಕಲು —ಆಪಸ್ತಂಬ |
| ವರುಣಸ್ಯ........ಸರ್ಜನಮಸಿ । | ಶಮ್ಯೆಯನ್ನು ಹಾಕಲು —ಬೌಧಾಯನ<br>ಯೋಕ್ತ್ರ(ಎತ್ತಿನ ಕತ್ತನ್ನು ಸುತ್ತಿರುವ ಹಗ್ಗ/ಕೊರಳು ಕಣ್ಣಿ)ವನ್ನು ಶಮ್ಯೆಗೆ ಹಾಕಲು —ಆಪಸ್ತಂಬ |

---

**ಅನಶ್ರೂ** = ಬಂಡಿಯನ್ನು ಎಳೆಯುವುದರಲ್ಲಿ ಪ್ರಸಿದ್ಧರಾದ; **ಅವೀರಹಣೌ** = ಬಂಡಿಯಲ್ಲಿರುವ ಸೋಮನಿಗೆ ತೊಂದರೆಯನ್ನುಂಟುಮಾಡದ [ಪಳಗಿರುವುದರಿಂದ ಯಾರಿಗೂ ತೊಂದರೆಪಡಿಸದ]; **ಬ್ರಹ್ಮಚೋದನೌ** = [ಕೃಷಿಸಾಧನವಾದ] ಅನ್ನವನ್ನು ಉತ್ಪಾದಿಸುವ; [ಅನ್ನಸಾಧನವಾದ ಸೋಮನನ್ನು ಒಯ್ಯುತ್ತಿರುವ] ನೀವಿಬ್ಬರು; **ಆ ಇತಮ್** = ಬನ್ನಿರಿ. +[ಎಲೈ! ಶಮ್ಯೆಯೇ! ನೀನು] **ವರುಣಸ್ಯ** = ತಡೆಯಬೇಕಾದ [ಎತ್ತಿನ] **ಸ್ಕಂಭನಮ್** = ನಿವಾರಣೆಯನ್ನು ಮಾಡುವುದಾಗಿ; **ಅಸಿ** = ಇರುವೆ. + [ಎಲೈ ಯೋಕ್ತ್ರವೇ! ನೀನೂ ಶಮ್ಯೆಯಂತೆಯೇ] **ವರುಣಸ್ಯ** = ತಡೆಯಬೇಕಾಗಿರುವ [ಎತ್ತಿನ] **ಸ್ಕಂಭಸರ್ಜನಮ್** = ನಿವಾರಣೆಯನ್ನುಂಟುಮಾಡಬಲ್ಲುದಾಗಿ; **ಅಸಿ** = ಇರುವೆ.

---

ಎಳೆಯುವುದರಲ್ಲಿ ಪ್ರಸಿದ್ಧರಾಗಿದ್ದೀರಿ. ಬಂಡಿಯಲ್ಲಿರುವ ಸೋಮನಿಗೆ ಹಿಂಸೆಯಾಗದಂತೆ ಹೋಗಬಲ್ಲಿರಿ. ಪಳಗಿರುವುದರಿಂದ ಯಾರಿಗೂ ತೊಂದರೆಯಾಗದಂತೆ ಶಕಟವನ್ನು

# ಪ್ರತ್ಯಸ್ತೋ ವರುಣಸ್ಯ ಪಾಶಃ ॥ ೮-16 ॥

## [ ಹ್ರುತ್ಸು ಪಂಚತ್ರಿಗ್ಂಶಚ್ಚ । ]

---

ಪ್ರತ್ಯಸ್ತ ಇತಿ ಪ್ರತಿ-ಅಸ್ತಃ । ವರುಣಸ್ಯ । ಪಾಶಃ ॥ ೮ ॥

---

| ಮಂತ್ರ | ವಿನಿಯೋಗ |
|---|---|
| ಪ್ರತ್ಯಸ್ತೋ..........ಪಾಶಃ । | ಯೋಕ್ತ್ರವನ್ನು ಶಮ್ಯೆಗೆ ಹಾಕಲು—ಬೌಧಾಯನ ಎತ್ತನ್ನು ಎಳೆದುಹಿಡಿಯುವ ಉದ್ದವಾದ ಹಗ್ಗವನ್ನು ಬಂಡಿಯಲ್ಲಿ ಹಾಕಲು —ಆಪಸ್ತಂಬ |

---

+ ವರುಣಸ್ಯ = ತಡೆಯಬೇಕಾಗಿರುವ [ಎತ್ತಿನ] ಪಾಶಃ =[ಉದ್ದವಾದ] ಹಗ್ಗವು; ಪ್ರತ್ಯಸ್ತಃ = ಪ್ರಸಾರಿತವಾಯಿತು.

---

ಎಳೆಯಬಲ್ಲಿರಿ. ಕೃಷಿಯಿಂದ ಅನ್ನವನ್ನು ಉಂಟುಮಾಡತಕ್ಕವರು ನೀವು. ಈ ಸೋಮರಾಜನ ಶಕಟವನ್ನು ಎಳೆಯಲು ಬನ್ನಿರಿ.

ಎಲೈ! ಶಮ್ಯೆಯೇ! ಎತ್ತು ದಾರಿಬಿಟ್ಟು ಹೋಗದಂತೆ ತಡೆಯಬೇಕಾಗಿದೆ. ಹಾಗೆ ತಡೆಯಬಲ್ಲುದು ನೀನೇ ಆಗಿರುವೆ.

ಎಲೈ ಯೋಕ್ತ್ರವೇ! [ಜೊತ್ತಿಗೆ ಹಗ್ಗವೇ!] ಶಮ್ಯೆಯಂತೆಯೇ ನೀನೂ ದಾರಿ ತಪ್ಪದಂತೆ ನಡೆಯಬೇಕಾಗಿರುವ ಎತ್ತನ್ನು ನಿವಾರಿಸಬಲ್ಲುದಾಗಿದ್ದೀಯೆ.

ಎತ್ತನ್ನು ಎಳೆದು ಹತೋಟಿಯಲ್ಲಿಡುವ ಹಗ್ಗವು ಬಂಡಿಯ ಮೇಲೆ ಹಾಕಲ್ಪಟ್ಟಿತು.

## ವಿನಿಯೋಗ ಸಂಗ್ರಹ

ಉದಾಯು[1] ಸೋಮಮಾದಾಯೋರು[2] ಗಚ್ಛೇಚ್ಛಕಟಂ ಪ್ರತಿ ।
ಅದಿ[3] ಸ್ತ್ವತ್ವಾಜಿನಂ ಸೋಮಮದಿತ್ಯಾಃ ಸೇತಿ[4] ಸಾದಯೇತ್ ॥
ವನೇ[5] ವಸ್ತ್ರೇಣ ಬದ್ಧ್ವೋದು[6] ಪ್ರತ್ಯಾನಹ್ಯತಿ ಚರ್ಮಣಾ ।
ಉಸ್ರಾ[7] ವನಡುಹೋರ್ಯೋಗೋ ವರು[8] ಶಮ್ಯಾಂ ವಿನಿಕ್ಷಿಪೇತ್ ॥
ವರು[9] ಬದ್ಧ್ವಾ ಯೋಕ್ತ್ರಪಾಶಂ ಪ್ರತಿ[10] ಧಾನೀಮುಪಾಸ್ಯತಿ ।
ಅನುವಾಕೇ ಹ್ಯಷ್ಟಮೇಽಸ್ಮಿನ್ ಮಂತ್ರಾ ಏತೇ ದಶೋದಿತಾಃ ॥

ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ ಬೌಧಾಯನ - 11
ಆಪಸ್ತಂಬ - 10

### ಅನುವಾಕದ ವಿಶೇಷ ವಿಷಯಗಳು

### ಅ) ಭ.ಭಾ.ಭಾಷ್ಯ

**ಮಂತ್ರ ಸಂಖ್ಯೆ**

**೩) ಅದಿತ್ಯಾಃ.......ಅಸಿ।** ಅದಿತ್ಯಾಃ = ದೇವಮಾತುಃ = ದೇವತೆಗಳ ತಾಯಿಯಾದ ಅದಿತಿದೇವಿಯ; ಸದಃ ಅಸಿ = ಸ್ಥಾನವಾಗಿರುವೆ.

**೪) ಅಸ್ತಭ್ನಾತ್.......ವ್ರತಾನಿ।** ಅಸ್ತಭ್ನಾತ್ = ಸ್ತಬ್ಧಾಂ-ದೃಢಾಮ್ ಅಕರೋತ್ = (ದ್ಯಾಮ್ = ದ್ಯುಲೋಕವನ್ನು) ಬೀಳದಂತೆ ದೃಢವಾಗಿ ಮಾಡಿದನು; ಋಷಭಃ = ವರ್ಷಿತಾ (ಮಳೆಯನ್ನು ಸುರಿಸುವ);

ಅಂತರಿಕ್ಷಮ್ ಅಮಿಮೀತ = ಮಿತವಾನ್ / ನಿರ್ಮಿತವಾನ್= ಅಂತರಿಕ್ಷವನ್ನು ನಿರ್ಮಿಸಿದನು; ಪೃಥಿವ್ಯಾಃ ವರಿಮಾಣಮ್= ಉರುತ್ವಮ್ / ವಾರಕತ್ವಂ ವಾ; ಆಸೀದತ್ = ವ್ಯಾಪ್ತವಾನ್ ವರ್ಷೇಣ = ಭೂಮಿಯ ವಿಸ್ತೀರ್ಣವಾದ ಪ್ರದೇಶವನ್ನು ಮಳೆಯಿಂದ ವ್ಯಾಪಿಸಿದನು. [ಇನ್ನೊಂದು ಅರ್ಥವನ್ನು ಮಿಶ್ರರು ಬರೆದಿದ್ದಾರೆ. ಅದು ಸಾಯಣ ಭಾಷ್ಯದಂತೆಯೇ].

**೫) ವನೇಷು.......ಸೋಮಮದ್ರೌ।** ವರುಣಃ = ವರುಣಶಬ್ದವಾಚ್ಯಃ ಸೋಮಃ = ವರುಣನೆಂಬ ಹೆಸರಿನ ಸೋಮನು.

**೬) ಉದು......ಸೂರ್ಯಮ್।** ಜಾತವೇದಸಮ್= ಜಾತಪ್ರಜ್ಞಾನಮ್ = ಉಂಟಾದ

ವಿಶೇಷಜ್ಞಾನವುಳ್ಳ/ವಿಶೇಷಜ್ಞನಾದ; ವಿಶ್ವಾಯ = ವಿಶ್ವಾರ್ಥಮ್ = ಲೋಕಕ್ಕೋಸ್ಕರ;

೭) ಉಸ್ರಾವೇತಂ.........ಚೋದನಾ। ಅನಶ್ರೂ = ಅಶ್ರುರಹಿತೌ = ಕಣ್ಣೀರಿಲ್ಲದೆ [ಶ್ರಮವಿಲ್ಲದೆ]; ಅನೋವೋಢ್ಯತ್ವೇನ ಶ್ರಿತೌ = ಶಕಟವನ್ನು ಒಯ್ಯುವವರಾಗಿ ಆಶ್ರಯಿಸಲ್ಪಟ್ಟಿರುವ;

೮) ವರುಣಸ್ಯ.........ಅಸಿ। ಮಿಶ್ರರು ಬೌಧಾಯನರ ವಿನಿಯೋಗದಂತೆ ದಕ್ಷಿಣ ವೃಷಭವನ್ನು ಸಂಬೋಧಿಸಿ ವರುಣಸ್ಯ = ಸೋಮಸ್ಯ; ಸ್ಕಂಭನಮ್ = ಧಾರಯಿತಾ ಎಂದು ವಿವರಿಸಿದ್ದಾರೆ. ಸ್ಕಂಭನಮ್ = ಸ್ತಂಭನಮ್ = ಉತ್ಪಾದಯಿತಾ ಯಾಗದ್ವಾರಾ = ಯಾಗದ ಮೂಲಕ ಸೋಮನನ್ನು ಉತ್ಪಾದಿಸುವವನು ಎಂದೂ ತಿಳಿಸಿರುತ್ತಾರೆ.

೯) ವರುಣಸ್ಯ........ಸರ್ಜನಮಸಿ। ವರುಣಸ್ಯ = ಸೋಮಸ್ಯ; ಸ್ಕಂಭಸರ್ಜನಮ್ = ಸ್ಕಂಭನಸ್ಯ ಸರ್ಜನಮ್ = ಅವಿಚಲಿತಮವಸ್ಥಾನಸ್ಯ ಉತ್ಪಾದಯಿತಾ = ಸೋಮನು ಚಲಿಸದೆ ಇರುವಂತೆ ಮಾಡುವವನು.

೧೦) ಪ್ರತ್ಯಸ್ತೋ.......ಪಾಶಃ। ಪ್ರತ್ಯಸ್ತಃ = ಉತ್‌ಕ್ಷಿಪ್ತಃ ವರುಣಸ್ಯ ಪಾಶಃ ತ್ವಮ್ ಅಸಿ = ಮೇಲೆ ಹಾಕಿದ ವರುಣನ ಪಾಶವೇ ನೀನು.

ಆ) ಛಂದಸ್ಸು

೧) ಉದಾಯುಷಾ........ಅಸು। ಅನುಷ್ಟುಪ್ [ಉತ್‌ಶಬ್ದಾದಿಯಾದ ನಾಲ್ಕು ಪಾದಗಳು]

೨) ಉರ್ವಂತರಿಕ್ಷಮನ್ವಿಹಿ। ಏಕಪದಾಗಾಯತ್ರೀ।

೩) ಅಸ್ತಭ್ನಾತ್.......ವ್ರತಾನಿ। ತ್ರಿಷ್ಟುಪ್

೪) ವನೇಷು.........ಅದ್ರೌ। ತ್ರಿಷ್ಟುಪ್ (ವಾಜಮ್.......ಹೃತ್ಸು.......ದಿವಿ ಇವು ಪಾದಾರಂಭ)

೫) ಉದು ತ್ಯಂ...ಸೂರ್ಯಮ್। ಗಾಯತ್ರೀ

೭) ಉಸ್ರಾವೇತಂ.......ಚೋದನಾ। ಏಕಪದಾ ವಿರಾಟ್ ಯಜುರಂತಾ[ಭ.ಭಾ.ಭಾ]

## ॥ ನವಮೋऽನುವಾಕಃ ॥

**ಪ್ರಚ್ಯವಸ್ವ ಭುವಸ್ಪತೇ ವಿಶ್ವಾನ್ಯಭಿ ಧಾಮಾನಿ ಮಾ ತ್ವಾ ಪರಿಪರೀ ವಿದನ್ಮಾ ತ್ವಾ ಪರಿಪಂಥಿನೋ ವಿದನ್ಮಾ ತ್ವಾ**

---

ಪ್ರೇತಿ । ಚ್ಯವಸ್ವ । ಭುವಃ । ಪತೇ । ವಿಶ್ವಾನಿ । ಅಭೀತಿ । ಧಾಮಾನಿ । ಮಾ। ತ್ವಾ । ಪರಿಪರೀತಿ ಪರಿ-ಪರೀ । ವಿದತ್ । ಮಾ । ತ್ವಾ। ಪರಿಪಂಥಿನ ಇತಿ ಪರಿ-ಪಂಥಿನ। ವಿದನ್ । ಮಾ । ತ್ವಾ।

---

ಹಿಂದಿನ ಅನುವಾಕದಲ್ಲಿ ಬಂಡಿಯಲ್ಲಿ ಸೋಮನನ್ನು ಇಡುವುದನ್ನು ಹೇಳಿ. ಇಲ್ಲಿ ಶಕಟವು ಯಾಗಶಾಲೆಗೆ ಹೋಗುವುದನ್ನು ಹೇಳಲಾಗಿದೆ.

| ಮಂತ್ರ | ವಿನಿಯೋಗ |
|---|---|
| ಪ್ರ ಚ್ಯವಸ್ವ.....ಸಗ್‌ಸ್ಕೃತಮ್। | ಸೋಮನನ್ನು ಶಕಟದಲ್ಲಿ ಪ್ರದಕ್ಷಿಣವಾಗಿ ತೆಗೆದುಕೊಂಡು ಹೋಗಲು -ಬೌಧಾಯನ |

---

**ಭುವಃ ಪತೇ !** = ಭೂಮಿಯಲ್ಲಿರುವ ಯಜಮಾನ ಮುಂತಾದವರ ಪಾಲಕನಾದ ಭೂಪತಿಯಾದ ಸೋಮರಾಜನೇ !; **ವಿಶ್ವಾನಿ ಧಾಮಾನಿ ಅಭಿ** = ಎಲ್ಲ (ಪ್ರಾಚೀನವಂಶ, ಹವಿರ್ಧಾನ ಮುಂತಾದ) ಸ್ಥಾನಗಳನ್ನು ಕುರಿತು; **ಪ್ರ ಚ್ಯವಸ್ವ** = ಶೀಘ್ರವಾಗಿ ಹೋಗು. **ಪರಿಪರೀ** = ಮಾರ್ಗದಲ್ಲಿ ತೊಂದರೆಪಡಿಸುವ ಕಳ್ಳರ ದೊರೆಯು (ಮುಖ್ಯನು); **ತ್ವಾ** = ನಿನ್ನನ್ನು ; **ಮಾ ವಿದತ್** =ತಿಳಿಯದಿರಲಿ; **ಪರಿಪಂಥಿನಃ** =ಕಳ್ಳನ ಒಡೆಯನ ಸೇವಕರೂ; **ತ್ವಾ**=ನಿನ್ನನ್ನು; **ಮಾ ವಿದನ್** =ತಿಳಿಯದಿರಲಿ; **ಅಘಾಯವಃ** = ಹನನವೆಂಬ ಪಾಪವನ್ನು ಬಯಸುವ ; **ವೃಕಾಃ** = ಕಾಡಿನ ನಾಯಿಗಳು; **ತ್ವಾ** =ನಿನ್ನನ್ನು;

---

ಎಲೈ ! ಯಜಮಾನಾದಿಗಳ ರಕ್ಷಕನಾದ ಭೂಪತಿಯಾದ ಸೋಮರಾಜನೇ! ಯಾಗ ಶಾಲೆಯಲ್ಲಿರುವ ಪ್ರಾಗ್ವಂಶವೇ ಮೊದಲಾದ ಎಲ್ಲಾ ಸ್ಥಾನಗಳನ್ನು ಕುರಿತು ಬೇಗನೆ ಹೋಗು. ಮಾರ್ಗದ ಮಧ್ಯದಲ್ಲಿ ಕಳ್ಳರ ಒಡೆಯನು ನಿನ್ನನ್ನು ತಿಳಿಯದಿರಲಿ. ಕಳ್ಳರ

## ವೃಕಾ ಅಘಾಯವೋ ಮಾ ಗಂಧರ್ವೋ ವಿಶ್ವಾವಸುರಾ-

## ದಘಾಚ್ಛ್ಯೇನೋ ಭೂತ್ವಾ ಪರಾ ಪತ ಯಜಮಾನಸ್ಯ ನೋ

---

ವೃಕಾಃ । ಅಘಾಯವ ಇತ್ಯಘ-ಯವಃ । ಮಾ। ಗಂಧರ್ವಃ। ವಿಶ್ವಾವಸುರಿತಿ ವಿಶ್ವ-ವಸುಃ।

ಏತಿ । ದಘಾತ್ ।* ಶ್ಯೇನಃ । ಭೂತ್ವಾ । ಪರೇತಿ । ಪತ । ಯಜಮಾನಸ್ಯ। ನಃ।

---

| ಮಂತ್ರ | ವಿನಿಯೋಗ (ಆಪಸ್ತಂಬ) |
|---|---|
| ೧) ಪ್ರ ಚ್ಯವಸ್ವ.........ದಘಾತ್ । | ಸೋಮನೊಡನೆ ಪ್ರಾಙ್ಮುಖನಾಗಿ ಹೋಗಲು |
| ೨) ಶ್ಯೇನೋ ಭೂತ್ವಾ....ಸ್ವಸ್ತ್ಯಯನ್ಯಸಿ । | ಅಧ್ವರ್ಯುವು ಸೋಮಾಭಿಮಂತ್ರಣ ವನ್ನು ಮಾಡಲು |

---

ಮಾ [ವಿದನ್ = ತಿಳಿಯದಿರಲಿ]; ವಿಶ್ವಾವಸುಃ ಗಂಧರ್ವಃ = [ಸ್ವರ್ಗಮಾರ್ಗದಲ್ಲಿ ಸೋಮನನ್ನು ಅಪಹರಿಸಿದ್ದ] ವಿಶ್ವಾವಸು ಗಂಧರ್ವರಾಜನು; [ ನಿನ್ನನ್ನು] ಮಾ ಆ ದಘಾತ್ = ಎದುರುನೋಡದಿರಲಿ; +[ಎಲೈ ಸೋಮರಾಜನೇ!] ಶ್ಯೇನಃ ಭೂತ್ವಾ = ಗಿಡಗಪಕ್ಷಿಯಂತೆ ಹಾರಲು ಸಮರ್ಥನಾಗಿ; ನಃ = ನಮ್ಮ; ಯಜಮಾನಸ್ಯ = ಯಜಮಾನನ;

---

ಒಡೆಯನ ಭೃತ್ಯರೂ ನಿನ್ನನ್ನು ಗಮನಿಸದಿರಲಿ. ನಾಶಪಡಿಸುವ ಬಯಕೆಯುಳ್ಳ ಕಾಡಿನ ನಾಯಿಗಳೂ ನಿನ್ನನ್ನು ತಿಳಿಯದಿರಲಿ. ಸ್ವರ್ಗಮಾರ್ಗದಲ್ಲಿ ಸೋಮನನ್ನು ಕದ್ದೊಯ್ದ ಗಂಧರ್ವರಾಜನಾದ ವಿಶ್ವಾವಸುವೂ ದಾರಿಯಲ್ಲಿ ನಿನ್ನನ್ನು ಎದುರು ನೋಡದಿರಲಿ.

ಗಿಡಗದಂತೆ ಹಾರುವ ಶಕ್ತಿಯನ್ನು ಪಡೆದು ನಮ್ಮ ಯಜಮಾನನ ಗೃಹವಾದ ಪ್ರಾಚೀನವಂಶಕ್ಕೆ ಬೇಗನೇ ಹೋಗು. ಅಲ್ಲಿ ದೇವಸಮಾನರಾದ ಅಧ್ವರ್ಯುವೇ ಮೊದಲಾದ ಋತ್ವಿಜರು ನಿನಗಾಗಿ ಆಸಂದೀರೂಪವಾದ ಆಸನವನ್ನು ಸಿದ್ಧಪಡಿಸಿರುತ್ತಾರೆ. ಅದನ್ನು ಅಲಂಕರಿಸು. ನೀನು ಯಜಮಾನನಿಗೆ ಮಂಗಳರೂಪವಾದ ಯಜ್ಞವನ್ನು ಹೊಂದಿಸುವವನಾಗಿರುವೆ.

## ಗೃಹೇ ದೇವ್ಯೈಃ ಸಗ್ಂಸ್ಕೃತಂ ಯಜಮಾನಸ್ಯ
## ಸ್ವಸ್ತ್ಯಯನ್ಯಸ್ಯಪಿ ಪಂಥಾಮಗಸ್ಮಹಿ ಸ್ವಸ್ತಿಗಾಮನೇಹಸಂ
## ಯೇನ ವಿಶ್ವಾಃ ಪರಿ ದ್ವಿಷೋ ವೃಣಕ್ತಿ ವಿಂದತೇ ವಸು

---

ಗೃಹೇ। ದೇವ್ಯೈಃ । ಸಗ್ಂಸ್ಕೃತಮ್ । ★ಯಜಮಾನಸ್ಯ । ಸ್ವಸ್ತ್ಯಯನೀತಿ ಸ್ವಸ್ತಿ-ಅಯನೀ। ಅಸಿ*।* ಅಪೀತಿ । ಪಂಥಾಮ್ । ಅಗಸ್ಮಹಿ । ಸ್ವಸ್ತಿಗಾಮಿತಿ ಸ್ವಸ್ತಿ-ಗಾಮ್ । ಅನೇಹಸಮ್। ಯೇನ । ವಿಶ್ವಾಃ । ಪರೀತಿ । ದ್ವಿಷಃ । ವೃಣಕ್ತಿ । ವಿಂದತೇ । ವಸು★।

---

| ಮಂತ್ರ | ವಿನಿಯೋಗ |
|---|---|
| ೩) ಅಪಿ...........ವಸು । | ಅಧ್ವರ್ಯು ಮತ್ತು ಯಜಮಾನರು ಸೋಮನನ್ನು ಅತಿಕ್ರಮಿಸಿ ಮುಂದೆ ಹೋಗಲು—ಆಪಸ್ತಂಬ |
| ಯಜಮಾನಸ್ಯ...........ವಸು । | ಅಧ್ವರ್ಯು ಮತ್ತು ಯಜಮಾನರು ಸೋಮ-ಶಕಟದ ಜೊತೆಯಲ್ಲಿ ಹೋಗಲು—ಬೌಧಾಯನ |

---

ಗೃಹೇ =[ಪ್ರಾಚೀನವಂಶವೆಂಬ] ಯಜ್ಞಶಾಲೆಯ ಮಂಟಪದಲ್ಲಿ; ಪರಾ ಪತ = ಶೀಘ್ರವಾಗಿ ಹೋಗು; ದೇವ್ಯೈಃ = ದೇವಸಮಾನರಾದ [ಋತ್ವಿಜರಿಂದ]; [ನೀನು ಕುಳಿತುಕೊಳ್ಳಲು ಆಸಂದೀ (ಕುರ್ಚಿ] ರೂಪವಾದ ಆಸನವು] ಸಗ್ಂಸ್ಕೃತಮ್ = ಸಿದ್ಧಪಡಿಸಲ್ಪಟ್ಟಿದೆ. [ನೀನು] ಯಜಮಾನಸ್ಯ = ಯಜಮಾನನಿಗೆ; ಸ್ವಸ್ತ್ಯಯನೀ ಅಸಿ = [ಯಜ್ಞರೂಪವಾದ] ಮಂಗಲ ವನ್ನು ಹೊಂದಿಸುವವನಾಗಿರುವೆ. +ಅಪಿ (ಚ) = ಮತ್ತು; [ನಾವು] ಸ್ವಸ್ತಿಗಾಮ್ = ಶ್ರೇಯಸ್ಕರವಾದ; ಅನೇಹಸಮ್ = ಪಾಪರಹಿತವಾದ; ಪಂಥಾಮ್ = [ಯಜ್ಞಾನುಷ್ಠಾನ-ರೂಪವಾದ] ಮಾರ್ಗವನ್ನು; ಅಗಸ್ಮಹಿ = ಹೊಂದಿರುತ್ತೇವೆ; ಯೇನ = ಯಾವ ಮಾರ್ಗ ದಿಂದ; ವಿಶ್ವಾಃ ದ್ವಿಷಃ = ಶತ್ರುಗಳೆಲ್ಲರನ್ನೂ; ಪರಿ ವೃಣಕ್ತಿ = ಸುತ್ತಲೂ ದೂರೀಕರಿಸ ಲಾಗುತ್ತದೆಯೋ; [ಮತ್ತು] ವಸು = ದ್ರವ್ಯವನ್ನು; ವಿಂದತೇ = [ಯಜಮಾನನು]

---

ನಾವು ಶ್ರೇಯಃಪ್ರಾಪಕವಾದ ಪಾಪರಹಿತವಾದ ಮಾರ್ಗವನ್ನು ಹೊಂದಿರುತ್ತೇವೆ. ಯಜ್ಞಾನುಷ್ಠಾನವೇ ಆ ಮಾರ್ಗ. ಈ ಯಜ್ಞಾನುಷ್ಠಾನದಿಂದ ಸಮಸ್ತ ವೈರಿಗಳನ್ನೂ

**ನಮೋ ಮಿತ್ರಸ್ಯ ವರುಣಸ್ಯ ಚಕ್ಷಸೇ ಮಹೋ ದೇವಾಯ**
**ತದೃತಗ್ಂ ಸಪರ್ಯತ ದೂರೇದೃಶೇ ದೇವಜಾತಾಯ**
**ಕೇತವೇ ದಿವಸ್ಪುತ್ರಾಯ ಸೂರ್ಯಾಯ ಶಗ್ಂಸತ**

---

ನಮಃ । ಮಿತ್ರಸ್ಯ । ವರುಣಸ್ಯ । ಚಕ್ಷಸೇ । ಮಹಃ । ದೇವಾಯ । ತತ್ । ಋತಮ್।
ಸಪರ್ಯತ । ದೂರೇದೃಶ ಇತಿ ದೂರೇ-ದೃಶೇ । ದೇವಜಾತಾಯೇತಿ ದೇವ-ಜಾತಾಯ।
ಕೇತವೇ । ದಿವಃ । ಪುತ್ರಾಯ । ಸೂರ್ಯಾಯ । ಶಗ್ಂಸತ ।

---

| ಮಂತ್ರ | ವಿನಿಯೋಗ |
|---|---|
| ನಮಃ........ಶಗ್ಂಸತ । | ಒಯ್ಯುತ್ತಿರುವ ಸೋಮನನ್ನು ಯಾಗಶಾಲೆಯ ಮುಂದೆ ನಿಂತು ಅಭಿಮಂತ್ರಿಸಲು. |

---

ಪಡೆಯುತ್ತಾನೆಯೋ; [ಅಂತಹ ಯಜ್ಞಾನುಷ್ಠಾನಮಾರ್ಗವನ್ನು ಹೊಂದಿದ್ದೇವೆ.]+ [ಸೂರ್ಯರೂಪನನ್ನಾಗಿ ಸೋಮನ ಸ್ತುತಿ] **ಮಿತ್ರಸ್ಯ** = ಮಿತ್ರರೂಪನಾದ ಸೂರ್ಯನಿಗೆ; **ನಮಃ** = ನಮಸ್ಕಾರ; **ವರುಣಸ್ಯ** = [ಕಿರಣಗಳಿಂದ ಲೋಕಗಳನ್ನು ಆವರಿಸುವ] ವರುಣರೂಪನಾದ ಸೂರ್ಯನಿಗೆ; [ನಮಃ = ನಮಸ್ಕಾರ]; **ಚಕ್ಷಸೇ** = ಸರ್ವಜ್ಞನಾದ [ಸೂರ್ಯನಿಗೆ;] [ನಮಃ = ನಮಸ್ಕಾರ], [ಎಲೈ! ಋತ್ವಿಜರೇ!] **ತತ್** = ಆ ಅಗ್ನಿಷ್ಟೋಮ ಯಾಗವನ್ನು; **ಋತಮ್** (ಕೃತ್ವಾ) = ಸತ್ಯವಾದುದನ್ನಾಗಿ [ಫಲಪ್ರದವಾದುದನ್ನಾಗಿ] ಮಾಡಿ **ಮಹಃ ದೇವಾಯ** = ಮಹಾತ್ಮನಾದ ದೇವನ (ಪ್ರೀತಿಗಾಗಿ); **ಸಪರ್ಯತ** = ಸೇವೆಯನ್ನು ಮಾಡಿರಿ. **ದೂರೇದೃಶೇ** = ದೂರದಲ್ಲಿ ಕಾಣುತ್ತಿರುವ; **ದೇವಜಾತಾಯ** = ದೇವನಾಗಿ ಹುಟ್ಟಿರುವ; **ಕೇತವೇ** = [ಹಗಲಿನ] ಚಿಹ್ನೆಯಾದ; **ದಿವಃ ಪುತ್ರಾಯ** = ದೇವಲೋಕಕ್ಕೆ ಪುತ್ರನಂತೆ ಪ್ರಿಯನಾದ; **ಸೂರ್ಯಾಯ** = ಸೂರ್ಯನ [ಪ್ರೀತಿಗಾಗಿ]; **ಶಂಸತ**= ಸ್ತುತಿಸಿರಿ.

---

ದೂರದಲ್ಲಿಡಬಹುದು. ಯಜಮಾನನು ಈ ಯಜ್ಞಾನುಷ್ಠಾನದಿಂದ ದ್ರವ್ಯವನ್ನೂ ಹೊಂದುತ್ತಾನೆ. ಇಂತಹ ಒಳ್ಳೆಯ ಮಾರ್ಗವನ್ನು ನಾವು ಹೊಂದಿರುತ್ತೇವೆ.

[ಸೋಮನನ್ನು ಮಿತ್ರನನ್ನಾಗಿಯೂ ವರುಣನನ್ನಾಗಿಯೂ ಸ್ತುತಿಸಿರುವಂತೆ ಮುಂದೆ

ವರುಣಸ್ಯ ಸ್ಕಂಭನಮಸಿ ವರುಣಸ್ಯ ಸ್ಕಂಭಸರ್ಜನ

ಮಸ್ಯುನ್ಮುಕ್ತೋ ವರುಣಸ್ಯ ಪಾಶಃ ॥ ೯-17 ॥

[ಮಿತ್ರಸ್ಯ ತ್ರಯೋವಿಗ್‌ಂಶತಿಶ್ಚ । ]

---

ವರುಣಸ್ಯ । ಸ್ಕಂಭನಮ್ । ಅಸಿ । ವರುಣಸ್ಯ । ಸ್ಕಂಭಸರ್ಜನಮಿತಿ ಸ್ಕಂಭ-ಸರ್ಜನಮ್।

ಅಸಿ । ಉನ್ಮುಕ್ತ ಇತ್ಯುತ್-ಮುಕ್ತಃ । ವರುಣಸ್ಯ । ಪಾಶಃ ॥ ೯ ॥

---

| ಮಂತ್ರ | ವಿನಿಯೋಗ (ಬೌಧಾಯನ) |
|---|---|
| ವರುಣಸ್ಯ...........ಅಸಿ । | ಯಾಗಶಾಲೆಯ ಮುಂದೆ ಶಕಟವನ್ನು ನಿಲ್ಲಿಸಲು. ಶಮ್ಯೆಯನ್ನು ತೆಗೆದು ಹಾಕಲು (ಉನ್ಮೋಚನ) —ಆಪಸ್ತಂಬ |
| ವರುಣಸ್ಯ......ಸರ್ಜನಮಸಿ । | ಶಮ್ಯೆಯನ್ನು ತೆಗೆದುಹಾಕಲು —ಬೌಧಾಯನ ಯೋಕ್ತ್ರವನ್ನು ತೆಗೆದುಹಾಕಲು —ಆಪಸ್ತಂಬ |
| ಉನ್ಮುಕ್ತೋ..........ಪಾಶಃ । | ಯೋಕ್ತ್ರವನ್ನು ತೆಗೆದು ಹಾಕಲು —ಬೌಧಾಯನ ಪಾಶವನ್ನು ಬಿಚ್ಚಿ ಹಾಕಲು —ಆಪಸ್ತಂಬ |

---

+[ಎಲೈ! ಶಮ್ಯೆಯೇ! ನೀನು] ವರುಣಸ್ಯ = ತಡೆಯಬೇಕಾದ ಎತ್ತಿನ; ಸ್ಕಂಭನಮ್ ಅಸಿ = ತಡೆಯಾಗಿದ್ದೀಯೆ. [ಈಗ ನಿನ್ನನ್ನು ತೆಗೆದು ಹಾಕುತ್ತೇನೆ] + [ಎಲೈ! ಯೋಕ್ತ್ರವೇ! ನೀನು] ವರುಣಸ್ಯ = ತಡೆಯಬೇಕಾದ ಎತ್ತಿನ; ಸ್ಕಂಭಸರ್ಜನಮ್ ಅಸಿ = ತಡೆಯನ್ನುಂಟು ಮಾಡುವವನಾಗಿರುವೆ. [ಈಗ ನಿನ್ನನ್ನು ಬಿಚ್ಚುತ್ತೇನೆ] +ವರುಣಸ್ಯ ಪಾಶಃ = ಎತ್ತನ್ನು ಎಳೆಯಲು ಉಪಯೋಗಿಸುವ ಹಗ್ಗವು; ಉನ್ಮುಕ್ತಃ = ಬಿಚ್ಚಲ್ಪಟ್ಟಿದೆ;

---

ಸೂರ್ಯರೂಪವನನ್ನಾಗಿ ಸ್ತುತಿಸಲಾಗಿದೆ.]

ಲೋಕಗಳಿಗೆ ಮಿತ್ರನೂ, ಕಿರಣಗಳಿಂದ ವಿಶ್ವವನ್ನು ಆವರಿಸುವುದರಿಂದ ವರುಣನೂ ಆಗಿರುವ, ಸರ್ವಜ್ಞನಾದ ಸೂರ್ಯನಿಗೆ ಸಮಸ್ಕರಿಸುತ್ತೇವೆ. ಎಲೈ! ಋತ್ವಿಜರೇ! ನೀವು

ಈ ಅಗ್ನಿಷ್ಟೋಮಯಾಗವನ್ನು ಫಲಪ್ರದವಾಗುವಂತೆ ಮಾಡಿ ಮಹಾತ್ಮನಾದ ಸೂರ್ಯದೇವನ ಸೇವೆಯನ್ನು ಮಾಡಿರಿ. ದೂರದಲ್ಲಿ ಕಾಣುತ್ತಿರುವ ಈ ಸೂರ್ಯನು ದೇವತೆಯಾಗಿ ಹುಟ್ಟಿರುತ್ತಾನೆ. ಹಗಲಿಗೆ ಲಕ್ಷಣವಾಗಿರುತ್ತಾನೆ. ದೇವಲೋಕದವರು ಪುತ್ರನಂತೆ ಈ ಸೂರ್ಯನನ್ನು ಪ್ರೀತಿಸುತ್ತಾರೆ. ಇಂತಹ ಸೂರ್ಯದೇವನ ಪ್ರೀತಿಗಾಗಿ ಸ್ತುತಿಸಿರಿ.

ಎಲೈ ಶಮ್ಯೆಯೇ! ನೀನು ಎತ್ತುಗಳನ್ನು ಸರಿಯಾದ ದಾರಿಯಲ್ಲಿ ಹೋಗುವಂತೆ ತಡೆ ಹಿಡಿದು ನಡೆಸಿರುತ್ತಿ. ನಿನ್ನನ್ನು ತೆಗೆಯುವೆನು.

ಎಲೈ! ಯೋಕ್ತ್ರವೇ! ನೀನೂ ಎತ್ತನ್ನು ಸರಿಯಾದ ದಾರಿಯಲ್ಲಿ ಹೋಗುವಂತೆ ತಡೆ ಹಿಡಿದು ನಡೆಸಿರುವೆ. ನಿನ್ನನ್ನೂ ತೆಗೆಯುವೆನು.

ಎತ್ತನ್ನು ಎಳೆದು ಹತೋಟಿಯಲ್ಲಿಡುವ ಹಗ್ಗವು ಬಿಚ್ಚಲ್ಪಟ್ಟಿತು. [ನಿಮ್ಮಗಳ ಕೆಲಸವು ಸಫಲವಾಗಿದೆ.]

## ವಿನಿಯೋಗ ಸಂಗ್ರಹ

ಪ್ರಚ್ಯ[1] ಪ್ರಾಗ್ವಂಶಗಮನಂ [2]ಶ್ಯೇನೋಽಧ್ವರ್ಯುಸ್ತು ಮಂತ್ರಯೇತ್ ।
[3]ಅಪ್ರತಿಕ್ರಮ್ಯ ರಾಜಾನಂ ನಮ[4] ಏನಂ ಪ್ರತೀಕ್ಷತೇ ॥
ವರುತ್ರಯೇಣ[5, 6, 7]ಶಮ್ಯಾದೀನ್ ಮುಂಚೇತ್ ಸಪ್ತಾತ್ರ ಮಂತ್ರಕಾಃ ।

ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ ಆಪಸ್ತಂಬ - 7
ಬೌಧಾಯನ - 6

### ಅನುವಾಕದ ವಿಶೇಷವಿಷಯಗಳು

#### ಅ) ಭ.ಭಾ.ಭಾಷ್ಯ

**ಮಂತ್ರಸಂಖ್ಯೆ**

೧) ಪ್ರಚ್ಯವಸ್ವ.....ದಘಾತ್ । ಭುವಃ ಪತೇ = ಭುವನಸ್ಯ ಪತೇ = ಲೋಕಕ್ಕೆ ಒಡೆಯನಾದ ಸೋಮನೇ! ಪರಿಪರೀ = ದಾರಿಯಲ್ಲಿ ತಡೆದು ದೋಚುವವನು [ಆತನೇ

ವಿಶ್ವಾವಸು.]; ಪರಿಪಂಥಿನಃ = ವಿರೋಧಿಗಳು; ವೃಕಾಃ = ಬಲಾತ್ಕಾರದಿಂದ ಎತ್ತಿಕೊಂಡು ಹೋಗುವವರು; ಮಾ ಆದಭೂತ್ = ವಶಪಡಿಸಿಕೊಳ್ಳದಿರಲಿ; ವಿಶ್ವಾವಸುವು ದಾರಿಯಲ್ಲಿ ತಡೆದು ನಿನ್ನನ್ನು ವಶಪಡಿಸಿಕೊಳ್ಳದಿರಲಿ. ಬೇರೆಯ ವೈರಿಗಳೂ ನಿನ್ನನ್ನು ತಿಳಿಯದಿರಲಿ.

ಆ.೨) ಶ್ಯೇನೋ.......ಅಸಿ । ಸ್ವಸ್ತ್ಯಯನೀ = ನಶ್ವರವಲ್ಲದ ಆಶ್ರಯವಾಗಿರುವವನು; ಯಜಮಾನನಿಗೆ ಮಂಗಲವನ್ನುಂಟುಮಾಡುವವನು.

ಆ.೩) ಅಪಿ......ವಸು । ಪಂಥಾಮಗಸ್ಮಹಿ = ಸೋಮ! ತ್ವತ್ಪ್ರಸಾದೇನ = ಸೋಮನೇ! ನಿನ್ನ ಅನುಗ್ರಹದಿಂದ ಸ್ವಸ್ತಿಕರವಾದ ಮಾರ್ಗವನ್ನು ಹೊಂದಿದೆವು.

ಆ.೫) ನಮೋ ......ಶಗ್ಂಸತ । ಮಿತ್ರಶಬ್ದವಾಚ್ಯನೂ, ವರುಣಶಬ್ದವಾಚ್ಯನೂ ಆಗಿರುವ ಸೋಮನ ನೇತ್ರಸ್ಥಾನೀಯನಾದ ಸೂರ್ಯನಿಗೆ ನಮಸ್ಕಾರ. ಮಹಾದೇವನಾದ ಸೂರ್ಯನ ಪ್ರೀತಿಗಾಗಿ ಯಜ್ಞರೂಪವಾದ ಪೂಜೆಯನ್ನೂ ಮಾಡಿರಿ. ದೂರದಲ್ಲಿದ್ದು ಎಲ್ಲವನ್ನೂ ನೋಡುವ, ಅಥವಾ ದೂರದಲ್ಲಿ ಕಾಣಿಸುತ್ತಿರುವ, ದೇವತೆಗಳ ಉತ್ಪತ್ತಿಸ್ಥಾನನಾದ, ರಶ್ಮಿಮಂತನಾದ, ಪ್ರಜ್ಞಾವಂತನಾದ, ದೀಪ್ತಿಗೆ ಪುತ್ರಸ್ಥಾನನಾದ, ದ್ಯುಲೋಕದ ದುಃಖಗಳನ್ನು ಹೋಗಲಾಡಿಸುವ, ವಿಶ್ವಪ್ರೇರಕನಾದ ಸೂರ್ಯನನ್ನು ಸ್ತುತಿಸಿರಿ. ಸೋಮನ ನೇತ್ರರೂಪನಾದ ಸೂರ್ಯನ ಪೂಜೆಯಿಂದ ಸೋಮನಿಗೂ ಪೂಜೆಯಾದಂತೆ. ಆದುದರಿಂದ ಈ ಮಂತ್ರವು ಸೋಮೋಪಸ್ಥಾನದಲ್ಲಿ ಅಸಂಗತವಲ್ಲ.

೫) ವರುಣಸ್ಯ......ಅಸಿ । ಎಲೈ ಈಷೆಯೇ! ನೀನು ಎತ್ತನ್ನು (ಬಂಡಿಯನ್ನು) ತಡೆಯುವೆ.

ಆ) ಛಂದಸ್ಸು

೧) ಪ್ರ ಚ್ಯವಸ್ವ........ದಭೂತ್ । ಷಟ್ಪದಾ ಅತಿಜಗತೀ

೨) ಶ್ಯೇನೋ.......ಅಸಿ । ಅನುಷ್ಟುಪ್ (ಮೂರನೆಯ ಪಾದ ಚಿಕ್ಕದು, ನಾಲ್ಕನೆಯ ಪಾದ ದೊಡ್ಡದು)

೩) ಅಪಿ........ವಸು । ಅನುಷ್ಟುಪ್

೪) ನಮೋ......ಶಗ್ಂಸತ ।      ಜಗತೀ

ಭ.ಭಾ.ಭಾ.

ಪ್ರಚ್ಯವಸ್ವ......ಸಗ್ಂಸ್ಕೃತಮ್ ।   ನವಪದಾ ಧೃತಿಃ

ಯಜಮಾನಸ್ಯ.......ವಸು ।      ಪಂಚಪದಾ ಪಂಕ್ತಿಃ

---

## ॥ ದಶಮೋಽನುವಾಕಃ ॥

ಅಗ್ನೇರಾತಿಥ್ಯಮಸಿ ವಿಷ್ಣವೇ ತ್ವಾ ಸೋಮಸ್ಯಾತಿಥ್ಯಮಸಿ

ಅಗ್ನೇಃ । ಆತಿಥ್ಯಮ್ । ಅಸಿ। ವಿಷ್ಣವೇ । ತ್ವಾ । ಸೋಮಸ್ಯ । ಆತಿಥ್ಯಮ್ । ಅಸಿ।

ಒಂಬತ್ತನೆಯ ಅನುವಾಕದಲ್ಲಿ ಸೋಮನನ್ನು ಯಜ್ಞಶಾಲೆಗೆ ತರುವುದನ್ನು ಹೇಳಲಾಯಿತು. ಈ ಹತ್ತನೆಯ ಅನುವಾಕದಲ್ಲಿ ಸಮೀಪಕ್ಕೆ ಬಂದಿರುವ ಅತಿಥಿಯಾಗಿರುವ ಸೋಮನಿಗೆ ಆತಿಥ್ಯರೂಪವಾದ ಆತಿಥ್ಯೇಷ್ಟಿಯು ಹೇಳಲ್ಪಡುತ್ತದೆ.

| ಮಂತ್ರ | ವಿನಿಯೋಗ |
|---|---|
| ಅಗ್ನೇರಾತಿಥ್ಯಮಸಿ ವಿಷ್ಣವೇ ತ್ವಾ। | ಪ್ರಧಾನದೇವತೆಯಾದ ವಿಷ್ಣುವಿಗೆ ಹವಿರ್ನಿರ್ವಾಪ ಮಾಡಲು [ಐದು ಬಾರಿ] |

[ಇಲ್ಲಿ 'ದೇವಸ್ಯ ತ್ವಾ ಸವಿತುಃ ಪ್ರಸವೇಽಶ್ವಿನೋರ್ಬಾಹುಭ್ಯಾಂ ಪೂಷ್ಣೋ ಹಸ್ತಾಭ್ಯಾಮಗ್ನೇರಾತಿಥ್ಯಮಸಿ ವಿಷ್ಣವೇ ತ್ವಾ ಜುಷ್ಟಂ ನಿರ್ವಪಾಮಿ' ಎಂದು ಪ್ರಕೃತಿಯಂತೆ ಹೇಳಬೇಕು.]

ಸೋಮಸ್ಯಾತಿಥ್ಯಮಸಿ ವಿಷ್ಣವೇ ತ್ವಾ । [ದೇವಸ್ಯ..ಹಸ್ತಾಭ್ಯಾಂ..ನಿರ್ವಪಾಮಿ] ಹಿಂದಿನಂತೆ

---

[ಎಲೈ ಹವಿಸ್ಸೇ! ನೀನು] ಅಗ್ನೇಃ = [ವಿಷ್ಣುಶಬ್ದವಾಚ್ಯನಾದ ಸೋಮರಾಜನ ಅನುಚರನಾದ] ಅಗ್ನಿಯ; ಆತಿಥ್ಯಮ್ = ಅತಿಥಿಸತ್ಕಾರರೂಪಕರ್ಮವಾಗಿ; ಅಸಿ = ಇರುವೆ; ತ್ವಾ = ನಿನ್ನನ್ನು; ವಿಷ್ಣವೇ = ವಿಷ್ಣುಶಬ್ದವಾಚ್ಯನಾದ (ಸೋಮದೇವನಿಗಾಗಿ) ಜುಷ್ಟಮ್ = ಇಷ್ಟವಾದುದನ್ನಾಗಿ [ಇದನ್ನು ಐದು ಮಂತ್ರಗಳಲ್ಲಿಯೂ ಸೇರಿಸಬೇಕು.] (ನಿರ್ವಪಾಮಿ = ಹಾಕುತ್ತೇನೆ). +ಸೋಮಸ್ಯ = [ಪ್ರಧಾನನಾದ] ಸೋಮರಾಜನ; ಆತಿಥ್ಯಮ್ ಅಸಿ = ಸತ್ಕಾರರೂಪನಾಗಿರುವೆ.

---

[ರಾಜನು ಆಗಮಿಸಿದಾಗ ಆತನ ಅನುಚರರಿಗೂ ಸತ್ಕಾರ ಮಾಡುವಂತೆಯೇ ಸೋಮರಾಜನ ಅನುಚರರಾದ ಅಗ್ನ್ಯಾದಿಗಳಿಗೂ ಸತ್ಕಾರವನ್ನು ಮಾಡಬೇಕು. ಇಲ್ಲಿ

**ವಿಷ್ಣವೇ ತ್ವಾತಿಥೇರಾತಿಥ್ಯಮಸಿ ವಿಷ್ಣವೇ ತ್ವಾಗ್ನಯೇ ತ್ವಾ ರಾಯಸ್ಪೋಷದಾವ್ನ್ನೇ ವಿಷ್ಣವೇ ತ್ವಾ**

---

ವಿಷ್ಣವೇ । ತ್ವಾ । ಅತಿಥೇಃ । ಆತಿಥ್ಯಮ್ । ಅಸಿ । ವಿಷ್ಣವೇ । ತ್ವಾ । ಅಗ್ನಯೇ। ತ್ವಾ । ರಾಯಸ್ಪೋಷದಾವ್ನ್ನ ಇತಿ ರಾಯಸ್ಪೋಷ-ದಾವ್ನ್ನೇ । ವಿಷ್ಣವೇ । ತ್ವಾ ।

---

| ಮಂತ್ರ | ವಿನಿಯೋಗ |
|---|---|
| ಅತಿಥೇ...........ತ್ವಾ । [ದೇವಸ್ಯ.......ಹಸ್ತಾಭ್ಯಾಂ......ನಿರ್ವಪಾಮಿ] | ಹಿಂದಿನಂತೆ |
| ಅಗ್ನಯೇ.........ತ್ವಾ । [ದೇವಸ್ಯ.......ಹಸ್ತಾಭ್ಯಾಂ......ನಿರ್ವಪಾಮಿ] | ಹಿಂದಿನಂತೆ |

---

ತ್ವಾ = ನಿನ್ನನ್ನು; ವಿಷ್ಣವೇ ನಿರ್ವಪಾಮಿ = ವಿಷ್ಣುಶಬ್ದವಾಚ್ಯನಾದ ಸೋಮನಿಗಾಗಿ ಹಾಕುತ್ತೇನೆ. ಅತಿಥೇಃ= [ಸದಾ ಸಂಚರಿಸುವ] ಅತಿಥಿದೇವನ; ಆತಿಥ್ಯಮ್ ಅಸಿ = ಸತ್ಕಾರರೂಪನಾಗಿರುವೆ. ವಿಷ್ಣವೇ ತ್ವಾ ನಿರ್ವಪಾಮಿ = ವಿಷ್ಣುಶಬ್ದವಾಚ್ಯನಾದ ಸೋಮನಿಗಾಗಿ ಬೇರೆ ಮಾಡಿ ಹಾಕುತ್ತೇನೆ; +ರಾಯಸ್ಪೋಷದಾವ್ನ್ನೇ = ಧನಸಮೃದ್ಧಿಯನ್ನು ಕೊಡುವ; ಅಗ್ನಯೇ = ಅಗ್ನಿದೇವನಿಗೂ; ತ್ವಾ [ನಿರ್ವಪಾಮಿ] = ನಿನ್ನನ್ನು ಬೇರೆ ಮಾಡಿ ಹಾಕುತ್ತೇನೆ. ವಿಷ್ಣವೇ ತ್ವಾ ನಿರ್ವಪಾಮಿ = ವಿಷ್ಣುಶಬ್ದವಾಚ್ಯನಾದ ಸೋಮನಿಗಾಗಿ ಬೇರೆ ಮಾಡಿ ಹಾಕುತ್ತೇನೆ.

---

'ಅಗ್ನೇರಾತಿಥ್ಯಮಸಿ' ಎಂದು ಹೇಳುವುದೇ ಅಗ್ನ್ಯಾದಿಗಳ ಸತ್ಕಾರ. ಹಾಗೆಯೇ ಗಾಯತ್ರ್ಯಾದಿ ಛಂದಸ್ಸುಗಳ ಸತ್ಕಾರವೆಂದು ಈ ಮಂತ್ರಗಳ ಬ್ರಾಹ್ಮಣದಲ್ಲಿ ವಿವರಣೆಯಿದೆ.]

ಎಲೈ! ಹವಿಸ್ಸೇ! ನೀನು ಸೋಮದೇವನ ಅನುಚರನಾದ ಅಗ್ನಿದೇವನ ಸತ್ಕಾರ-ಕರ್ಮರೂಪನಾಗಿರುವೆ. ವಿಷ್ಣುವೆಂದು ಹೇಳಲ್ಪಡುವ ಸೋಮದೇವನಿಗಾಗಿ ಪ್ರಿಯವಾಗುವಂತೆ ನಿನ್ನನ್ನು ನಿರ್ವಾಪ ಮಾಡುತ್ತೇನೆ.

ಶ್ಯೇನಾಯ ತ್ವಾ ಸೋಮಭೃತೇ ವಿಷ್ಣವೇ ತ್ವಾ ಯಾ ತೇ

ಧಾಮಾನಿ ಹವಿಷಾ ಯಜಂತಿ ತಾ ತೇ ವಿಶ್ವಾ

---

ಶ್ಯೇನಾಯ । ತ್ವಾ । ಸೋಮಭೃತ ಇತಿ ಸೋಮ-ಭೃತೇ । ವಿಷ್ಣವೇ । ತ್ವಾ ।

ಯಾ । ತೇ । ಧಾಮಾನಿ । ಹವಿಷಾ । ಯಜಂತಿ । ತಾ । ತೇ । ವಿಶ್ವಾ ।

---

ಮಂತ್ರ ವಿನಿಯೋಗ

ಶ್ಯೇನಾಯ......ತ್ವಾ । [ದೇವಸ್ಯ.......ಹಸ್ತಾಭ್ಯಾಂ.....ನಿರ್ವಪಾಮಿ] ಹಿಂದಿನಂತೆ

೧) ಯಾ ತೇ.....ಯಜ್ಞಮ್। ಯಜಮಾನನು ಸೋಮನನ್ನು ತೆಗೆದುಕೊಳ್ಳಲು ಬೌಧಾಯನ

---

+ಸೋಮಭೃತೇ = ಸೋಮನನ್ನು ಪೋಷಿಸುವ; ಶ್ಯೇನಾಯ = ಶ್ಯೇನದೇವನಿಗಾಗಿ; ತ್ವಾ [ನಿರ್ವಪಾಮಿ] = ನಿನ್ನನ್ನು ಬೇರೆ ಮಾಡಿ ಹಾಕುತ್ತೇನೆ; ವಿಷ್ಣವೇ ತ್ವಾ ನಿರ್ವಪಾಮಿ = ವಿಷ್ಣುಶಬ್ದವಾಚ್ಯನಾದ ಸೋಮನಿಗಾಗಿ ಪ್ರತ್ಯೇಕ ಮಾಡಿ ಹಾಕುತ್ತೇನೆ. +ಸೋಮ = ಹೇ! ಸೋಮದೇವನೇ! [ನೀನು] ಗಯಸ್ಫಾನಃ = ಗೃಹಪೋಷಕನೂ; ಪ್ರತರಣಃ = [ಯಜ್ಞದ] ಪಾರವನ್ನು ಮುಟ್ಟುವಂತೆ ದಾಟಿಸತಕ್ಕವನು. [ಶ್ರೇಷ್ಠವಾದ ಯಜ್ಞವನ್ನು ನಾವು ಮುಗಿಸುವಂತೆ ಮಾಡತಕ್ಕವನು.]; ಸುವೀರಃ = ಒಳ್ಳೆಯ ಮಕ್ಕಳು ಮತ್ತು ಮೊಮ್ಮಕ್ಕಳನ್ನು ಕೊಡುವವನೂ; ಅವೀರಹಾ = ಆ ಮಕ್ಕಳು ಮೊಮ್ಮಕ್ಕಳನ್ನು ಹಾನಿಗೊಳಿಸದೆ ಕಾಪಾಡುವವನೂ [ಆಗಿರುವೆ]. [ಎಲೈ ಸೋಮನೇ!] ತೇ = ನಿನ್ನ; ಯಾ ಧಾಮಾನಿ = ಯಾವ ಯಾವ ಸ್ಥಾನಗಳಲ್ಲಿ [ಪ್ರಾತಃಸವನಾದಿಗಳಲ್ಲಿ]; ಹವಿಷಾ = ಹವಿಸ್ಸುಗಳಿಂದ; ಯಜ್ಞಮ್ = ಯಜ್ಞಸ್ವರೂಪನಾದ ವಿಷ್ಣುವನ್ನು ಉದ್ದೇಶಿಸಿ; ಯಜಂತಿ = ಯಾಗ ಮಾಡುತ್ತಾರೆಯೋ; [ಯಜ್ಞಮ್ = ಯಜ್ಞವನ್ನುದ್ದೇಶಿಸಿ] ತೇ = ನಿನ್ನ; ತಾ ವಿಶ್ವಾ = ಆ ಎಲ್ಲಾ ಸ್ಥಾನಗಳನ್ನೂ;

---

ಸೋಮರಾಜನಿಗೆ ಆತಿಥ್ಯರೂಪವಾಗಿರುವೆ. ನಿನ್ನನ್ನು ವಿಷ್ಣುಶಬ್ದವಾಚ್ಯನಾದ ಸೋಮನಿಗೆ ಪ್ರಿಯವಾಗುವಂತೆ ಪ್ರತ್ಯೇಕಿಸಿ ಹಾಕುತ್ತೇನೆ. ಯಾವಾಗಲೂ ಸಂಚರಿಸುವ ಅತಿಥಿದೇವನ ಸತ್ಕಾರರೂಪನಾದ ನಿನ್ನನ್ನು ವಿಷ್ಣುರೂಪಸೋಮನಿಗೆ ಇಷ್ಟವಾಗುವಂತೆ ಬೇರೆ ಮಾಡಿ

**ಪರಿಭೂರಸ್ತು ಯಜ್ಞಂ ಗಯಸ್ಫಾನಃ ಪ್ರತರಣಃ**
**ಸುವೀರೋಽವೀರಹಾ ಪ್ರಚರಾ ಸೋಮ ದುರ್ಯ್ಯಾನದಿತ್ಯಾಃ**

---

ಪರಿಭೂರಿತಿ ಪರಿ-ಭೂಃ । ಅಸ್ತು । ಯಜ್ಞಮ್ ।* ಗಯಸ್ಫಾನ ಇತಿ ಗಯ-ಸ್ಫಾನಃ । ಪ್ರತರಣ ಇತಿ ಪ್ರ-ತರಣಃ । ಸುವೀರ ಇತಿ ಸು-ವೀರಃ । ಅವೀರಹೇತ್ಯವೀರ-ಹಾ । ಪ್ರೇತಿ । ಚರ । ಸೋಮ । ದುರ್ಯ್ಯಾನ್* । ಅದಿತ್ಯಾಃ ।

---

| ಮಂತ್ರ | ವಿನಿಯೋಗ (ಬೌಧಾಯನ) |
| --- | --- |
| ೨) ಗಯಸ್ಫಾನಃ....ದುರ್ಯ್ಯಾನ್ । | ಸೋಮನ ಶಾಲಾಪ್ರವೇಶವನ್ನು ಮಾಡಿಸಲು |
| ಯಾ ತೇ.........ದುರ್ಯ್ಯಾನ್ । | ಸೋಮನೊಡನೆ ಶಾಲಾಪ್ರವೇಶವನ್ನು ಮಾಡಲು. —ಆಪಸ್ತಂಬ. |

---

**ಪರಿಭೂಃ ಅಸ್ತು** = ಸುತ್ತಲೂ ಹೊಂದಿದವನಾಗು. [ಸೋಮ = ಎಲೈ! ಸೋಮದೇವನೇ] **ದುರ್ಯಾನ್** =[ಪ್ರಾಚೀನವಂಶರೂಪವಾದ] ಮನೆಯನ್ನು; **ಪ್ರಚರ** = ಹೊಂದು. +[ಎಲೈ! ಕೃಷ್ಣಾಜಿನವೇ! ನೀನು] **ಅದಿತ್ಯಾಃ** = ಭೂಮಿಯ;

---

ಹಾಕುತ್ತೇನೆ. ❁ಧನಸಮೃದ್ಧಿಯನ್ನು ಕೊಡುವ ಅಗ್ನಿದೇವನ ಆತಿಥ್ಯರೂಪನಾದ ನಿನ್ನನ್ನು ಆ ಅಗ್ನಿದೇವನಿಗೂ, ವಿಷ್ಣುರೂಪಸೋಮನಿಗೂ ನಿರ್ವಾಪ ಮಾಡುತ್ತೇನೆ. [ಈ ನಾಲ್ಕನೆಯ ಮಂತ್ರದಲ್ಲಿ 'ಆತಿಥ್ಯ'ವೆಂಬ ಪದವು ಇಲ್ಲವಾದುದರಿಂದ ಅಗ್ನಿದೇವನಿಗೂ ನಿನ್ನನ್ನು ನಿರ್ವಾಪಮಾಡುತ್ತೇನೆ. ಸೋಮದೇವನಿಗೂ ನಿನ್ನನ್ನು ನಿರ್ವಾಪ ಮಾಡುತ್ತೇನೆ ಎಂದೂ ವಿವರಿಸಬಹುದು] ❁ಸೋಮನನ್ನು ಪೋಷಿಸುವ ಪ್ರಶಂಸಾರ್ಹನಾದ ಶ್ಯೇನದೇವನಿಗೆ ನಿನ್ನನ್ನು ನಿರ್ವಾಪ ಮಾಡುತ್ತೇನೆ. ವಿಷ್ಣುರೂಪ ಸೋಮದೇವನಿಗೂ ಇಷ್ಟವಾಗುವಂತೆ ನಿನ್ನನ್ನು ಬೇರೆ ಮಾಡಿ ಶೂರ್ಪದಲ್ಲಿ ಹಾಕುತ್ತೇನೆ.

# ಸದೋಽಸ್ಯದಿತ್ಯಾಃ ಸದ ಆ [ಆ (೧)ಸೀದ] ಸೀದ
# ವರುಣೋಽಸಿ ಧೃತವ್ರತೋ ವಾರುಣಮಸಿ ಶಂಯೋರ್ದೇವಾ

---

ಸದಃ । ಅಸಿ । ಅದಿತ್ಯಾಃ । ಸದಃ । ಏತಿ । (೧) ಸೀದ । ವರುಣಃ । ಅಸಿ । ಧೃತವ್ರತ ಇತಿ ಧೃತ-ವ್ರತಃ* । ವಾರುಣಮ್ । ಅಸಿ *। ಶಂಯೋರಿತಿ ಶಮ್-ಯೋಃ ।

---

| ಮಂತ್ರ | ವಿನಿಯೋಗ |
|---|---|
| ಅದಿತ್ಯಾಃ ಸದೋಽಸಿ । | ಆಹವನೀಯದ ದಕ್ಷಿಣದಲ್ಲಿರುವ ಆಸಂದಿ (ಕುರ್ಚಿ) ಯಲ್ಲಿ ಕೃಷ್ಣಾಜಿನವನ್ನು ಹಾಸಲು. |
| ಅದಿತ್ಯಾಃ.....ಸೀದ । | ಕೃಷ್ಣಾಜಿನದಲ್ಲಿ ಸೋಮನನ್ನು ಇಡಲು. |
| ೧. ವರುಣೋಽಸಿ ಧೃತವ್ರತಃ। | ಸೋಮಾಭಿಮಂತ್ರಣವನ್ನು ಮಾಡಲು |
| ೨. ವಾರುಣಮ್....ಭಿತ್ಸ್ವ ಹಿ। | ಸೋಮವನ್ನು ಬಟ್ಟೆಯಿಂದ ಕಟ್ಟಲು(ಮುಚ್ಚಲು)-ಆ. |
| 1. ವರುಣೋಽಸಿ....ಅಸಿ । | ಸೋಮೋಪಸ್ಥಾನವನ್ನು ಮಾಡಲು |

---

ಸದಃ ಅಸಿ = ಆಶ್ರಯಸ್ಥಾನವಾಗಿರುವೆ. + [ಎಲೈ! ಸೋಮರಾಜನೇ ನೀನು] ಅದಿತ್ಯಾಃ ಸದಃ= ಭೂಮಿಯ ಆಶ್ರಯಸ್ಥಾನವಾದ ಈ ಕೃಷ್ಣಾಜಿನವನ್ನು; ಆಸೀದ = ಹೊಂದು. +[ಎಲೈ! ಸೋಮರಾಜನೇ!] [ನೀನು] ವರುಣಃ = ವರುಣಪಾಶನಿವಾರಕನೂ; ಧೃತವ್ರತಃ = [ಯಜ್ಞವೆಂಬ] ವ್ರತವನ್ನು ಧರಿಸಿದವನೂ; ಅಸಿ = ಆಗಿರುವೆ. +[ಎಲೈ! ಸೋಮನೇ!] [ನೀನು]; ವಾರುಣಮ್ = [ಕಟ್ಟಲ್ಪಟ್ಟಿರುವುದರಿಂದ] ವರುಣಸಂಬಂಧಿಯೂ; ಅಸಿ = ಆಗಿರುವೆ. + ಶಂಯೋಃ = ಸುಖಯುಕ್ತವಾದ;

---

ಎಲೈ! ಸೋಮನೇ! ನೀನು ಮನೆಗಳನ್ನು ವೃದ್ಧಿಗೊಳಿಸುವವನು. ಯಾಗವನ್ನು ಸರಿಯಾದ ರೀತಿಯಲ್ಲಿ ನಾವು ಪೂರ್ಣಗೊಳಿಸುವಂತೆ ಮಾಡುವವನು. ಒಳ್ಳೆಯ ಮಕ್ಕಳು-ಮೊಮ್ಮಕ್ಕಳನ್ನು ಕೊಡುವವನು. ಆ ಪ್ರಜೆಗಳನ್ನು ಹಾನಿಗೊಳಿಸದೆ ರಕ್ಷಿಸುವವನು. ಎಲೈ ಸೋಮನೇ! ಯಾವ ಯಾವ ನಿನ್ನ ಸ್ಥಾನಗಳಲ್ಲಿ ಪ್ರಾತಃಸವನಾದಿಗಳಲ್ಲಿ ಹವಿಸ್ಸುಗಳಿಂದ ದೇವತೆಗಳಿಗೆ ಯಾಗವನ್ನು ಮಾಡುತ್ತಾರೆಯೋ, ಆ ಎಲ್ಲ ಸ್ಥಾನಗಳನ್ನು ಯಜ್ಞಕ್ಕಾಗಿ

ನಾಗ್ಂ ಸಖ್ಯಾನ್ಮಾ ದೇವಾನಾಮಪಸಶ್ಛಿತ್ಸ್ಮಹ್ಯಾಪತಯೇ ತ್ವಾ

---

ದೇವಾನಾಮ್ । ಸಖ್ಯಾತ್ *। ಮಾ । ದೇವಾನಾಮ್ । ಅಪಸಃ । ಛಿತ್ಸ್ಮಹಿ । ಆಪತಯ ಇತ್ಯಾ-ಪತಯೇ ।

---

| ಮಂತ್ರ | ವಿನಿಯೋಗ |
|---|---|
| 2. ಶಂಯೋಃ.........ಸಖ್ಯಾತ್ । | ಬಿದಿರಿನಲ್ಲಿ ಸೋಮನನ್ನು ಕಟ್ಟಲು |
| 3. ಮಾ........ಛಿತ್ಸ್ಮಹಿ । | ಸೋಮಪಾದಪ್ರಕ್ಷಾಲನವನ್ನು ಮಾಡಲು —ಬೌಧಾಯನ. |

---

ದೇವಾನಾಮ್ ಸಖ್ಯಾತ್ = [ನಿನ್ನ] ದೇವತೆಗಳ ಮೈತ್ರಿಯ ಕಾರಣದಿಂದ; ದೇವಾನಾಮಪಸಃ = ದೇವತೆಗಳಿಗೆ ಸಂಬಂಧಿಸಿದ ಕರ್ಮರೂಪವಾದ (ಯಾಗದ ದೆಸೆಯಿಂದ); ಮಾ ಛಿತ್ಸ್ಮಹಿ = ನಾವು ವಿಯುಕ್ತರಾಗುವುದು ಬೇಡ (ನಮಗೆ ಕರ್ಮವಿಚ್ಛಿತ್ತಿ ಯಾಗದಿರಲಿ.) + [ಎಲೈ ಆಜ್ಯವೇ!] ಆಪತಯೇ =[ನಿಃಶ್ವಾಸ – ಉಚ್ಛ್ವಾಸರೂಪವಾಗಿ] ದೇಹದ ಹೊರಕ್ಕೂ ಒಳಕ್ಕೂ ಸಂಚರಿಸುವ ಪ್ರಾಣಕ್ಕೋಸ್ಕರ; ತ್ವಾ = ನಿನ್ನನ್ನು;

---

ಹೊಂದು. ಪ್ರಾಚೀನವಂಶರೂಪವಾದ ನಿನ್ನ ಮನೆಗಳನ್ನು ಸೇರು.

ಎಲೈ! ಕೃಷ್ಣಾಜಿನವೇ! ನೀನು ಭೂಮಿಯ ಆಶ್ರಯಸ್ಥಾನವಾಗಿರುವೆ.

ಎಲೈ! ಸೋಮರಾಜನೇ! ನೀನು ಭೂಮಿಯ ಆಶ್ರಯಸ್ಥಾನವಾದ ಈ ಕೃಷ್ಣಾಜಿನವನ್ನು ಹೊಂದು.

ಎಲೈ! ಸೋಮರಾಜನೇ! ನೀನು ಪಾಶನಿವಾರಕನಾದುದರಿಂದ ವರುಣನಾಗಿದ್ದೀಯೆ. ಯಜ್ಞಸಾಧನವಾಗಿರುವುದರಿಂದ ಧೃತವ್ರತನೂ ಆಗಿರುವೆ. ವರುಣದೇವತಾ-ಸಂಬಂಧಿಯೂ ಆಗಿರುವೆ. ❖ಸುಖಮಿಶ್ರವಾದ ನಿನ್ನ ದೇವಮೈತ್ರಿಯ ಫಲವಾಗಿ ನಮಗೆ ದೇವಸಂಬಂಧಿಯಾದ ಯಜ್ಞಾದಿಕರ್ಮಗಳ ವಿಚ್ಛೇದವಾಗದಿರಲಿ. ದೇವತೆಗಳ ಅನುಗ್ರಹದಿಂದ ನಾವು ಯಾವಾಗಲೂ ಕರ್ಮನಿರತರಾಗಿರುವಂತಾಗಲಿ. ದೇವತೆಗಳ ಸಖ್ಯವು ಸುಖಕರವಾದದ್ದಾಗಿ ಎಂದೂ ಇರಲಿ. ಯಜ್ಞಕರ್ಮನಿಷ್ಠೆಯೂ ಇರಲಿ.

ಗೃಹ್ಣಾಮಿ ಪರಿಪತಯೇ ತ್ವಾ ಗೃಹ್ಣಾಮಿ ತನೂನಪ್ತ್ರೇ ತ್ವಾ ಗೃಹ್ಣಾಮಿ ಶಾಕ್ವರಾಯ ತ್ವಾ ಗೃಹ್ಣಾಮಿ ಶಕ್ಮನ್ನೋಜಿಷ್ಠಾಯ

---

ತ್ವಾ । ಗೃಹ್ಣಾಮಿ । ಪರಿಪತಯ ಇತಿ ಪರಿ-ಪತಯೇ । ತ್ವಾ । ಗೃಹ್ಣಾಮಿ । ತನೂನಪ್ತ್ರ ಇತಿ ತನೂ-ನಪ್ತ್ರೇ । ತ್ವಾ । ಗೃಹ್ಣಾಮಿ । ಶಾಕ್ವರಾಯ । ತ್ವಾ । ಗೃಹ್ಣಾಮಿ । ಶಕ್ಮನ್ । ಓಜಿಷ್ಠಾಯ ।

---

| ಮಂತ್ರ | ವಿನಿಯೋಗ |
|---|---|
| ಆಪತಯೇ....... ತ್ವಾ ಗೃಹ್ಣಾಮಿ । | ಧ್ರುವೆಯಲ್ಲಿರುವ ಆಜ್ಯವನ್ನು ಕಂಚಿನ |
| ಪರಿಪತಯೇ......ಗೃಹ್ಣಾಮಿ। | ಪಾತ್ರೆಯಲ್ಲಿ ಅಥವಾ ಚಮಸದಲ್ಲಿ |
| ತನೂನಪ್ತ್ರೇ........ಗೃಹ್ಣಾಮಿ । | ಹಾಕಲು [ ಈ ಆಜ್ಯಕ್ಕೆ 'ತಾನೂನಪ್ತ್ರ' |
| ಶಾಕ್ವರಾಯ.....ಗೃಹ್ಣಾಮಿ। | ಎಂದು ಹೆಸರು]* |
| ಶಕ್ಮನ್ನೋಜಿಷ್ಠಾಯ....ಗೃಹ್ಣಾಮಿ। | |

---

ಗೃಹ್ಣಾಮಿ = (ಪಾತ್ರದಲ್ಲಿ) ಹಾಕುತ್ತೇನೆ. ❖ ಪರಿಪತಯೇ=ಸುತ್ತಲೂ ನಾನಾ ವಿಷಯಗಳಲ್ಲಿ ಸಂಚರಿಸುವ ಮನಸ್ಸಿಗಾಗಿ; ತ್ವಾ =ನಿನ್ನನ್ನು; ಗೃಹ್ಣಾಮಿ = (ಪಾತ್ರದಲ್ಲಿ) ಸಂಗ್ರಹಿಸುತ್ತೇನೆ. ❖ತನೂನಪ್ತ್ರೇ = ಶರೀರವು ಬಿದ್ದು ಹೋಗದಂತೆ ರಕ್ಷಿಸುವ ಜಾಠರಾಗ್ನಿಗಾಗಿ; ತ್ವಾ =ನಿನ್ನನ್ನು; ಗೃಹ್ಣಾಮಿ = (ಪಾತ್ರೆಯಲ್ಲಿ) ಇಡುತ್ತೇನೆ; ❖ ಶಾಕ್ವರಾಯ = ಶಕ್ತಿಗೋಸ್ಕರ; ತ್ವಾ = ನಿನ್ನನ್ನು; ಗೃಹ್ಣಾಮಿ =(ಪಾತ್ರದಲ್ಲಿ) ಸುರಿಯುತ್ತೇನೆ; ❖ ಶಕ್ಮನ್= ಶಕ್ತಿವಂತರಲ್ಲಿರುವ; ಓಜಿಷ್ಠಾಯ = ಓಜಸ್ಸಿನ ( ಶರೀರದ ಎಂಟನೆಯ ಧಾತು) ಸಾರಕ್ಕಾಗಿ;

---

ಎಲೈ!ಆಜ್ಯವೇ!ಪ್ರಾಣಾದಿಗಳಿಗಾಗಿ ನಿನ್ನನ್ನು ಈ ಪಾತ್ರದಲ್ಲಿ ಸಂಗ್ರಹಿಸುತ್ತೇನೆ.

---

* ಮಂತ್ರದಲ್ಲಿ 'ತನೂನಪ್ತ' (ಜಾಠರಾಗ್ನಿ)ವಿಗೆ ಸಂಬಂಧಿಸಿದಂತೆ ಗ್ರಹಣ ಮಾಡುವುದರಿಂದ ಈ ಆಜ್ಯಕ್ಕೆ 'ತಾನೂನಪ್ತ್ರ' ಎನ್ನುತ್ತಾರೆ. 'ಯಜ್ಞವು ಮುಗಿಯುವವರೆಗೂ ಪರಸ್ಪರ ವಿರೋಧವಿಲ್ಲದಂತೆ ಹೊಂದಿಕೊಂಡು ಕೆಲಸ ಮಾಡುತ್ತೇವೆ' ಎಂದು ಋತ್ವಿಜರು ಶಪಥ ಮಾಡಬೇಕು.

## ತ್ವಾ ಗೃಹ್ಣಾಮ್ಯನಾಧೃಷ್ಟಮಸ್ಯನಾಧೃಷ್ಯಂ ದೇವಾನಾಮೋಜೋಽಭಿಶಸ್ತಿಪಾ ಅನಭಿಶಸ್ತೇನ್ಯಮನು

---

ತ್ವಾ । ಗೃಹ್ಣಾಮಿ । ಅನಾಧೃಷ್ಟಮಿತ್ಯನಾ -ಧೃಷ್ಟಮ್ । ಅಸಿ । ಅನಾಧೃಷ್ಯಮಿತ್ಯನಾ-ಧೃಷ್ಯಮ್ । ದೇವಾನಾಮ್ । ಓಜಃ । ಅಭಿಶಸ್ತಿಪಾ ಇತ್ಯಭಿಶಸ್ತಿ-ಪಾಃ । ಅನಭಿಶಸ್ತೇನ್ಯಮಿತ್ಯನಭಿ-ಶಸ್ತೇನ್ಯಮ್ । ಅನ್ವಿತಿ ।

---

| ಮಂತ್ರ | ವಿನಿಯೋಗ |
|---|---|
| ಅನಾಧೃಷ್ಟಮ್ .....ಶಸ್ತೇನ್ಯಮ್ । | ಋತ್ವಿಜರು ಆಜ್ಯಾವಮರ್ಶನ ಮಾಡಲು. |
| ಅನು....... ಮಾ ಧಾಃ। | ಅಧ್ವರ್ಯುವು ಯಜಮಾನನಿಂದ ಹೇಳಿಸಲು. |

ತ್ವಾ = ನಿನ್ನನ್ನು; ಗೃಹ್ಣಾಮಿ = (ಈ ಪಾತ್ರದಲ್ಲಿ) ಹಾಕುತ್ತೇನೆ; ❖ [ಎಲೈ! ತಾನೂನಪ್ತ್ರಾಜ್ಯವೇ] (ನೀನು) ಅನಾಧೃಷ್ಟಮ್ = ಇಲ್ಲಿಯವರೆಗೆ ಯಾರಿಂದಲೂ ತಿರಸ್ಕರಿಸಲ್ಪಡದವನು; ಅಸಿ = ಆಗಿರುವೆ; ಅನಾಧೃಷ್ಯಮ್ = [ಇಲ್ಲಿಂದ ಮುಂದೆಯೂ] ತಿರಸ್ಕರಿಸಲು ಅಶಕ್ಯನಾದವನು; [ಅಸಿ=ಆಗಿರುವೆ.] ದೇವಾನಾಮ್ = ದೇವತೆಗಳ; ಓಜಃ=ಸಾರವೇ (ಬಲವೇ)(ಅಸಿ=ಆಗಿದ್ದೀಯೆ); ಅಭಿಶಸ್ತಿಪಾಃ = [ಪರಸ್ಪರವಿರೋಧರೂಪವಾದ] ಅಭಿಶಸ್ತಿಯಿಂದ ನಮ್ಮನ್ನು ರಕ್ಷಿಸುವವನೂ (ಆಗಿರುವೆ);ಅನಭಿಶಸ್ತೇನ್ಯಮ್= ಪರಸ್ಪರ ವಿರೋಧಕ್ಕೆ ವಿಷಯನಲ್ಲದವನೂ (ಆಗಿದ್ದೀಯೆ). (ಯಾವ ವಿಧವಾದ ದೂಷಣೆಗೂ

---

ನಿಃಶ್ವಾಸರೂಪದಿಂದ ದೇಹದ ಹೊರಕ್ಕೂ ಉಚ್ಛ್ವಾಸರೂಪದಿಂದ ದೇಹದ ಒಳಕ್ಕೂ ಸಂಚರಿಸುತ್ತಿರುವ ವಾಯುರೂಪಪ್ರಾಣವೇ ಆಪತಿ. ನಾನಾ ವಿಷಯಗಳ ಸುತ್ತಲೂ ಸಂಚರಿಸುವ ಮನಸ್ಸೇ ಪರಿಪತಿ. ತನುವು (ಶರೀರವು ) ಪತನ ಹೊಂದದಂತೆ ರಕ್ಷಿಸುವ ಜಾಠರಾಗ್ನಿಯೇ ತನೂನಪ್ತ್ರ. ಶಕ್ತಪುರುಷರಲ್ಲಿರುವ ಶಕ್ತಿಸ್ವರೂಪವೇ ಶಾಕ್ವರ. ಶಕ್ತಿವಂತರಲ್ಲಿರುವ ಓಜಸ್ಸೆಂಬ ಎಂಟನೆಯ ಧಾತುವಿನ ಸಾರವೇ ಓಜಿಷ್ಠ; (ಓಜಸ್ಸಿದ್ದರೆ ಶಕ್ತಿಯಿರುತ್ತದೆ.) ಇವುಗಳಿಗಾಗಿ ನಾನು ಆಜ್ಯವನ್ನು ಈ ಪಾತ್ರದಲ್ಲಿ ಸಂಗ್ರಹಿಸುತ್ತೇನೆ.

ಮೇ ದೀಕ್ಷಾಂ ದೀಕ್ಷಾಪತಿರ್ಮನ್ಯತಾಮನು ತಪಸ್ತಪಸ್ಪತಿ

ರಂಜಸಾ ಸತ್ಯಮುಪ ಗೇಷಗ್ಂ ಸುವಿತೇ ಮಾ ಧಾಃ ||೧೦-19||

[ಆ ಮೈಕಂ ಚ |]

---

ಮೇ | ದೀಕ್ಷಾಮ್ | ದೀಕ್ಷಾಪತಿರಿತಿ ದೀಕ್ಷಾ-ಪತಿಃ | ಮನ್ಯತಾಮ್ | ಅನ್ವಿತಿ | ತಪಃ| ತಪಸ್ಪತಿರಿತಿ ತಪಃ-ಪತಿಃ | ಅಂಜಸಾ | ಸತ್ಯಮ್ | ಉಪೇತಿ | ಗೇಷಮ್ | ಸುವಿತೇ| ಮಾ | ಧಾಃ || ೧೦ ||

---

ಗುರಿಯಾಗತಕ್ಕವನಲ್ಲ.) ❖ದೀಕ್ಷಾಪತಿಃ = ದೀಕ್ಷಣೀಯೇಷ್ಟಿದೇವನು (ವಿಷ್ಣುವು ); ಮೇ = ನನ್ನ; ದೀಕ್ಷಾಮ್ = [ಸೋಮಯಾಗದ] ದೀಕ್ಷೆಯನ್ನು; ಅನು ಮನ್ಯತಾಮ್ = ಅನುಮತಿಸಲಿ; ತಪಸ್ಪತಿಃ = ಉಪಸತ್ತುಗಳ ದೇವನು (ಅಗ್ನಿಯು) [ಮೇ = ನನ್ನ] ತಪಃ= ತಪಸ್ಸನ್ನು; ಅನು (ಮನ್ಯತಾಮ್) = ಅನುಮತಿಸಲಿ. ಅಂಜಸಾ = ಆರ್ಜವದಿಂದ (ಸರಳವಾದ ಮಾರ್ಗದಿಂದ) ಸತ್ಯಮ್ = [ತಾನೂನಪ್ತ್ರಸ್ಪರ್ಶರೂಪವಾದ] ಶಪಥವನ್ನು; ಉಪಗೇಷಮ್ = ಹೊಂದಿದೆನು; [ಎಲೈ !ತಾನೂನಪ್ತ್ರಾಜ್ಯವೇ!] [ನೀನು]; ಮಾ=ನನ್ನನ್ನು; ಸುವಿತೇ = ಶುಭವಾದ ಯಜ್ಞಕರ್ಮದಲ್ಲಿ; ಧಾಃ = ನಿಲ್ಲಿಸು. [ಇರುವಂತೆ ಮಾಡು.]

---

ಎಲೈ! ತಾನೂನಪ್ತ್ರಾಜ್ಯವೇ ! ನಿನ್ನನ್ನು ಯಾರೂ ಈವರೆಗೂ ತಿರಸ್ಕರಿಸಿಲ್ಲ. ಮುಂದೆಯೂ ಯಾರೂ ನಿನ್ನನ್ನು ತಿರಸ್ಕರಿಸಲಾರರು. ದೇವತೆಗಳ ಸಾರವೇ ನೀನಾಗಿರುವೆ. ನೀನು ನಮ್ಮಲ್ಲಿ ಪರಸ್ಪರ ವಿರೋಧವುಂಟಾಗದಂತೆ ಮಾಡಿ ರಕ್ಷಿಸಬಲ್ಲವನಾಗಿರುವೆ. ನೀನು ನಮ್ಮಲ್ಲಿ ಪರಸ್ಪರ ವಿರೋಧವುಂಟಾಗದಂತೆ ಮಾಡಿ ರಕ್ಷಿಸಬಲ್ಲವನಾಗಿರುವೆ. ನೀನು ಯಾರ ವಿರೋಧಕ್ಕೂ ವಿಷಯನಲ್ಲ. ನಿನ್ನನ್ನು ಯಾರೂ ಯಾವಾಗಲೂ ಯಾವ ವಿಷಯದಲ್ಲಿಯೂ ನಿಂದಿಸಲಾರರು. ವಿರೋಧಿಸಲಾರರು.

ಯಜಮಾನನು ಹೀಗೆ ಪ್ರಾರ್ಥಿಸುತ್ತಾನೆ 'ದೀಕ್ಷಣೀಯೇಷ್ಟಿದೇವನು ನನ್ನ ದೀಕ್ಷೆಯನ್ನು ಅನುಮತಿಸಲಿ. ಉಪಸತ್ತುಗಳಿಗೆ ದೇವನು ನನ್ನ ತಪಸ್ಸನ್ನು ಅನುಮತಿಸಲಿ. ನಾನು ಋಜುವಾದ ಮಾರ್ಗದಿಂದ ತಾನೂನಪ್ತ್ರಸ್ಪರ್ಶ ಮಾಡಿ ಶಪಥವನ್ನು ಕೈಗೊಂಡಿ

ದ್ದೇನೆ. ಎಲೈ ತಾನೂನಪ್ತ್ರಾಜ್ಯವೇ! ನೀನು ನನ್ನನ್ನು ಶೋಭನವಾದ ಯಜ್ಞಕರ್ಮದಲ್ಲಿ ಸ್ಥಿರವಾಗಿ ಇರುವಂತೆ ಮಾಡು'.

## ವಿನಿಯೋಗಸಂಗ್ರಹ

ಅಗ್ನೇಃ [1-5] ಪಂಚಕನಿರ್ವಾಪೋ ಯಾ ತೇ[6] ಪ್ರಾಗ್ವಂಶವೇಶನಮ್ ।
[7]ಅದ್ಯಾಸಂದ್ಯಾಂ ಕ್ಷಿಪೇಚ್ಚರ್ಮ ಹೃದಿ[8]ಸೋಮಂ ತು ಸಾದಯೇತ್ ॥
ವರು[9] ತಂ ಮಂತ್ರಯೇದ್ವಾರು[10] ವಾಸಸಾ ಪರಿಣಹ್ಯತಿ ।
ಆಪ[11-15]ತಾನೂನಪ್ತ್ರಮಾಜ್ಯಂ ಸಮವದ್ಯತಿ ಪಂಚಭಿಃ ॥
ಅನಾ[16] ಸರ್ವ ಋತ್ವಿಜಸ್ತು ತಾನೂನಪ್ತ್ರಂ ಸ್ಪೃಶಂತಿ ಹಿ ।
ಅನು[17] ಸ್ವಾಮೀ ಸ್ಪೃಶೇದೇತದಿತಿ ಸಪ್ತದಶೇರಿತಾಃ ॥

ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ ಆಪಸ್ತಂಬ - 17
ಬೌಧಾಯನ - 19

## ಅನುವಾಕದ ವಿಶೇಷ ವಿಷಯಗಳು

### ಅ) ಭ.ಭಾ. ಭಾಷ್ಯ

ಮಂತ್ರಸಂಖ್ಯೆ

೧...೫) ಅಗ್ನೇ.........ತ್ವಾ । ಅತ್ರ ಸರ್ವದೇವತಾತ್ಮನೋ ವಿಷ್ಣೋರಂಶಭೂತಾ ಏತೇ ಅಗ್ನ್ಯಾದಯೋ ರಾಜ್ಞಿ ಗೃಹಮಾಗತೇ ಆಗತಾ ಭವಂತಿ । ತೇ ಚ ಕೇವಲಂ ನಿರ್ವಪಣ-ವಿಶೇಷಣತಯಾ ಉಪಾದೀಯಂತೇ । ಏತೇ ಅಗ್ನ್ಯಾದಯೋ ನ ಹವಿರ್ಭಜಂತೇ । =ಈ ಅಗ್ನ್ಯಾದಿಗಳು ಸರ್ವದೇವಾತ್ಮಕನಾದ ವಿಷ್ಣುವಿನ ಅಂಶಭೂತರು. ರಾಜನ ಅನುಚರರು ರಾಜನೊಡನೆ ಬರುವಂತೆ ವಿಷ್ಣುವಿನೊಡನೆ ಬರುತ್ತಾರೆ. ಅವರಿಗೆ ಹವಿರ್ನಿರ್ವಾಪದಲ್ಲಿ ಮಾತ್ರ ಸಂಬಂಧವುಂಟು. ಹವಿಸ್ಸಿನ ಸಂಬಂಧವಿಲ್ಲ. ಅಗ್ನಿ, ಸೋಮ ಮುಂತಾದವು ಉಪಲಕ್ಷಣ ಮಾತ್ರ. ಗಾಯತ್ರೀ ಮುಂತಾದವುಗಳಿಗೂ ಆತಿಥ್ಯವಾಗುತ್ತದೆ.

. ಅತಿಥಿಃ =ಅತನಶೀಲಃ = ಯಃ ಸದಾ ಗಚ್ಛತಿ/ ಆದಿತ್ಯೋ ವಾ ವಾಯುರ್ವಾ = ಯಾವಾಗಲೂ ಸಂಚರಿಸುವ ಸೂರ್ಯ ಅಥವಾ ವಾಯುವು ಅತಿಥಿ.

ರಾಯಸ್ಪೋಷದಾವಾ ಅಗ್ನಿವಿಶೇಷಃ = ರಾಯಸ್ಪೋಷದಾವನೆಂಬ ಅಗ್ನಿ; ಶ್ಯೇನಃ ಸೋಮಭೃತ್ = ದೇವತಾವಿಶೇಷಃ = ಶ್ಯೇನರೂಪದಿಂದ ಸೋಮನನ್ನು ಧರಿಸಿದವನು.

ಗಾಯತ್ರೀತ್ಯೇಕೇ = ಕೆಲವರ ಅಭಿಪ್ರಾಯದಲ್ಲಿ ಗಾಯತ್ರಿಯೇ ಸೋಮಭೃತ್.

ಬೌ.೭ ಆ.೬) ಯಾ ತೇ.......ದುರ್ಯಾನ್ । ಪ್ರತರಣಃ = ಪ್ರಕರ್ಷೇಣ ದುರ್ಗೇಭ್ಯಸ್ತಾರಯಿತಾ = ಹೆಚ್ಚಾಗಿ ಕಷ್ಟಗಳಿಂದ ಪಾರು ಮಾಡುವವನು.

ಆ. ೯) ವರುಣೋಽಸಿ........ಧೃತವ್ರತಃ । ವರುಣಃ = ವರಣೀಯತ್ವಾತ್/ ವೃತತ್ವಾದ್ವಾ ವಾಸಸಾ = ಆಶ್ರಯಿಸಲ್ಪಡುವುದರಿಂದ ಅಥವಾ ವಸ್ತ್ರದಿಂದ ಸುತ್ತು ವರೆಯಲ್ಪಟ್ಟಿರುವುದರಿಂದ ವರುಣನಾಗಿದ್ದಾನೆ. (ಸೋಮ)

ಬೌ.೯) ಶಂಯೋಃ.........ಸಖ್ಯಾತ್ । ಶಮ್ = ಇರುವ ರೋಗಾದಿಗಳ ಪರಿಹಾರ; ಯೋಃ = ಬರಲಿರುವ ರೋಗಗಳ ತಡೆ.

೧೩) ತನೂನಪ್ತ್ರೇ........ಗೃಹ್ಣಾಮಿ । ತನೂನಾಮ್ = ಅಪಾಮ್; ನಪ್ತಾ = ಚತುರ್ಥಃ ಅಗ್ನಿಃ = ನೀರುಗಳ ಮರಿಮಗ.

೧೫) ಶಕ್ಮನ್ನೋಜಿಷ್ಠಾಯ.......ಗೃಹ್ಣಾಮಿ । ಶಕ್ಮನ್ನೋಜಿಷ್ಠ = ಶಕ್ತರಲ್ಲಿ ಅತಿಶಕ್ತನಾದ ಪ್ರಾಣ.

೧೬) ಅನಾಧೃಷ್ಟ..........ಶಸ್ತ್ರೇನ್ಯಮ್ । ದೇವಾನಾಮೋಜಃ = ಋತ್ವಿಜಃ ದೇವಾಶ್ಚ ತ್ವಯಾ (ಆಜ್ಯೇನ) ಬಲವಂತಃ = ನಿನ್ನಿಂದ ಋತ್ವಿಜರು ಬಲವನ್ನು ಪಡೆದು ಯಾಗವನ್ನು ಮಾಡುತ್ತಾರೆ. ಯಾಗದಿಂದ ದೇವತೆಗಳು ತೃಪ್ತರಾಗಿ ಬಲವಂತರಾಗುತ್ತಾರೆ.

೧೭) ಅನು..........ಧಾಃ । ದೀಕ್ಷಾಪತಿಃ = ವಿಷ್ಣುಃ; ತಪಸ್ಪತಿಃ = ಅಗ್ನಿಃ; ಸುವಿತೇ ಮಾ ಧಾಃ = ಸೂತೌ = ಅಪತ್ಯೇ ಮಾ ಧಾಃ = ನನ್ನನ್ನು ಪುತ್ರವಂತನನ್ನಾಗಿ ಮಾಡು.

## ಆ) ಛಂದಸ್ಸು

೧) ಯಾ ತೇ ಧಾಮಾನಿ......ದುರ್ಯಾನ್ । ತ್ರಿಷ್ಟುಪ್

೨) ವರುಣೋಽಸಿ.....ವಾರುಣಮಸಿ। ಯಜುರಂತಾ ಏಕಪದಾ ಗಾಯತ್ರೀ (ಭ.ಭಾ.ಭಾ.)

## ೩) ಮೀಮಾಂಸಾ

೧) 'ವೈಷ್ಣವ' ಶಬ್ದವು ಧರ್ಮಾತಿದೇಶಕವೇ? [ಜೈ.ಸೂ. 7.3.]

ಆತಿಥ್ಯೇಷ್ಟಿಯಲ್ಲಿ ವಿಷ್ಣುದೇವತಾಕವಾದ ನವಕಪಾಲವಿದೆ. ರಾಜಸೂಯ ಯಾಗದಲ್ಲಿ ವೈಷ್ಣವ ತ್ರಿಕಪಾಲವಿದೆ. 'ವೈಷ್ಣವಂ ತ್ರಿಕಪಾಲಂ' ಎಂಬುದು ಶ್ರುತಿವಾಕ್ಯ. ಇಲ್ಲಿರುವ ವೈಷ್ಣವ ಶಬ್ದವು ನವಕಪಾಲಧರ್ಮಗಳನ್ನು ರಾಜಸೂಯದಲ್ಲಿ ಅತಿದೇಶ ಮಾಡುತ್ತದೆಯೇ? ಎಂಬುದು ಇಲ್ಲಿನ ಸಂಶಯ. ಇಲ್ಲಿಯ ಪೂರ್ವಪಕ್ಷವು ಹೀಗಿದೆ. 'ಮಾಸಮಗ್ನಿಹೋತ್ರಂ ಜುಹೋತಿ' ಎಂಬಲ್ಲಿರುವ ಅಗ್ನಿಹೋತ್ರ ಶಬ್ದವು ಪ್ರಸಿದ್ಧವಾದ ಅಗ್ನಿಹೋತ್ರದ ಧರ್ಮಗಳನ್ನು ಅತಿದೇಶ ಮಾಡುವಂತೆ ಇಲ್ಲಿಯೂ ವೈಷ್ಣವ ಶಬ್ದವು ಧರ್ಮಾತಿದೇಶಕವೇ ಆಗಿದೆ.

ಇಲ್ಲಿಯ ಸಿದ್ಧಾಂತವು ಹೀಗಿದೆ : 'ವಿಷ್ಣುಃ ದೇವತಾ ಅಸ್ಯ ಇತಿ ವೈಷ್ಣವಃ' ಎಂಬ ವಿವರಣೆಯಂತೆ ವೈಷ್ಣವಶಬ್ದವು ದೇವತಾವಿಧಾಯಕವಾಗಿದೆ. ಆದುದರಿಂದ ಗೌಣ ವೃತ್ತಿಯನ್ನು ಆಶ್ರಯಿಸಿ ಧರ್ಮಾತಿದೇಶಕವೆನ್ನುವುದು ಸರಿಯಲ್ಲ.

೨) 'ಯದಾತಿಥ್ಯಂ.......' ಎಂಬಲ್ಲಿ ಬರ್ಹಿಃಪದವು ಧರ್ಮಾತಿದೇಶಕವೇ? [ಜೈ.ಸೂ. 4.2.]

ಜ್ಯೋತಿಷ್ಟೋಮಪ್ರಕರಣದಲ್ಲಿ 'ಯದಾತಿಥ್ಯಂ ಬರ್ಹಿಸ್ತದುಪಸದಾಂ ತದಗ್ನೀಷೋಮೀಯಸ್ಯ ಚ' ಎಂಬ ವಾಕ್ಯವಿದೆ. [ಆಪ. ಶ್ರೌ.ಸೂ. 11-2-11] ಇಲ್ಲಿಯ ಬರ್ಹಿಃಪದವು ಧರ್ಮಾತಿದೇಶಕವೇ? ಎಂಬುದು ಸಂಶಯ.

ಆತಿಥ್ಯೇಷ್ಟಿಯ ಬರ್ಹಿಸ್ಸನ್ನು ಉಪಸತ್ತುಗಳಿಗೂ, ಅಗ್ನೀಷೋಮೀಯಕ್ಕೂ ವಿನಿಯೋಗಿಸಿರುತ್ತಾರೆ. ಆತಿಥ್ಯೇಷ್ಟಿಯ ಅನುಷ್ಠಾನಕ್ಕಾಗಿ ಬರ್ಹಿಸ್ಸನ್ನು ಕತ್ತರಿಸಿ ಅದನ್ನು ಉಪಸತ್ತು ಮತ್ತು ಅಗ್ನೀಷೋಮೀಯಗಳ ಅನುಷ್ಠಾನಕ್ಕಾಗಿ ವಿನಿಯೋಗಿಸುವುದಾದರೆ ಆತಿಥ್ಯೇಷ್ಟಿಯನ್ನು ವಿಧಿಸುವಾಗ ಬರ್ಹಿಸ್ಸನ್ನು ಹೇಳುವುದು ವ್ಯರ್ಥವಾಗುತ್ತದೆ. ಆತಿಥ್ಯೆಯಲ್ಲಿ ಉಪಯೋಗಿಸಿದ ಬರ್ಹಿಸ್ಸನ್ನೇ ಉಪಸತ್ತು-ಅಗ್ನೀಷೋಮೀಯಗಳಿಗೂ ವಿನಿಯೋಗಿಸಿದರೆ ವಿನಿಯುಕ್ತವಿನಿಯೋಗವು ಸಂಭವಿಸುತ್ತದೆ. ಆದುದರಿಂದ ಬರ್ಹಿಃಪದವು ಆತಿಥ್ಯೆಯ ಬರ್ಹಿಸ್ಸಿನ ಧರ್ಮಗಳಾದ ಅಶ್ವವಾಲತ್ವ ಮುಂತಾದವು ಉಪಸತ್ತಿನಲ್ಲಿ ಮತ್ತು ಅಗ್ನಿಷೋಮೀಯದಲ್ಲಿನ ಬರ್ಹಿಸ್ಸಿಗೂ ಇರಬೇಕೆಂಬುದಾಗಿ ತಿಳಿಸುತ್ತಾ ಧರ್ಮಾತಿದೇಶಕವಾಗಿದೆ. ಇದು ಇಲ್ಲಿನ ಪೂರ್ವಪಕ್ಷ.

ಇಲ್ಲಿಯ ಸಿದ್ಧಾಂತವು ಹೀಗಿದೆ : ಬರ್ಹಿಃಪದಕ್ಕೆ ಬರ್ಹಿರ್ಧರ್ಮಗಳೆಂಬ

ಅರ್ಥವನ್ನು ಮಾಡಿದರೆ ಲಕ್ಷಣಾವೃತ್ತಿಯನ್ನು ಆಶ್ರಯಿಸಬೇಕಾಗುವುದರಿಂದ, ಶ್ರುತಿಯಿಂದ ನೇರವಾದ ಅರ್ಥವನ್ನು ಗ್ರಹಿಸುವುದೇ ಉಚಿತ. ಶ್ರುತಿಯಿಂದ ಆತಿಥ್ಯೆಯ ಬರ್ಹಿಸ್ಸೇ ಉಪಸತ್ತಿಗೂ ಅಗ್ನೀಷೋಮೀಯಕ್ಕೂ ಬಳಸಬೇಕೆಂದು ತಿಳಿಯುತ್ತದೆ. ಮೂರಕ್ಕೂ ಸಮಾನವಾದ ಬರ್ಹಿಸ್ಸು ಇರುವುದು ಎಂದು ಆ ವಚನವು ವಿಧಿಸುತ್ತದೆ.

---



## ॥ ಏಕಾದಶೋಽನುವಾಕಃ ॥

**ಅಗ್ಂಶುರಗ್ಂಶುಸ್ತೇ ದೇವಸೋಮಾಪ್ಯಾಯತಾಮಿಂದ್ರಾಯೈಕ**

---

**ಅಗ್ಂಶುರಗ್ಂಶುರಿತ್ಯಗ್ಂಶುಃ-ಅಗ್ಂಶುಃ । ತೇ । ದೇವ । ಸೋಮ । ಏತಿ । ಪ್ಯಾಯತಾಮ್ । ಇಂದ್ರಾಯ ।**

---

ಹತ್ತನೆಯ ಅನುವಾಕದಲ್ಲಿ ಆತಿಥ್ಯೇಷ್ಟಿಯನ್ನು ಹೇಳಿಯಾಯಿತು. ಸೋಮ ರಾಜನನ್ನು ಪ್ರಾಗ್ವಂಶದಲ್ಲಿ ಸ್ಥಾಪನ ಮಾಡಿದ್ದನ್ನೂ ಹೇಳಿಯಾಯಿತು. ಸೋಮಯಾಗಕ್ಕೆ ಮೊದಲು ಯಾಗದ ವಿಘ್ನಕಾರಿಗಳಾದ ಅಸುರರನ್ನು ಜಯಿಸುವುದಕ್ಕಾಗಿ ಮಾಡಬೇಕಾದ ಉಪಸತ್ತುಗಳನ್ನು ಈ ಹನ್ನೊಂದನೆಯ ಅನುವಾಕದಲ್ಲಿ ಹೇಳಲಾಗಿದೆ. ಮೊದಲು ಸೋಮನಿಗೆ ಆಪ್ಯಾಯನಾದಿ ಉಪಚಾರಗಳು ಹೇಳಲ್ಪಡುತ್ತವೆ.

| **ಮಂತ್ರ** | **ವಿನಿಯೋಗ (ಬೌಧಾಯನ)** |
|---|---|
| ೧) **ಅಗ್ಂಶುಃ.....ಪ್ಯಾಯಸ್ವ ।** | **ಋತ್ವಿಜರು ಮದಂತೀ (ಬಿಸಿನೀರು) ಸ್ಪರ್ಶಮಾಡಿ ಹಿರಣ್ಯವನ್ನಿಟ್ಟು ಸೋಮನನ್ನು ಆಪ್ಯಾಯನ ಮಾಡಲು** |

---

[ಹೇ] **ದೇವ! ಸೋಮ!** = ಎಲೈ ಸೋಮದೇವನೇ! **ತೇ** = ನಿನ್ನ; **ಅಗ್ಂಶುರಗ್ಂಶುಃ** = ಒಣಗುವ ಅಥವಾ ಕ್ಷೀಣವಾಗುವ ಯಾವ ಸೂಕ್ಷ್ಮಾವಯವವುಂಟೋ ಅದು **ಏಕಧನವಿದೇ** = ಮುಖ್ಯವಾದ ಸೋಮರೂಪಧನವನ್ನು ತಿಳಿದಿರುವ; **ಇಂದ್ರಾಯ** = ಇಂದ್ರನಿಗೋಸ್ಕರ; **ಆಪ್ಯಾಯತಾಮ್** = ವೃದ್ಧಿಹೊಂದಲಿ. [ಎಲೈ! ಸೋಮನೇ!]

---

ಎಲೈ ಸೋಮದೇವನೇ! ಇಂದ್ರನು ಸೋಮನನ್ನು ಮುಖ್ಯಧನವಾಗಿ ತಿಳಿದಿರುತ್ತಾನೆ. ಅಂತಹ ಇಂದ್ರನಿಗಾಗಿ ನಿನ್ನ ಬಾಡುವ ಅಥವಾ ಕ್ಷೀಣವಾಗುವ ಸೂಕ್ಷ್ಮಾಂಶಗಳೂ ಹಾಳಾಗದೇ ಚೇತರಿಸಿಕೊಳ್ಳಲಿ. ಸೋಮರಸಪಾನ ಮಾಡಲು ಇಂದ್ರನು ಉತ್ಸಾಹ ಹೊಂದಲಿ. ನೀನು ಇಂದ್ರನಿಗಾಗಿ ವೃದ್ಧಿಹೊಂದು. ಮಿತ್ರರಾದ ಋತ್ವಿಜರನ್ನು ಧನಲಾಭದಿಂದಲೂ

ಧನವಿದ ಆ ತುಭ್ಯಮಿಂದ್ರಃ ಪ್ಯಾಯತಾಮಾ ತ್ವಮಿಂದ್ರಾಯ

ಪ್ಯಾಯಸ್ವಾಪ್ಯಾಯಯ ಸಖೀನ್ತ್ಸನ್ಯಾ ಮೇಧಯಾ

ಸ್ವಸ್ತಿ ತೇ ದೇವ ಸೋಮ ಸುತ್ಯಾಮಶೀಯೇಷ್ಟಾ ರಾಯಃ

---

ಏಕಧನವಿದ ಇತ್ಯೇಕಧನ-ವಿದೇ। ಏತಿ। ತುಭ್ಯಮ್। ಇಂದ್ರಃ । ಪ್ಯಾಯತಾಮ್। ಏತಿ। ತ್ವಮ್। ಇಂದ್ರಾಯ। ಪ್ಯಾಯಸ್ವ । *ಏತಿ। ಪ್ಯಾಯಯ। ಸಖೀನ್ । ಸನ್ಯಾ । ಮೇಧಯಾ। ಸ್ವಸ್ತಿ. । ತೇ । ದೇವ । ಸೋಮ । ಸುತ್ಯಾಮ್ । ಅಶೀಯ*। ಏಷ್ಟಃ । ರಾಯಃ ।

---

| ಮಂತ್ರ | ವಿನಿಯೋಗ |
|---|---|
| ೨) ಆಪ್ಯಾಯಯ.....ಮಶೀಯ । | ಯಜಮಾನನು ಮಾಡಬೇಕಾದ ವಾಚನ. —ಬೌ |
| ಅಗ್‌ಂಶುಃ........ಮಶೀಯ । | ಸೋಮಾಪ್ಯಾಯನವನ್ನು ಮಾಡಲು. —ಆಪ. |
| ಏಷ್ಟಾ.......ಪೃಥಿವ್ಯೈ । | ಪ್ರಸ್ತರದಲ್ಲಿ ಕೈಯನ್ನಿಟ್ಟು ಋತ್ವಿಜರು ನಮಸ್ಕರಿಸಲು [ಆತಿಥ್ಯೇಷ್ಟಿಯಲ್ಲಿ ಬರ್ಹಿಃಪ್ರಸ್ತರಗಳ ಪ್ರಹರಣವಿಲ್ಲ.] |

---

**ತುಭ್ಯಮ್** = ನಿನಗೋಸ್ಕರ; **ಇಂದ್ರಃ** = ಇಂದ್ರನು; **ಆ ಪ್ಯಾಯತಾಮ್** = ಉತ್ಸಾಹ ಹೊಂದಲಿ; **ತ್ವಮ್** =ನೀನು; **ಇಂದ್ರಾಯ** = ಇಂದ್ರನಿಗೋಸ್ಕರ; **ಆ ಪ್ಯಾಯಸ್ವ** = ವೃದ್ಧಿ ಹೊಂದು; **ಸಖೀನ್** = ಋತ್ವಿಜರನ್ನು; **ಸನ್ಯಾ** = ಧನಲಾಭದಿಂದಲೂ; **ಮೇಧಯಾ** = ಪ್ರಜ್ಞೆಯಿಂದಲೂ; **ಆಪ್ಯಾಯಯ** = ಪುಷ್ಟಿಗೊಳಿಸು; **ದೇವ! ಸೋಮ!** = ಎಲೈ! ದೇವನಾದ ಸೋಮನೇ! **ತೇ** = ನಿನಗೆ; **ಸ್ವಸ್ತಿ** = ಮಂಗಲವಾಗಲಿ. [ನಾನು ನಿನ್ನ ಅನುಗ್ರಹ ದಿಂದ] **ಸುತ್ಯಾಮ್** = ಸೋಮಾಭಿಷವವನ್ನು; **ಅಶೀಯ** = ಹೊಂದುವೆನು. + **ಏಷ್ಟಃ** = [ದಯಾಳುವಾದುದರಿಂದ] ಭಕ್ತರಲ್ಲಿ ಇಚ್ಛೆಯುಳ್ಳ ದ್ಯಾವಾಪೃಥಿವ್ಯಭಿಮಾನಿ ಯಾದ ದೇವನೇ! [ನೀನು] **ಋತವಾದಿಭ್ಯಃ** = ಯಜ್ಞವನ್ನು ಮಾಡುತ್ತೇವೆಂದು ಹೇಳುತ್ತಿರುವ ನಮಗೆ; **ರಾಯಃ** = ಧನಕ್ಕೋಸ್ಕರ;

---

ಪ್ರಜ್ಞಾಲಾಭದಿಂದಲೂ ವೃದ್ಧಿಗೊಳಿಸು. ನಿನಗೆ ಮಂಗಲವಾಗಲಿ. ನಿನ್ನ ಅನುಗ್ರಹದಿಂದ

**ಪ್ರೇಷೇ ಭಗಾಯರ್ತಮೃತವಾದಿಭ್ಯೋ ನಮೋ ದಿವೇ**
**ನಮಃ ಪೃಥಿವ್ಯಾ ಅಗ್ನೇ ವ್ರತಪತೇ ತ್ವಂ ವ್ರತಾನಾಂ**

---

ಪ್ರೇತಿ । ಇಷೇ । ಭಗಾಯ । ಋತಮ್ । ಋತವಾದಿಭ್ಯ ಇತ್ಯೃತವಾದಿ-ಭ್ಯಃ । ನಮಃ। ದಿವೇ । ನಮಃ । ಪೃಥಿವ್ಯೈ । ಅಗ್ನೇ । ವ್ರತಪತ ಇತಿ ವ್ರತ-ಪತೇ । ತ್ವಮ್ । ವ್ರತಾನಾಮ್ ।

---

| ಮಂತ್ರ | ವಿನಿಯೋಗ |
|---|---|
| ಅಗ್ನೇ.........ವ್ರತಾನಿ । | ಅಧ್ವರ್ಯುವು ಯಜಮಾನನಿಂದ ಆಹವನೀಯೋಪಸ್ಥಾನಕ್ಕಾಗಿ ವಾಚನ ಮಾಡಿಸಲು [ಇದು ಅವಾಂತರ ದೀಕ್ಷೆ.] |

---

ಇಷೇ = ಅನ್ನಕ್ಕೋಸ್ಕರ; ಭಗಾಯ* = ಐಶ್ವರ್ಯಾದಿ ಷಡ್ಗುಣಗಳಿಗೋಸ್ಕರ;* ಋತಮ್ = ಯಜ್ಞವನ್ನು; ಪ್ರ (ದೇಹಿ) = ಕೊಡು. [ಚೆನ್ನಾಗಿ ಕೊಡು] [ನಾವು] ದಿವೇ = ದ್ಯುದೇವತೆಗೆ; ನಮಃ = ನಮಸ್ಕಾರವನ್ನು; [ಕುರ್ಮಃ = ಮಾಡುತ್ತೇವೆ] ಪೃಥಿವ್ಯೈ = ಭೂದೇವತೆಗೂ; ನಮಃ (ಕುರ್ಮಃ) =ನಮಸ್ಕಾರ ಮಾಡುತ್ತೇವೆ. + ವ್ರತಪತೇ = ವ್ರತಗಳನ್ನು ಪಾಲಿಸುವ; ಅಗ್ನೇ! = ಎಲೈ! ಅಗ್ನಿದೇವನೇ! ತ್ವಮ್ = ನೀನು; ವ್ರತಾನಾಂ ವ್ರತಪತಿಃ ಅಸಿ = ಎಲ್ಲಾ ವ್ರತಗಳಿಗೂ ವ್ರತಪತಿಯಾಗಿರುವೆ.

---

ಯಾವ ವಿಘ್ನವೂ ಇಲ್ಲದೆ ನಾನು ಸೋಮಾಭಿಷವವನ್ನು ಹೊಂದುವಂತಾಗಲಿ. [ನನ್ನ ಯಾಗವು ಪೂರ್ಣವಾಗಲಿ.] ✿ ಎಲೈ! ದ್ಯಾವಾಪೃಥಿವ್ಯಭಿಮಾನಿ ದೇವನೇ! ನೀನು ದಯಾಳು. ಭಕ್ತರಿಗೆ ಒಳ್ಳೆಯದನ್ನು ಇಚ್ಛಿಸುವವನು. ಯಜ್ಞವನ್ನು ಮಾಡುತ್ತಿರುವ ನಮಗೆ ಧನವನ್ನೂ, ಐಶ್ವರ್ಯಾದಿ ಷಡ್ಗುಣಗಳನ್ನೂ ಫಲರೂಪವಾಗಿ ಕೊಡುವ ಯಜ್ಞವನ್ನು ಕೊಡು. ದ್ಯುದೇವತೆಗೂ ಭೂದೇವತೆಗೂ ನಮಸ್ಕರಿಸುತ್ತೇವೆ.

---

*ಐಶ್ವರ್ಯಸ್ಯ ಸಮಗ್ರಸ್ಯ ಧರ್ಮಸ್ಯ (ವೀರ್ಯಸ್ಯ) ಯಶಸಃ ಶ್ರಿಯಃ ।
ಜ್ಞಾನವೈರಾಗ್ಯಯೋಶ್ಚೈವ ಷಣ್ಣಾಂ ಭಗ ಇತೀರಣಾ ॥
ಸಂಪೂರ್ಣವಾದ ಐಶ್ವರ್ಯ, ಧರ್ಮ, ಕೀರ್ತಿ, ಕಾಂತಿ, ಜ್ಞಾನ ಮತ್ತು ವೈರಾಗ್ಯ ಈ ಆರು ಗುಣಗಳಿಗೆ'ಭಗ' ಎಂದು ಹೆಸರು. ಇವುಗಳುಳ್ಳವನು 'ಭಗವಾನ್' ಎನ್ನಿಸುವನು.

## ವ್ರತಪತಿರಸಿ ಯಾ ಮಮ ತನೂರೇಷಾ ಸಾ ತ್ವಯಿ [.....ತ್ವಯಿ (೧)] ಯಾ ತವ ತನೂರಿಯಗ್ಂ ಸಾ ಮಯಿ ಸಹ ನೌ ವ್ರತಪತೇ ವ್ರತಿನೋರ್ವ್ರತಾನಿ

---

ವ್ರತಪತಿರಿತಿ ವ್ರತ-ಪತಿಃ । ಅಸಿ । ಯಾ । ಮಮ । ತನೂಃ । ಏಷಾ । ಸಾ । ತ್ವಯಿ। [೧] ಯಾ । ತವ । ತನೂಃ । ಇಯಮ್ । ಸಾ । ಮಯಿ । ಸಹ । ನೌ । ವ್ರತಪತ ಇತಿ ವ್ರತ-ಪತೇ । ವ್ರತಿನೋಃ । ವ್ರತಾನಿ ।

---

**ಯಾ ಮಮ ತನೂಃ** = [ವ್ರತವನ್ನು ಆಚರಿಸುತ್ತಿರುವ] ಯಾವ ನನ್ನ ದೇಹವುಂಟೋ; **ಏಷಾ ಸಾ ತ್ವಯಿ** = ಆ ನನ್ನ ಈ ಶರೀರವು ನಿನ್ನಲ್ಲಿ [ಮನಸ್ಸಿನಿಂದ ಸಮರ್ಪಿಸಲ್ಪಟ್ಟಿದೆ] **ಯಾ ತವ ತನೂಃ** = [ವ್ರತವನ್ನು ರಕ್ಷಿಸುವ] ಯಾವ ನಿನ್ನ ಶರೀರವುಂಟೋ; ಇಯಂ **ಸಾ ಮಯಿ** = ಇಂತಹ ಆ ನಿನ್ನ ದೇಹವು[ಮನಸ್ಸಿನಿಂದ] ನನ್ನಲ್ಲಿ [ಸ್ಥಾಪಿತವಾಗಿದೆ.] [ಆದುದರಿಂದ] **ವ್ರತಪತೇ** =ವ್ರತರಕ್ಷಕನಾದ[ಅಗ್ನಿದೇವನೇ!]; **ವ್ರತಿನೋಃ** = ವ್ರತಿಗಳಾದ; **ನೌ** = ನಮ್ಮಿಬ್ಬರ; **ವ್ರತಾನಿ** = ವ್ರತಗಳು [ತಪ್ಪದೆ ಅನುಸರಿಸಬೇಕಾದ ಭೋಜನಾದಿ ನಿಯಮಗಳು] **ಸಹ** [ಪ್ರವರ್ತಂತಾಮ್] = ಒಟ್ಟಿಗೆ ಪ್ರವರ್ತಿಸಲಿ.

---

ಎಲೈ ಅಗ್ನಿದೇವನೇ! ನೀನು ವ್ರತಪತಿಯಾಗಿರುವೆ. ಕೇವಲ ಒಂದು ವ್ರತಕ್ಕೆ ಮಾತ್ರವಲ್ಲ. ಸಕಲವ್ರತಗಳಿಗೂ ಪಾಲಕನಾಗಿರುವೆ. ವ್ರತವನ್ನು ಆಚರಿಸುವ ನನ್ನ ದೇಹವು ಮನಸ್ಸಿನಿಂದ ನಿನ್ನಲ್ಲಿ ಸ್ಥಾಪಿತವಾಗಿದೆ. ವ್ರತವನ್ನು ರಕ್ಷಿಸುವ ನಿನ್ನ ದೇಹವು ಮನಸ್ಸಿನಿಂದ ನನ್ನಲ್ಲಿ ಸ್ಥಾಪಿತವಾಗಿದೆ. ಆದುದರಿಂದ ನಾವಿಬ್ಬರೂ ವ್ರತಿಗಳಾಗಿರುತ್ತೇವೆ. ವ್ರತಪತಿಯಾದ ಅಗ್ನಿದೇವನೇ! ನಮ್ಮಿಬ್ಬರ ವ್ರತಗಳೂ ಒಟ್ಟಿಗೇ ಪ್ರವರ್ತಿಸಲಿ.

ಅಗ್ನಿದೇವನೇ! ನಿನಗೆ ಘೋರವಾದ ಮತ್ತು ಸೌಮ್ಯವಾದ ಎರಡು ಶರೀರಗಳುಂಟು. ಅವುಗಳಲ್ಲಿ ಕ್ರೂರವಾದ ನಿನ್ನ ಶರೀರದಿಂದ ನಮ್ಮನ್ನು ರಕ್ಷಿಸು. ಆ ನಿನ್ನ ಕ್ರೂರ ಶರೀರಕ್ಕೆ ಈ ಪಯಸ್ಸು ಹುತವಾಗಲಿ.

# ಯಾ ತೇ ಅಗ್ನೇ ರುದ್ರಿಯಾ ತನೂಸ್ತಯಾ ನಃ ಪಾಹಿ ತಸ್ಯಾಸ್ತೇ ಸ್ವಾಹಾ ಯಾ ತೇ ಅಗ್ನೇಽಯಾಶಯಾ ರಜಾಶಯಾ ಹರಾಶಯಾ ತನೂರ್ವರ್‌ಷಿಷ್ಠಾ

---

ಯಾ । ತೇ । ಅಗ್ನೇ । ರುದ್ರಿಯಾ । ತನೂಃ । ತಯಾ । ನಃ । ಪಾಹಿ । ತಸ್ಯಾಃ। ತೇ । ಸ್ವಾಹಾ । ಯಾ । ತೇ । ಅಗ್ನೇ । ಅಯಾಶಯೇತ್ಯಯಾ-ಶಯಾ । ರಜಾಶಯೇತಿ ರಜಾ-ಶಯಾ । ಹರಾಶಯೇತಿ ಹರಾ-ಶಯಾ । ತನೂಃ । ವರ್‌ಷಿಷ್ಠಾ ।

---

| ಮಂತ್ರ | ವಿನಿಯೋಗ |
|---|---|
| ಯಾ ತೇ.......ತಸ್ಯಾಸ್ತೇ ಸ್ವಾಹಾ । | ವ್ರತರೂಪವಾದ ಪಯಸ್ಸನ್ನು ಕುಡಿಯಲು. |
| ಯಾ ತೇ ಅಗ್ನೇಽಯಾಶಯಾ ತನೂಃ...... ....................ಅಪಾವಧೀಗ್‌ಂ ಸ್ವಾಹಾ । | ಮೊದಲನೆಯ ದಿನದ ಉಪಸದಾಹುತಿಯನ್ನು ನೀಡಲು. |
| ಯಾ ತೇ ಅಗ್ನೇ ರಜಾಶಯಾ ತನೂಃ...ಸ್ವಾಹಾ । | ಎರಡನೆಯ ದಿನದ ಉಪಸದಾಹುತಿಯನ್ನು ನೀಡಲು. |
| ಯಾ ತೇ ಅಗ್ನೇ ಹರಾಶಯಾ ತನೂಃ...ಸ್ವಾಹಾ । | ಮೂರನೆಯ ದಿನದ ಉಪಸದಾಹುತಿಯನ್ನು ನೀಡಲು |

---

+ಅಗ್ನೇ! = ಅಗ್ನಿದೇವನೇ!; ತೇ = ನಿನ್ನ; ಯಾ ರುದ್ರಿಯಾ ತನೂಃ = ಯಾವ ಕ್ರೂರವಾದ ಶರೀರವುಂಟೋ; ತಯಾ = ಆ ಶರೀರದಿಂದ; ನಃ = ನಮ್ಮನ್ನು; ಪಾಹಿ = ರಕ್ಷಿಸು; ತೇ = ನಿನ್ನ; ತಸ್ಯಾಃ = ಆ ಶರೀರಕ್ಕೆ; ಸ್ವಾಹಾ = [ಈ ಕ್ಷೀರವು] ಹುತವಾಗಲಿ; + ಅಗ್ನೇ! = ಅಗ್ನಿದೇವನೇ! ತೇ = ನಿನ್ನ; ಯಾ = ಯಾವ; ಅಯಾಶಯಾ = ಕಬ್ಬಿಣದಲ್ಲಿರುವ; ತನೂಃ = ಶರೀರವಿದೆಯೋ; [ಯಾ = ಯಾವ;] ರಜಾಶಯಾ = ಬೆಳ್ಳಿಯಲ್ಲಿರುವ; [ತನೂಃ = ಶರೀರವಿದೆಯೋ; [ಯಾ = ಯಾವ] ಹರಾಶಯಾ = ಚಿನ್ನದಲ್ಲಿರುವ; [ತನೂಃ = ಶರೀರವಿದೆಯೋ]; [ಮತ್ತು] ವರ್‌ಷಿಷ್ಠಾ = ಬಹಳ ದೊಡ್ಡದಾಗಿದೆಯೋ;

---

ಅಗ್ನಿದೇವನೇ! ನಿನಗೆ ಕಬ್ಬಿಣದಲ್ಲಿರುವ ಶರೀರವೊಂದುಂಟು. ಬೆಳ್ಳಿಯಲ್ಲಿರುವ

गह्वरेष्ठ्योग्रं ...

ಗಹ್ವರೇಷ್ಠ್ಯೋಗ್ರಂ ವಚೋ ಅಪಾವಧೀಂ ತ್ವೇಷಂ

ವಚೋ ಅಪಾವಧೀಗ್‌ಂ ಸ್ವಾಹಾ ॥ ೧೧-21 ॥

[ತ್ರಯಿ ಚತ್ವಾರಿಗ್‌ಂಶಚ್ಚ । ]

ಗಹ್ವರೇಷ್ಠೇತಿ ಗಹ್ವರೇ -ಸ್ಥಾ । ಉಗ್ರಮ್ । ವಚಃ । ಅಪೇತಿ । ಅವಧೀಮ್ । ತ್ವೇಷಮ್।

ವಚಃ । ಅಪೇತಿ । ಅವಧೀಮ್ । ಸ್ವಾಹಾ ॥ ೧೧ ॥

ಗಹ್ವರೇಷ್ಠ = ಮುಟ್ಟಲಾಗದ [ಬಿಸಿಯಾಗಿರುವುದರಿಂದ] ಲೋಹಗಳಲ್ಲಿದೆಯೋ; [ಆ ಶರೀರದಿಂದ] ಉಗ್ರಮ್ ವಚಃ = ['ಹಸಿದಿದ್ದೇನೆ' 'ಬಾಯಾರಿದ್ದೇನೆ' ಮೊದಲಾದ ಐಹಿಕ ದುಃಖಸೂಚಕವಾದ] ಉಗ್ರವಾದ ಮಾತನ್ನು; ಅಪಾವಧೀಮ್ = ನಾಶಪಡಿಸಿದೆನು. [ಹಾಗೆಯೇ] ತ್ವೇಷಮ್ ವಚಃ = 'ಗೋವಧ ಮುಂತಾದ ಉಪಪಾತಕವು ಬಂದಿದೆ' 'ವಿದ್ವದ್ಬ್ರಾಹ್ಮಣವಧಾದಿರೂಪವಾದ ವೀರಹತ್ಯೆಯು ಬಂದಿದೆ' ಮುಂತಾದ] ಆಮುಷ್ಮಿಕವಾದ ದುಃಖಜನಕವಾದ ಮಾತನ್ನು; ಅಪಾವಧೀಮ್= ನಾಶಪಡಿಸಿದೆನು; ಸ್ವಾಹಾ = [ಅಂತಹ ಶರೀರಗಳುಳ್ಳ ಅಗ್ನಿದೇವನಿಗೆ ಈ ಆಜ್ಯವು] ಹುತವಾಗಲಿ.

ಶರೀರವೊಂದುಂಟು. ಚಿನ್ನದಲ್ಲಿರುವ ಶರೀರವೊಂದುಂಟು. ಇವು ಬಹಳ ವೃದ್ಧಿ ಹೊಂದಿವೆ. ಮುಟ್ಟಲು ಸಾಧ್ಯವಾಗದಂತಹ ಲೋಹಗಳಲ್ಲಿವೆ. [ಚೆನ್ನಾಗಿ ಕಾಯಿಸಿದ ಲೋಹಗಳನ್ನು ಮುಟ್ಟಲು ಸಾಧ್ಯವಿಲ್ಲವಷ್ಟೆ.] ಈ ನಿನ್ನ ಶರೀರಗಳಿಂದ ಹಸಿವು ಬಾಯಾರಿಕೆಗಳಿಗೆ ಸಂಬಂಧಿಸಿದ ಉಗ್ರವಾದ ಮಾತನ್ನೂ ಪಾಪಗಳಿಗೆ ಸಂಬಂಧಿಸಿದ ತ್ವೇಷವಚಸ್ಸನ್ನೂ ನಾಶಪಡಿಸಿದೆನು. [ಆ ಶರೀರಗಳ ಅನುಗ್ರಹದಿಂದ ಅಂತಹ ಮಾತುಗಳು ಬರದಂತಾಗಲಿ.] ಇಂತಹ ಶರೀರಗಳನ್ನು ಹೊಂದಿರುವ ಅಗ್ನಿದೇವನಿಗೆ ಈ ಆಜ್ಯದ್ರವ್ಯವು ಹುತವಾಗಲಿ.

[ಅಶನಯಾಪಿಪಾಸೇ ಹ ವಾ ಉಗ್ರಂ ವಚಃ ।

ಏನಶ್ಚ ವೈರಹತ್ಯಂ ಚ ತ್ವೇಷಂ ವಚಃ । ತೈ.ಬ್ರಾ. 1.5.9.

ಎಂಬ ಬ್ರಾಹ್ಮಣವಚನಗಳಿಗೆ ಅನುಸಾರವಾಗಿ ಹೀಗೆ ಅರ್ಥ ಮಾಡಿರುತ್ತಾರೆ].

## ವಿನಿಯೋಗ ಸಂಗ್ರಹ

[1]ಅಂಶುರಾಪ್ಯಾಯಯೇತ್ಸೋಮಮೇಷ್ಟಾ[2] ಪ್ರಸ್ತರನಿಹ್ನವಃ ।
ಅಗ್ನೇ[3] ಪೂರ್ವಾಗ್ನಿಮಾಮಂತ್ರ್ಯ ಯಾ ತೇ[4] ಮಾರ್ಜಯತೇ ತಥಾ ॥
ವ್ರತಂ ಚ ತೇನ ಕುರುತೇ ಯಾ ತೇ* ತ್ರ್ಯುಪಸದಾಮಮೀ ।
ಆಜ್ಯಹೋಮಾ *ಅಯಾಶೇತಿ[5] *ರಜೇತಿ[6] ಚ *ಹರೇತಿ[7] ಚ ॥
ತ್ರಿವಿಧೋ ಮಂತ್ರಭೇದಃ ಸ್ಯಾನ್ಮಂತ್ರಾಃ ಸಪ್ತೇಹ ವರ್ಣಿತಾಃ ॥

ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ ಆಪಸ್ತಂಬ - 7
ಬೌಧಾಯನ - 8

### ಅನುವಾಕದಲ್ಲಿರುವ ವಿಶೇಷ ವಿಷಯಗಳು

### ಅ) ಭ.ಭಾ. ಭಾಷ್ಯ

**ಮಂತ್ರಸಂಖ್ಯೆ**

೧. ಅಗ್ಂಶು........ಮಶೀಯ । ಏಕಧನವಿದೇ = ಏಕಮ್ = ಪ್ರಧಾನಂ/ಧನಮ್ = ಉದಕಮ್, ಯೇಷು ಘಟೇಷು ತೇ = ಏಕಧನಾಃ । ತಾನ್ ವಿಂದತಿ = ಲಭತೇ ಇತಿ ಏಕಧನವಿತ್ । ಇಂದ್ರೋ ಹಿ ತಾನ್ ವಿಂದತಿ, ಇಂದ್ರಾರ್ಥತ್ವಾತ್ । ನೀರು ತುಂಬಿರುವ ಘಟಗಳನ್ನು ಹೊಂದುವವನು (ಇಂದ್ರ).

[ಆ. ೧ ಬೌ.೨] ಆಪ್ಯಾಯಯ........ಮಶೀಯ । ಸೋಮನೇ! ಸ್ವಸ್ತಿ = ಅವಿನಾಶೇನ/ಅವಿಘ್ನೇನ; ತೇ = ತವ; ಸುತ್ಯಾಮ್ = ಅಭಿಷವಮ್; ಅಶೀಯ = ಪ್ರಾಪ್ನುಯಾಮ್ । ವಿಘ್ನವಿಲ್ಲದೆ ನಿನ್ನ (ಸೋಮನ) ಅಭಿಷವವನ್ನು ಹೊಂದುವೆನು.

೨) ಏಷ್ಟಾ........ಪೃಥಿವ್ಯೈ । ಏಷ್ಟಃ = ಏಷಣಶೀಲ; ಯಾಗನಿರ್ವೃತ್ತಿದ್ವಾರೇಣ ಫಲಂ ಪ್ರಾಪಯಿತುಂ ತ್ವರಮಾಣ ಪ್ರಸ್ತರ = ಯಾಗವನ್ನು ನೆರವೇರಿಸುವುದರಿಂದ ಫಲವನ್ನು ಹೊಂದಿಸಿಕೊಡಲು ತ್ವರೆ ಪಡುವ ಪ್ರಸ್ತರವೇ!; ರಾಯಃ = ಧನಾನಿ ನಃ ಸಂತು = ನಿನ್ನ ಅನುಗ್ರಹದಿಂದ ಐಶ್ವರ್ಯಗಳು ನಮಗೆ ಲಭಿಸಲಿ. ಅಥವಾ ರಾಯಃ = (ನೀನೇ) ಧನರೂಪನು.

೪) ಯಾ ತೇ.........ಸ್ವಾಹಾ । ರುದ್ರಿಯಾ = ರುದ್ರನಿಗೆ ತಕ್ಕುದಾದ; [ಮೂರು ನಗರಗಳನ್ನು ಧ್ವಂಸ ಮಾಡಿದ ರುದ್ರನ ವೀರ್ಯಕ್ಕೆ ತಕ್ಕದಾದ ಮಹಾವೀರ್ಯವುಳ್ಳ] ತನೂಃ ತಯಾ ನಃ ಪಾಹಿ = ಶರೀರವಿದೆಯೋ ಅದರಿಂದ ನಮ್ಮನ್ನು ಕಾಪಾಡು; ಶತ್ರುಗಳಿಂದ ಪೀಡೆಯುಂಟಾಗದಂತೆ ರಕ್ಷಿಸು; ತಸ್ಯಾಃ= ಅಂತಹ ಶರೀರಕ್ಕೆ ಒಡೆಯನಾದ; ತೇ = ನಿನಗೆ; ಸ್ವಾಹಾ = [ಈ ಪಯಸ್ಸು] ಹುತವಾಗಲಿ; ಅಥವಾ ತಸ್ಯೈ ತನ್ವೈ ಸ್ವಾಹಾ = ಆ ನಿನ್ನ ತನುವಿಗೆ ಈ ಪಯಸ್ಸು ಹುತವಾಗಲಿ.

೫,೬,೭) ಯಾ ತೇ ಅಗ್ನೇ........ಸ್ವಾಹಾ । ಉಗ್ರಂ ವಚೋ ಅಪಾವಧೀಮ್ = ಅಧಿಕ್ಷೇಪ (ನಿಂದೆ) ಮಾಡುವ ಮಾತುಗಳನ್ನು [ಮಾತನಾಡುವವರನ್ನು] ನಾಶಪಡಿಸುತ್ತೇನೆ; ತ್ವೇಷಂ ವಚೋ ಅಪಾವಧೀಮ್ = ಭಯಪಡಿಸುವಂತಹ ರಾಕ್ಷಸಾದಿಗಳ/ಪಾಪಿಗಳ ಮಾತುಗಳನ್ನು (ರಾಕ್ಷಸಾದಿಗಳನ್ನು) ನಾಶಪಡಿಸುತ್ತೇನೆ.

ಅಯಾಶಯಾ = ಪೃಥಿವಿಯಲ್ಲಿರುವ; ರಜಾಶಯಾ = ಅಂತರಿಕ್ಷದಲ್ಲಿರುವ; ಹರಾಶಯಾ = ದ್ಯುಲೋಕದಲ್ಲಿರುವ; (ಶರೀರ). 'ಅಪಾವಧೀಂ' ಎಂಬ ಶಬ್ದಕ್ಕೆ ಉತ್ತಮ ಪುರುಷವು ಪ್ರಥಮಪುರುಷಕ್ಕೆ ವ್ಯತ್ಯಯವಾಗಿ ಬಂದಿದೆ ಎಂದು ಹೇಳಿ ಅಪಾವಧೀಮ್ = ಅಪಾವಧೀತ್ । ಆ ನಿನ್ನ ಶರೀರವು ಉಗ್ರಂ ವಚಃ ತ್ವೇಷಂ ವಚಃ ಅಪಾವಧೀತ್ = ನಿಂದಕರನ್ನೂ, ರಾಕ್ಷಸಾದಿಗಳನ್ನೂ ನಾಶಪಡಿಸಲಿ ಎಂದೂ ಅರ್ಥವನ್ನು ವಿವರಿಸಿದ್ದಾರೆ.

ಅಯಾಶಯಾ = ಉಕ್ಕಿನ ಪಟ್ಟಣದಲ್ಲಿರುವ (ಆ ಪಟ್ಟಣವನ್ನು ಭೇದಿಸಿದ); ರಜಾಶಯಾ = ಬೆಳ್ಳಿಯ ಪಟ್ಟಣದಲ್ಲಿರುವ; ಹರಾಶಯಾ = ಚಿನ್ನದ ಪಟ್ಟಣದಲ್ಲಿರುವ; ಎಂಬ ಅರ್ಥವನ್ನೂ

ತೇಷಾಮಸುರಾಣಾಂ....... [ತೈ.ಸಂ. 6.2.3.]

ಎಂಬ ಬ್ರಾಹ್ಮಣವಚನವನ್ನನುಸರಿಸಿ ತಿಳಿಸಿರುತ್ತಾರೆ. ರಾಕ್ಷಸರಿಗೆ ಉಕ್ಕಿನ, ಬೆಳ್ಳಿಯ ಮತ್ತು ಚಿನ್ನದ ಪಟ್ಟಣಗಳಿದ್ದವು. ರುದ್ರನು ಅವುಗಳನ್ನು ಭೇದಿಸಿದನು ಎಂದು ಆ ಬ್ರಾಹ್ಮಣವಚನದ ಅರ್ಥ.

## ಆ) ಮೀಮಾಂಸಾ

**೧. ಉಪಸತ್ತುಗಳ ಸಂಖ್ಯೆಯ ಸಿದ್ಧಿ ಹೇಗೆ?** [ಜೈ.ಸೂ. 5.3.]

ಅಗ್ನಿಚಯನಪ್ರಕರಣದಲ್ಲಿ 'ಷಡುಪಸದಃ' [ಆಪ.ಶ್ರೌ.ಸೂ. 16-35-6] ಎಂಬ

ವಚನವಿದೆ. ಉಪಸತ್ತುಗಳು ಆರು ಹೇಗಾಗುತ್ತದೆ? ಎಂಬುದು ಇಲ್ಲಿ ಸಂಶಯ.

ಅಳತೆಯನ್ನು ಮಾಡುವಾಗ ಅಳತೆಯ ಕೋಲನ್ನು ಪೂರ್ತಿ ನೆಲದ ಮೇಲಿಟ್ಟು ಮತ್ತೆ ಮುಂದಕ್ಕೆ ಅಳತೆ ಮಾಡುತ್ತಾರೆ. ಹೀಗೆಯೇ 'ಏಕಾದಶರುದ್ರ'ವೆಂದರೆ ರುದ್ರಾಧ್ಯಾಯವನ್ನೇ ಇಡೀ ಹನ್ನೊಂದು ಬಾರಿ ಪಠಿಸುತ್ತಾರೆ. ಅಂತೆಯೇ ಮೂರು ಉಪಸತ್ತುಗಳನ್ನು ಒಮ್ಮೆ ಪೂರ್ಣ ಮೂರನ್ನೂ ಮಾಡಿ ಅನಂತರ ಪುನಃ ಮಾಡಬೇಕು. ಇದು ಇಲ್ಲಿನ ಪೂರ್ವಪಕ್ಷ.

ಇಲ್ಲಿಯ ಸಿದ್ಧಾಂತವು ಹೀಗಿದೆ : ಪ್ರಕೃತಿಯಾಗದಲ್ಲಿ ಕ್ರಮವು ಹೀಗೆ ಇದೆ. ದೀಕ್ಷಣೀಯೇಷ್ಟಿಯ ಅನಂತರ ದಿನದಲ್ಲಿ ಪ್ರಥಮೋಪಸತ್ತು. ಅದರ ಮರುದಿನ ದ್ವಿತೀಯೋಪಸತ್ತು. ಅದರ ಮಾರನೆಯ ದಿನ ತೃತೀಯೋಪಸತ್ತು. ಈ ಮೂರನ್ನೂ ಮುಗಿಸಿ ನಂತರ ಮತ್ತೊಂದು ಬಾರಿ ಮಾಡುವುದಾದರೆ ಮೊದಲನೆಯ ಉಪಸತ್ತು ಮೊದಲನೆಯದಾಗಿರದೆ ನಾಲ್ಕನೆಯದಾಗುತ್ತದೆ. ಆದ್ದರಿಂದ ಅವು ಅನುಷ್ಠಿಸಲ್ಪಡುವ ಸ್ಥಾನದಲ್ಲಿ ಹೆಚ್ಚಿಸಬೇಕು. ಅದರಂತೆ ಮೊದಲನೆಯ ದಿನ ಪ್ರಥಮೋಪಸತ್ತನ್ನು ಎರಡು ಬಾರಿ ಅನುಷ್ಠಿಸಿ, ಎರಡನೆಯ ದಿನ ದ್ವಿತೀಯೋಪಸತ್ತನ್ನೂ ಎರಡು ಬಾರಿ ಅನುಷ್ಠಿಸಿ, ಮೂರನೆಯ ದಿನ ತೃತೀಯೋಪಸತ್ತನ್ನು ಎರಡು ಬಾರಿ ಅನುಷ್ಠಿಸುವುದರಿಂದ ಆರು ಉಪಸತ್ತುಗಳಾಗುತ್ತವೆ. ಅಲ್ಲದೆ ಪ್ರಕೃತಿಯಾಗದಲ್ಲಿ ಅನುಷ್ಠಿಸುವ ಉಪಸತ್ತುಗಳ ಕ್ರಮಭಂಗವೂ ಬರುವುದಿಲ್ಲ.

ಏಕಾದಶ ಅನುವಾಕಗಳಿಂದೊಡಗೂಡಿದ ಸಮೂಹಕ್ಕೆ 'ರುದ್ರಾಧ್ಯಾಯ'ವೆಂಬ ಹೆಸರು. ಆದ್ದರಿಂದ ಅದನ್ನು ಪೂರ್ಣವಾಗಿಯೇ ಪಠನ ಮಾಡಬೇಕು. ಇಲ್ಲಿ ಹಾಗಿಲ್ಲ.

**೨. ದ್ವಾದಶೋಪಸತ್ತುಗಳು ಪ್ರಕೃತಿಗೆ ಇವೆಯೇ?** **[ಜೈ.ಸೂ. 3.3.]**

ಜ್ಯೋತಿಷ್ಟೋಮಪ್ರಕರಣದಲ್ಲಿ

'ತಿಸ್ರ ಏವ ಸಾಹ್ನಸ್ಯೋಪಸದೋ ದ್ವಾದಶಾಹೀನಸ್ಯ' [ತೈ.ಸಂ.6-2-5]

ಎಂಬ ವಾಕ್ಯವಿದೆ. ಇಲ್ಲಿ 'ದ್ವಾದಶ ಉಪಸದಃ' ಎಂಬುದು ಪ್ರಕೃತಿಯಾಗಕ್ಕೆ ಅನ್ವಯಿಸುವುದೇ ಇಲ್ಲವೇ ಎಂಬುದು ಇಲ್ಲಿನ ಸಂಶಯ.

ಇಲ್ಲಿಯ ಪೂರ್ವಪಕ್ಷವು ಹೀಗಿದೆ : 'ಸಾಹ್ನ'ವೆಂದರೆ ಒಂದೇ ದಿನ ಸೋಮಯಾಗವಿರುವ ಜ್ಯೋತಿಷ್ಟೋಮ. ಅದರಲ್ಲಿ ಮೂರು ಉಪಸತ್ತುಗಳು ಇರುತ್ತವೆ.

ಇವುಗಳನ್ನು ದಿನಕ್ಕೆ ಒಂದರಂತೆ ಅನುಷ್ಠಿಸುತ್ತಾರೆ. ಮೇಲಿನ ಶ್ರುತಿವಾಕ್ಯದಲ್ಲಿರುವ 'ಅಹೀನಸ್ಯ ದ್ವಾದಶ' ಎನ್ನುವುದೂ ಪ್ರಕರಣಬಲದಿಂದ ಜ್ಯೋತಿಷ್ಟೋಮಕ್ಕೇ ಅನ್ವಯಿಸುತ್ತದೆ. ಜ್ಯೋತಿಷ್ಟೋಮವೂ ಒಂದು ಅಹೀನವೇ. ಏಕೆಂದರೆ ಅದು ಸೌಮಿಕಗಳ ಪ್ರಕೃತಿಯಾದುದರಿಂದ ಸರ್ವಾಂಗಪೂರ್ಣವಾಗಿ ಅಹೀನವೇ .ಆಗಿದೆ; ಹೀನವಲ್ಲ. ಆದುದರಿಂದ ಜ್ಯೋತಿಷ್ಟೋಮದಲ್ಲಿ ಮೂರು ಅಥವಾ ಹನ್ನೆರಡು ಉಪಸತ್ತುಗಳನ್ನು ಅನುಷ್ಠಿಸಬಹುದು.

ಇಲ್ಲಿಯ ಸಿದ್ಧಾಂತವು ಹೀಗಿದೆ: ದ್ವಿರಾತ್ರವು ಮೊದಲುಗೊಂಡು ದ್ವಾದಶಾಹದವರೆಗಿನ ಸೋಮಯಾಗಗಳಿಗೆ ರೂಢವಾದ 'ಅಹೀನ' ಶಬ್ದವು ವಾಚಕವಾಗಿದೆ. 'ನ ಹೀನಃ = ' ಅಹೀನಃ' ಎಂದು ಸಮಾಸವನ್ನು ಮಾಡುವುದಾದರೆ 'ಅಯಜ್ಞಃ' ಎಂಬಂತೆ 'ಅಹೀನಃ' ಎಂದಾಗಬೇಕಾಗುತ್ತದೆ. ಶ್ರುತಿಯಲ್ಲಿ 'ಅಹೀನಸ್ಯ' ಎಂದು ಸ್ವರವು ಇದೆ. 'ಯೋಗಾದ್ರೂಢಿರ್ಬಲೀಯಸೀ' [ಅವಯವಾರ್ಥಕ್ಕಿಂತಲೂ ರೂಢ್ಯರ್ಥವೇ ಮುಖ್ಯವಾದುದು] ಎಂಬ ನ್ಯಾಯವೂ ಇದೆ. ಆದುದರಿಂದ 'ಅಹೀನಸ್ಯ' ಎಂಬ ಷಷ್ಠೀಶ್ರುತಿಯಿಂದ ಪ್ರಕರಣಬಾಧೆಯನ್ನು ಮಾಡಿ ದ್ವಿರಾತ್ರಾದಿಗಳಲ್ಲಿ ಮಾತ್ರ ದ್ವಾದಶ ಉಪಸತ್ತುಗಳು ಅನುಷ್ಠಿಸಲ್ಪಡುತ್ತವೆ. ಪ್ರಕೃತಿಯಲ್ಲಿ ಇಲ್ಲ.

**೩. ಸೌಮಿಕವೇದಿಯು ಯಾವುದಕ್ಕೆ ಉಪಕಾರಕ? [ಜೈ.ಸೂ. 3.1]**

ಪ್ರಾಚೀನವಂಶಮಂಡಪವು ತನ್ನಲ್ಲಿ ದಾರ್ಶಿಕವೇದಿಯನ್ನೂ ಒಳಗೊಂಡಿದೆ.* ಅದಕ್ಕಿಂತಲೂ ಪೂರ್ವದಿಕ್ಕಿನಲ್ಲಿ ಸದೋಹವಿರ್ಧಾನಗಳಿಗೆ ಸಾಕಾಗುವಷ್ಟು ಭೂಮಿಯ ಭಾಗವಿದೆ. ಇವೆಲ್ಲವೂ ಸೇರಿ 'ಸೌಮಿಕವೇದಿ'ಯಾಗುತ್ತದೆ. ಈ ಸೌಮಿಕವೇದಿಯು ಮುಖ್ಯವಾದ ಸೋಮಯಾಗಕ್ಕೆ ಮಾತ್ರವೇ? ಅಥವಾ ಅಮುಖ್ಯವಾದ ಅಗ್ನೀಷೋಮೀಯ ಮುಂತಾದ ಅಂಗಗಳಿಗೂ ಉಪಕಾರಕವಾಗುತ್ತದೆಯೇ? ಇದು ಇಲ್ಲಿನ ಸಂಶಯ.

ಇಲ್ಲಿಯ ಪೂರ್ವಪಕ್ಷವು ಹೀಗಿದೆ: 'ಷಟ್ತ್ರಿಂಶತ್ಪ್ರಕ್ರಮಾಃ ಪ್ರಾಚೀ, ಚತುರ್ವಿಂಶತಿರಗ್ರೇಣ, ತ್ರಿಂಶಜ್ಜಘನೇನ' [ಮೈ.ಸಂ. 3.8.4] ಸೌಮಿಕವೇದಿಯು ಪೂರ್ವ-ಪಶ್ಚಿಮವಾಗಿ 36 ಹೆಜ್ಜೆಗಳಷ್ಟೂ, ಮುಂಭಾಗದಲ್ಲಿ 24 ಹೆಜ್ಜೆಗಳಷ್ಟೂ, ಹಿಂಭಾಗದಲ್ಲಿ 30 ಹೆಜ್ಜೆಗಳಷ್ಟೂ ಇರುತ್ತದೆ. 'ಇಯತಿ ಶಕ್ಷ್ಯಾಮಹೇ!' ಈ ವೇದಿಯಲ್ಲಿ

* ಕೃ.ಯ.ವೇದ ಕನ್ನಡ ಪ್ರಕಾಶನ ಸಂಪುಟ-೧ ಭಾಗ ೩.

ಸೋಮಯಾಗವನ್ನು ಮಾಡಲು ಸಮರ್ಥರಾಗುತ್ತೇವೆ. ಎಂಬ ಅಂಶವು ಶ್ರುತಿಯಿಂದ ತಿಳಿಯುತ್ತದೆ. ಸೋಮಯಾಗವು ಪ್ರಧಾನ. ಅಗ್ನೀಷೋಮೀಯಾದಿಗಳು ಅಂಗಗಳು. ಪ್ರಧಾನವೇ ಫಲಕ್ಕೆ ಸಾಧನ. ಆದುದರಿಂದ ಪ್ರಧಾನವನ್ನೇ ಮಾಡಲು ಇಚ್ಛೆಯಿರುತ್ತದೆ. ಅಲ್ಲದೆ ಅಂಗಗಳಿಗೆ ಸೌಮಿಕವೇದಿಯೇ ಆಗಬೇಕೆಂಬುದೇನೂ ಇಲ್ಲ. ಸೋಮಯಾಗವನ್ನು ಮಾತ್ರ ಆ ವೇದಿಯಲ್ಲಿಯೇ ಮಾಡಬೇಕೆಂದು ವಿಧಿಯಿದೆ. ಆದುದರಿಂದ ಸೌಮಿಕ ವೇದಿಯು ಪ್ರಧಾನಕ್ಕೆ ಮಾತ್ರ ಉಪಕಾರಕವಾಗುತ್ತದೆ. ಅಂಗಗಳಿಗಲ್ಲ.

ಇಲ್ಲಿಯ ಸಿದ್ಧಾಂತವು ಹೀಗಿದೆ : ಅಂಗಸಹಿತವಾದ ಪ್ರಧಾನವೇ ಫಲಕ್ಕೆ ಕಾರಣವಾಗುತ್ತದೆ. 'ಇಯತಿ ಶಕ್ಷ್ಯಾಮಹೇ' ಎನ್ನುವುದು ಅಂಗಸಹಿತವಾದ ಸೋಮ ಯಾಗವನ್ನು ಇಲ್ಲಿ ಮಾಡಲು ಸಮರ್ಥರಾಗಿದ್ದೇವೆ ಎಂಬ ಅರ್ಥವನ್ನೂ ಕೊಡುತ್ತದೆ. ಆದುದರಿಂದ ಹವಿರಾಸಾದನಾದಿಯಾದ ಅಂಗಗಳ ಅನುಷ್ಠಾನಕ್ಕೂ ಸೌಮಿಕವೇದಿಯು ಉಪಕಾರಕವಾಗುತ್ತದೆ.

೪. ದೀಕ್ಷಿತನ ಪಯಃಪಾನವು ಹೇಗೆ? [ಜೈ.ಸೂ. 6.8.]

ಜ್ಯೋತಿಷ್ಟೋಮ ಪ್ರಕರಣದಲ್ಲಿ 'ಪಯೋ ಬ್ರಾಹ್ಮಣಸ್ಯ ವ್ರತಮ್' [ತೈ.ಆ. 2.8.] [ದೀಕ್ಷಿತನಾದ ಬ್ರಾಹ್ಮಣನು ಹಾಲನ್ನು ಕುಡಿಯಬೇಕು] ಎಂಬ ವಚನವಿದೆ. ಬೇರೆ ಯಾವುದಾದರೂ ಇದ್ದಾಗಲೂ ಹಾಲನ್ನು ಕುಡಿಯಬೇಕೇ? ಅಥವಾ ಇಲ್ಲದಿದ್ದಾಗಲೂ ಕುಡಿಯಬೇಕೇ? ಎಂಬುದು ಸಂಶಯ.

ಇಲ್ಲಿಯ ಪೂರ್ವಪಕ್ಷವು ಹೀಗಿದೆ; ಲೋಕದಲ್ಲಿ ದ್ರವ್ಯಸಮೃದ್ಧಿಯಿರುವವನು ಬಗೆಬಗೆಯ ಭಕ್ಷ್ಯಭೋಜ್ಯಗಳನ್ನು ತಿನ್ನಬಲ್ಲನು. ಇಲ್ಲದಿದ್ದವನು ರೊಟ್ಟಿಯೋ, ಗಂಜಿಯೋ ಯಾವುದಾದರೂ ಸಿಕ್ಕಿದುದನ್ನು ತಿನ್ನುತ್ತಾನೆ. ಅಂತೆಯೇ ದೀಕ್ಷಿತನೂ ಸಹ ಏನೂ ಬೇರೆಯದು ಇಲ್ಲದಿದ್ದಾಗ ಹಾಲನ್ನು ಆಹಾರವನ್ನಾಗಿ ಇಟ್ಟುಕೊಳ್ಳಬೇಕು.

ಇಲ್ಲಿಯ ಸಿದ್ಧಾಂತವು ಹೀಗಿದೆ; ಇಲ್ಲಿ 'ಪಯೋ ಬ್ರಾಹ್ಮಣಸ್ಯ ವ್ರತಮ್' ಎಂಬ ವಾಕ್ಯವಿದೆ. 'ವ್ರತ' ಎಂಬ ಶಬ್ದವು ತಪ್ಪದೆ ಅನುಸರಿಸಬೇಕಾದ ನಿಯಮವನ್ನು ಹೇಳುತ್ತದೆ. 'ಬೇರೆ ಏನೂ ಇಲ್ಲದಿದ್ದಾಗ' ಎಂಬುದಾಗಿ ವಚನದಲ್ಲಿ ಹೇಳಿಲ್ಲ. ಆದುದರಿಂದ ಬೇರೆ ಬೇಕಾದಷ್ಟು ಭಕ್ಷ್ಯ-ಭೋಜ್ಯಗಳಿದ್ದರೂ ದೀಕ್ಷಿತನು ಹಾಲನ್ನೇ ಆಹಾರವಾಗಿ ಇಟ್ಟುಕೊಳ್ಳಬೇಕೆಂದು ಈ ವಿಧಿಯು [illegible]ವನ್ನು ಸೂಚಿಸುತ್ತದೆ.

**೫. ದೀಕ್ಷಿತನಿಗೆ ಅಜೀರ್ಣವಾದರೂ ಪಯೋವ್ರತವಿದೆಯೇ? [ಜೈ.ಸೂ. 6.8]**

ಜ್ಯೋತಿಷ್ಟೋಮಪ್ರಕರಣದಲ್ಲಿ 'ಮಧ್ಯಂದಿನೇ ಮಧ್ಯರಾತ್ರೇ ವ್ರತಂ ವ್ರತಯತಿ' ಎಂದು ಪಯೋವ್ರತವನ್ನೂ ಅದರ ಕಾಲವನ್ನೂ ಹೇಳಿದೆ. ದೀಕ್ಷಿತನಿಗೆ ಅಜೀರ್ಣವು ಸಂಭವಿಸಿದರೂ ಪಯೋವ್ರತನಿಯಮವುಂಟೇ? ಇಲ್ಲವೇ? ಎಂಬುದು ಇಲ್ಲಿನ ಸಂಶಯ.

ಇಲ್ಲಿಯ ಪೂರ್ವಪಕ್ಷವಿದು; ವಿಧಿವಾಕ್ಯದಲ್ಲಿ ಯಾವ ವಿಧವಾದ ವಿಶೇಷವೂ ಇಲ್ಲದೆ ಪಯೋವ್ರತವನ್ನು ವಿಧಾನ ಮಾಡಿರುವುದರಿಂದ ನಿಯಮಾದೃಷ್ಟಸಿದ್ಧಿಗಾಗಿ ಪಯೋವ್ರತ ನಿಯಮವನ್ನು ಪಾಲಿಸಬೇಕು.

ಇಲ್ಲಿಯ ಸಿದ್ಧಾಂತ ಹೀಗಿದೆ:ಅಜೀರ್ಣವಾಗಿರುವವನು ಆಹಾರವನ್ನು ತೆಗೆದುಕೊಂಡರೆ ಅವನ ಅಜೀರ್ಣತೆಯು ಹೆಚ್ಚಾಗಿ ಅವನು ಹಾಸಿಗೆ ಹಿಡಿಯುವ ಪ್ರಸಂಗವು ಬರಬಹುದು. ಆಗ ಪ್ರಧಾನವಾದ ಯಾಗಾನುಷ್ಠಾನಕ್ಕೇ ತೊಂದರೆಯುಂಟಾದೀತು. ಆದುದರಿಂದ ಅಂತಹ ಸಂದರ್ಭದಲ್ಲಿ ಪಯೋವ್ರತಾನುಷ್ಠಾನವನ್ನು ಮಾಡಬೇಕಾಗಿಲ್ಲ.

**೯) ಛಂದಸ್ಸು**

ಈ ಅನುವಾಕದಲ್ಲಿ ಎಲ್ಲವೂ ಯಜುಸ್ಸುಗಳೆಂದು ಸಾಯಣರ ಮತ. ಆದುದರಿಂದ ಅವರ ಮತದಂತೆ ಛಂದಸ್ಸಿಲ್ಲ.

ಈ ಮೂರರ ಛಂದಸ್ಸನ್ನು ಮಿಶ್ರರು ನಿರ್ದೇಶಿಸಿದ್ದಾರೆ.

**೧) ಯಾ ತೇ ಅಗ್ನೇಽಯಾಶ್ಶಯಾ...........ಸ್ವಾಹಾ। ಅನುಷ್ಟುಪ್**

**೨) ಯಾ ತೇ ಅಗ್ನೇ ರಜಾಶಯಾ............ಸ್ವಾಹಾ। ಅನುಷ್ಟುಪ್**

**೩) ಯಾ ತೇ ಅಗ್ನೇ ಹರಾಶಯಾ..........ಸ್ವಾಹಾ। ಅನುಷ್ಟುಪ್**

ಹೀಗೆ ಈ ಹನ್ನೊಂದನೆಯ ಅನುವಾಕದಲ್ಲಿ ಉಪಸತ್ತುಗಳು ಹೇಳಲ್ಪಟ್ಟವು. ಮಧ್ಯಮೋಪಸತ್ತಿನ ದಿನದಲ್ಲಿ ಸ್ವೀಕೃತವಾದ ಮೂವತ್ತಾರು ಹೆಜ್ಜೆಗಳ ವೇದಿಪ್ರದೇಶದ ಪೂರ್ವಭಾಗದಲ್ಲಿನ ಉತ್ತರವೇದಿಯು ಮುಂದಿನ ಹನ್ನೆರಡನೆಯ ಅನುವಾಕದಲ್ಲಿ ಹೇಳಲ್ಪಡುತ್ತದೆ.

---

## ॥ ದ್ವಾದಶೋऽನುವಾಕಃ ॥

**ವಿತ್ತಾಯನೀ ಮೇऽಸಿ ತಿಕ್ತಾಯನೀ**

**ಮೇऽಸ್ಯವತಾನ್ಮಾ ನಾಥಿತಮವತಾನ್ಮಾ ವ್ಯಥಿತಂ**

---

ವಿತ್ತಾಯನೀತಿ ವಿತ್ತ-ಅಯನೀ । ಮೇ । ಅಸಿ । ತಿಕ್ತಾಯನೀತಿ ತಿಕ್ತ-ಅಯನೀ । ಮೇ।

ಅಸಿ । ಅವತಾತ್ । ಮಾ । ನಾಥಿತಮ್ । ಅವತಾತ್ । ಮಾ । ವ್ಯಥಿತಮ್।

---

| ಮಂತ್ರ | ವಿನಿಯೋಗ (ಬೌಧಾಯನ) |
|---|---|
| ವಿತ್ತಾಯನೀ ಮೇऽಸಿ। | ಶಮ್ಯೆ [ಗದೆಯಂತಿರುವ ಒತ್ತೋಳಿನಷ್ಟಿರುವ ದಂಡ]ಯಿಂದ ವೇದಿಯ ಉತ್ತರಭಾಗದಲ್ಲಿ ಎರಡು ಅಥವಾ ಮೂರು ಹೆಜ್ಜೆಗಳಲ್ಲಿ ಚಾತ್ವಾಲಪ್ರದೇಶವನ್ನು ಪೂರ್ವದಲ್ಲಿ ಅಳೆಯಲು. |
| ತಿಕ್ತಾಯನೀ ಮೇऽಸಿ। | ಅಲ್ಲಿಯೇ ದಕ್ಷಿಣದಲ್ಲಿ ಅಳೆಯಲು |
| ಅವತಾನ್ಮಾ ನಾಥಿತಮ್। | ಪಶ್ಚಿಮದಲ್ಲಿ ಅಳೆಯಲು. |
| ಅವತಾನ್ಮಾ ವ್ಯಥಿತಮ್। | ಉತ್ತರದಲ್ಲಿ ಅಳೆಯಲು. ಈ ನಾಲ್ಕು ಮಂತ್ರಗಳಿಂದ ನಾಲ್ಕು ದಿಕ್ಕುಗಳಲ್ಲಿ ಹತ್ತು ಹೆಜ್ಜೆಯ ಪರಿಮಾಣವಿರುವ ಉತ್ತರವೇದಿಯನ್ನು ಗುರುತಿಸಲು- ಆಪಸ್ತಂಬ. |

---

[ಎಲೈ ಉತ್ತರವೇದಿಯೇ! ನೀನು] **ಮೇ**=ನನಗೆ; **ವಿತ್ತಾಯನೀ ಅಸಿ**=ಅಗ್ನಿರೂಪಧನವನ್ನು ಕೊಡುವವಳು ಆಗಿರುವೆ; **ಮೇ**=ನನಗೆ; **ತಿಕ್ತಾಯನೀ**=ಅಗ್ನಿಜ್ವಾಲೆಯನ್ನು ಒದಗಿಸಿಕೊಡತಕ್ಕವಳು; **ಅಸಿ** = ಆಗಿರುವೆ; ❖**ನಾಥಿತಮ್** = ಅಗ್ನಿಯನ್ನು ಬೇಡುತ್ತಿರುವ; **ಮಾ** = ನನ್ನನ್ನು; **ಅವತಾತ್** = ರಕ್ಷಿಸು; ❖**ವ್ಯಥಿತಮ್**=ಅಗ್ನಿಯು ಸಿಕ್ಕದಿರಬಹುದೆಂದು ಭೀತನಾಗಿರುವ; **ಮಾ** = ನನ್ನನ್ನು; **ಅವತಾತ್** = **ರಕ್ಷಿಸು.**

---

ಎಲೈ ಉತ್ತರವೇದಿಯೇ! ಯಜಮಾನನಿಗೆ ಅಗ್ನಿಯೇ ಧನ. ಆ ಅಗ್ನಿಯನ್ನು

# ವಿದೇರಗ್ನಿರ್ನಭೋ ನಾಮಾಗ್ನೇ ಅಂಗಿರೋ ಯೋಽಸ್ಯಾಂ ಪೃಥಿವ್ಯಾಮಸ್ಯಾಯುಷಾ ನಾಮ್ನೇಹಿ ಯತ್ತೇಽನಾಧೃಷ್ಟಂ

ವಿದೇಃ । ಅಗ್ನಿಃ । ನಭಃ । ನಾಮ । ಅಗ್ನೇ । ಅಂಗಿರಃ । ಯಃ । ಅಸ್ಯಾಮ್ । ಪೃಥಿವ್ಯಾಮ್ । ಅಸಿ । ಆಯುಷಾ । ನಾಮ್ನಾ । ಏತಿ । ಇಹಿ ।* ಯತ್ । ತೇ। ಅನಾಧೃಷ್ಟಮಿತ್ಯನಾ-ಧೃಷ್ಟಮ್ ।

| ಮಂತ್ರ | ವಿನಿಯೋಗ |
|---|---|
| ವಿದೇರಗ್ನಿ......ದಧೇ । | ಮಂಡಿಯ ಆಳದಷ್ಟು ಅಗೆದು ಆ ಮಣ್ಣನ್ನು ಉತ್ತರವೇದಿಯಲ್ಲಿ ಹಾಕಲು—ಆಪಸ್ತಂಬ. |
| ೧) ವಿದೇರಗ್ನಿ....ನಾಮ್ನೇಹಿ । | ಚಾತ್ವಾಲದೇಶದಲ್ಲಿ ಬರ್ಹಿಸ್ಸನ್ನಿಟ್ಟು ಸ್ಫ್ಯದಿಂದ ಹೊಡೆಯಲು. |
| ೨) ಯತ್ತೇ.......ದಧೇ । | ಆ ಮಣ್ಣನ್ನು ಉತ್ತರವೇದಿಯಲ್ಲಿ ಹಾಕಲು—ಬೌ. |

+ವಿದೇಃ = ಉತ್ತರವೇದಿಗೆ ಸಂಬಂಧಿಸಿದ; [ಯಃ] ಅಗ್ನಿಃ = ಯಾವ ಅಗ್ನಿಯಿದ್ದಾನೆಯೋ; [ಅವನು] ನಭಃ ನಾಮ = ನಭನೆಂದು ಪ್ರಸಿದ್ಧನಾಗಿದ್ದಾನೆ; [ಅವನಿಗೆ] ನಭಃ = ನಭನೆಂದು; ನಾಮ = ಹೆಸರು; ಅಂಗಿರಃ = ಗಾರ್ಹಪತ್ಯಾದ್ಯಂಗಗಳಲ್ಲಿ ಸಾರಭೂತನಾದ; ಅಗ್ನೇ = ಅಗ್ನಿಯೇ! ಯಃ = ಯಾವ; [ನೀನು]; ಅಸ್ಯಾಂ ಪೃಥಿವ್ಯಾಮ್ = [ಈ ಚಾತ್ವಾಲ ಮೃದ್ರೂಪ] ಪೃಥಿವಿಯಲ್ಲಿ; ಅಸಿ = ಇರುವೆಯೋ; [ಆ ನೀನು] ಆಯುಷಾ = ಆಯುಸ್ಸನ್ನು ಕೊಡುವ; ನಾಮ್ನಾ = [ನಭನೆಂಬ] ಹೆಸರಿನಿಂದ [ಕೂಡಿದವನಾಗಿ] ಆ ಇಹಿ= [ಉತ್ತರವೇದಿಗೆ] ಬಾ. + ಯತ್ = ಯಾವ; ತೇ = ನಿನ್ನ; ಅನಾಧೃಷ್ಟಮ್ = [ಯಾರಿಂದಲೂ] ತಿರಸ್ಕರಿಸಲ್ಪಡದ;

ಕೊಡತಕ್ಕವಳು ನೀನು. ✿ಹೋಮ ಮಾಡಲು ಅಗ್ನಿಜ್ವಾಲೆಯನ್ನು ನನಗೆ ಕೊಡತಕ್ಕವಳು ನೀನು ✿ ಅಗ್ನಿಯನ್ನು ಬೇಡುತ್ತಿರುವ ನನ್ನನ್ನು ರಕ್ಷಿಸು.

# ನಾಮ ಯಜ್ಞಿಯಂ ತೇನ ತ್ವಾಽಽದಧೇಽಗ್ನೇ* ಅಂಗಿರೋ

---

ನಾಮ । ಯಜ್ಞಿಯಮ್ । ತೇನ । ತ್ವಾ । ಏತಿ । ದಧೇ । ಅಗ್ನೇ । ಅಂಗಿರಃ ।

---

| ಮಂತ್ರ | ವಿನಿಯೋಗ |
|---|---|
| ವಿದೇರಗ್ನಿರ್ನಭೋ ನಾಮ [ಅನುಷಂಗ] | ಎರಡನೆಯ ಬಾರಿ |
| ನಾಮಾಗ್ನೇ.....ದ್ವಿತೀಯಸ್ಯಾಂ ಪೃಥಿವ್ಯಾಂ...ದಧೇ । | ಉತ್ತರ ವೇದಿಯಲ್ಲಿ ಧೂಳನ್ನು ಹಾಕಲು. |

---

**ಯಜ್ಞಿಯಮ್** = ಯಜ್ಞಕ್ಕೆ ಸಂಬಂಧಿಸಿದ; **ನಾಮ** = [ನಭವೆಂಬ] ಹೆಸರುಂಟೋ; **ತೇನ** = ಆ ಹೆಸರಿನಿಂದ[ವ್ಯವಹರಿಸಿ]; **ತ್ವಾ** = ನಿನ್ನನ್ನು; **ಆದಧೇ** = [ಉತ್ತರವೇದಿಯಲ್ಲಿ] ಹಾಕುತ್ತೇನೆ. + **ಅಗ್ನೇ ಅಂಗಿರಃ** = ಗಾರ್ಹಪತ್ಯಾದ್ಯಂಗಗಳಲ್ಲಿ ಸಾರಭೂತನಾದ ಅಗ್ನಿಯೇ!

---

❁ ಅಗ್ನಿಯು ಸಿಕ್ಕುವನೋ ಇಲ್ಲವೋ ಎಂಬ ಶಂಕೆಯಿಂದ ಭೀತನಾಗಿರುವ ನನ್ನನ್ನು ಅಗ್ನಿಯನ್ನು ಕೊಟ್ಟು ರಕ್ಷಿಸು.

ಉತ್ತರವೇದಿಗೆ ಸಂಬಂಧಿಸಿದ ಅಗ್ನಿಗೆ ನಭನೆಂದು ಹೆಸರು. ಗಾರ್ಹಪತ್ಯಾದ್ಯಂಗ ಗಳಲ್ಲಿ ಶ್ರೇಷ್ಠನಾಗಿ ಅಂಗಿರನೆನಿಸಿಕೊಳ್ಳುವ ಅಗ್ನಿಯೇ! ಚಾತ್ವಾಲದ ಮಣ್ಣಿನ ರೂಪದಲ್ಲಿರುವ ಪೃಥಿವಿಯಲ್ಲಿ ನೀನಿರುವೆ. ಆ ನೀನು ಆಯುಃಪ್ರದವಾದ ನಭನೆಂಬ ನಾಮದಿಂದ ಯುಕ್ತನಾಗಿ ಉತ್ತರವೇದಿಗೆ ಬಾ. ಯಾರೂ ತಿರಸ್ಕರಿಸಲಾಗದ, ಯಜ್ಞಕ್ಕೆ ಸಂಬಂಧಿಸಿದ ಯಾವ ನಿನ್ನ ಹೆಸರುಂಟೋ ಅದೇ ಹೆಸರಿನಿಂದಲೇ ವ್ಯವಹರಿಸಿ ನಿನ್ನನ್ನು ಉತ್ತರವೇದಿಯಲ್ಲಿ ಇಡುತ್ತೇನೆ.

ನಭನೂ, ಅಂಗಿರನೂ ಆಗಿರುವ ಅಗ್ನಿಯೇ! ನೀನು ಅಂತರಿಕ್ಷಲೋಕದಲ್ಲಿಯೂ, ದ್ಯುಲೋಕದಲ್ಲಿಯೂ ಇರುವೆ. ನೀನು ನಭನೆಂಬ ಹೆಸರಿನೊಡನೆ ಉತ್ತರವೇದಿಗೆ ಬಾ. ಯಾರೂ ತಿರಸ್ಕರಿಸಲಾಗದ ಯಜ್ಞಕ್ಕೆ ಸಂಬಂಧಿಸಿದ ನಿನ್ನ ಹೆಸರಿನಿಂದಲೇ ಉತ್ತರ

**ಯೋ ದ್ವಿತೀಯಸ್ಯಾಂ ತೃತೀಯಸ್ಯಾಂ ಪೃಥಿವ್ಯಾಮಸ್ಯಾಯುಷಾ**

**ನಾಮ್ನೇಹಿ ಯತ್ತೇಽನಾಧೃಷ್ಟಂ ನಾಮ (೧) ಯಜ್ಞಿಯಂ**

---

ಯಃ । ದ್ವಿತೀಯಸ್ಯಾಮ್ । ತೃತೀಯಸ್ಯಾಮ್ । ಪೃಥಿವ್ಯಾಮ್ । ಅಸಿ । ಆಯುಷಾ।

ನಾಮ್ನಾ । ಏತಿ । ಇಹಿ । ಯತ್ । ತೇ । ಅನಾಧೃಷ್ಟಮಿತ್ಯನಾ-ಧೃಷ್ಟಮ್ । ನಾಮ

(೧)। ಯಜ್ಞಿಯಮ್ ।

---

| ಮಂತ್ರ | ವಿನಿಯೋಗ |
| --- | --- |
| ವಿದೇರಗ್ನಿರ್ನಭೋ ನಾಮ [ಅನುಷಂಗ] | ಮೂರನೆಯ ಬಾರಿ |
| ನಾಮಾಗ್ನೇ............ಯಸ್ತೃತೀಯಸ್ಯಾಂ | ಉತ್ತರವೇದಿಯಲ್ಲಿ ಧೂಳನ್ನು |
| .............ದಧೇ। | ಹಾಕಲು.* |

---

**ಯಃ** = ಯಾವ ನೀನು; **ದ್ವಿತೀಯಸ್ಯಾಂ ಪೃಥಿವ್ಯಾಮ್** = ಎರಡನೆಯದಾದ [ವಿಸ್ತೀರ್ಣವಾದ] ಅಂತರಿಕ್ಷಲೋಕದಲ್ಲಿ; **ಅಸಿ** = ಇರುವೆಯೋ; [ಆ ನೀನು] +ಅಗ್ನೇ ಅಂಗಿರಃ **ಯಃ ತೃತೀಯಸ್ಯಾಂ ಪೃಥಿವ್ಯಾಮ್ ಅಸಿ** = ಗಾರ್ಹಪತ್ಯಾದ್ಯಂಗಗಳಲ್ಲಿ ಸಾರಭೂತನಾದ ಅಗ್ನಿಯೇ! ಯಾವ ನೀನು ಮೂರನೆಯದಾದ ವಿಸ್ತೀರ್ಣವಾದ ದ್ಯುಲೋಕದಲ್ಲಿ ಇರುವೆಯೋ [ಆ ನೀನು]; **ಆಯುಷಾ** = ಆಯುಸ್ಸನ್ನು ಕೊಡುವ; **ನಾಮ್ನಾ** = [ನಭನೆಂಬ] ಹೆಸರಿನಿಂದ [ಕೂಡಿದವನಾಗಿ] **ಆ ಇಹಿ**= [ಉತ್ತರವೇದಿಗೆ] ಬಾ; **ಯತ್ ತೇ** = ಯಾವ ನಿನ್ನ; **ಅನಾಧೃಷ್ಟಮ್** = [ಯಾರಿಂದಲೂ] ತಿರಸ್ಕರಿಸಲ್ಪಡದ; **ಯಜ್ಞಿಯಮ್** = ಯಜ್ಞಕ್ಕೆ ಸಂಬಂಧಿಸಿದ; **ನಾಮ** = (ನಭವೆಂಬ) ಹೆಸರುಂಟೋ;

---

ವೇದಿಯಲ್ಲಿ ಇಡುತ್ತೇನೆ.

ಎಲೈ ಉತ್ತರವೇದಿಯೇ! ನೀನು ಸಿಂಹಿಯಾಗಿದ್ದೀಯೆ. ಮಹನೀಯಳೂ ಆಗಿ

---

*ನಾಲ್ಕನೆಯ ಬಾರಿ ಮಂತ್ರರಹಿತವಾಗಿ ಹಾಕಬೇಕು.

## ತೇನ ತ್ವಾಽಽದಧೇ ಸಿಗ್ಂಹೀರಸಿ ಮಹಿಷೀರಸ್ಯುರು ಪ್ರಥಸ್ವೋರು ತೇ ಯಜ್ಞಪತಿಃ ಪ್ರಥತಾಂ

---

ತೇನ । ತ್ವಾ । ಏತಿ । ದಧೇ । ಸಿಗ್ಂಹೀಃ । ಅಸಿ । ಮಹಿಷೀಃ । ಅಸಿ । ಉರು।

ಪ್ರಥಸ್ವ । ಉರು । ತೇ । ಯಜ್ಞಪತಿರಿತಿ ಯಜ್ಞ-ಪತಿಃ । ಪ್ರಥತಾಮ್ ।

---

| ಮಂತ್ರ | ವಿನಿಯೋಗ |
| --- | --- |
| ಸಿಗ್ಂಹೀರಸಿ ಮಹಿಷೀರಸಿ । | ಅಧ್ವರ್ಯುವು ಮರಳನ್ನು ಹಾಕುವುದರಲ್ಲಿ (ಕೂಡಿಸಲು) |
| ಉರು.........ಪ್ರಥತಾಮ್ । | ಮಣ್ಣನ್ನು ಸಮನಾಗಿ ಹರಡಲು. |

---

**ತೇನ** = ಆ ಹೆಸರಿನಿಂದ [ವ್ಯವಹರಿಸಿ]; **ತ್ವಾ** = ನಿನ್ನನ್ನು; **ಆದಧೇ** = [ಉತ್ತರವೇದಿಯಲ್ಲಿ] ಹಾಕುತ್ತೇನೆ. +[ಎಲೈ ಉತ್ತರವೇದಿಯೇ!] **ಸಿಗ್ಂಹೀಃ ಅಸಿ** = [ನೀನು] ಸಿಂಹಿ ಯಾಗಿದ್ದೀಯೆ; **ಮಹಿಷೀಃ ಅಸಿ**=ದೊಡ್ಡದಾಗಿದ್ದೀಯೆ/ಗೌರವಿಸಬೇಕಾದವಳಾಗಿದ್ದೀಯೆ. [ಮಹಿಷೀ = ಎಮ್ಮೆಯಾಗಿರುವೆ.] + [ಎಲೈ! ಉತ್ತರವೇದಿಯೇ!] **ಉರು** = ಹೆಚ್ಚಾಗಿ; **ಪ್ರಥಸ್ವ** = ಹರಡಿಕೋ; **ತೇ** = ನಿನ್ನ; **ಯಜ್ಞಪತಿಃ** = ಯಜ್ಞದ ಒಡೆಯನಾದ [ಯಜಮಾನನು]; **ಉರು** = ಹೆಚ್ಚಾಗಿ; **ಪ್ರಥತಾಮ್** = ವೃದ್ಧಿ ಹೊಂದಲಿ. [ಪ್ರಜೆಯಿಂದಲೂ, ಪಶುಗಳಿಂದಲೂ ಸಂಪನ್ನನಾಗಲಿ.]

---

ದ್ದೀಯೆ. ದೊಡ್ಡವಳೂ ಆಗಿದ್ದೀಯೆ.

[ಈ ಮಂತ್ರಕ್ಕೆ ತೈತ್ತಿರೀಯಬ್ರಾಹ್ಮಣಾನುಸಾರಿಯಾದದ್ದು ಈ ಅರ್ಥ, 'ಮಹಿಷೀ' ಎಂಬ ಶಬ್ದಕ್ಕೆ ಎಮ್ಮೆ ಎಂಬ ಅರ್ಥವೂ ಬ್ರಾಹ್ಮಣಾಂತರದಲ್ಲಿರಬಹುದು.]

ಉತ್ತರವೇದಿಯೇ! ನೀನೂ ವಿಸ್ತೀರ್ಣಳಾಗು. ನಿನ್ನ ಯಜಮಾನನೂ ಪ್ರಜೆಯಿಂದಲೂ, ಪಶುಗಳಿಂದಲೂ ಸಮೃದ್ಧನಾಗಲಿ.

ಎಲೈ ಉತ್ತರವೇದಿಯೇ! ನೀನು ಗಟ್ಟಿಯಾಗು.

# ಧ್ರುವಾಸಿ ದೇವೇಭ್ಯಃ ಶುಂಧಸ್ವ ದೇವೇಭ್ಯಶ್ಶುಂಭಸ್ವೇಂದ್ರ-ಘೋಷಸ್ತ್ವಾ ವಸುಭಿಃ ಪುರಸ್ತಾತ್ಪಾತು

---

ಧ್ರುವಾ । ಅಸಿ । ದೇವೇಭ್ಯಃ । ಶುಂಧಸ್ವ । ದೇವೇಭ್ಯಃ । ಶುಂಭಸ್ವ । ಇಂದ್ರಘೋಷ ಇತೀಂದ್ರ-ಘೋಷಃ । ತ್ವಾ । ವಸುಭಿರಿತಿ ವಸು-ಭಿಃ । ಪುರಸ್ತಾತ್ । ಪಾತು ।

---

| ಮಂತ್ರ | ವಿನಿಯೋಗ |
|---|---|
| ಧ್ರುವಾಸಿ । | ಸ್ಫ್ಯದಿಂದ ಮಟ್ಟಸ ಮಾಡಲು |
| ದೇವೇಭ್ಯಶ್ಶುಂಧಸ್ವ । | ಅವೋಕ್ಷಣವನ್ನು ಮಾಡಲು. |
| ದೇವೇಭ್ಯಃ ಶುಂಭಸ್ವ । | ಮರಳನ್ನು ಹಾಕಲು. |
| ಇಂದ್ರಘೋಷಸ್ತ್ವಾ....ಪಾತು । | ಉತ್ತರವೇದಿಯ ಪೂರ್ವಭಾಗದಲ್ಲಿ ಪ್ರೋಕ್ಷಿಸಲು. |

---

+[ಎಲೈ ಉತ್ತರವೇದಿಯೇ!] [ನೀನು] ಧ್ರುವಾ ಅಸಿ = ಧೃಡಳಾಗು. + [ಎಲೈ ಉತ್ತರ ವೇದಿಯೇ!] ದೇವೇಭ್ಯಃ = ದೇವತೆಗಳಿಗಾಗಿ; ಶುಂಧಸ್ವ = ಶುದ್ಧಳಾಗು; + [ಎಲೈ ಉತ್ತರ ವೇದಿಯೇ] ದೇವೇಭ್ಯಃ = ದೇವತೆಗಳಿಗೋಸ್ಕರ; ಶುಂಭಸ್ವ = ಪ್ರಕಾಶಮಾನಳಾಗು. + [ಎಲೈ ಉತ್ತರವೇದಿಯೇ!] ಇಂದ್ರಘೋಷಃ= ಇಂದ್ರಘೋಷದೇವನು; ವಸುಭಿಃ (ಸಹ) = ವಸುಗಳೊಡನೆ; ತ್ವಾ = ನಿನ್ನನ್ನು; ಪುರಸ್ತಾತ್ = ಪೂರ್ವಭಾಗದಲ್ಲಿ; ಪಾತು = ರಕ್ಷಿಸಲಿ.

---

ಎಲೈ ಉತ್ತರವೇದಿಯೇ! ನೀನು ದೇವತೆಗಳಿಗಾಗಿ ಶುದ್ಧಳಾಗು. ❁ ಎಲೈ ಉತ್ತರವೇದಿಯೇ! ನೀನು ದೇವತೆಗಳಿಗಾಗಿ ಶೋಭಿತಳಾಗು. ❁ ಎಲೈ ಉತ್ತರವೇದಿಯೇ! ಇಂದ್ರಘೋಷದೇವನು* ವಸುಗಳೊಡಗೂಡಿ ನಿನ್ನನ್ನು ಪೂರ್ವಭಾಗದಲ್ಲಿ ರಕ್ಷಿಸಲಿ.

---

* ಟಿಪ್ಪಣಿ : ಇಲ್ಲಿರುವ 'ಇಂದ್ರಘೋಷ' ಮುಂತಾದ ನಾಲ್ಕು ಶಬ್ದಗಳಿಗೆ ಭಾಷ್ಯದಲ್ಲಿ ಹೆಚ್ಚಿನ ವಿವರಣೆಯು ಇಲ್ಲ. ಇಂದ್ರಘೋಷ = ಇಂದ್ರ, ಮನೋಜವ = ಯಮ, ಪ್ರಚೇತಾ = ವರುಣ, ವಿಶ್ವಕರ್ಮಾ = ಕುಬೇರ ಎಂಬುದಾಗಿ ದಿಕ್ಕುಗಳ ಒಡೆಯರೆಂದು ವಿವರಿಸಬಹುದು.

**ಮನೋಜವಾಸ್ತ್ವಾ ಪಿತೃಭಿರ್ದಕ್ಷಿಣತಃ ಪಾತು**

**ಪ್ರಚೇತಾಸ್ತ್ವಾ ರುದ್ರೈಃ ಪಶ್ಚಾತ್ಪಾತು ವಿಶ್ವಕರ್ಮಾ**

**ತ್ವಾಽಽದಿತ್ಯೈರುತ್ತರತಃ ಪಾತು**

---

ಮನೋಜವಾ ಇತಿ ಮನಃ-ಜವಾಃ । ತ್ವಾ । ಪಿತೃಭಿರಿತಿ ಪಿತೃ-ಭಿಃ । ದಕ್ಷಿಣತಃ । ಪಾತು। ಪ್ರಚೇತಾ ಇತಿ ಪ್ರ-ಚೇತಾಃ । ತ್ವಾ । ರುದ್ರೈಃ । ಪಶ್ಚಾತ್ । ಪಾತು । ವಿಶ್ವಕರ್ಮೇತಿ ವಿಶ್ವ-ಕರ್ಮಾ । ತ್ವಾ । ಆದಿತ್ಯೈಃ । ಉತ್ತರತ ಇತ್ಯುತ್-ತರತಃ । ಪಾತು ।

---

| ಮಂತ್ರ | ವಿನಿಯೋಗ |
|---|---|
| ಮನೋಜವಾಸ್ತ್ವಾ...ಪಾತು । | ಉತ್ತರವೇದಿಯ ದಕ್ಷಿಣಭಾಗದಲ್ಲಿ ಪ್ರೋಕ್ಷಿಸಲು |
| ಪ್ರಚೇತಾಸ್ತ್ವಾ......ಪಾತು । | ಉತ್ತರವೇದಿಯ ಪಶ್ಚಿಮಭಾಗದಲ್ಲಿ ಪ್ರೋಕ್ಷಿಸಲು |
| ವಿಶ್ವಕರ್ಮಾ ತ್ವಾ.....ಪಾತು । | ಉತ್ತರವೇದಿಯ ಉತ್ತರಭಾಗದಲ್ಲಿ ಪ್ರೋಕ್ಷಿಸಲು |

---

+ಮನೋಜವಾಃ = ಮನೋಜವದೇವನು; ಪಿತೃಭಿಃ (ಸಹ) = ಪಿತೃದೇವತೆಗಳೊಡನೆ; ತ್ವಾ = ನಿನ್ನನ್ನು; ದಕ್ಷಿಣತಃ = ದಕ್ಷಿಣಭಾಗದಲ್ಲಿ; ಪಾತು = ರಕ್ಷಿಸಲಿ. + ಪ್ರಚೇತಾಃ = ಪ್ರಚೇತದೇವನು; ರುದ್ರೈಃ (ಸಹ) = ರುದ್ರರೊಡನೆ; ತ್ವಾ = ನಿನ್ನನ್ನು; ಪಶ್ಚಾತ್ = ಪಶ್ಚಿಮಭಾಗದಲ್ಲಿ; ಪಾತು = ಕಾಪಾಡಲಿ. + ವಿಶ್ವಕರ್ಮಾ = ವಿಶ್ವಕರ್ಮದೇವನು; ಆದಿತ್ಯೈಃ (ಸಹ) = ಆದಿತ್ಯರೊಡನೆ; ತ್ವಾ = ನಿನ್ನನ್ನು; ಉತ್ತರತಃ = ಉತ್ತರಭಾಗದಲ್ಲಿ; ಪಾತು = ರಕ್ಷಿಸಲಿ.

---

ಮನೋಜವದೇವನು ಪಿತೃಗಳೊಡಗೂಡಿ ನಿನ್ನನ್ನು ದಕ್ಷಿಣಭಾಗದಲ್ಲಿ ರಕ್ಷಿಸಲಿ.

ಪ್ರಚೇತದೇವನು ರುದ್ರನೊಡನೆ ಪಶ್ಚಿಮಭಾಗದಲ್ಲಿ ರಕ್ಷಿಸಲಿ.

ವಿಶ್ವಕರ್ಮದೇವನು ಆದಿತ್ಯರೊಡನೆ ಉತ್ತರದಿಕ್ಕಿನಲ್ಲಿ ನಿನ್ನನ್ನು ರಕ್ಷಿಸಲಿ.

ಸಿಗ್ಂಹೀರಸಿ ಸಪತ್ನಸಾಹೀ ಸ್ವಾಹಾ ಸಿಗ್ಂಹೀರಸಿ ಸುಪ್ರಜಾವನಿಃ ಸ್ವಾಹಾ ಸಿಗ್ಂಹೀ[ಸಿಗ್ಂಹೀಃ (೨) ಅಸಿ ರಾಯಸ್ಪೋಷವನಿಃ] ರಸಿ ರಾಯಸ್ಪೋಷವನಿಃ ಸ್ವಾಹಾ

---

ಸಿಗ್ಂಹೀಃ । ಅಸಿ । ಸಪತ್ನಸಾಹೀತಿ ಸಪತ್ನ-ಸಾಹೀ । ಸ್ವಾಹಾ । ಸಿಗ್ಂಹೀಃ । ಅಸಿ। ಸುಪ್ರಜಾವನಿರಿತಿ ಸುಪ್ರಜಾ-ವನಿಃ । ಸ್ವಾಹಾ । ಸಿಗ್ಂಹೀಃ [೨] ಅಸಿ । ರಾಯಸ್ಪೋಷವನಿರಿತಿ ರಾಯಸ್ಪೋಷ-ವನಿಃ । ಸ್ವಾಹಾ ।

---

| ಮಂತ್ರ | ವಿನಿಯೋಗ |
|---|---|
| ಸಿಗ್ಂಹೀರಸಿ ಸಪತ್ನಸಾಹೀ ಸ್ವಾಹಾ । | ಉತ್ತರವೇದಿಯಲ್ಲಿ ಹಿರಣ್ಯ |
| ಸಿಗ್ಂಹೀ.......ಸುಪ್ರಜಾವನಿಃ ಸ್ವಾಹಾ । | ವನ್ನಿಟ್ಟು ಜುಹೂವಿನಲ್ಲಿ |
| ಸಿಗ್ಂಹೀರಸಿ....ರಾಯಸ್ಪೋಷವನಿಃ ಸ್ವಾಹಾ । | ಪಂಚಗೃಹೀತ (ಆಜ್ಯವನ್ನು |

---

+[ಎಲೈ ಉತ್ತರವೇದಿಯೇ! ನೀನು] **ಸಿಗ್ಂಹೀಃ ಅಸಿ** = ಸಿಂಹೀರೂಪಧಾರಿಣಿಯಾಗಿರುವೆ; **ಸಪತ್ನಸಾಹೀ**[ಅಸಿ] = ಶತ್ರುನಾಶಕಳೂ ಆಗಿರುವೆ; **ಸ್ವಾಹಾ** = [ನಿನಗೆ ಇದು] ಹುತವಾಗಲಿ. + **ಸಿಗ್ಂಹೀಃ ಅಸಿ** = [ನೀನು] ಸಿಂಹಿಯಾಗಿರುವೆ; **ಸುಪ್ರಜಾವನಿಃ** [ಅಸಿ] = ಒಳ್ಳೆಯ ಮಕ್ಕಳನ್ನೂ, ಭೃತ್ಯರನ್ನೂ ಕೊಡತಕ್ಕವಳಾಗಿರುವೆ; **ಸ್ವಾಹಾ** = [ನಿನಗೆ ಈ ಆಜ್ಯವು] ಹುತವಾಗಲಿ. + **ಸಿಗ್ಂಹೀಃ ಅಸಿ** = ಸಿಂಹೀಸ್ವರೂಪಳಾಗಿರುವೆ; **ರಾಯಸ್ಪೋಷವನಿಃ ಅಸಿ** = ಪಶು-ಧನಾದಿ ಸಂಪತ್ತಿಯನ್ನು ಕೊಡುವವಳೂ ಆಗಿರುವೆ; **ಸ್ವಾಹಾ** = [ನಿನಗೆ ಈ ಆಜ್ಯದ್ರವ್ಯವು] ಹುತವಾಗಲಿ.

---

ಹೇ! ಉತ್ತರವೇದಿಯೇ! ಸಿಂಹಿಯಾದ ನೀನು ಶತ್ರುನಾಶಕಳು. ನಿನಗೆ ಇದು ಹುತವಾಗಲಿ. ಸಿಂಹೀರೂಪಧಾರಿಣಿಯಾದ ನೀನು ಒಳ್ಳೆಯ ಮಕ್ಕಳನ್ನೂ, ಸೇವಕರನ್ನೂ ಕೊಡತಕ್ಕವಳು. ನಿನಗೆ ಇದು ಹುತವಾಗಲಿ.

## ಸಿಗ್ಂಹೀರಸ್ಯಾದಿತ್ಯವನಿಃ ಸ್ವಾಹಾ ಸಿಗ್ಂಹೀರಸ್ಯಾವಹ ದೇವಾನ್ದೇವಯತೇ ಯಜಮಾನಾಯ ಸ್ವಾಹಾ

---

ಸಿಗ್ಂಹೀಃ । ಅಸಿ । ಆದಿತ್ಯವನಿರಿತ್ಯಾದಿತ್ಯ-ವನಿಃ । ಸ್ವಾಹಾ । ಸಿಗ್ಂಹೀಃ । ಅಸಿ। ಏತಿ । ವಹ । ದೇವಾನ್। ದೇವಯತ ಇತಿ ದೇವ-ಯತೇ । ಯಜಮಾನಾಯ । ಸ್ವಾಹಾ।

---

| ಮಂತ್ರ | ವಿನಿಯೋಗ |
| --- | --- |
| ಸಿಗ್ಂಹೀಃ........ಆದಿತ್ಯವನಿಃ ಸ್ವಾಹಾ।<br>ಸಿಗ್ಂಹೀಃ.........ಸ್ವಾಹಾ । | ಐದು ಬಾರಿ ಹಾಕಿ) ಮಾಡಿ ಉತ್ತರ ವೇದಿಯಲ್ಲಿ ವಕ್ರವಾಗಿ ಈ ಐದು ಮಂತ್ರಗಳಿಂದ ಆಜ್ಯವನ್ನು ಹಾಕಲು. |

---

+ಸಿಗ್ಂಹೀಃ = ಸಿಂಹಿಯ ರೂಪವನ್ನು ಧರಿಸಿದವಳಾಗಿ; ಅಸಿ = ಇರುವೆ; ಆದಿತ್ಯವನಿಃ [ಅಸಿ] = ಭೂಮಿಯಲ್ಲಿ ಒಳ್ಳೆಯ ಪ್ರತಿಷ್ಠೆಯನ್ನು ಕೊಡತಕ್ಕವಳಾಗಿರುವೆ; ಸ್ವಾಹಾ = [ನಿನಗೆ ಇದು] ಹುತವಾಗಲಿ. + ಸಿಗ್ಂಹೀಃ ಅಸಿ = [ನೀನು] ಸಿಂಹಿರೂಪಿಣಿಯಾಗಿದ್ದೀಯೆ; ದೇವಯತೇ = [ಯಾಗಕ್ಕಾಗಿ] ದೇವತೆಗಳನ್ನು ಇಚ್ಛಿಸುವ; ಯಜಮಾನಾಯ = ಯಜಮಾನನಿಗಾಗಿ; ದೇವಾನ್ = ದೇವತೆಗಳನ್ನು; ಆವಹ = ಕರೆದುಕೊಂಡು ಬಾ; ಸ್ವಾಹಾ = [ನಿನಗೆ ಈ ಆಜ್ಯದ್ರವ್ಯವು] ಹುತವಾಗಲಿ.

---

ಸಿಂಹೀರೂಪಧಾರಿಣಿಯಾದ ನೀನು ಪಶುಗಳೇ ಮೊದಲಾದ ಧನಗಳ ಸಮೃದ್ಧಿಯನ್ನುಂಟುಮಾಡತಕ್ಕವಳು. ನಿನಗೆ ಇದು ಹುತವಾಗಲಿ.

ಸಿಂಹೀರೂಪಧಾರಿಣಿಯಾದ ನೀನು ಭೂಮಿಗೆ ಸಂಬಂಧಿಸಿದ ಒಳ್ಳೆಯ ಸ್ಥಿತಿಯನ್ನು ಕೊಡುವವಳು. ನಿನಗೆ ಇದು ಹುತವಾಗಲಿ.

ಸಿಂಹಿಸ್ವರೂಪಿಣಿಯಾದ ನೀನು ಯಾಗನಿರ್ವಹಣೆಗಾಗಿ ದೇವತೆಗಳನ್ನು ಇಚ್ಛಿಸುವ ಯಜಮಾನನಿಗಾಗಿ ದೇವತೆಗಳನ್ನು ಕರೆದುಕೊಂಡು ಬಾ. ನಿನಗೆ ಈ ಆಜ್ಯದ್ರವ್ಯವು ಹುತವಾಗಲಿ.

ಭೂತೇಭ್ಯಸ್ತ್ವಾ ವಿಶ್ವಾಯುರಸಿ ಪೃಥಿವೀಂ ದೃಗ್ಂಹ
ಧ್ರುವಕ್ಷಿದಸ್ಯಂತರಿಕ್ಷಂ ದೃಗ್ಂಹಾಚ್ಯುತಕ್ಷಿದಸಿ ದಿವಂ

---

ಭೂತೇಭ್ಯಃ । ತ್ವಾ । ವಿಶ್ವಾಯುರಿತಿ ವಿಶ್ವ-ಆಯುಃ । ಅಸಿ । ಪೃಥಿವೀಮ್ । ದೃಗ್ಂಹ। ಧ್ರುವಕ್ಷಿದಿತಿ ಧ್ರುವ-ಕ್ಷಿತ್ । ಅಸಿ । ಅಂತರಿಕ್ಷಮ್ । ದೃಗ್ಂಹ । ಅಚ್ಯುತಕ್ಷಿದಿತ್ಯ ಚ್ಯುತ-ಕ್ಷಿತ್ । ಅಸಿ । ದಿವಮ್ ।

---

| ಮಂತ್ರ | ವಿನಿಯೋಗ |
|---|---|
| ಭೂತೇಭ್ಯಸ್ತ್ವಾ । | ಸ್ರುಚವನ್ನು ಮೇಲಕ್ಕೆ ಎತ್ತಲು |
| ವಿಶ್ವಾಯುಃ.........ದೃಗ್ಂಹ । | ಒಂದನೆಯ ಪೌತುದ್ರವಪರಿಧಿಯನ್ನಿಡಲು |
| ಧ್ರುವಕ್ಷಿದಸಿ.........ದೃಗ್ಂಹ । | ಎರಡನೆಯ ಪೌತುದ್ರವಪರಿಧಿಯನ್ನಿಡಲು |
| ಅಚ್ಯುತ............ದೃಗ್ಂಹ । | ಮೂರನೆಯ ಪೌತುದ್ರವಪರಿಧಿಯನ್ನಿಡಲು [ಪೂತುದ್ರು = ದೇವದಾರು] |

---

+ಭೂತೇಭ್ಯಃ = ಪುರಾತನರಾದ ದೇವತೆಗಳಿಗಾಗಿ; ತ್ವಾ = ನಿನ್ನನ್ನು [ಸ್ರುಚವನ್ನು] [ಉದ್ಗೃಹ್ಣಾಮಿ = ಮೇಲಕ್ಕೆ ಎತ್ತುತ್ತೇನೆ.] + [ಎಲೈ! ಮಧ್ಯಮಪರಿಧಿಯೇ! ನೀನು] ವಿಶ್ವಾಯುಃ ಅಸಿ = ಸಂಪೂರ್ಣಾಯುಸ್ಸನ್ನು ಕೊಡುವವನಾಗಿದ್ದೀಯೆ. [ನೀನು] ಪೃಥಿವೀಂ ದೃಗ್ಂಹ = ಭೂಮಿಯನ್ನು ದೃಢಳನ್ನಾಗಿ ಮಾಡು. + [ಎಲೈ ದಕ್ಷಿಣಪರಿಧಿಯೇ! ನೀನು] ಧ್ರುವಕ್ಷಿತ್ ಅಸಿ = ಸ್ಥಿರವಾದ ನಿವಾಸವಾಗಿದ್ದೀಯೆ. [ಸ್ಥಿರವಾದ, ವಾಸಸ್ಥಾನವುಳ್ಳವನಾಗಿದ್ದೀಯೆ.] ಅಂತರಿಕ್ಷಮ್ ದೃಗ್ಂಹ = ಅಂತರಿಕ್ಷವನ್ನು ದೃಢವನ್ನಾಗಿ ಮಾಡು. + [ಎಲೈ ಉತ್ತರಪರಿಧಿಯೇ! ನೀನು] ಅಚ್ಯುತಕ್ಷಿತ್ ಅಸಿ = ನಾಶರಹಿತವಾದ ವಾಸಸ್ಥಾನವುಳ್ಳವನಾಗಿದ್ದೀಯೆ; ದಿವಂ ದೃಗ್ಂಹ = ದ್ಯುಲೋಕವನ್ನು ದೃಢವನ್ನಾಗಿ ಮಾಡು.

---

ಪುರಾತನರಾದ ದೇವತೆಗಳ ಪ್ರೀತ್ಯರ್ಥವಾಗಿ ನಿನ್ನನ್ನು [ಸ್ರುಚವನ್ನು] ಮೇಲಕ್ಕೆ ಎತ್ತುತ್ತೇನೆ.

## ದೃಗ್ಂಹಾಗ್ನೇರ್ಭಸ್ಮಾಸ್ಯಗ್ನೇಃ ಪುರೀಷಮಸಿ ||೧೨-24||

[ನಾಮ ಸುಪ್ರಜಾವನಿಃ ಸ್ವಾಹಾ ಸಿಗ್ಂಹೀಃ ಪಂಚತ್ರಿಗ್ಂಶಚ್ಚ| ]

---

ದೃಗ್ಂಹ | ಅಗ್ನೇಃ | ಭಸ್ಮ | ಅಸಿ | ಅಗ್ನೇಃ | ಪುರೀಷಮ್ | ಅಸಿ || ೧೨ ||

---

| ಮಂತ್ರ | ವಿನಿಯೋಗ |
|---|---|
| ಅಗ್ನೇಃ........ಪುರೀಷಮಸಿ । | ಸಂಭಾರ [ಗುಗ್ಗುಲು ಇತ್ಯಾದಿ]ಗಳನ್ನು ಉತ್ತರ ವೇದಿಯಲ್ಲಿ ಹಾಕಲು. |

---

+[ಎಲೈ ಸಂಭಾರದ್ರವ್ಯಸಮೂಹವೇ! ನೀನು]; ಅಗ್ನೇಃ ಭಸ್ಮ ಅಸಿ = ಅಗ್ನಿಗೆ ಪ್ರಕಾಶಕನಾಗಿದ್ದೀಯೆ; ಅಗ್ನೇಃ ಪುರೀಷಮ್ ಅಸಿ = ಅಗ್ನಿಗೆ ಪೂರಕನೂ ಆಗಿದ್ದೀಯೆ. [ನಿನ್ನನ್ನು ಇಲ್ಲಿ ಹಾಕುತ್ತೇನೆ.]

---

ಮಧ್ಯಮಪರಿಧಿಯೇ! ನೀನು ದೀರ್ಘಾಯುಸ್ಸನ್ನು ಕೊಡುವವನು ನಿನ್ನನ್ನು ಅಗ್ನಿಯ ಪಶ್ಚಾದ್ಭಾಗದಲ್ಲಿ ಮಧ್ಯದಲ್ಲಿ ಇಡುತ್ತೇನೆ. ನೀನು ಭೂಮಿಯು ದೃಢವಾಗಿರುವಂತೆ ಮಾಡು.

ಎಲೈ! ದಕ್ಷಿಣಪರಿಧಿಯೇ! ನೀನು ಸ್ಥಿರವಾದ ನಿವಾಸವುಳ್ಳವನು. ನಿನ್ನನ್ನು ದಕ್ಷಿಣದಲ್ಲಿ ಇಡುತ್ತೇನೆ. ನೀನು ಅಂತರಿಕ್ಷಲೋಕವನ್ನು ದೃಢವನ್ನಾಗಿ ಮಾಡು.

ಎಲೈ! ಉತ್ತರಪರಿಧಿಯೇ! ನೀನು ನಾಶರಹಿತವಾದ ವಾಸಸ್ಥಾನವುಳ್ಳವನು. ನಿನ್ನನ್ನು ಉತ್ತರದಲ್ಲಿ ಇಡುತ್ತೇನೆ. ನೀನು ದ್ಯುಲೋಕವನ್ನು ದೃಢವನ್ನಾಗಿ ಮಾಡು.

ಎಲೈ ಗುಗ್ಗುಲು ಮೊದಲಾ ಪಂಭಾರಗಳ ಸಮೂಹವೇ! ನೀನು ಅಗ್ನಿಯ ಪ್ರಕಾಶಕನಾಗಿರುವೆ. ಅಗ್ನಿಯ ಪೂರಕನೂ ಆಗಿರುವೆ. ಅಗ್ನಿಯನ್ನು ಸಂತೋಷ ಪಡಿಸುವವನೂ ಆಗಿರುವೆ. ನಿನ್ನನ್ನು ಉತ್ತರವೇದಿಯಲ್ಲಿ ಇಡುತ್ತೇನೆ.

ನೀನು ಅಗ್ನಿಯನ್ನು ಪ್ರಕಾಶಗೊಳಿಸು; ತುಂಬಿಸು; ಸಂತೋಷಪಡಿಸು.

## ವಿನಿಯೋಗಸಂಗ್ರಹ

ವಿತ್ತ್ಯೋತ್ತರಾಖ್ಯವೇದ್ಯರ್ಥಂ[1-4] ಚತುರ್ಭಿಃ ಪರಿತೋ ಲಿಖೇತ್ ।
[5,6,7]ವಿದೇಸ್ತ್ರಿಭಿರ್ಹರೇತ್ಪಾಂಸೂನ್ [8]ಸಿಂಹೀರ್ವೇದ್ಯಾಂ ವಿನಿಕ್ಷಿಪೇತ್ ॥
[9]ಉರು ಪ್ರಥಯತೇ ವೇದಿಂ ಧ್ರುವಾ[10] ಸಂಹತ್ಯ ಶಮ್ಯಯಾ ।
[11]ದೇವೇ ಪ್ರೋಕ್ಷ್ಯ ತಥಾ ದೇವೇ[12] ಸಿಕತಾತ್ರಾವಕೀರ್ಯತೇ ॥
[13,14,15,16]ಇಂದ್ರ ಪ್ರೋಕ್ಷ್ಯ ಚತುರ್ದಿಕ್ಷು [17-21]ಸಿಗ್ಂಹೀರಂಸದ್ವಯೇ ತಥಾ ।
ಶ್ರೋಣಿದ್ವಯೇ ಚ ಮಧ್ಯೇ ಚ ವ್ಯಾಘಾರಯತಿ ಪಂಚಭಿಃ ॥
ಭೂತೇಭ್ಯಃ[22] ಸ್ರುಚಮುದ್ಗೃಹ್ಯ ವಿಶ್ವಾ[23-25] ಪರಿಧಯಸ್ತ್ರಯಃ ।
ಅಗ್ನೇಃ[26] ಸಂಸ್ಥಾಪ್ಯ ಸಂಭಾರಾನ್ ಮಂತ್ರಾಃ ಷಡ್ವಿಂಶತಿರ್ಮತಾಃ ॥

ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ ಆಪಸ್ತಂಬ - 26
ಬೌಧಾಯನ - 27

### ಅನುವಾಕದಲ್ಲಿರುವ ವಿಶೇಷ ವಿಷಯಗಳು

### ಅ) ಭ.ಭಾ. ಭಾಷ್ಯ

**ಮಂತ್ರಸಂಖ್ಯೆ**

೧) ವಿತ್ತಾಯನೀ.......। ಮಿಶ್ರರು ಬೌಧಾಯನಮತದಂತೆ ಚಾತ್ವಾಲಪ್ರದೇಶವನ್ನು ಅಳೆಯಲು ಈ ಮಂತ್ರದ ವಿನಿಯೋಗವನ್ನು ಅಂಗೀಕರಿಸಿ ಚಾತ್ವಾಲಪ್ರದೇಶವನ್ನು ಸಂಬೋಧಿಸಿ ನೀನು 'ವಿತ್ತಾಯನೀ' ಮುಂತಾಗಿರುವೆ ಎಂದು ವಿವರಣೆ ನೀಡಿರುತ್ತಾರೆ.

೫) ವಿದೇಃ......ದಧೇ । ನಭಃ ನಾಮ ಅಗ್ನಿರಿತಿ ವಿದೇಃ । ವಿದೇಃ = ವೇದಿತುಮರ್ಹಸಿ । = ನಾನು 'ನಭನೆಂಬ ಅಗ್ನಿಯೆಂದು ತಿಳಿಯಲು ಅರ್ಹನಾಗಿದ್ದೀಯೆ. ಕೆಲವರು ಆ ಪ್ರದೇಶದ ಮಣ್ಣಿನಲ್ಲಿರುವ ಅಗ್ನಿಯೇ ನಭನೆಂದು ಹೇಳುವರು. ಮೂರು ಲೋಕಗಳಲ್ಲಿರುವ ಸೂಕ್ಷ್ಮನಾದ ಅಗ್ನಿಗೆ ನಭನೆಂದು ಹೆಸರು ಎಂದು ಇನ್ನು ಕೆಲವರ ಮತ. ಆ ಮಣ್ಣನ್ನು ತೆಗೆದುಕೊಂಡರೆ ಅಗ್ನಿಯನ್ನು ತೆಗೆದುಕೊಂಡಂತೆ. ನಭೋನಾಮಕನಾದ ನೀನು ನಿನ್ನ ಬೃಹದ್ರೂಪನಾದ ಆಹವನೀಯಾಗ್ನಿಯನ್ನು ಉತ್ತರವೇದಿಯಲ್ಲಿ ಧರಿಸಲು ಸಮರ್ಥನಾಗುವೆ. ಆದುದರಿಂದ ನಿನ್ನನ್ನು ಉತ್ತರವೇದಿಯಲ್ಲಿ ಹಾಕುತ್ತೇನೆ.

೮) ಸಿಗ್^ಂಹೀಃ.......ಅಸಿ । ಸಹನಾತ್ ಸಿಂಹೀಃ [ಶತ್ರುಗಳನ್ನು ಸಹಿಸತಕ್ಕವಳು] [ಸೋಲಿಸತಕ್ಕವಳು.]; ಮಹಿಷೀ = ಮಹತೀ/ಮಹನೀಯಾ ವಾ / ಮಹತಿ ಯಾಗೇ ಸೀದತೀತಿ ವಾ = ದೊಡ್ಡವಳು, ಗೌರವಿಸಲು ಯೋಗ್ಯಳಾದವಳು, ದೊಡ್ಡ ಯಾಗದಲ್ಲಿ ಇರತಕ್ಕವಳು.

೧೩-೧೭) ಇಂದ್ರಘೋಷಃ......ಪಾತು। ಇಂದ್ರಸ್ಯ ಘೋಷಃ = ಸ್ತನಯಿತ್ನುಃ = ಮೇಘಃ = ಮೋಡ । ಮನೋಜವಾಃ = ಯಮಃ । ಪ್ರಚೇತಾಃ = ವರುಣಃ । ವಿಶ್ವಕರ್ಮಾ = ತ್ವಷ್ಟಾ । ಲೋಕಪಾಲರನ್ನು ಹೇಳುವ ಪ್ರಕರಣವಾದುದರಿಂದ ವಿಶ್ವಕರ್ಮಾ = ವೈಶ್ರವಣಃ = ಕುಬೇರಃ ।

೧೯) ಸಿಗ್^ಂಹೀರಸಿ.......ಸ್ವಾಹಾ । ಆದಿತ್ಯವನಿಃ = ಅದಿತಿಪುತ್ರಾಣಾಂ ಸಂಭಕ್ತ್ರೀ = ಅದಿತಿಪುತ್ರರಾದ ಆದಿತ್ಯರನ್ನು ಸೇವಿಸತಕ್ಕವಳು. [ಸಾಯಣರು 'ಅದಿತಿ' ಶಬ್ದಕ್ಕೆ ಭೂಮಿಯೆಂದು ಅರ್ಥ ಮಾಡಿ ಭೂಮಿಗೆ ಸಂಬಂಧಿಸಿದ ಪ್ರತಿಷ್ಠೆಯೆಂದು ಅರ್ಥ ಮಾಡಿರುತ್ತಾರೆ.

೨೫) ಅಚ್ಯುತಕ್ಷಿದಸಿ.........ದೃಗ್^ಂಹ । ಅಚ್ಯುತಕ್ಷಿತ್ - ಅಚ್ಯುತೇ = ಅವಿನಷ್ಟೇ ದಿವಿ ಕ್ಷಿಯತಿ ಇತಿ ಅಚ್ಯುತಕ್ಷಿತ್ । ನಾಶರಹಿತವಾದ ದ್ಯುಲೋಕದಲ್ಲಿರುವವನು.

## ಆ) ಮೀಮಾಂಸಾ

ಈ ಅನುವಾಕದಲ್ಲಿ ಮೀಮಾಂಸಾವಿಚಾರವು ಯಾವುದೂ ಇಲ್ಲ.

## ಇ) ಛಂದಸ್ಸು

ಮಂತ್ರಗಳೆಲ್ಲವೂ ಯಜುಸ್ಸುಗಳೇ. ಆದುದರಿಂದ ಛಂದಸ್ಸಿನ ವಿಚಾರವೂ ಇಲ್ಲ.

## || ತ್ರಯೋದಶೋಽನುವಾಕಃ ||

ಯುಂಜತೇ ಮನ ಉತ ಯುಂಜತೇ ಧಿಯೋ ವಿಪ್ರಾ ವಿಪ್ರಸ್ಯ ಬೃಹತೋ ವಿಪಶ್ಚಿತಃ । ವಿ ಹೋತ್ರಾ ದಧೇ

ಯುಂಜತೇ । ಮನಃ । ಉತ । ಯುಂಜತೇ । ಧಿಯಃ । ವಿಪ್ರಾಃ । ವಿಪ್ರಸ್ಯ । ಬೃಹತಃ। ವಿಪಶ್ಚಿತಃ ॥ ವೀತಿ । ಹೋತ್ರಾಃ । ದಧೇ ।

ಹನ್ನೆರಡನೆಯ ಅನುವಾಕದಲ್ಲಿ ಉತ್ತರವೇದಿಯ ವಿಚಾರಗಳನ್ನು ಹೇಳಲಾಯಿತು. ಹದಿಮೂರನೆಯ ಅನುವಾಕದಲ್ಲಿ ಹವಿರ್ಧಾನವು ಹೇಳಲ್ಪಡುತ್ತದೆ. ಅದು ಉತ್ತರ-ವೇದಿಯ ಸಮೀಪದಲ್ಲಿದೆ.

| ಮಂತ್ರ | ವಿನಿಯೋಗ |
|---|---|
| ಯುಂಜತೇ..........ಪರಿಷ್ಟುತಿಃ । | *ಶಾಲಾಮುಖೀಯದಲ್ಲಿ ಹೋಮ ಮಾಡಲು. |

ಬೃಹತಃ = ವೇದಾಧ್ಯಯನ ಮಾಡಿರುವುದರಿಂದ ದೊಡ್ಡವನಾಗಿರುವ; ವಿಪಶ್ಚಿತಃ = ಅರ್ಥಜ್ಞಾನವನ್ನು ಪಡೆದಿರುವುದರಿಂದ ಪಂಡಿತನಾಗಿರುವ; ವಿಪ್ರಸ್ಯ = ಯಜಮಾನನಿಗೆ ಸಂಬಂಧಿಸಿದ; ವಿಪ್ರಾಃ=ಬ್ರಾಹ್ಮಣರಾದ; ಹೋತ್ರಾಃ=ಋತ್ವಿಜರು; ಮನಃ = ಮನಸ್ಸನ್ನು; ಯುಂಜತೇ= [ಲೌಕಿಕಚಿಂತೆಗಳಿಂದ ದೂರವಿಟ್ಟು ಯಜ್ಞಚಿಂತೆಯಲ್ಲಿಯೇ]ತೊಡಗಿಸುತ್ತಾರೆ. ಉತ = ಮತ್ತು ; ಧಿಯಃ = ಇಂದ್ರಿಯಗಳನ್ನೂ; ಯುಂಜತೇ =[ಯಜ್ಞಾರ್ಥವಾದ

ಯಜಮಾನನು ವೇದಾಧ್ಯಯನಸಂಪನ್ನನಾಗಿ ಬೃಹತ್ತಾಗಿದ್ದಾನೆ. ವೇದಾರ್ಥಜ್ಞಾನವನ್ನು ಹೊಂದಿ ವಿಪಶ್ಚಿತನೂ ಆಗಿದ್ದಾನೆ. ಇಂತಹ ಬ್ರಾಹ್ಮಣನಾದ ಯಜಮಾನನ

*ಸೋಮಯಾಗದಲ್ಲಿ ಉತ್ತರವೇದಿಯಲ್ಲಿ ಅಗ್ನಿಪ್ರಣಯನ ಮಾಡಿದ ಮೇಲೆ ಆ ಅಗ್ನಿಯೇ ಆಹವನೀಯ; ಮೊದಲಿನ ಆಹವನೀಯವು ಗಾರ್ಹಪತ್ಯ; ಮೊದಲಿನ ಗಾರ್ಹಪತ್ಯವು ಶಾಲಾಮುಖೀಯವೆನಿಸಿಕೊಳ್ಳುವುದು.

**ವಯುನಾವಿದೇಕ ಇನ್ಮಹೀ ದೇವಸ್ಯ ಸವಿತುಃ ಪರಿಷ್ಟುತಿಃ॥**

**ಸುವಾಗ್ದೇವ ದುರ್ಯಾಗ್ಂ ಆ ವದ ದೇವಶ್ರುತೌ**

**ದೇವೇಷ್ವಾ ಘೋಷೇಥಾ**

---

ವಯುನಾವಿದಿತಿ ವಯುನ-ವಿತ್ । ಏಕಃ । ಇತ್ । ಮಹೀ । ದೇವಸ್ಯ । ಸವಿತುಃ। ಪರಿಷ್ಟುತಿರಿತಿ ಪರಿ-ಸ್ತುತಿಃ ॥ ಸುವಾಗಿತಿ ಸು-ವಾಕ್ । ದೇವ । ದುರ್ಯಾನ್ । ಏತಿ। ವದ । ದೇವಶ್ರುತಾವಿತಿ ದೇವ-ಶ್ರುತೌ । ದೇವೇಷು । ಏತಿ । ಘೋಷೇಥಾಮ್ ।

---

| ಮಂತ್ರ | ವಿನಿಯೋಗ |
|---|---|
| ಸುವಾಕ್......ಘೋಷೇಥಾಮ್ । | ಹವಿರ್ಧಾನಶಕಟಗಳ ಅಕ್ಷಶಬ್ದವುಂಟಾದರೆ ಅನುಮಂತ್ರಣ ಮಾಡಲು |

---

ತಮ್ಮ ತಮ್ಮ ಕ್ರಿಯೆಗಳಲ್ಲಿ] ತೊಡಗಿಸುತ್ತಾರೆ; [ಇದೆಲ್ಲವನ್ನೂ] **ವಯುನಾವಿತ್** = ಎಲ್ಲ ಮಾರ್ಗಗಳನ್ನೂ ತಿಳಿದಿರುವ[ಸರ್ವಜ್ಞನಾದ]; **ಏಕ ಇತ್** = ಪರಮಾತ್ಮನೊಬ್ಬನೇ; ವಿದಧೇ = ಉಂಟುಮಾಡಿದನು; **ಸವಿತುಃ ದೇವಸ್ಯ** = ಪ್ರೇರಕನಾದ [ಅಂತರ್ಯಾಮಿಯಾದ] ಪರಮಾತ್ಮನ; **ಪರಿಷ್ಟುತಿಃ** = ಸರ್ವವೇದೋಕ್ತಸ್ತುತಿಯು; **ಮಹೀ** = ದೊಡ್ಡದಾಗಿದೆ; [ಆ ದೇವನಿಗೆ]; ಸ್ವಾಹಾ = [ಈ ಆಜ್ಯವು] ಹುತವಾಗಲಿ. +**ದೇವ** = [ಎಲೈ! ಅಕ್ಷಾಭಿಮಾನಿ] ದೇವನೇ!; **ದುರ್ಯಾನ್** = ಮನೆಗಳನ್ನು [ಯಾಗಶಾಲೆಗಳನ್ನು] ಕುರಿತು; **ಸುವಾಕ್** = ಒಳ್ಳೆಯ ಮಾತುಳ್ಳವನಾಗಿ; **ಆ** = ಎಲ್ಲ ಕಡೆಗಳಲ್ಲಿಯೂ; **ವದ** = [ಶ್ರೇಯಸ್ಕರವಾದ ಮಾತನ್ನು] ಹೇಳು; **ದೇವಶ್ರುತೌ** = ದೇವತೆಗಳಿಂದಲೂ ಕೇಳಲ್ಪಟ್ಟಿರುವ ಪ್ರಸಿದ್ಧರಾದ ಅಕ್ಷಗಳೇ! [ಈ ಯಜಮಾನನು ಯಾಗ ಮಾಡುತ್ತಾನೆಂದು] **ದೇವೇಷು** = ದೇವತೆಗಳಲ್ಲಿ; **ಆ ಘೋಷೇಥಾಮ್** = ಎಲ್ಲ ಕಡೆಗಳಲ್ಲಿಯೂ ಘೋಷಿಸಿರಿ.

---

ಹೋಮಕರ್ತೃಗಳಾದ, ಋತ್ವಿಜರಾದ ಬ್ರಾಹ್ಮಣರು ತಮ್ಮ ಮನಸ್ಸನ್ನು ಲೌಕಿಕಚಿಂತೆಗಳಿಂದ ವಿಮುಖಗೊಳಿಸಿ ಯಜ್ಞಚಿಂತೆಯಲ್ಲಿಯೇ ತೊಡಗಿಸುತ್ತಾರೆ. ತಮ್ಮ ಇಂದ್ರಿಯಗಳನ್ನೂ ಯಜ್ಞಕ್ಕೆ ಸಂಬಂಧಿಸಿದ ತಮ್ಮ ತಮ್ಮ ಕಾರ್ಯಗಳಲ್ಲಿಯೇ ಯೋಜಿಸುತ್ತಾರೆ.

**ಮಾ ನೋ ವೀರೋ ಜಾಯತಾಂ ಕರ್ಮಣ್ಯೋ ಯಗ್ಂ ಸರ್ವೇಽನುಜೀವಾಮ ಯೋ ಬಹೂನಾಮಸದ್ವಶೀ|**

---

ಏತಿ | ನಃ | ವೀರಃ | ಜಾಯತಾಮ್ | ಕರ್ಮಣ್ಯಃ | ಯಮ್ | ಸರ್ವೇ| ಅನುಜೀವಾಮೇತ್ಯನು-ಜೀವಾಮ | ಯಃ | ಬಹೂನಾಮ್ | ಅಸತ್ | ವಶೀ||

---

| ಮಂತ್ರ | ವಿನಿಯೋಗ |
|---|---|
| ಆ ನೋ..........ವಶೀ| | ಪತ್ನಿಯು ಸೋಮಕ್ರಯಣಿಯ ಹೆಜ್ಜೆಯ ಆಜ್ಯ ಮಿಶ್ರವಾದ ಧೂಳಿನ ಮೂರನೆಯ ಒಂದು ಭಾಗದಿಂದ ಅಕ್ಷಗಳನ್ನು ಲೇಪಿಸಲು. |

---

❖**ಯಮ್** = ಯಾವನನ್ನು; **ಸರ್ವೇ** = [ನಾವು] ಎಲ್ಲರೂ; **ಅನುಜೀವಾಮ** = ಅನುಸರಿಸಿ ಜೀವಿಸುತ್ತೇವೆಯೋ; **ಯಃ** = ಯಾವನು; **ಬಹೂನಾಮ್**=ಅನೇಕರನ್ನು; **ವಶೀ**=ವಶದಲ್ಲಿ ಇಟ್ಟುಕೊಳ್ಳಬಲ್ಲವನು; **ಅಸತ್** = ಆಗುವನೋ; [ಅಂತಹ] **ಕರ್ಮಣ್ಯಃ** = ಕರ್ಮಗಳಲ್ಲಿ ಕುಶಲನಾದ; **ವೀರಃ** = [ಆಲಸ್ಯರಹಿತನಾದ] ಪುತ್ರನು; **ನಃ**=ನಮಗೆ; **ಆ ಜಾಯತಾಮ್**=

---

ಇವೆಲ್ಲವನ್ನೂ ಸರ್ವಮಾರ್ಗಗಳನ್ನೂ ತಿಳಿದ ಸರ್ವಜ್ಞನಾದ ಪರಮಾತ್ಮನೊಬ್ಬನೇ ಉಂಟುಮಾಡುವವನು. ಅಂತಹ ಸರ್ವಪ್ರೇರಕನಾದ ಅಂತರ್ಯಾಮಿಯಾದ ಪರಮಾತ್ಮನ ಸ್ತುತಿಯು ಸರ್ವವೇದಗಳಲ್ಲಿಯೂ ದೊಡ್ಡದಾಗಿದೆ. **'ಯಃ ಸರ್ವಜ್ಞಃ ಸರ್ವವಿತ್' [ಮುಂಡಕೋಪನಿಷತ್ 1.1.9]** [ಯಾವ ಪರಮಾತ್ಮನು ಸರ್ವಜ್ಞನೋ ಸರ್ವವೇತ್ತನೋ] **ಸ ಏಷ ಸರ್ವಸ್ಯೇಶಾನಃ [ಬೃಹದಾರಣ್ಯಕೋಪನಿಷತ್5.6.1.]** [ಆ ಈ ಪರಮಾತ್ಮನೇ ಎಲ್ಲಕ್ಕೂ ಈಶ್ವರನು] **ಪರಾಸ್ಯ ಶಕ್ತಿರ್ವಿವಿಧೈವ ಶ್ರೂಯತೇ [ಶ್ವೇತಾಶ್ವತರೋಪನಿಷತ್ 6.8.]**[ಈತನ ಪರಾಶಕ್ತಿಯು ಅನೇಕ ವಿಧವಾಗಿ ಕೇಳಲ್ಪಡುತ್ತದೆ]-ಹೀಗೆ ವಿಧವಿಧವಾಗಿದೆ.

ಎಲೈ!ಅಕ್ಷಾಭಿಮಾನಿದೇವನೇ! ಪಾಶಬದ್ಧನಾಗಿ ವರುಣನಾಗಿರುವ ನೀನು ಕ್ರೂರನಾಗಿರದೆ ಯಜಮಾನನ ಮನೆಗಳ ವಿಷಯದಲ್ಲಿ ಒಳ್ಳೆಯ ಮಾತುಳ್ಳವನಾಗಿ ಎಲ್ಲ ಕಡೆಯಲ್ಲಿಯೂ ಶ್ರೇಯಸ್ಕರವಾದ ಮಾತನ್ನೇ ಹೇಳು. ಎಲೈ ಅಕ್ಷದೇವತೆಗಳೇ!ನೀವು ದೇವತೆಗಳಲ್ಲಿಯೂ ಪ್ರಖ್ಯಾತರಾಗಿರುವಿರಿ. ಈ ಯಜಮಾನನು ಯಾಗ ಮಾಡುತ್ತಿರುವನೆಂದು ದೇವತೆಗಳಲ್ಲಿ ಹೆಚ್ಚಾಗಿ ಘೋಷಿಸಿರಿ.

**ಇದಂ ವಿಷ್ಣುರ್ವಿಚಕ್ರಮೇ ತ್ರೇಧಾ ನಿ ದಧೇ ಪದಮ್।**

**ಸಮೂಢಮಸ್ಯ [(೧) ಪಾಗ್ಂಸುರ] ಪಾಗ್ಂಸುರ**

---

ಇದಮ್ । ವಿಷ್ಣುಃ । ವೀತಿ । ಚಕ್ರಮೇ । ತ್ರೇಧಾ । ನೀತಿ । ದಧೇ । ಪದಮ್।

ಸಮೂಢಮಿತಿ ಸಮ್-ಊಢಮ್ । ಅಸ್ಯ (೧) ಪಾಗ್ಂಸುರೇ ।

---

| ಮಂತ್ರ | ವಿನಿಯೋಗ |
|---|---|
| ಇದಮ್..........ಪಾಗ್ಂಸುರೇ । | ದಕ್ಷಿಣಹವಿರ್ಧಾನಶಕಟದ ಬಲಗಡೆಯ ದಾರಿಯಲ್ಲಿ ಹಿರಣ್ಯವನ್ನಿಟ್ಟು ಹೋಮ ಮಾಡಲು. |

---

ಹುಟ್ಟಲಿ. +ವಿಷ್ಣುಃ = ವಿಷ್ಣುವು; [ತ್ರಿವಿಕ್ರಮಾವತಾರವನ್ನು ಮಾಡಿ] ಇದಮ್ = ಈ [ವಿಶ್ವವನ್ನು]; ವಿ ಚಕ್ರಮೇ = ವಿಭಾಗ ಮಾಡಿ ಹೆಜ್ಜೆಯಿಟ್ಟನು. ತ್ರೇಧಾ = [ಭೂಮಿಯಲ್ಲೊಂದು, ಅಂತರಿಕ್ಷದಲ್ಲೊಂದು, ದ್ಯುಲೋಕದಲ್ಲಿ ಒಂದು ಹೀಗೆ] ಮೂರು ಪ್ರಕಾರವಾಗಿ; ಪದಮ್ = ಹೆಜ್ಜೆಯನ್ನು; ನಿ ದಧೇ = ಇಟ್ಟನು. ಅಸ್ಯ = ಈ ಮಹಾವಿಷ್ಣುವಿನ; ಪಾಗ್ಂಸುರೇ = [ಭೂಮ್ಯಾದಿ ಲೋಕಗಳೆಂಬ] ಪಾಂಸು (ಧೂಳು) ಗಳುಳ್ಳ [ಪಾದದಲ್ಲಿ]; ಸಮೂಢಮ್= [ಈ ವಿಶ್ವವು] ಅಂತರ್ಭೂತವಾಯಿತು. [ಆ ವಿಷ್ಣುವಿಗೆ ಇದು ಹುತವಾಗಲಿ].

---

ನಮಗೆ ಕರ್ಮಗಳಲ್ಲಿ ಸಮರ್ಥನಾಗಿಯೂ, ಆಲಸ್ಯವಿಲ್ಲದವನಾಗಿಯೂ ಇರುವ ಪುತ್ರನು ಜನಿಸಲಿ. ಅವನು-ನಾವೆಲ್ಲರೂ ಅವನನ್ನು ಅನುಸರಿಸಿ ಬಾಳುವಂತಹವನು-ಆಗಲಿ. ಹಲವರನ್ನು ತನ್ನ ವಶದಲ್ಲಿ ಇಟ್ಟುಕೊಳ್ಳುವವನೂ ಆಗಲಿ. ಅಂತಹ ಪ್ರಸಿದ್ಧನಾದ ಪುತ್ರನು ನಮಗೆ ಜನಿಸಲಿ.

ವಿಷ್ಣುವು ತ್ರಿವಿಕ್ರಮಾವತಾರ ಮಾಡಿ ವಿಶ್ವವನ್ನು ವಿಭಾಗಿಸಿದಂತೆ ಹೆಜ್ಜೆಯನ್ನಿಟ್ಟನು. ಭೂಮಿಯಲ್ಲಿ ಒಂದು, ಅಂತರಿಕ್ಷದಲ್ಲಿ ಮತ್ತೊಂದು, ದ್ಯುಲೋಕದಲ್ಲಿ ಇನ್ನೊಂದು-ಹೀಗೆ ಮೂರು ಹೆಜ್ಜೆಯನ್ನಿಟ್ಟನು. ಭೂಮ್ಯಾದಿಲೋಕಗಳು ಆತನ ಪಾದದ ಧೂಳಿನಂತಾದವು. ವಿಷ್ಣುವಿನ ಆ ಹೆಜ್ಜೆಯಲ್ಲಿ ಈ ವಿಶ್ವವೆಲ್ಲವೂ ಅಂತರ್ಭೂತವಾಯಿತು. ಆ ವಿಷ್ಣುವಿಗೆ ಇದು ಹುತವಾಗಲಿ.

ಇರಾವತೀ ಧೇನುಮತೀ ಹಿ ಭೂತಗ್ಂ ಸೂಯವಸಿನೀ ಮನವೇ ಯಶಸ್ಯೇ । ವ್ಯಸ್ಕಭ್ನಾದ್ರೋದಸೀ ವಿಷ್ಣುರೇತೇ ದಾಧಾರ

---

ಇರಾವತೀ ಇತೀರಾ-ವತೀ । ಧೇನುಮತೀ ಇತಿ ಧೇನು-ಮತೀ । ಹಿ । ಭೂತಮ್। ಸೂಯವಸಿನೀ ಇತಿ ಸು-ಯವಸಿನೀ । ಮನವೇ । ಯಶಸ್ಯೇ ಇತಿ । ವೀತಿ । ಅಸ್ಕಭ್ನಾತ್। ರೋದಸೀ ಇತಿ । ವಿಷ್ಣುಃ । ಏತೇ ಇತಿ । ದಾಧಾರ ।

---

| ಮಂತ್ರ | ವಿನಿಯೋಗ |
|---|---|
| ಇರಾವತೀ.......ಮಯೂಖೈಃ ॥ | ಉತ್ತರಹವಿರ್ಧಾನಶಕಟಮಾರ್ಗದಲ್ಲಿ ಆಹುತಿಯನ್ನು ಅರ್ಪಿಸಲು. |

---

+[ದ್ಯಾವಾಪೃಥಿವಿಗಳೇ!] ಇರಾವತೀ = ಅನ್ನವುಳ್ಳವರೂ; ಹಿ = ಮತ್ತು; ಧೇನುಮತೀ = ಚೆನ್ನಾಗಿ ಹಾಲು ಕೊಡುವ ಹಸುಗಳುಳ್ಳವರೂ; ಸೂಯವಸಿನೀ = ಒಳ್ಳೆಯ ಭಕ್ಷ್ಯವಸ್ತುವುಳ್ಳವರೂ; ಮನವೇ = ಮಾನವಪ್ರಜೆಗಳಿಗೆ; ಯಶಸ್ಯೇ = ಯಶಸ್ಸಿಗೆ ನಿಮಿತ್ತರಾದವರೂ; ಭೂತಮ್ = ಆಗಿರಿ; ಏತೇ ರೋದಸೀ = ಈ ದ್ಯಾವಾಪೃಥಿವಿಗಳನ್ನು; ವಿಷ್ಣುಃ = ವಿಷ್ಣುವು; ವ್ಯಸ್ಕಭ್ನಾತ್ = ವಿಭಾಗಿಸಿ ಸ್ಥಾಪಿಸಿದನು; [ಆ ವಿಷ್ಣುವು] ಪೃಥಿವೀಮ್ = ಭೂಮಿಯನ್ನು; ಮಯೂಖೈಃ = ತನ್ನ ತೇಜೋರೂಪವಾದ ನಾನಾ ಜೀವಗಳಿಂದ; ಅಭಿತಃ = ಎಲ್ಲ ಕಡೆಗಳಲ್ಲಿಯೂ; ದಾಧಾರ = ಪೋಷಿಸಿದನು. [ಆ ವಿಷ್ಣುವಿಗೆ ಇದು ಹುತವಾಗಲಿ.]

---

[ಹವಿರ್ಧಾನಶಕಟಗಳು ದ್ಯಾವಾಪೃಥಿವಿಗಳಂತೆ ಸ್ತೋತ್ರಮಾಡಲ್ಪಟ್ಟಿವೆ.] ಎಲೈ ದ್ಯಾವಾಪೃಥಿವಿಗಳೇ! ನೀವು ಅನ್ನವುಳ್ಳವರೂ ಮತ್ತು ಚೆನ್ನಾಗಿ ಹಾಲು ಕೊಡುವ ಧೇನುಗಳುಳ್ಳವರೂ ಆಗಿರಿ. ಒಳ್ಳೆಯ ಭಕ್ಷ್ಯವಸ್ತುಗಳುಳ್ಳವರೂ, ಮಾನವಪ್ರಜೆಗಳಿಗೆ ಯಶಸ್ಸಿಗೆ ನಿಮಿತ್ತರಾದವರೂ ಆಗಿರಿ. ಈ ದ್ಯಾವಾಪೃಥಿವಿಗಳನ್ನು ವಿಷ್ಣುವು ವಿಭಾಗಿಸಿ ಸ್ಥಾಪಿಸಿರುವನು. ಆ ವಿಷ್ಣುವು ಪೃಥಿವಿಯನ್ನು ತನ್ನ ತೇಜೋಮಯವಾದ ಅಂಶಗಳಾದ ನಾನಾ ಜೀವರಿಂದ ಎಲ್ಲ ಕಡೆಗಳಲ್ಲಿಯೂ ಪೋಷಿಸಿರುತ್ತಾನೆ. ಆ ವಿಷ್ಣುವಿಗೆ ಇದು ಹುತವಾಗಲಿ.

ಪೃಥಿವೀಮಭಿತೋ ಮಯೂಖೈಃ ॥ ಪ್ರಾಚೀ

ಪ್ರೇತಮಧ್ವರಂ ಕಲ್ಪಯಂತೀ ಊರ್ಧ್ವಂ ಯಜ್ಞಂ ನಯತಂ

ಮಾ ಜೀಹ್ವರತ-

---

ಪೃಥಿವೀಮ್ । ಅಭಿತಃ । ಮಯೂಖೈಃ ॥ ಪ್ರಾಚೀ ಇತಿ । ಪ್ರೇತಿ । ಇತಮ್ । ಅಧ್ವರಮ್ । ಕಲ್ಪಯಂತೀ ಇತಿ । ಊರ್ಧ್ವಮ್ । ಯಜ್ಞಮ್ । ನಯತಮ್ । ಮಾ। ಜೀಹ್ವರತಮ್ ।

---

| ಮಂತ್ರ | ವಿನಿಯೋಗ |
| --- | --- |
| ಪ್ರಾಚೀ...........ಜೀಹ್ವರತಮ್ । | ಹವಿರ್ಧಾನಶಕಟಗಳನ್ನು ಮುಂದೆ ಬಿಡಲು. |

---

+[ಎಲೈ ಹವಿರ್ಧಾನಶಕಟಗಳೇ!] ಪ್ರಾಚೀ = ಪೂರ್ವಮುಖರಾಗಿ; ಅಧ್ವರಮ್ = ಯಾಗವನ್ನು; ಕಲ್ಪಯಂತೀ = [ತೊಂದರೆಯಿಲ್ಲದೆ] ನೆರವೇರಿಸುವವರಾಗಿ; ಪ್ರೇತಮ್ = ಮುಂದೆ ಹೋಗಿರಿ; ಊರ್ಧ್ವಮ್ = ಮೇಲಕ್ಕೆ (ದೇವತೆಗಳನ್ನು ಕುರಿತು); ಯಜ್ಞಮ್ = ಯಜ್ಞವನ್ನು; ನಯತಮ್ = ಒಯ್ಯಿರಿ; ಮಾ ಜೀಹ್ವರತಮ್ = ವಕ್ರಮಾರ್ಗವನ್ನು ಹಿಡಿಯದಿರಿ.

---

ಎಲೈ ಹವಿರ್ಧಾನಶಕಟಗಳೇ! ಯಾಗವನ್ನು ತೊಂದರೆಗೊಳಗಾಗದಂತೆ ನೆರವೇರಿಸುವವರಾಗಿ ಮುಂದೆ ಹೋಗಿರಿ. ಮೇಲಿರುವ ದೇವತೆಗಳನ್ನು ಕುರಿತು ಯಜ್ಞವನ್ನು ಒಯ್ಯಿರಿ. ವಕ್ರವಾದ ಮಾರ್ಗವನ್ನು ಹಿಡಿಯಬೇಡಿರಿ.

ಎಲೈ ಶಕಟಗಳೇ! ಈ ದೇವಯಜನವು ಭೂಮಿಯ ಶರೀರರೂಪವಾಗಿದೆ. ಇದರಲ್ಲಿ ಉತ್ತರವೇದಿಯ ಪಶ್ಚಿಮಭಾಗದಲ್ಲಿ ಮೂರು ಹೆಜ್ಜೆಯಷ್ಟು ಭೂಮಿಯನ್ನು ಬಿಟ್ಟು

# ಅತ್ರ ರಮೇಥಾಂ ವರ್ಷ್ಮನ್ಪೃಥಿವ್ಯಾ ದಿವೋ ವಾ ವಿಷ್ಣವುತ ವಾ ಪೃಥಿವ್ಯಾ ಮಹೋ ವಾ ವಿಷ್ಣವುತ ವಾಂತರಿಕ್ಷಾದ್ಧಸ್ತೌ ಪೃಣಸ್ವ ಬಹುಭಿರ್ವಸವ್ಯೈರಾ

---

ಅತ್ರ । ರಮೇಥಾಮ್ । ವರ್ಷ್ಮನ್ । ಪೃಥಿವ್ಯಾಃ। ದಿವಃ । ವಾ । ವಿಷ್ಣೋ । ಉತ। ವಾ । ಪೃಥಿವ್ಯಾಃ । ಮಹಃ । ವಾ। ವಿಷ್ಣೋ । ಉತ । ವಾ । ಅಂತರಿಕ್ಷಾತ್ । ಹಸ್ತೌ। ಪೃಣಸ್ವ । ಬಹುಭಿರಿತಿ ಬಹು-ಭಿಃ । ವಸವ್ಯೈಃ । ಆ ।

---

| ಮಂತ್ರ | ವಿನಿಯೋಗ |
|---|---|
| ಅತ್ರ..........ಪೃಥಿವ್ಯಾಃ । | ಎರಡು ಶಕಟಗಳನ್ನೂ ಉತ್ತರವೇದಿಯಲ್ಲಿ ಆಹವನೀಯಾಗ್ನಿಯ ಪಶ್ಚಿಮಭಾಗದಲ್ಲಿ ಮೂರು ಹೆಜ್ಜೆಗಳಷ್ಟು ಬಿಟ್ಟು ನಿಲ್ಲಿಸಲು. |
| ದಿವೋ......ಸವ್ಯಾತ್ । | ಅಧ್ವರ್ಯುವು ದಕ್ಷಿಣಹವಿರ್ಧಾನಶಕಟದ ನೊಗದ ಬಲಗಡೆಯ ಈಟುಮರದ ಬಳಿಯಲ್ಲಿ ಮೇಟಿಯನ್ನು ನೆಟ್ಟು ಅದಕ್ಕೆ ಬಲಗಡೆಯ ಈಟುಮರವನ್ನು ಕಟ್ಟಲು. |

---

+[ಎಲೈ! ಶಕಟಗಳೇ!] ಪೃಥಿವ್ಯಾಃ=ಭೂಮಿಯ; ವರ್ಷ್ಮನ್=[ದೇವಯಜನವೆಂಬ] ಶರೀರದಲ್ಲಿ; [ಉತ್ತರವೇದಿಯ ಪಶ್ಚಿಮಭಾಗದಲ್ಲಿ ಮೂರು ಹೆಜ್ಜೆಗಳನ್ನು ಬಿಟ್ಟು ಅನಂತರ ಯಾವ ಸ್ಥಾನವಿದೆಯೋ] ಅತ್ರ = ಈ ಸ್ಥಾನದಲ್ಲಿ; ರಮೇಥಾಮ್ = ಸಂತೋಷವಾಗಿರಿ. +ವಿಷ್ಣೋ = ಎಲೈ ವಿಷ್ಣುದೇವನೇ! ದಿವಃ ವಾ = ದ್ಯುಲೋಕದಿಂದಲೋ; ಉತ = ಅಥವಾ ; ಪೃಥಿವ್ಯಾಃ ವಾ = ಭೂಲೋಕದಿಂದಲೋ; ವಿಷ್ಣೋ = ವಿಷ್ಣುದೇವನೇ!; ಮಹಃ ವಾ = ಮಹರ್ಲೋಕದಿಂದಲೋ; ಉತ = ಅಥವಾ; ಅಂತರಿಕ್ಷಾತ್ ವಾ = ಅಂತರಿಕ್ಷದಿಂದಲೋ [ತಂದಿರುವ] ಬಹುಭಿಃ ವಸವ್ಯೈಃ = ಹಲವು ಧನಸಮೂಹಗಳಿಂದ; ಹಸ್ತೌ ಪೃಣಸ್ವ = [ನಿನ್ನ] ಎರಡು ಕೈಗಳನ್ನೂ ತುಂಬಿಸು.

---

ಮಿಕ್ಕಿರುವ ಸ್ಥಾನದಲ್ಲಿ ನೀವು ವಿಹರಿಸಿರಿ.

ಪ್ರಯಚ್ಛ [ಪ್ರಯಚ್ಛ (೨)] ದಕ್ಷಿಣಾದೋತ ಸವ್ಯಾತ್ ||

ವಿಷ್ಣೋರ್ನುಕಂ ವೀರ್ಯಾಣಿ ಪ್ರವೋಚಂ ಯಃ ಪಾರ್ಥಿವಾನಿ

ವಿಮಮೇ ರಜಾಗ್ಂಸಿ ಯೋ ಅಸ್ಕಭಾಯದುತ್ತರಗ್ಂ

---

ಪ್ರೇತಿ । ಯಚ್ಛ (೨) । ದಕ್ಷಿಣಾತ್ । ಏತಿ । ಉತ । ಸವ್ಯಾತ್ ॥ ವಿಷ್ಣೋಃ । ನುಕಮ್। ವೀರ್ಯಾಣಿ । ಪ್ರೇತಿ । ವೋಚಮ್ । ಯಃ । ಪಾರ್ಥಿವಾನಿ । ವಿಮಮ ಇತಿ ವಿ-ಮಮೇ। ರಜಾಗ್ಂಸಿ । ಯಃ। ಅಸ್ಕಭಾಯತ್। ಉತ್ತರಮಿತ್ಯುತ್-ತರಮ್ ।

---

| ಮಂತ್ರ | ವಿನಿಯೋಗ |
|---|---|
| ವಿಷ್ಣೋಃ......ಗಾಯಃ । | ಪ್ರತಿಪ್ರಸ್ಥಾತನು ಎಡಗಡೆಯ ಹವಿರ್ಧಾನಶಕಟದ ನೊಗದ ಎಡಗಡೆಯ ಈಚುಮರದ ಬಳಿಯಲ್ಲಿ ಮೇಟಿಯನ್ನು ನೆಟ್ಟು, ಅದಕ್ಕೆ ಈಚುಮರವನ್ನು ಕಟ್ಟಲು. |

---

[ವಿಷ್ಣುವೇ!] [ಧನಪೂರ್ಣವಾದ] **ದಕ್ಷಿಣಾತ್ ಉತ ಸವ್ಯಾತ್** = ಬಲಗೈಯಿಂದಲೂ ಮತ್ತು ಎಡಗೈಯಿಂದಲೂ; ಆ = ಹಲವು ಬಾರಿ; ಪ್ರ = ಶ್ರೇಷ್ಠವಾದ (ಮುತ್ತು, ರತ್ನ ಮೊದಲಾದವನ್ನು) ಆ ಯಚ್ಛ = ಸಂಪೂರ್ಣವಾಗಿ ಕೊಡು. +ಯಃ = ಯಾವ ವಿಷ್ಣುವು; ಪಾರ್ಥಿವಾನಿ = ಭೂಮಿಗೆ ಸಂಬಂಧಿಸಿದ; ರಜಾಂಸಿ = ಪರಮಾಣುಗಳನ್ನು; ವಿಮಮೇ = ನಿರ್ಮಿಸಿದನೋ ಮತ್ತು ಎಣಿಸಿದನೋ; ಯಃ = ಯಾವ ವಿಷ್ಣುವು; ಉತ್ತರಂ ಸಧಸ್ಥಮ್= ಮೇಲೆ ಇರುವ [ದೇವತೆಗಳ] ಸಹವಾಸಸ್ಥಾನವಾದ[ದ್ಯುಲೋಕವನ್ನು];

---

ಎಲೈ ವಿಷ್ಣುವೇ! ನೀನು ದ್ಯುಲೋಕದಿಂದಾಗಲೀ, ಭೂಲೋಕದಿಂದಾಗಲೀ ಮಹರ್ಲೋಕದಿಂದಾಗಲೀ, ಅಂತರಿಕ್ಷಲೋಕದಿಂದಾಗಲೀ ತಂದಿರುವ ಅಮೂಲ್ಯವಾದ ಹಲವು ವಿಧವಾದ ಮಣಿ-ಮುಕ್ತಾದಿಧನಗಳಿಂದ ನಿನ್ನ ಕೈಗಳನ್ನು ತುಂಬಿಸಿಕೋ. ಅನಂತರ ಬಲಗೈಯಿಂದಲೂ ಎಡಗೈಯಿಂದಲೂ ಆ ಶ್ರೇಷ್ಠವಾದ ಮಣಿ-ಮುಕ್ತಾದಿ ಶ್ರೇಷ್ಠ ವಸ್ತುಗಳನ್ನು ನನಗೆ ಮತ್ತೆ ಮತ್ತೆ ಕೊಡು.

ಸಧಸ್ಥಂ ವಿಚಕ್ರಮಾಣಸ್ತ್ರೇಧೋರುಗಾಯೋ ವಿಷ್ಣೋ-ರರಾಟಮಸಿ ವಿಷ್ಣೋಃ ಪೃಷ್ಠಮಸಿ ವಿಷ್ಣೋಃ ಶ್ನಪ್ತ್ರೇ ಸ್ಥೋ

ಸಧಸ್ಥಮಿತಿ ಸಧ-ಸ್ಥಮ್ । ವಿಚಕ್ರಮಾಣ ಇತಿ ವಿ-ಚಕ್ರಮಾಣಃ । ತ್ರೇಧಾ । ಉರುಗಾಯ ಇತ್ಯುರು-ಗಾಯಃ । ವಿಷ್ಣೋಃ । ರರಾಟಮ್ । ಅಸಿ । ವಿಷ್ಣೋಃ । ಪೃಷ್ಠಮ್। ಅಸಿ। ವಿಷ್ಣೋಃ । ಶ್ನಪ್ತ್ರೇ ಇತಿ । ಸ್ಥಃ ।

| ಮಂತ್ರ | ವಿನಿಯೋಗ |
|---|---|
| ವಿಷ್ಣೋ ರರಾಟಮಸಿ । | ಹವಿರ್ಧಾನಶಕಟಗಳನ್ನೊಳಗೊಂಡು ಹವಿರ್ಧಾನಮಂಟಪವನ್ನು ಮಾಡಬೇಕು. ದಕ್ಷಿಣಹವಿರ್ಧಾನಶಕಟದ ಮುಂದೆ ಆರು ಕಂಬಗಳು, ಹಿಂದೆ ಆರು ಕಂಬಗಳು. ಅವುಗಳ ಮೇಲೆ ಉತ್ತರಮುಖವಾಗಿ ಬಿದಿರನ್ನು ಹಾಕಬೇಕು. ಪೂರ್ವದ್ವಾರಗಳೆರಡರ ಮಧ್ಯೆ ಕಟ್ಟಿದ ದರ್ಭೆಯ ಮಾಲೆ ಅಥವಾ ಅದಕ್ಕೆ ಆಧಾರವಾದ ಬಿದಿರನ್ನು ಸಂಬೋಧಿಸಲು. |
| ವಿಷ್ಣೋಃ ಪೃಷ್ಠಮಸಿ । | ಹವಿರ್ಧಾನಮಂಟಪಕ್ಕೆ ಮಧ್ಯದ ಹೊದಿಕೆಯನ್ನು ಹಾಕಲು |
| ವಿಷ್ಣೋಃ ಶ್ನಪ್ತ್ರೇ ಸ್ಥಃ । | ಎರಡು ಪಕ್ಕಗಳಲ್ಲಿಯೂ ಹೊದಿಕೆಗಳನ್ನು ಹಾಕಲು |

ಅಸ್ಕಭಾಯತ್ = [ಕೆಳಗೆ ಬೀಳದಂತೆ] ತಡೆದು ನಿಲ್ಲಿಸಿದನೋ; [ಯಃ=ಯಾವ ವಿಷ್ಣುವು] ತ್ರೇಧಾ = ಮೂರು ಬಾರಿ; ವಿಚಕ್ರಮಾಣಃ = [ಮೂರು ಲೋಕಗಳಲ್ಲಿ] ಹೆಜ್ಜೆಗಳನ್ನಿಟ್ಟನೋ; ಉರುಗಾಯಃ = ಮಹಾತ್ಮರಿಂದ ಹಾಡಿ ಹೊಗಳಲ್ಪಡುತ್ತಾನೆಯೋ; [ಅಂತಹ] ವಿಷ್ಣೋಃ=ವಿಷ್ಣುವಿನ; ಸುಕಮ್ ವೀರ್ಯಾಣಿ = ವೀರ್ಯಯುಕ್ತವಾದ ಕರ್ಮಗಳನ್ನು; ಪ್ರವೋಚಮ್=ಹೇಳುತ್ತೇನೆ. +[ಎಲೈ ದರ್ಭಮಾಲೆಯೇ! ನೀನು] ವಿಷ್ಣೋಃ=ವಿಷ್ಣುದೇವತಾಕವಾದ[ಹವಿರ್ಧಾನಮಂಡಪದ]; ರರಾಟಮ್ ಅಸಿ=ಹಣೆಯಾಗಿದ್ದೀಯೆ. +[ಎಲೈ ಮಧ್ಯಮಛದಿಯೇ!] [ನೀನು]; ವಿಷ್ಣೋಃ = ವಿಷ್ಣುವಿನ; ಪೃಷ್ಠಮ್ ಅಸಿ = ಬೆನ್ನಾಗಿರುವೆ. +[ಎಲೈ ಪಾರ್ಶ್ವಛದಿಗಳೇ!][ನೀವು] ವಿಷ್ಣೋಃ = ವಿಷ್ಣುವಿನ; ಶ್ನಪ್ತ್ರೇಸ್ಥಃ = ದವಡೆಗಳಾಗಿ

ಆ ಮಹಾವಿಷ್ಣುವಿನ ಮಹಾವೀರ್ಯಯುಕ್ತಕರ್ಮಗಳನ್ನು ನಾನು ಹೇಳಿ ಹೊಗಳುತ್ತೇನೆ. ಆ ಪರಮಾತ್ಮನು ಭೂಮಿಯ ಪರಮಾಣುಗಳನ್ನು ನಿರ್ಮಿಸಿದನು ಮತ್ತು

ವಿಷ್ಣೋಃ ಸ್ಯೂರಸಿ ವಿಷ್ಣೋರ್ಧ್ರುವಮಸಿ ವೈಷ್ಣವಮಸಿ

ವಿಷ್ಣವೇ ತ್ವಾ ॥ ೧೩ - 27 ॥

[ಅಸ್ಯ ಯಚ್ಛೈಕಾನ್ನಚತ್ವಾರಿಗ್ಂಶಚ್ಚ ॥]

---

ವಿಷ್ಣೋಃ । ಸ್ಯೂಃ । ಅಸಿ । ವಿಷ್ಣೋಃ । ಧ್ರುವಮ್ । ಅಸಿ । ವೈಷ್ಣವಮ್। ಅಸಿ।

ವಿಷ್ಣವೇ । ತ್ವಾ ॥ ೧೩ ॥

---

| ಮಂತ್ರ | ವಿನಿಯೋಗ |
|---|---|
| ವಿಷ್ಣೋಃ ಸ್ಯೂರಸಿ । | ಹಗ್ಗದಿಂದ ಕಟ್ಟಲು (ಹೊಲಿಯಲು) |
| ವಿಷ್ಣೋರ್ಧ್ರುವಮಸಿ । | ಗಂಟು ಹಾಕಲು |
| ವೈಷ್ಣವಮಸಿ........ತ್ವಾ । | ಸಿದ್ಧವಾದ ಹವಿರ್ಧಾನಮಂಡಪವನ್ನು ಸ್ಪರ್ಶಿಸಲು. |

---

[ಹಣೆಯ ಪಕ್ಕದ ಪ್ರದೇಶ]ಇದ್ದೀರಿ. +[ಎಲೈ ಹಗ್ಗವೇ! ನೀನು] ವಿಷ್ಣೋಃ = ಹವಿರ್ಧಾನ ಮಂಟಪಕ್ಕೆ; ಸ್ಯೂಃ = ಬಂಧನಸಾಧನವು; ಅಸಿ = ಆಗಿರುವೆ; + [ಎಲೈ ಗ್ರಂಥಿಯೇ! ನೀನು] ವಿಷ್ಣೋಃ = ಹವಿರ್ಧಾನಮಂಟಪದ; ಧ್ರುವಮ್ ಅಸಿ = ದಾರ್ಢ್ಯಕ್ಕೆ ಸಾಧನ ವಾಗಿರುವೆ; +[ಎಲೈ ಹವಿರ್ಧಾನಮಂಟಪವೇ! ನೀನು] ವೈಷ್ಣವಮ್ ಅಸಿ=ವಿಷ್ಣುದೇವತಾಕ ವಾಗಿದ್ದೀಯೆ; ತ್ವಾ = ನಿನ್ನನ್ನು; ವಿಷ್ಣವೇ=ವಿಷ್ಣುಪ್ರೀತಿಗಾಗಿ; [ಸ್ಪೃಶಾಮಿ=ಮುಟ್ಟುತ್ತೇನೆ.]

---

ಎಣಿಸಿದನು. ಆತನು ಮೇಲೆ ದೇವತೆಗಳ ವಾಸಸ್ಥಾನವಾದ ದ್ಯುಲೋಕವನ್ನು ಸೃಷ್ಟಿಸಿ, ಅದು ಕೆಳಗೆ ಬೀಳದಂತೆ ತಡೆದು ನಿಲ್ಲಿಸಿದನು. ಆ ಮಹಾತ್ಮನು ತನ್ನ ಮೂರು ಹೆಜ್ಜೆಗಳಿಂದ ಮೂರು ಲೋಕಗಳನ್ನೂ ಅಳೆದುಬಿಟ್ಟನು. ಆತನನ್ನು ಮಹಾತ್ಮರು ಹಾಡಿ ಹೊಗಳುತ್ತಾರೆ. ಆತನ ಮಹಾಕಾರ್ಯಗಳನ್ನು ನಾವೂ ಹೊಗಳುತ್ತೇವೆ.

ಎಲೈ ದರ್ಭಮಾಲೆಯೇ! ನೀನು ವಿಷ್ಣುವಿನ (ಹವಿರ್ಧಾನಮಂಡಪರೂಪಿಯಾದ) ಹಣೆಯಾಗಿದ್ದೀಯೆ. ✿ ಎಲೈ ಮಧ್ಯಮಛದಿಯೇ! ನೀನು ವಿಷ್ಣುವಿನ ಬೆನ್ನಾಗಿರುವೆ.

## ವಿನಿಯೋಗಸಂಗ್ರಹ

ಯುಂಜ[1] ಹುತ್ವಾ [2]ಸುವಾಗರ್ಷ್ಣೇ ಶಬ್ದಶ್ಚೇನ್ಮಂತ್ರಯೇತ ತಮ್ ।
[3]ಆ ನೋಽಕ್ಷಮಂಜ್ಯಾಜ್ಜುಹುಯಾತ್ ಪಥೋರಿದ[4]ಮಿರಾ[5]ದ್ವಯಾತ್ ॥
ಪ್ರಾಚೀ[6] ಪ್ರವರ್ತ್ಯೇ ಶಕಟೇ ಅತ್ರೇತಿ[7] ಸ್ಥಾಪಯೇದಿಮೇ ।
[8]ದಿವೋ [9]ವಿಷ್ಣೋರ್ದ್ವಯಾನ್ಮೇಥ್ಯಾವನಸೋರ್ವಿನಿಹಂತ್ಯುಭೇ ॥
[10-14]ವಿಷ್ಣೋರ್ಮಂಡಪನಿರ್ಮಾಣಂ ಪಂಚಭಿರ್ದ್ವಾರಿ ವಂಶಕಃ ।
ಮಧ್ಯಚ್ಛದಿರ್ಲಲಾಟ್ಯಂತೌ ರಜ್ಜುಸ್ಸ್ಯೂತಿಶ್ಚ ಬಂಧನೇ ।
ವೈಷ್ಣ[15] ಸ್ಪೃಶೇನ್ನಿರ್ಮಿತಂ ತನ್ಮಂತ್ರಾಃ ಪಂಚದಶೇರಿತಾಃ ॥

ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ ಆಪಸ್ತಂಬ - 15
ಬೌಧಾಯನ - 15

### ಅನುವಾಕದಲ್ಲಿರುವ ವಿಶೇಷ ವಿಷಯಗಳು

#### ಅ) ಭ.ಭಾ. ಭಾಷ್ಯ

**ಮಂತ್ರಸಂಖ್ಯೆ**

೧) ಯುಂಜತೇ..........ಪರಿಷ್ಟುತಿಃ । ಧಿಯಃ ಯುಂಜತೇ = ಧರ್ಮಾರ್ಥಕಾಮ ಮೋಕ್ಷವಿಷಯಕವಾದ ಬುದ್ಧಿಗಳನ್ನು ಹೊಂದಿರುತ್ತಾರೆ. ವಿಪಶ್ಚಿತಃ = ಪಂಡಿತರಾದ ಋತ್ವಿಜರು [ಮಿಶ್ರರು 'ವಿಪಶ್ಚಿತಃ' ಎಂಬುದನ್ನು ಕರ್ತೃಪದವನ್ನಾಗಿಟ್ಟುಕೊಂಡು ವಿವರಿಸಿರುತ್ತಾರೆ. ಸಾಯಣರು 'ವಿಪಶ್ಚಿತಃ' ಎಂಬುದನ್ನು 'ವಿಪ್ರಸ್ಯ' ಎಂಬುದಕ್ಕೆ ವಿಶೇಷಣವನ್ನಾಗಿ ಅನ್ವಯಿಸಿದ್ದಾರೆ.]

---

ಎಲೈ ಪಾರ್ಶ್ವಛದಿಗಳೇ! ನೀವು ವಿಷ್ಣುವಿನ ಹಣೆಯ ಪಕ್ಕದ ಪ್ರದೇಶಗಳಾಗಿದ್ದೀರಿ.

ಎಲೈ ಹಗ್ಗವೇ! ನೀನು ಹವಿರ್ಧಾನಮಂಟಪದ ಬಂಧನಸಾಧನವಾಗಿರುವೆ.

ಎಲೈ ಗ್ರಂಥಿಯೇ! ನೀನು ಹವಿರ್ಧಾನಮಂಟಪದ ದಾರ್ಢ್ಯಕ್ಕೆ ಸಾಧನವಾಗಿರುವೆ.

ಎಲೈ ಹವಿರ್ಧಾನಮಂಡಪವೇ! ನಿನಗೆ ವಿಷ್ಣುವೇ ದೇವತೆಯಾಗಿದ್ದಾನೆ. ಆದುದರಿಂದ ವೈಷ್ಣವವಾದ ನಿನ್ನನ್ನು ವಿಷ್ಣುಪ್ರೀತಿಗಾಗಿ ಸ್ಪರ್ಶಿಸುತ್ತೇನೆ.

ವಯುನಾವಿತ್ = ಜ್ಞಾನೋಪಾಯಗಳನ್ನು ತಿಳಿದಿರುವ; ಏಕ ಇತ್ ದೇವಃ = ಸವಿತೃದೇವನೊಬ್ಬನೇ; ಹೋತ್ರಾಃ ವಿದಧೇ = ಸ್ತುತಿರೂಪವಾದ ಮಾತುಗಳನ್ನು ಉತ್ಪಾದಿಸುತ್ತಾನೆ; ಅಥವಾ ಋತ್ವಿಗ್ವಿಶೇಷರಾದ ಮೈತ್ರಾವರುಣಾದಿಗಳನ್ನು ಅವರವರ ಕರ್ಮಗಳಲ್ಲಿ ವಿಭಾಗ ಮಾಡಿ ಸ್ಥಾಪಿಸುತ್ತಾನೆ. ಆತನೇ ಮಹಾದೇವನೆಂದು ಸವಿತೃಪ್ರಶಂಸೆಯು ಎಲ್ಲೆಲ್ಲಿಯೂ ಇದೆ.

ದೇವಸ್ಯ ಸವಿತುಃ ಪರಿಷ್ಟುತಿಃ = ಸವಿತೃದೇವನ ಪ್ರೇರಣೆಯೇ ಎಲ್ಲಕ್ಕೂ ಕಾರಣ. ಆ ಸವಿತೃದೇವನಿಗೆ ಇದು ಹುತವಾಗಲಿ.

೪) ಇದಮ್.........ಪಾಗ್ಂಸುರೇ । ಇದಮ್ ವಿಷ್ಣುಃ ಸ್ವಯಂ ವಿಚಕ್ರಮೇ । ಯದ್ಧವಿರ್ಧಾನಂ ವಿಕ್ರಮತೇ = ಗಚ್ಛತಿ = ಹವಿರ್ಧಾನದ ಗಮನವೇ ವಿಷ್ಣುವಿನ ಗಮನ ವಾಗಿದೆ. ಸ ವಿಷ್ಣುಃ ತ್ರೇಧಾ ನಿದಧೇ ಪದಮ್ = ಅಂತಹ ವಿಷ್ಣುವು ಮೂರು ಪ್ರಕಾರವಾಗಿ ಹೆಜ್ಜೆಗಳನ್ನಿಟ್ಟನು. ಸಮೂಢಮಸ್ಯ ಪಾಗ್ಂಸುರೇ = ಈ ಹವಿರ್ಧಾನದ ಧೂಳಿನಿಂದ ಕೂಡಿದ ಈ ಮಾರ್ಗದಲ್ಲಿ ಹೋಮ ಮಾಡಿರುವ ಈ ಆಜ್ಯವು ಸುಹುತವಾಗಲಿ.

ವಿಷ್ಣುಃ = ವ್ಯಾಪೀ = ಆದಿತ್ಯಾತ್ಮಾ । ಸೋಽಯಮಾದಿತ್ಯಃ ಇಮಂ ಯಜ್ಞಂ ಅನೇನ ಹೋಮೇನ ಸಮಾಪಯತು = ವ್ಯಾಪಕನಾದ ಆದಿತ್ಯಾತ್ಮಕನಾದ ವಿಷ್ಣುವು ಅಗ್ನಿ, ವಿದ್ಯುತ್, ಆದಿತ್ಯರೂಪಗಳಿಂದ ಮೂರು ಲೋಕಗಳಲ್ಲಿಯೂ ವ್ಯಾಪಿಸಿರುತ್ತಾನೆ. [ತ್ರೇಧಾ ನಿದಧೇ ಪದಮ್] ಆತನ ಅಂತರಿಕ್ಷರೂಪವಾದ ಪಾಂಸುಲವಾದ ಪಾದದಲ್ಲಿ ವಿದ್ಯುತ್ತು ಕೆಲವು ವೇಳೆ ಕಾಣಿಸುವುದಿಲ್ಲ.[ಸಮೂಢಮಸ್ಯ ಪಾಗ್ಂಸುರೇ] ಅಂತಹ ಆದಿತ್ಯನು ಯಜ್ಞವನ್ನು ಸಮಾಪ್ತಿಗೊಳಿಸಲಿ.

೫) ಇರಾವತೀ........ಮಯೂಖೈಃ । ಮನವೇ = ಮಂತ್ರಪತೇ/ಮನನವತೇ ಯಜಮಾನಾಯ ಇರಾವತೀ, ಧೇನುಮತೀ, ಸೂಯವಸಿನೀ, ಯಶಸ್ಯೇ ಚ ಭವತಮ್ = ಮಂತ್ರವಿದನಾದ ಮನನಶೀಲನಾದ ಯಜಮಾನನಿಗೆ ಅನ್ನಾದಿಗಳನ್ನು ಕೊಡುವವ ರಾಗಿರಿ. [ಈ ಮಂತ್ರವನ್ನು ಮಿಶ್ರರು ಆದಿತ್ಯಪರವಾಗಿಯೂ ವ್ಯಾಖ್ಯಾನ ಮಾಡಿರುತ್ತಾರೆ.]

೬) ದಿವೋ..........ಸವ್ಯಾತ್ । ಹಸ್ತೌ ಪೃಣಸ್ವ = ನನ್ನ ಎರಡು ಕೈಗಳನ್ನೂ ತುಂಬಿಸು. ಆ ಪ್ರಯಚ್ಛ ದಕ್ಷಿಣಾದೋತ ಸವ್ಯಾತ್ = ಎರಡು ಕೈಗಳನ್ನು ನೀಡಿದಾಗ ಮಧ್ಯದ ಪ್ರದೇಶವು ಎಷ್ಟಿದೆಯೋ ಅದು ತುಂಬಿ ಹೋಗುವಂತೆ ಧನವನ್ನು ಕೊಡು.

೭) ವಿಷ್ಣೋಃ..........ಗಾಯಃ । ನುಕಮ್ = ಬೇಗನೆ. ಯಃ ಪಾರ್ಥಿವಾನಿ ವಿಮಮೇ

ರಜಾಗ್ಂಸಿ = ಯಾರು ಅಗ್ನಿ, ವಿದ್ಯುತ್ ಮತ್ತು ಸೂರ್ಯರೂಪವಾದ ಜ್ಯೋತಿಸ್ಸುಗಳನ್ನು ಮಾಡಿದನೋ ಅಥವಾ ಐಶ್ವರ್ಯಗಳನ್ನು ಮಾಡಿದನೋ ಅವನು- ಉತ್ತರಂ ಸಧಸ್ಥಂ ಅಸ್ಕಭಾಯತ್ = ಅಂತರಿಕ್ಷವನ್ನು ನಿಲ್ಲಿಸಿದನು [ಧರಿಸಿದನು]. ಉರುಗಾಯಃ = ಉರುಭಿರ್ಗಂತವ್ಯಃ = ಮಹಾತ್ಮರಿಂದ ಹೊಂದಲ್ಪಡತಕ್ಕವನು. ಆ ವಿಷ್ಣುವು ನಮಗೆ ಬುದ್ಧಿದಾರ್ಢ್ಯವನ್ನು ಕೊಡಲಿ.

೧೨) ವಿಷ್ಣೋಃ ಶ್ನಪ್ತ್ರೇ ಸ್ಥಃ। ಶ್ನಪ್ತ್ರೇ = ಎಲೈ ಛದಿಗಳೇ! ನೀವು ಹವಿರ್ಧಾನ-ಮಂಡಪದ ಶೋಧಕರಾಗಿದ್ದೀರಿ.

## ಆ) ಮೀಮಾಂಸಾ

1) ಹೋಮದ ಆಧಾರವಾದ ಆಹವನೀಯ ಮತ್ತು ಪದಾದಿಗಳಿಗೆ ವಿಕಲ್ಪವೇ?

[ಜೈ.ಸೂ. 10.8]

'ಯದಾಹವನೀಯೇ ಜುಹ್ವತಿ। ತೇನ ಸೋಽಸ್ಯಾಭೀಷ್ಟಃ ಪ್ರೀತಃ।'[ತೈ.ಬ್ರಾ. 1.1.10] ಎಂಬುದಾಗಿ ಹೋಮಸಾಮಾನ್ಯವನ್ನುದ್ದೇಶಿಸಿ ಆಹವನೀಯವು ಆಧಾರವಾಗಿ ವಿಹಿತವಾಗಿದೆ. ಜ್ಯೋತಿಷ್ಟೋಮಪ್ರಕರಣದಲ್ಲಿ 'ಪದೇ ಜುಹೋತಿ' 'ವರ್ತ್ಮನಿ ಜುಹೋತಿ' ಎಂದು ಪದ, ವರ್ತ್ಮ[ಹೆಜ್ಜೆ, ಮಾರ್ಗ]ಗಳು ಹೋಮವಿಶೇಷಕ್ಕೆ ಆಧಾರವಾಗಿ ವಿಹಿತವಾಗಿವೆ. ರಾಜಸೂಯದಲ್ಲಿ 'ವಲ್ಮೀಕವಪಾಮುತ್ಸೃಜ್ಯ ಜುಹೋತಿ' ಎಂದು ವಲ್ಮೀಕವಪೆಯು ಹೋಮವಿಶೇಷಕ್ಕೆ ಆಧಾರವಾಗಿ ಹೇಳಲ್ಪಟ್ಟಿದೆ. ಪತ್ನೀಸಂಯಾಜಗಳಿಗೆ ಗಾರ್ಹಪತ್ಯವು ಆಧಾರವಾಗಿ ಹೇಳಲ್ಪಟ್ಟಿದೆ. ಹೀಗಿರುವಾಗ ಸಾಮಾನ್ಯವಿಹಿತವಾದ ಆಹವನೀಯಕ್ಕೂ ವಿಶೇಷವಿಹಿತವಾದ ಪದಾದಿಗಳಿಗೂ ವಿಕಲ್ಪವಿದೆಯೇ? ಇಲ್ಲವೇ? ಎಂದು ಸಂಶಯ.

ಇಲ್ಲಿಯ ಪೂರ್ವಪಕ್ಷವು ಹೀಗಿದೆ : ಇಲ್ಲಿ ವಿಕಲ್ಪವೇ ಯುಕ್ತವಾದುದು. ಆಹವನೀಯ ಮತ್ತು ಪದಾದಿಗಳಲ್ಲಿ ಹೋಮ ಮಾಡಬೇಕೆಂದು ವಿಧಿಸುವ ಎಲ್ಲ ವಚನಗಳೂ ಪ್ರತ್ಯಕ್ಷವೇ ಇವೆ. ಆದುದರಿಂದ 'ಐಂದ್ರ್ಯಾ ಗಾರ್ಹಪತ್ಯಮುಪತಿಷ್ಠತೇ' ಎಂಬ ವಾಕ್ಯದಲ್ಲಿ ಶ್ರುತಿಯಿಂದ ಲಿಂಗಕ್ಕೆ [ಪ್ರಕಾಶನಸಾಮರ್ಥ್ಯ] ಬಾಧವಿರುವಂತೆ ಇಲ್ಲಿ ಇಲ್ಲ. ಅಂತೆಯೇ ಎಲ್ಲ ವಚನಗಳಿಗೂ [ಪ್ರತ್ಯಕ್ಷವಾದುದರಿಂದ] ಸಮಾನಬಲವಿರುವುದರಿಂದ ವಿಕಲ್ಪವೇ ಯುಕ್ತ.

ಇಲ್ಲಿಯ ಸಿದ್ಧಾಂತವು ಹೀಗಿದೆ : 'ಯದಾಹವನೀಯೇ ಜುಹ್ವತಿ' ಎಂಬ ವಾಕ್ಯವು ಹೋಮಸಾಮಾನ್ಯವನ್ನು ಆಹವನೀಯದಲ್ಲಿ ಮಾಡಬೇಕೆಂದು ವಿಧಿಸುತ್ತದೆ. ಹೋಮ

ವಿಶೇಷದ ವಿಷಯದಲ್ಲಿ ಆ ವಾಕ್ಯಕ್ಕೆ ಲಕ್ಷಣಾವೃತ್ತಿಯನ್ನು ಆಶ್ರಯಿಸ ಬೇಕಾಗುತ್ತದೆ. ವಿಶೇಷವಾದ ಶಾಸ್ತ್ರವು ಶಕ್ತಿವೃತ್ತಿಯಿಂದಲೇ (ಮುಖ್ಯಾರ್ಥವನ್ನು ಪ್ರತಿಪಾದಿಸುವ ರೀತಿ) ಹೋಮವಿಧಾಯಕವಾಗುತ್ತದೆ. 'ಪದೇ ಜುಹೋತಿ' ಎಂಬ ವಾಕ್ಯವು ಹೋಮಸಾಮಾನ್ಯ ವನ್ನು ಅನುವಾದ ಮಾಡಿ ಪದಾಂಶವನ್ನು ಮಾತ್ರ ವಿಧಿಸುತ್ತದೆಯೆಂದು ಶಂಕಿಸಬಾರದು. ಏಕೆಂದರೆ ಪ್ರಕರಣವನ್ನು ಅನುಸರಿಸಿ ಪದಾದಿ ಹೋಮಗಳು ವಿಶೇಷಯಾಗಗಳ ಅಂಗಗಳು. ಆದುದರಿಂದ ಪದಾದಿಹೋಮವನ್ನು ವಿಧಾನ ಮಾಡುವ ವಿಶೇಷಶಾಸ್ತ್ರದಿಂದ ಬೇರೆಯ ಹೋಮಗಳಲ್ಲಿ ಅವಕಾಶವನ್ನು ಹೊಂದಿರುವ ಸಾಮಾನ್ಯಶಾಸ್ತ್ರವಾದ ಆಹವನೀಯವಿಧಾಯಕಶಾಸ್ತ್ರಕ್ಕೆ ಬಾಧವೇ ಉಚಿತ. ವಿಕಲ್ಪವು ಉಚಿತವಲ್ಲ.

**2) ದಕ್ಷಿಣಹವಿರ್ಧಾನಶಕಟಕ್ಕೆ ಸಾಮಿಧೇನಿಯ ಅಂಗತ್ವವಿದೆಯೇ? [ಜೈ.ಸೂ. 3.7.]**

ಜ್ಯೋತಿಷ್ಟೋಮಪ್ರಕರಣದಲ್ಲಿ 'ಉತ ಯತ್ಸುನ್ವಂತಿ ಸಾಮಿಧೇನೀಸ್ತದನ್ವಾಹುಃ' ಎಂಬ ವಚನವಿದೆ. 'ಯಾವ ದಕ್ಷಿಣಶಕಟದ ಸಮೀಪದಲ್ಲಿ ಸೋಮಾಭಿಷವವನ್ನು ಮಾಡು ವರೋ, ಅಲ್ಲಿ ಸಾಮಿಧೇನಿಗಳನ್ನು ಹೇಳಬೇಕು' ಎಂದು ಅದರ ಅರ್ಥ. ಹೀಗಿರುವಾಗ ದಕ್ಷಿಣಹವಿರ್ಧಾನಶಕಟವು ಸಾಮಿಧೇನಿಗಳ ಅಂಗವೇ? ಎಂದು ಸಂಶಯ.

ಇಲ್ಲಿ ಸ್ಪಷ್ಟವಾಗಿಯೇ 'ತತ್ = ತತ್ರ, ಸಾಮಿಧೇನೀರನ್ವಾಹುಃ' ಎಂದು [ಅಲ್ಲಿ ಸಾಮಿಧೇನಿಗಳನ್ನು ಹೇಳಬೇಕು] ಹೇಳಿರುವುದರಿಂದ ಶಕಟವು ಸಾಮಿಧೇನ್ಯಂಗವೆಂಬುದು ಪೂರ್ವಪಕ್ಷ.

ಇಲ್ಲಿಯ ಸಿದ್ಧಾಂತವು ಹೀಗಿದೆ ; ಇಷ್ಟಿಯ ಅಂಗಗಳಾದ ಸಾಮಿಧೇನಿಗಳಿಗೆ ಆಹವನೀಯದ ಪಶ್ಚಿಮದೇಶವೇ ಸ್ಥಾನ. ಏಕೆಂದರೆ ಪ್ರಕೃತಿಯಾದ ದರ್ಶ-ಪೂರ್ಣಮಾಸ ದಲ್ಲಿ ಅದೇ ಸ್ಥಾನವಾಗಿದೆ. 'ಪ್ರಕೃತಿವತ್ ವಿಕೃತಿಃ ಕರ್ತವ್ಯಾ' ಎಂಬಂತೆ ವಿಕೃತಿಯಾಗ ಗಳಲ್ಲಿಯೂ ಅದೇ ಸ್ಥಾನವೆಂಬುದು ಅತಿದೇಶದಿಂದ ತಿಳಿಯುತ್ತದೆ. ಪ್ರಕೃತ ಜ್ಯೋತಿಷ್ಟೋಮದಲ್ಲಿ ಉತ್ತರವೇದಿಯು ಆಹವನೀಯಸ್ಥಾನ ವಾಗಿದೆ. ಅದರ ಪಶ್ಚಿಮದೇಶವಾದ ಹವಿರ್ಧಾನದೇಶವು ಸಾಮಿಧೇನಿಗಳನ್ನು ಹೇಳುವ ಸ್ಥಾನವೆಂಬುದೂ ಅತಿದೇಶದಿಂದ ಲಭ್ಯ. ಹೀಗಿರುವಾಗ ದಕ್ಷಿಣಹವಿರ್ಧಾನಶಕಟದ ಸಮೀಪಪ್ರದೇಶದಲ್ಲಿ ಸಾಮಿಧೇನಿಗಳನ್ನು ಹೇಳಬೇಕೆಂದು ನಿಯಮ ಮಾಡುವುದರಿಂದ ಲಾಘವವಿರುತ್ತದೆ. ಆದುದರಿಂದ ಈ ವಿಧಿಯು ನಿಯಮಮಾತ್ರವಿಧಾಯಕವಾಗಿದೆ.

**3) ಜ್ಯೋತಿಷ್ಟೋಮದಲ್ಲಿ ಎಷ್ಟು ಹವಿರ್ಧಾನಶಕಟಗಳು? [ಜೈ.ಸೂ. 12.1]**

ಜ್ಯೋತಿಷ್ಟೋಮದಲ್ಲಿ ಎರಡು ಹವಿರ್ಧಾನಶಕಟಗಳಿವೆ. ಜ್ಯೋತಿಷ್ಟೋಮದ ಅಂಗವಾದ ಪ್ರಾಯಣೀಯೇಷ್ಟಿ ಮುಂತಾದವುಗಳಲ್ಲಿ ಹವಿರ್ನಿರ್ವಾಪಕ್ಕಾಗಿ ಮೂರನೆಯ

**ಶಕಟವು (ಬಂಡಿ) ಬೇಕೇ? ಬೇಡವೇ?**

ಇರುವ ಎರಡು ಶಕಟಗಳಲ್ಲಿಯೇ ಹವಿರ್ನಿರ್ವಾಪವನ್ನು ಮಾಡಲು ಸಾಧ್ಯವಿರುವುದರಿಂದ ಮೂರನೆಯದು ಬೇಕಿಲ್ಲ. ಇದು ಇಲ್ಲಿನ ಪೂರ್ವಪಕ್ಷ.

ಇಲ್ಲಿಯ ಸಿದ್ಧಾಂತವು ಹೀಗಿದೆ : ಹವಿರ್ಧಾನಶಕಟಗಳು ಮಹಾವೇದಿಯಲ್ಲಿರುತ್ತವೆ. ಹವಿರ್ನಿರ್ವಾಪವು ಗಾರ್ಹಪತ್ಯದ ಪಶ್ಚಿಮಪ್ರದೇಶದಲ್ಲಿ ಆಗಬೇಕು. ಹೀಗೆ ಪ್ರದೇಶವು ಬೇರೆಯಾದುದರಿಂದ ಮೂರನೆಯ ಶಕಟವೂ ಬೇಕು. ಅಲ್ಲದೆ ಶ್ರುತಿಯಲ್ಲಿಯೇ 'ಅನ್ವನಾಗ್ಂಸಿ ಪ್ರವರ್ತಯಂತಿ] [ತೈ.ಸಂ. 6.3.2] ಎಂಬಲ್ಲಿ ಅನಾಂಸಿ = ಬಂಡಿಗಳು ಎಂಬ ಬಹುವಚನವಿರುವುದರಿಂದ ಮೂರನೆಯ ಶಕಟವೂ ಇದೆಯೆಂದು ತಿಳಿಯುತ್ತದೆ. ಅದರಲ್ಲಿಯೇ ಹವಿರ್ನಿರ್ವಾಪವನ್ನು ಮಾಡಬೇಕು.

### ಇ) ಛಂದಸ್ಸು

| | |
|---|---|
| ೧) ಯುಂಜತೇ........ಪರಿಷ್ಟುತಿಃ । | ಜಗತೀ |
| ೨) ಆ ನೋ..............ವಶೀ । | ವಿರಾಡ್ಗಾಯತ್ರೀ/ಪುರ ಉಷ್ಣಿಕ್/ ವಿರಾಡುಷ್ಣಿಕ್ ವಾ (ಭ.ಭಾ.ಭಾ.) |
| ೩) ಇದಂ ವಿಷ್ಣುಃ.......ಪಾಗ್ಂಸುರೇ । | ಗಾಯತ್ರೀ |
| ೪) ಇರಾವತೀ..........ಮಯೂಖೈಃ । | ತ್ರಿಷ್ಟುಪ್ |
| ೫) ಪ್ರಾಚೀ...........ಜೇಹ್ವರತಮ್ । | ದ್ವಿಪದಾ ವಿರಾಟ್/ಜಗತೀ ವಾ |
| ೬) ಅತ್ರ............ಪೃಥಿವ್ಯಾಃ । | ಏಕಪದಾ ವಿರಾಟ್ |
| ೭) ದಿವೋ.............ಸವ್ಯಾತ್ । | ತ್ರಿಷ್ಟುಪ್ |
| ೮) ವಿಷ್ಣೋರ್ನುಕಂ..........ಗಾಯಃ । | ತ್ರಿಷ್ಟುಪ್ |

*

---

## ॥ ಚತುರ್ದಶೋऽನುವಾಕಃ ॥

ಕೃಣುಷ್ವ ಪಾಜಃ ಪ್ರಸಿತಿಂ ನ ಪೃಥ್ವೀಂ ಯಾಹಿ ರಾಜೇವಾಮ-
ವಾಗ್ಂ ಇಭೇನ । ತೃಷ್ವೀಮನು

॥ ವೈ ॥ ಕೃಣುಷ್ವ । ಪಾಜಃ। ಪ್ರಸಿತಿಮಿತಿ ಪ್ರ-ಸಿತಿಮ್ । ನ । ಪೃಥ್ವೀಮ್ । ಯಾಹಿ। ರಾಜಾ । ಇವ । ಅಮವಾನಿತ್ಯಮ-ವಾನ್ । ಇಭೇನ ॥ ತೃಷ್ವೀಮ್ । ಅನ್ವಿತಿ ।

ಹಿಂದಿನ ಹದಿಮೂರನೆಯ ಅನುವಾಕದಲ್ಲಿ ಹವಿರ್ಧಾನಮಂಡಪದ ನಿರ್ಮಾಣವು ಹೇಳಲ್ಪಟ್ಟಿತು. ಸೋಮಯಾಗಕ್ಕೆ ಸಂಬಂಧಿಸಿದ ಮುಂದಿನ ಕರ್ಮಗಳು ಮುಂದಿನ ಪ್ರಶ್ನೆ (ಮೂರನೆಯ ಪ್ರಶ್ನೆ)ದಲ್ಲಿ ಹೇಳಲ್ಪಡುತ್ತವೆ. ಈ ಪ್ರಶ್ನೆಯ ಹದಿನಾಲ್ಕನೆಯ ಮತ್ತು ಕಡೆಯದಾಗಿರುವ ಈ ಅನುವಾಕದಲ್ಲಿ ಕಾಮ್ಯೇಷ್ಟಿಯ ಯಾಜ್ಯಾ-ಪುರೋನುವಾಕ್ಯಗಳು ಹೇಳಲ್ಪಡುತ್ತವೆ. ಇಷ್ಟಿಕಾಂಡದಲ್ಲಿ ವ್ರಾತಪತ್ಯೇಷ್ಟಿಯ ನಂತರ ರಾಕ್ಷೋಘ್ನೇಷ್ಟಿಯು ವಿಹಿತವಾಗಿದೆ. ಅದಕ್ಕೆ ಸಂಬಂಧಿಸಿದ ಹದಿನೈದು ಸಾಮಿಧೇನೀಮಂತ್ರಗಳೂ, ಒಂದು ಪುರೋನುವಾಕ್ಯೆಯೂ, ಎರಡು ಯಾಜ್ಯೆಗಳೂ ಈ ಅನುವಾಕದಲ್ಲಿ ಹೇಳಲ್ಪಟ್ಟಿವೆ. ರಕ್ಷೋಬಾಧಾಪರಿಹಾರವು ಇಷ್ಟಿಯ ಫಲವಾಗಿದೆ.

| ಮಂತ್ರ | ವಿನಿಯೋಗ |
|---|---|
| ಕೃಣುಷ್ವ..........ತಪಿಷ್ಠೈಃ । | ರಾಕ್ಷೋಘ್ನೇಷ್ಟಿಯ ಮೊದಲನೆಯ ಸಾಮಿಧೇನೀ |

[ಅಗ್ನಿಯೇ!] ಪೃಥ್ವೀಂ ಪ್ರಸಿತಿಂ ನ = [ನೆಲದ ಮೇಲೆ ಮೃಗಗಳನ್ನು ಹಿಡಿಯಲು] ವಿಸ್ತಾರವಾಗಿ ಹರಡಿರುವ ಬಲೆಯಂತೆ; ಪಾಜಃ = ಬಲವನ್ನು [ಸೈನ್ಯವನ್ನು] [ವ್ಯಾಪಿಸಿದ್ದ ನ್ನಾಗಿ]; ಕೃಣುಷ್ವ=ಮಾಡು; ಅಮವಾನ್ = ಅಮಾತ್ಯರಿಂದ ಕೂಡಿದ; ಇಭೇನ = ಆನೆ ಯಿಂದ(ಕೂಡಿರುವ) ರಾಜಾ ಇವ=ಪ್ರಭುವಿನಂತೆ; ಯಾಹಿ = ರಾಕ್ಷಸರ ಮೇಲೆ ಎರಗು; ತೃಷ್ವೀಮ್ = ಶೀಘ್ರಗಾಮಿಯಾದ;

ಎಲೈ! ಅಗ್ನಿದೇವನೇ! ಬೇಡನು ಮೃಗಗಳನ್ನು ಹಿಡಿಯಲು ಬಲೆಯನ್ನು ಹರಡುವಂತೆ ನೀನು ರಾಕ್ಷಸರನ್ನು ನಾಶಪಡಿಸಲು ನಿನ್ನ ಬಲವನ್ನು(ಸೈನ್ಯವನ್ನು) ಎಲ್ಲೆಡೆಗೂ ವಿಸ್ತರಿಸು.

ಪ್ರಸಿತಿಂ ದ್ರೂಣಾನೋಽಸ್ತಾಸಿ ವಿಧ್ಯ ರಕ್ಷಸಸ್ತಪಿಷ್ಠೈಃ॥

ತವ ಭ್ರಮಾಸ ಆಶುಯಾ ಪತಂತ್ಯನುಸ್ಪೃಶ ಧೃಷತಾ

---

ಪ್ರಸಿತಿಮಿತಿ ಪ್ರ-ಸಿತಿಮ್ । ದ್ರೂಣಾನಃ । ಅಸ್ತಾ । ಅಸಿ । ವಿಧ್ಯ । ರಕ್ಷಸಃ । ತಪಿಷ್ಠೈ॥

ತವ । ಭ್ರಮಾಸಃ । ಆಶುಯಾ । ಪತಂತಿ । ಅನ್ವಿತಿ । ಸ್ಪೃಶ । ಧೃಷತಾ ।

---

| ಮಂತ್ರ | ವಿನಿಯೋಗ |
|---|---|
| ತವ.......ವಿಷ್ಣುಗುಲ್ಕಾಃ। | ಎರಡನೆಯ ಸಾಮಿಧೇನೀಮಂತ್ರ |

---

ಪ್ರಸಿತಿಮ್ ಅನು=ಶತ್ರುಸೈನ್ಯವನ್ನು ಹಿಂಬಾಲಿಸಿ;ದ್ರೂಣಾನಃ=ಹಿಂಸಿಸುತ್ತಾ [ನಾಶಪಡಿಸುತ್ತಾ] ಅಸ್ತಾ ಅಸಿ=ಓಡಿಸುವವನಾಗು;[ಓಡುವ] ರಕ್ಷಸಃ=ರಾಕ್ಷಸರನ್ನೂ; ತಪಿಷ್ಠೈಃ = ತೀಕ್ಷ್ಣವಾದ ಅತಿಸಂತಾಪಕರವಾದ [ಬಾಣಗಳಿಂದ] ವಿಧ್ಯ= ಹೊಡೆ. ❖ಅಗ್ನೇ! =ಎಲೈ ಅಗ್ನಿದೇವನೇ!ತವ=ನಿನ್ನ;ಭ್ರಮಾಸಃ=ಸುತ್ತಲೂ ಹಾರುವ (ಕಿಡಿಗಳು) ಆಶುಯಾ =ಶೀಘ್ರಗಾಮಿಗಳಾಗಿ;ಪತಂತಿ=ಸುತ್ತಲೂ ಬೀಳುತ್ತವೆ. [ನೀನು] ಶೋಶುಚಾನಃ =ಪ್ರಜ್ವಲಿಸುವವನಾಗಿ; ಧೃಷತಾ=ಧಾರ್ಷ್ಟ್ಯದಿಂದ [ಕೆಚ್ಚಿನಿಂದ]; ಅನುಸ್ಪೃಶ = [ನಿನ್ನ ಕಿಡಿಗಳಿಂದ ರಾಕ್ಷಸರನ್ನು ಹಿಂಬಾಲಿಸಿ] ಬಲವಾಗಿ ಮುಟ್ಟು [ಸುಟ್ಟು ಹಾಕು.]

---

ರಾಜನು ಮಂತ್ರಿ-ಸೇನಾಪತಿಗಳಿಂದೊಡಗೂಡಿ ಆನೆಗಳೊಡನೆ(ಚತುರಂಗ ಸೈನ್ಯದೊಡನೆ) ಶತ್ರುಗಳ ಮೇಲೆ ಯುದ್ಧಕ್ಕೆ ಹೋಗುವಂತೆ ನೀನು ರಾಕ್ಷಸರ ಮೇಲೆ ಎರಗು. ಬೇಗನೆ ಹೋಗುತ್ತಿರುವ ರಾಕ್ಷಸಸೈನ್ಯವನ್ನು ಹಿಂಬಾಲಿಸಿ ಹೊಡೆದು ಹಾಕು. ಶತ್ರುಸೈನ್ಯವನ್ನು ಓಡಿಸು. ಓಡುತ್ತಿದ್ದರೂ ಬಿಡದೆ ಅತಿಸಂತಾಪಕರವಾದ ತೀಕ್ಷ್ಣವಾದ ಬಾಣಗಳಿಂದ ಹೊಡೆ.

ಅಗ್ನಿದೇವನೇ! ಸುತ್ತಲೂ ಹಾರುವ ನಿನ್ನ ಕಿಡಿಗಳು ಶೀಘ್ರಗಾಮಿಗಳಾಗಿ ಎಲ್ಲ ಕಡೆಗಳಲ್ಲಿಯೂ ಬೀಳುತ್ತವೆ. ನೀನೂ ಪ್ರಜ್ವಲಿಸುತ್ತಾ, ದಿಟ್ಟತನದಿಂದ ಕೂಡಿ ನಿನ್ನ ಕಿಡಿಗಳಿಂದ ಆ ರಾಕ್ಷಸರನ್ನು ಹಿಂಬಾಲಿಸಿ ಬಲವಾಗಿ ಮುಟ್ಟು. ಸುಟ್ಟು ಹಾಕು. ನೀನು ಜುಹೂವಿನಲ್ಲಿರುವ ಆಜ್ಯದಿಂದ ಅವಿಚ್ಛಿನ್ನನಾಗಿ [ಹೋಮ ಮಾಡಿದ ಆಜ್ಯದಿಂದ

ಶೋಶುಚಾನಃ ॥ ತಪೂಗ್ಂಷ್ಯಗ್ನೇ ಜುಹ್ವಾ ಪತಂಗಾನಸಂದಿತೋ ವಿಸೃಜ ವಿಷ್ವಗುಲ್ಕಾಃ ॥ ಪ್ರತಿ ಸ್ಪಶೋ ವಿ ಸೃಜ ತೂರ್ಣಿತಮೋ ಭವಾ ಪಾಯುರ್ವಿಶೋ ಅಸ್ಯಾ ಅದಬ್ಧಃ ।

---

ಶೋಶುಚಾನಃ ॥ ತಪೂಗ್ಂಷಿ । ಅಗ್ನೇ । ಜುಹ್ವಾ । ಪತಂಗಾನ್ । ಅಸಂದ್ದಿತ ಇತ್ಯಸಮ್-ದಿತಃ । ವೀತಿ । ಸೃಜ । ವಿಷ್ವಕ್ । ಉಲ್ಕಾಃ ॥ ಪ್ರತೀತಿ । ಸ್ಪಶಃ । ವೀತಿ । ಸೃಜ। ತೂರ್ಣಿತಮ ಇತಿ ತೂರ್ಣಿ-ತಮಃ । ಭವ । ಪಾಯುಃ । ವಿಶಃ । ಅಸ್ಯಾಃ । ಅದಬ್ಧಃ॥

---

[ಅಗ್ನಿದೇವನೇ!] ಜುಹ್ವಾ = ಜುಹುವಿನಿಂದ [ಜುಹುವಿನಲ್ಲಿರುವ ಆಜ್ಯದಿಂದ] ಅಸಂದಿತಃ =[ನೀನು] ಅವಿಚ್ಛಿನ್ನನಾಗಿ; ತಪೂಗ್ಂಷಿ = ಸಂತಾಪಕಾರಣವಾದ ಶಾಖವನ್ನೂ [ಉಷ್ಣತೆ]; ಪತಂಗಾನ್ = ಹಾರುವ ಕಿಡಿಗಳನ್ನೂ; ಉಲ್ಕಾಃ = ಮಹಾಜ್ವಾಲೆಗಳನ್ನೂ; ವಿಷ್ವಕ್ = ಎಲ್ಲ ಕಡೆಗಳಲ್ಲಿಯೂ; ವಿ ಸೃಜ = [ರಾಕ್ಷಸನಾಶಕ್ಕಾಗಿ] ಹೆಚ್ಚಾಗಿ ಉಂಟುಮಾಡು. +ಅಗ್ನೇ! = ಅಗ್ನಿದೇವನೇ! ಅಘಶಗ್ಂಸಃ = ಚಿತ್ರಹಿಂಸೆಯನ್ನು ಮಾಡುವ; ಯಃ = ಯಾವ(ರಾಕ್ಷಸನು); ನಃ = ನಮಗೆ; ದೂರೇ = ದೂರದಲ್ಲಿ (ಇದ್ದಾನೆಯೋ) ಪ್ರತಿ = (ಅವನನ್ನು) ಕುರಿತು; ತೂರ್ಣಿತಮಃ = ಅತಿತ್ವರೆಯುಳ್ಳವನಾಗಿ; ಸ್ಪಶಃ = ಬಂಧನಕಾರಣವಾದ ಪಾಶಗಳನ್ನು; ವಿ ಸೃಜ = ವಿವಿಧವಾಗಿ ಉಂಟುಮಾಡು; ಅದಬ್ಧಃ = ಯಾರಿಂದಲೂ ಹಿಂಸಿಸಲ್ಪಡದವನಾಗಿ;

---

ಯಾವಾಗಲೂ ಉರಿಯುತ್ತಿರುವವನಾಗಿ] ತಾಪಕಾರಣವಾದ ನಿನ್ನ ಶಾಖವನ್ನೂ, ಹಾರುವ ಕಿಡಿಗಳನ್ನೂ, ಮಹಾಜ್ವಾಲೆಗಳನ್ನೂ ರಾಕ್ಷಸನಾಶಕ್ಕಾಗಿ ಎಲ್ಲ ಕಡೆಗಳಲ್ಲಿಯೂ ಹೆಚ್ಚಾಗಿ ಉಂಟುಮಾಡು.

ಅಗ್ನಿದೇವನೇ! ಚಿತ್ರಹಿಂಸೆ ಮಾಡುವ ಯಾವ ರಾಕ್ಷಸನು ನಮಗೆ ದೂರದಲ್ಲಿದ್ದಾನೆಯೋ, ಅವನನ್ನು ಉದ್ದೇಶಿಸಿ ಅತಿತ್ವರೆಯಿಂದ ಕೂಡಿದ ನೀನು ಅವನ ಬಂಧನ

# ಯೋ ನೋ ದೂರೇ ಅಘಶಗ್ಂಸೋ [ಅಘಶಗ್ಂಸಃ (೧)]ಯೋ ಅನ್ತ್ಯಗ್ನೇ ಮಾಕಿಷ್ಟೇ ವ್ಯಥಿರಾದಧರ್ಷೀತ್॥ ಉದಗ್ನೇ ತಿಷ್ಠ ಪ್ರತ್ಯಾತನುಷ್ವ ನ್ಯಮಿತ್ರಾಗ್ಂ

---

ಯಃ । ನಃ । ದೂರೇ । ಅಘಶಗ್ಂಸ ಇತ್ಯಘ-ಶಗ್ಂಸಃ (೧)। ಯಃ । ಅಂತಿ ।ಅಗ್ನೇ। ಮಾಕಿಃ । ತೇ । ವ್ಯಥಿಃ । ಏತಿ । ದಧರ್ಷೀತ್ ॥ ಉದಿತಿ । ಅಗ್ನೇ । ತಿಷ್ಠ। ಪ್ರತಿ । ಏತಿ । ತನುಷ್ವ । ನೀತಿ । ಅಮಿತ್ರಾನ್ ।

---

| ಮಂತ್ರ | ವಿನಿಯೋಗ |
|---|---|
| ಪ್ರತಿ ಸ್ಪಶೋ.....ದಧರ್ಷೀತ್। | ರಾಕ್ಷೋಘ್ನೇಷ್ಟಿಯ ಮೂರನೆಯ ಸಾಮಿಧೇನೀ ಮಂತ್ರ |
| ಉದಗ್ನೇ..........ಶುಷ್ಕಮ್॥ | ಇದು ಇಷ್ಟಿಯ ನಾಲ್ಕನೆಯ ಸಾಮಿಧೇನೀಮಂತ್ರ. |

---

**ಅಸ್ಯಾಃ ವಿಶಃ** = ನಾವೇ ಮೊದಲಾದ ಪ್ರಜೆಗಳಿಗೆ; **ಪಾಯುಃ** = ಪಾಲಕನಾಗಿ; **ಭವ** = ಆಗು; **ವ್ಯಥಿಃ** = ವ್ಯಥೆಯನ್ನುಂಟುಮಾಡುವ; **ಯಃ** = ಯಾವ ರಾಕ್ಷಸನು; **ತೇ** =ನಿನ್ನ; **ಅಂತಿ**=ಸಮೀಪದಲ್ಲಿ (ಇದ್ದಾನೆಯೋ); [ಅವನು] **ಮಾಕಿಃ ಆದಧರ್ಷೀತ್** = ತೊಂದರೆಯುಂಟುಮಾಡಲು ಸಮರ್ಥನಾಗದಿರಲಿ. ❖**ಅಗ್ನೇ** = ಎಲೈ! ಅಗ್ನಿದೇವನೇ! **ಉತ್ ತಿಷ್ಠ** = ಮೇಲೆ ಏಳು. **ಪ್ರತಿ ಆ ತನುಷ್ವ** = [ಶತ್ರುಗಳನ್ನು]ಉದ್ದೇಶಿಸಿ ಎಲ್ಲ ಕಡೆಗಳಲ್ಲಿಯೂ ನಿವಾರಣೋದ್ಯುಕ್ತನಾಗು; **ತಿಗ್ಮಹೇತೇ** = ಎಲೈ ತೀಕ್ಷ್ಣವಾದ ಆಯುಧಗಳುಳ್ಳ (ಅಗ್ನಿಯೇ!)(ನೀನು); **ಅಮಿತ್ರಾನ್** = ಶತ್ರುಗಳನ್ನು;

---

ಕ್ಕಾಗಿ ಪಾಶಗಳನ್ನು ಉತ್ಪಾದಿಸು.ಯಾರಿಂದಲೂ ಹಿಂಸಿಸಲು ಅಶಕ್ಯನಾಗಿರುವ ನೀನು ನಮ್ಮಂತಹ ಪ್ರಜೆಗಳಿಗೆ ರಕ್ಷಕನಾಗಿರು. ವ್ಯಥೆಯನ್ನುಂಟುಮಾಡುವ ಯಾವ ರಾಕ್ಷಸನೂ ನಿನ್ನ ಸಮೀಪದಲ್ಲಿ ಹಿಂಸೆ ಮಾಡಲು ಸಮರ್ಥನಾಗದಿರಲಿ.

**ಓಷತಾತ್ತಿಗ್ಮಹೇತೇ । ಯೋ ನೋ ಅರಾತಿಗ್ಂ ಸಮಿಧಾನ ಚಕ್ರೇ ನೀಚಾ ತಂ ಧಕ್ಷ್ಯತಸಂ ನ ಶುಷ್ಕಮ್॥ ಊರ್ಧ್ವೋ ಭವ ಪ್ರತಿ ವಿಧ್ಯಾಧ್ಯಸ್ಮದಾವಿಷ್ಕೃಣುಷ್ವ ದೈವ್ಯಾನ್ಯಗ್ನೇ ।**

ಓಷತಾತ್ । ತಿಗ್ಮಹೇತ ಇತಿ ತಿಗ್ಮ-ಹೇತೇ ॥ ಯಃ । ನಃ । ಅರಾತಿಮ್ । ಸಮಿಧಾನೇತಿ ಸಮ್-ಇಧಾನ। ಚಕ್ರೇ। ನೀಚಾ। ತಮ್। ಧಕ್ಷಿ। ಅತಸಮ್ । ನ । ಶುಷ್ಕಮ್ ॥ ಊರ್ಧ್ವಃ। ಭವ। ಪ್ರತೀತಿ। ವಿಧ್ಯ। ಅಧೀತಿ । ಅಸ್ಮತ್ । ಆವಿಃ । ಕೃಣುಷ್ವ । ದೈವ್ಯಾನಿ । ಅಗ್ನೇ।

| ಮಂತ್ರ | ವಿನಿಯೋಗ |
| --- | --- |
| ಊರ್ಧ್ವೋ......ಶತ್ರೂನ್ । | ಇಷ್ಟಿಯ ಐದನೆಯ ಸಾಮಿಧೇನೀಮಂತ್ರ. |

ನಿ ಓಷತಾತ್ = ಹೆಚ್ಚಾಗಿ ಸುಟ್ಟುಬಿಡು. ಸಮಿಧಾನ = ಎಲೈ ಜಾಜ್ವಲ್ಯಮಾನನಾದ ಅಗ್ನಿಯೇ!; ಯಃ=ಯಾವನು ನಃ=ನಮ್ಮ[ಮೇಲೆ]; ಅರಾತಿಮ್ = ಶತ್ರುತ್ವವನ್ನು; ಚಕ್ರೇ = ಮಾಡಿದನೋ; ತಮ್ = ಅವನನ್ನು; ನೀಚಾ = ನೀಚನನ್ನಾಗಿ [ಕೆಳಗೆ ಬಿದ್ದವನನ್ನಾಗಿ] ಮಾಡಿ; ಶುಷ್ಕಮ್ ಅತಸಂ ನ = ಒಣಗಿದ ಕಟ್ಟಿಗೆಯಂತೆ; ಧಕ್ಷಿ = ಸುಡು. [ಭಸ್ಮಮಾಡು]. +ಅಗ್ನೇ = ಎಲೈ ಅಗ್ನಿದೇವನೇ! ಊರ್ಧ್ವಃ ಭವ = ಕಾರ್ಯೋದ್ಯುಕ್ತನಾಗು. [ಮೇಲಿರುವವನಾಗು.] ಅಸ್ಮತ್ ಅಧಿ = ನಮ್ಮ ಮೇಲೆ [ಯಾವ ಶತ್ರುಗಳಿದ್ದಾರೆಯೋ ಅವರನ್ನು] ಪ್ರತಿವಿಧ್ಯ = ಎದುರಿಸು. [ಅಗ್ನಿಯೇ!] ದೈವ್ಯಾನಿ = [ನಿನ್ನ] ದೇವಸಂಬಂಧಿ ವೀರ್ಯಗಳನ್ನು; ಆವಿಃ ಕೃಣುಷ್ವ = ಪ್ರಕಾಶಗೊಳಿಸು;

ಎಲೈ ಅಗ್ನಿದೇವನೇ! ರಾಕ್ಷಸರನ್ನು ಕೊಲ್ಲಲು ಮೇಲೇಳು. ಶತ್ರುಗಳನ್ನು ಎಲ್ಲಾ ಕಡೆಗಳಲ್ಲಿಯೂ ಎದುರಿಸು. ಎಲೈ! ತೀಕ್ಷ್ಣವಾದ ಆಯುಧಗಳನ್ನು ಧರಿಸಿರುವ ಅಗ್ನಿಯೇ! ನೀನು ಶತ್ರುಗಳನ್ನು ಹೆಚ್ಚಾಗಿ ದಹಿಸು. ಎಲೈ ಪ್ರಜ್ವಲಿಸುತ್ತಿರುವ ಅಗ್ನಿಯೇ! ಯಾವನು ನಮಗೆ ವೈರಿಯಾಗಿದ್ದಾನೆಯೋ ಅವನನ್ನು ಕೀಳು ಮಾಡಿ ಒಣಗಿದ ಕಟ್ಟಿಗೆಯಂತೆ ಚೆನ್ನಾಗಿ ಸುಟ್ಟುಹಾಕು.

ಎಲೈ ಅಗ್ನಿಯೇ! ನೀನು ಶತ್ರುಗಳ ಮೇಲಿರುವವನಾಗು. ಅವರನ್ನು ನಾಶಪಡಿಸುವ ಕಾರ್ಯದಲ್ಲಿ ಉದ್ಯುಕ್ತನಾಗು. ನಮ್ಮ ಮೇಲೆ ಬೀಳಲಿರುವ ಶತ್ರುಗಳನ್ನು ಎದುರಿಸು.

ಅವ ಸ್ಥಿರಾ ತನುಹಿ ಯಾತುಜೂನಾಂ ಜಾಮಿಮಜಾಮಿಂ ಪ್ರಮೃಣೀಹಿ ಶತ್ರೂನ್॥ ಸ ತೇ[ತೇ(೨)ಜಾನಾತಿ] ಜಾನಾತಿ ಸುಮತಿಂ ಯವಿಷ್ಠ ಯ ಈವತೇ ಬ್ರಹ್ಮಣೇ ಗಾತುಮೈರತ್।

---

ಅವೇತಿ । ಸ್ಥಿರಾ । ತನುಹಿ । ಯಾತುಜೂನಾಮ್ । ಜಾಮಿಮ್ । ಅಜಾಮಿಮ್ । ಪ್ರೇತಿ । ಮೃಣೀಹಿ । ಶತ್ರೂನ್ ॥ ಸಃ । ತೇ (೨) । ಜಾನಾತಿ । ಸುಮತಿಮಿತಿ ಸು-ಮತಿಮ್। ಯವಿಷ್ಠ । ಯಃ । ಈವತೇ । ಬ್ರಹ್ಮಣೇ । ಗಾತುಮ್ । ಐರತ್ ॥

---

| ಮಂತ್ರ | ವಿನಿಯೋಗ |
|---|---|
| ಸ ತೇ........ಅಭಿ ದ್ಯೌತ್ । | ರಾಕ್ಷೋಘ್ನೇಷ್ಟಿಯ ಆರನೆಯ ಸಾಮಿಧೇನೀಮಂತ್ರ. |

---

ಯಾತುಜೂನಾಮ್ = ರಾಕ್ಷಸರ; ಸ್ಥಿರಾ = ಸ್ಥಿರವಾದ ವೀರ್ಯಗಳನ್ನೂ; ಅವ ತನುಹಿ = ಇಳಿದುಹೋಗುವಂತೆ [ಕಡಿಮೆಯಾಗುವಂತೆ]ಮಾಡು. ಜಾಮಿಮ್=ಮತ್ತೆ ಮತ್ತೆ ಪ್ರಹರಿಸಲ್ಪಟ್ಟ; ಅಜಾಮಿಮ್=ಪ್ರಹರಿಸಲ್ಪಡದಿರುವ; ಶತ್ರೂನ್=ಶತ್ರುಗಳೆಲ್ಲರನ್ನೂ; ಪ್ರಮೃಣೀಹಿ=ಕೊಂದುಹಾಕು. +ಯವಿಷ್ಠ=ಅತ್ಯಂತ ಯುವಕನಾದ(ಅಗ್ನಿಯೇ!); ಯಃ = ಯಾವ [ಯಜಮಾನನು;] ಈವತೇ=ತನ್ನ ಮನೆಗೆ ಬರುತ್ತಿರುವ; ಬ್ರಹ್ಮಣೇ = ವ್ಯಾಪಿಸಿಕೊಂಡಿರುವ [ನಿನಗೆ]; ಗಾತುಮ್ = ಹವೀರೂಪವಾದ ಅನ್ನವನ್ನು; ಐರತ್ = ಕೊಡುತ್ತಾನೆಯೋ;

---

ನಿನ್ನ ದೇವಸಂಬಂಧವಾದ ಶಕ್ತಿಗಳನ್ನು ಪ್ರಕಾಶಪಡಿಸು. ರಾಕ್ಷಸರ ಸ್ಥಿರವಾದ ಬಲಗಳನ್ನು ಇಳಿಸಿಬಿಡು. ಹೀನವಾಗುವಂತೆ ಮಾಡು. ಮತ್ತೆ ಮತ್ತೆ ಪ್ರಹರಿಸಲ್ಪಟ್ಟಿರುವವರನ್ನೂ, ಪ್ರಹರಿಸಲ್ಪಡದವರನ್ನೂ, ಎಲ್ಲಾ ಶತ್ರುಗಳನ್ನೂ ಸಾಯಿಸು.

ಒಳ್ಳೆಯ ಯುವಕನಾದ ಅಗ್ನಿಯೇ! ತನ್ನ ಮನೆಗೆ ಬಂದಿರುವ, ವ್ಯಾಪಕನಾಗಿ ಬ್ರಹ್ಮಸ್ವರೂಪನಾದ ನಿನಗೆ ಯಾವ ಯಜಮಾನನು ಹವೀರೂಪವಾದ ಅನ್ನವನ್ನು ಕೊಡುತ್ತಾನೆಯೋ, ಆತನೇ ಅನುಗ್ರಹದಿಂದ ಕೂಡಿದ ನಿನ್ನ ಒಳ್ಳೆಯ ಬುದ್ಧಿಯನ್ನು

ವಿಶ್ವಾನ್ಯಸ್ಮೈ ಸುದಿನಾನಿ ರಾಯೋ ದ್ಯುಮ್ನಾನ್ಯರ್ಯೋ
ವಿ ದುರೋ ಅಭಿ ದ್ಯೌತ್ ॥ ಸೇದಗ್ನೇ ಅಸ್ತು ಸುಭಗಃ
ಸುದಾನುರ್ಯಸ್ತ್ವಾ ನಿತ್ಯೇನ ಹವಿಷಾ ಯ ಉಕ್ಥೈಃ ।

---

ವಿಶ್ವಾನಿ। ಅಸ್ಮೈ। ಸುದಿನಾನೀತಿ ಸು-ದಿನಾನಿ । ರಾಯಃ। ದ್ಯುಮ್ನಾನಿ । ಅರ್ಯಃ । ವೀತಿ। ದುರಃ। ಅಭೀತಿ । ದ್ಯೌತ್ ॥ ಸಃ । ಇತ್ । ಅಗ್ನೇ । ಅಸ್ತು । ಸುಭಗ ಇತಿ ಸು-ಭಗಃ। ಸುದಾನುರಿತಿ ಸು-ದಾನುಃ । ಯಃ । ತ್ವಾ । ನಿತ್ಯೇನ। ಹವಿಷಾ । ಯಃ । ಉಕ್ಥೈಃ ॥

---

ಸಃ=ಅವನೇ; ತೇ = ನಿನ್ನ; ಸುಮತಿಮ್ = ಒಳ್ಳೆಯ ಬುದ್ಧಿಯನ್ನು; ಜಾನಾತಿ = ತಿಳಿಯುತ್ತಾನೆ; ಅರ್ಯಃ = ಸ್ವಾಮಿಯಾದ(ನೀನು); ರಾಯಃ = ಧನಗಳನ್ನೂ; ದ್ಯುಮ್ನಾನಿ = ಯಶಸ್ಸುಗಳನ್ನೂ; ದುರಃ = ಮನೆಗಳನ್ನೂ; ಅಭಿ = ಉದ್ದೇಶಿಸಿ; ಅಸ್ಮೈ = ಈ ಯಜಮಾನನಿಗೆ; ವಿಶ್ವಾನಿ ಸುದಿನಾನಿ = ಎಲ್ಲ ದಿನಗಳೂ ಒಳ್ಳೆಯ ದಿನಗಳಾಗುವಂತೆ; ವಿ ದ್ಯೌತ್ = ಪ್ರಕಾಶಪಡಿಸು, ಅನುಗ್ರಹಿಸು. ‡ಅಗ್ನೇ = ಎಲೈ! ಅಗ್ನಿದೇವನೇ! ಯಃ = ಯಾವ ಯಜಮಾನನು; ಸ್ವೇ ಆಯುಷಿ = ತನ್ನ ಜೀವಿತಕಾಲದಲ್ಲಿ [ಯಾವಜ್ಜೀವವೂ]; ದುರೋಣೇ=ತನ್ನ ಮನೆಯಲ್ಲಿ; ನಿತ್ಯೇನ ಹವಿಷಾ=ತಪ್ಪದೆ ಕೊಡಬೇಕಾದ [ಅಗ್ನಿಹೋತ್ರ, ದರ್ಶ-ಪೂರ್ಣಮಾಸಾದಿಗಳಿಗೆ ಸಂಬಂಧಿಸಿದ] ಹವಿಸ್ಸಿನಿಂದ; ಪಿಪ್ರೀಷತಿ= ಸಂತೋಷ ಪಡಿಸಲು ಇಚ್ಛಿಸುತ್ತಾನೆಯೋ; ಯಃ = ಯಾವ ಯಜಮಾನನು; ಉಕ್ಥೈಃ = ಶಸ್ತ್ರಗಳಿಂದ;

---

ತಿಳಿಯುತ್ತಾನೆ. ನೀನು ಸ್ವಾಮಿಯಾಗಿ ಈ ಯಜಮಾನನಿಗೆ ಧನಗಳನ್ನೂ, ಯಶಸ್ಸುಗಳನ್ನೂ, ಮನೆಗಳನ್ನೂ ಉದ್ದೇಶಿಸಿ [ಅವುಗಳ ವಿಷಯದಲ್ಲಿ] ಎಲ್ಲ ದಿನಗಳೂ ಒಳ್ಳೆಯ ದಿನಗಳಾಗುವಂತೆ ಪ್ರಕಾಶಪಡಿಸು, ಎಲ್ಲವನ್ನೂ ಕೊಟ್ಟು ಅನುಗ್ರಹಿಸು.

ಎಲೈ ಅಗ್ನಿಯೇ! ಯಾವ ಯಜಮಾನನು ಯಾವಜ್ಜೀವವೂ ತಪ್ಪದೇ ಮಾಡಬೇಕಾದ ಅಗ್ನಿಹೋತ್ರಾದಿಗಳಿಗೆ ಸಂಬಂಧಿಸಿದ ಹವಿಸ್ಸಿನಿಂದ ನಿನ್ನನ್ನು ಸಂತೋಷಪಡಿಸಲಿಚ್ಛಿಸುತ್ತಾನೆಯೋ, ಯಾವನು ಉಕ್ಥಗಳೆಂಬ ಶಸ್ತ್ರಗಳಿಂದ (ಶಸ್ತ್ರಗಳುಳ್ಳ ಯಾಗಗಳಿಂದ ಅಥವಾ ಸ್ತೋತ್ರಗಳಿಂದ) ನಿನ್ನನ್ನು ಸಂತೋಷಪಡಿಸಲು ಇಚ್ಛಿಸುತ್ತಾನೆಯೋ, ಆ ಯಜಮಾನನೇ ಸೌಭಾಗ್ಯವಂತನೂ ಒಳ್ಳೆಯ ದಾನಶೀಲನೂ ಆಗಲಿ. ಆ ಯಜಮಾನನ ಎಲ್ಲಾ ಇಷ್ಟಿಯೂ

**ಪಿಪ್ರೀಷತಿ ಸ್ವ ಆಯುಷಿ ದುರೋಣೇ ವಿಶ್ವೇದಸ್ಮೈ ಸುದಿನಾ ಸಾಸದಿಷ್ಟಿಃ ॥ ಅರ್ಚಾಮಿ ತೇ ಸುಮತಿಂ ಘೋಷ್ಯರ್ವಾಕ್ಸಂ ತೇ ವಾವಾತಾ ಜರತಾ[ಜರತಾಮ್(ಙ) ಇಯಂ ಗೀಃ।]**

---

ಪಿಪ್ರೀಷತಿ । ಸ್ವೇ । ಆಯುಷಿ । ದುರೋಣ ಇತಿ ದುಃ-ಓನೇ । ವಿಶ್ವಾ। ಇತ್। ಅಸ್ಮೈ। ಸುದಿನೇತಿ ಸು-ದಿನಾ । ಸಾ । ಅಸತ್ । ಇಷ್ಟಿಃ ॥ ಅರ್ಚಾಮಿ । ತೇ । ಸುಮತಿಮಿತಿ ಸು- ಮತಿಮ್। ಘೋಷಿ । ಅರ್ವಾಕ್ । ಸಮಿತಿ । ತೇ । ವಾವಾತಾ । ಜರತಾಮ್(ಙ)।

---

| ಮಂತ್ರ | ವಿನಿಯೋಗ |
|---|---|
| ಸೇದಗ್ನೇ........ಸಾಸದಿಷ್ಟಿಃ । | ಇಷ್ಟಿಯ ಏಳನೆಯ ಸಾಮಿಧೇನೀಮಂತ್ರ. |
| ಅರ್ಚಾಮಿ..........ದ್ಯೂನ್ । | ಇಷ್ಟಿಯ ಎಂಟನೆಯ ಸಾಮಿಧೇನೀಮಂತ್ರ. |

---

ಸ್ತೋತ್ರವಿಶೇಷಗಳಿಂದ] **ತ್ವಾ**=ನಿನ್ನನ್ನು; **ಪಿಪ್ರೀಷತಿ**=ಸಂತೋಷಪಡಿಸಲು ಇಚ್ಛಿಸುತ್ತಾನೆಯೋ; **ಸಃ ಇತ್**=ಆ ಯಜಮಾನನೇ; **ಸುಭಗಃ** = ಸೌಭಾಗ್ಯವಂತನೂ; **ಸುದಾನುಃ** = ಒಳ್ಳೆಯ ದಾನಗಳುಳ್ಳವನೂ; [ದಾನಶೀಲನೂ] **ಅಸ್ತು**=ಆಗಲಿ; **ಅಸ್ಮೈ**=ಈ ಯಜಮಾನನ; **ವಿಶ್ವಾ ಇತ್ ಇಷ್ಟಿಃ ಸಾ** = ಆ ಎಲ್ಲಾ ಇಷ್ಟಿಯೂ; **ಸುದಿನಾ** =ಒಳ್ಳೆಯ ದಿನವುಳ್ಳದ್ದಾಗಿಯೇ; **ಅಸತ್** = ಆಗುತ್ತದೆ. +[ಅಗ್ನಿದೇವನೇ!] **ತೇ** = ನಿನ್ನ; **ಸುಮತಿಮ್** = [ಅನುಗ್ರಹರೂಪವಾದ] ಒಳ್ಳೆಯ ಬುದ್ಧಿಯನ್ನು; **ಅರ್ಚಾಮಿ** =[ಮನಸ್ಸಿನಿಂದ] ಪೂಜಿಸುತ್ತೇನೆ. **ಅರ್ವಾಕ್** = ಇತ್ತೀಚಿನದಾಗಿದ್ದರೂ; **ಘೋಷಿ** = ಘೋಷವುಳ್ಳ; **ಇಯಮ್ ಗೀಃ** = ಈ [ಸ್ತುತಿರೂಪವಾದ] ನನ್ನ ಮಾತು; **ವಾವಾತಾ** = ಮತ್ತೆ ಮತ್ತೆ ಪ್ರಸರವುಳ್ಳದ್ದಾಗಿ; **ತೇ** = ನಿನ್ನಲ್ಲಿ; **ಸಮ್ ಜರತಾಮ್** = ಜೀರ್ಣವಾಗಲಿ. [ನಿನ್ನನ್ನು ಬಿಟ್ಟು ಬೇರೆ ಕಡೆಗೆ ಹೋಗದಿರಲಿ.]

---

ಒಳ್ಳೆಯ ದಿನವುಳ್ಳ ಇಷ್ಟಿಯೇ[ಒಳ್ಳೆಯ ಫಲಪ್ರದವೇ]ಆಗುತ್ತದೆ. ✿ಎಲೈ! ಅಗ್ನಿದೇವನೇ! ನಿನ್ನ ಅನುಗ್ರಹದ ಒಳ್ಳೆಯ ಬುದ್ಧಿಯನ್ನು ನಾನು ಮನಸ್ಸಿನಿಂದ ಪೂಜಿಸುತ್ತೇನೆ. ಅರ್ವಾಚೀನ(ಇತ್ತೀಚಿನ)ವಾದರೂ ಎಲ್ಲೆಲ್ಲಿಯೂ ಶಬ್ದವನ್ನುಂಟುಮಾಡುವ, ಮತ್ತೆ ಮತ್ತೆ ಹೇಳಲ್ಪಡುವ ನನ್ನ ಸ್ತುತಿರೂಪವಾದ ವಾಣಿಯು ನಿನ್ನಲ್ಲೇ ಚೆನ್ನಾಗಿ ಜೀರ್ಣವಾಗಲಿ.

ಮಿಯಂ ಗೀಃ । ಸ್ವಶ್ವಾಸ್ತ್ವಾ ಸುರಥಾ ಮರ್ಜಯೇಮಾಸ್ಮೇ ಕ್ಷತ್ರಾಣಿ ಧಾರಯೇರನು ದ್ಯೂನ್॥ ಇಹ ತ್ವಾ ಭೂರ್ಯಾ ಚರೇದುಪ ತ್ಮನ್ದೋಷಾವಸ್ತರ್ದೀದಿವಾಗ್‍ಂಸಮನು ದ್ಯೂನ್।

---

ಇಯಮ್। ಗೀಃ॥ ಸ್ವಶ್ವಾ ಇತಿ ಸು-ಅಶ್ವಾಃ। ತ್ವಾ। ಸುರಥಾ ಇತಿ ಸು-ರಥಾಃ। ಮರ್ಜಯೇಮ। ಅಸ್ಮೇ ಇತಿ । ಕ್ಷತ್ರಾಣಿ । ಧಾರಯೇಃ । ಅನ್ವಿತಿ । ದ್ಯೂನ್ ॥ ಇಹ । ತ್ವಾ । ಭೂರಿ । ಏತಿ । ಚರೇತ್ । ಉಪೇತಿ । ತ್ಮನ್ । ದೋಷಾವಸ್ತರಿತಿ ದೋಷಾ-ವಸ್ತಃ। ದೀದಿವಾಗ್‍ಂಸಮ್ । ಅನ್ವಿತಿ । ದ್ಯೂನ್ ॥

---

| ಮಂತ್ರ | ವಿನಿಯೋಗ |
|---|---|
| ಇಹ ತ್ವಾ.........ಜನಾನಾಮ್ । | ರಾಕ್ಷೋಘ್ನೇಷ್ಟಿಯ ಒಂಬತ್ತನೆಯ ಸಾಮಿಧೇನೀಮಂತ್ರ. |

---

[ನಾವಾದರೋ ನಿನ್ನ ಅನುಗ್ರಹದಿಂದ] ಸ್ವಶ್ವಾಃ= ಒಳ್ಳೆಯ ಕುದುರೆಗಳುಳ್ಳವರೂ; ಸುರಥಾಃ = ಒಳ್ಳೆಯ ರಥವುಳ್ಳವರೂ ಆಗಿ; ತ್ವಾ=ನಿನ್ನನ್ನು; ಮರ್ಜಯೇಮ = [ನಿನ್ನನ್ನು] ಸೇವಿಸುತ್ತೇವೆ. [ನೀನೂ] ಅನು ದ್ಯೂನ್ = ದಿನದಿನದಲ್ಲಿಯೂ; ಅಸ್ಮೇ = ನಮ್ಮಲ್ಲಿ; ಕ್ಷತ್ರಾಣಿ = ಸಾಮರ್ಥ್ಯ ಗಳನ್ನು; ಧಾರಯೇಃ = ಪುಷ್ಟಿಗೊಳ್ಳುವಂತೆ [ಧರಿಸುವಂತೆ] ಮಾಡು. +ಇಹ = ಈ ಲೋಕದಲ್ಲಿ; [ಶ್ರೇಯಸ್ಕಾಮನಾದ ಪುರುಷನು] ದೋಷಾವಸ್ತಃ = ರಾತ್ರಿಯೂ ಹಗಲೂ; ದೀದಿವಾಗ್‍ಂಸಮ್ = ಪ್ರಕಾಶಿಸುತ್ತಿರುವ; ತ್ವಾ = ನಿನ್ನನ್ನು; ತ್ಮನ್ = ತನ್ನಲ್ಲಿ; [ತನ್ನ ನಿಮಿತ್ತವಾಗಿ] ಅನು ದ್ಯೂನ್ = ಪ್ರತಿದಿನವೂ; ಭೂರಿ=ಹೆಚ್ಚಾಗಿ;

---

ಬೇರೆಯೆಡೆಗೆ ಹೋಗದಿರಲಿ. ನಿನ್ನ ಅನುಗ್ರಹದಿಂದ ಒಳ್ಳೆಯ ಕುದುರೆಗಳು, ಒಳ್ಳೆಯ ರಥಗಳು ಮುಂತಾದ ಐಶ್ವರ್ಯಸಮೃದ್ಧಿಯನ್ನು ಪಡೆದ ನಾವು ನಿನ್ನನ್ನು ಸೇವಿಸುತ್ತೇವೆ. ನೀನೂ ನಮ್ಮಲ್ಲಿ ಪ್ರತಿದಿನವೂ ಬಲವೃದ್ಧಿಯಾಗುವಂತೆ ಮಾಡು.

ಕ್ರೀಡಂತಸ್ತ್ವಾ ಸುಮನಸಃ ಸಪೇಮಾಭಿ ದ್ಯುಮ್ನಾ
ತಸ್ಥಿವಾಗ್‌ಂಸೋ ಜನಾನಾಮ್ ॥ ಯಸ್ತ್ವಾ ಸ್ವಶ್ವಃ
ಸುಹಿರಣ್ಯೋ ಅಗ್ನ ಉಪಯಾತಿ ವಸುಮತಾ ರಥೇನ ।

---

ಕ್ರೀಡಂತಃ । ತ್ವಾ । ಸುಮನಸ ಇತಿ ಸು-ಮನಸಃ । ಸಪೇಮ । ಅಭೀತಿ । ದ್ಯುಮ್ನಾ।
ತಸ್ಥಿವಾಗ್‌ಂಸಃ । ಜನಾನಾಮ್॥ ಯಃ । ತ್ವಾ। ಸ್ವಶ್ವ ಇತಿ ಸು-ಅಶ್ವಃ। ಸುಹಿರಣ್ಯ ಇತಿ
ಸು-ಹಿರಣ್ಯಃ। ಅಗ್ನೇ । ಉಪಯಾತೀತ್ಯುಪ-ಯಾತಿ । ವಸುಮತೇತಿ ವಸು-ಮತಾ । ರಥೇನ॥

---

| ಮಂತ್ರ | ವಿನಿಯೋಗ |
|---|---|
| ಯಸ್ತ್ವಾ........ಜುಜೋಷತ್ ॥ | ಇಷ್ಟಿಯ ಹತ್ತನೆಯ ಸಾಮಿಧೇನೀ. |

---

ಆ = ಸರ್ವಪ್ರಕಾರದಿಂದಲೂ; ಉಪ ಚರೇತ್ = ಸೇವಿಸಬೇಕು; [ನಾವೂ ಕೂಡ] ಜನಾನಾಮ್ = ಜನರ [ಮಧ್ಯದಲ್ಲಿ] ದ್ಯುಮ್ನಾ = ಧನಗಳನ್ನು; ಅಭಿ ತಸ್ಥಿವಾಗ್‌ಂಸಃ =[ನಿನ್ನ ಅನುಗ್ರಹದಿಂದ] ಹೊಂದಿದವರಾಗಿ; ಸುಮನಸಃ = ಒಳ್ಳೆಯ ಮನಸ್ಸುಳ್ಳವರಾಗಿ; ಕ್ರೀಡಂತಃ=ಸಂತುಷ್ಟರಾಗಿ, ಉಲ್ಲಾಸಯುಕ್ತರಾಗಿ; ತ್ವಾ=ನಿನ್ನನ್ನು; ಸಪೇಮ=ಸೇರುತ್ತೇವೆ; ಸೇವಿಸುತ್ತೇವೆ. +ಅಗ್ನೇ=ಅಗ್ನಿದೇವನೇ! [ನಿನ್ನ ಅನುಗ್ರಹದಿಂದ] ಸ್ವಶ್ವಃ=ಒಳ್ಳೆಯ ಕುದುರೆಗಳುಳ್ಳ; ಸುಹಿರಣ್ಯಃ=ಒಳ್ಳೆಯ ಚಿನ್ನವುಳ್ಳ[ಧನವುಳ್ಳ]; ಯಃ=ಯಾವ [ಯಜಮಾನನು]; ವಸುಮತಾ=ವ್ರೀಹಿಯೇ ಮೊದಲಾದ ಹವೀರೂಪವಾದ ವಸುಗಳಿಂದ ತುಂಬಿದ; ರಥೇನ = ರಥದಿಂದ (ರಥದೊಡನೆ); ತ್ವಾ = ನಿನ್ನನ್ನು; ಉಪಯಾತಿ = ಸಮೀಪಿಸುವನೋ

---

ಈ ಲೋಕದಲ್ಲಿ ತಮಗೆ ಶ್ರೇಯಸ್ಸಾಗಬೇಕೆಂದು ಬಯಸುವ ಪುರುಷನು ಪ್ರತಿದಿನವೂ ರಾತ್ರಿ-ಹಗಲುಗಳಲ್ಲಿ ಒಂದೇ ಸಮನಾಗಿ ಜ್ವಲಿಸುವ ನಿನ್ನನ್ನು ತನಗಾಗಿ ಚೆನ್ನಾಗಿ ಸೇವಿಸಬೇಕು. ನಾವೂ ಉಲ್ಲಾಸಯುಕ್ತರಾಗಿ, ಒಳ್ಳೆಯ ಮನಸ್ಸುಳ್ಳವರಾಗಿ ನಿನ್ನ ಅನುಗ್ರಹದಿಂದ ಜನರ ನಡುವೆ ಧನಗಳನ್ನು ಹೊಂದಿದವರಾಗಿ, ನಿನ್ನನ್ನು ಹೊಂದಿ ಯಥಾವಿಧಿಯಾಗಿ ಸೇವಿಸುತ್ತೇವೆ.

ಅಗ್ನಿದೇವನೇ! ನಿನ್ನ ಅನುಗ್ರಹದಿಂದ ಒಳ್ಳೆಯ ಕುದುರೆ, ಚಿನ್ನ, ಹಣ ಮೊದಲಾದವನ್ನು ಹೊಂದಿದ ಯಾವ ಯಜಮಾನನು ಹವೀರೂಪವಾದ ವ್ರೀಹ್ಯಾದಿಗಳಿಂದ

ತಸ್ಯ ತ್ರಾತಾ ಭವಸಿ ತಸ್ಯ ಸಖಾ ಯಸ್ತ ಆತಿಥ್ಯಮಾನುಷ ಗ್ಜುಜೋಷತ್ ॥ ಮಹೋ ರುಜಾಮಿ [ಳ] ಬಂಧುತಾ ವಚೋಭಿಸ್ತನ್ಮಾ ಪಿತುರ್ಗೋತಮಾದನ್ವಿಯಾಯ ।

ತಸ್ಯ । ತ್ರಾತಾ । ಭವಸಿ । ತಸ್ಯ । ಸಖಾ । ಯಃ । ತೇ । ಆತಿಥ್ಯಮ್ । ಆನುಷಕ್। ಜುಜೋಷತ್ ॥ ಮಹಃ । ರುಜಾಮಿ [ಳ]। ಬಂಧುತಾ । ವಚೋಭಿರಿತಿ ವಚಃ-ಭಿಃ। ತತ್ । ಮಾ । ಪಿತುಃ । ಗೋತಮಾತ್ । ಅನ್ವಿತಿ । ಇಯಾಯ ॥

| ಮಂತ್ರ | ವಿನಿಯೋಗ |
|---|---|
| ಮಹೋ....ದಮೂನಾಃ । | ರಾಕ್ಷೋಘ್ನೇಷ್ಟಿಯ ಹನ್ನೊಂದನೆಯ ಸಾಮಿಧೇನೀಮಂತ್ರ. |

[ಯಾಗಾದಿಗಳನ್ನು ಮಾಡಿ ಹತ್ತಿರವಾಗುವವನೋ] **ತಸ್ಯ** = ಅವನಿಗೆ; **ತ್ರಾತಾ ಭವಸಿ** = [ನೀನು] ಅವನಿಗೆ ರಕ್ಷಕನಾಗುತ್ತೀಯೆ. **ಯಃ**=ಯಾವನು; **ತೇ**=ನಿನಗೆ; **ಆನುಷಕ್** = ಪ್ರತಿದಿನವೂ; **ಆತಿಥ್ಯಮ್**=ಅತಿಥಿಸತ್ಕಾರವನ್ನು; **ಜುಜೋಷತ್** = ಪ್ರೀತಿಪೂರ್ವಕವಾಗಿ ಮಾಡುತ್ತಾನೆಯೋ; **ತಸ್ಯ**=ಅವನಿಗೆ;[ನೀನು]**ಸಖಾ**[ಭವಸಿ]=ಗೆಳೆಯನಂತೆ ಸ್ವಾಧೀನನಾಗಿರುತ್ತೀಯೆ. +[ಎಲೈ ಅಗ್ನಿಯೇ!] **ಬಂಧುತಾ**=[ನಿನ್ನ] ಬಂಧುತ್ವದಿಂದ; **ಮಹಃ**=[ರಾಕ್ಷಸರ] ತೇಜಸ್ಸನ್ನು; **ವಚೋಭಿಃ**=[ಮಂತ್ರರೂಪ]ವಾಕ್ಯಗಳಿಂದಲೇ; **ರುಜಾಮಿ**=ನಾಶಪಡಿಸುತ್ತೇನೆ; **ತತ್** = ಆ ನಿನ್ನ ಬಂಧುತ್ವವು [ಆ ವೇದವಚನವು]; **ಗೋತಮಾತ್**=ಗೋತಮಸದೃಶನಾದ ಅಧ್ಯಾಪಕನಿಂದ; **ಪಿತುಃ** = ತಂದೆಯಿಂದ; **ಮಾ** = ನನ್ನನ್ನು; **ಅನ್ವಿಯಾಯ** = ಅನುಸರಿಸಿ ಹೊಂದಿದೆ;

ತುಂಬಿದ ರಥದೊಡನೆ ನಿನ್ನ ಬಳಿಗೆ ಬರುವವನೋ ಅವನಿಗೆ ನೀನು ರಕ್ಷಕನಾಗಿರುತ್ತೀಯೆ. ಪ್ರತಿನಿತ್ಯವೂ ನಿನಗೆ ಯಥಾವಿಧಿಯಾಗಿ ಅತಿಥಿಸತ್ಕಾರವನ್ನು ಪ್ರೀತಿಯಿಂದ ಮಾಡುವ ಯಜಮಾನನಿಗೆ ನೀನು ಮಿತ್ರನಂತೆ ಹಿತಚಿಂತಕನಾಗಿ ಸ್ವಾಧೀನನಾಗಿರುತ್ತೀಯೆ.

ಎಲೈ ಅಗ್ನಿದೇವನೇ! ನಿನ್ನ ಬಾಂಧವ್ಯದ ಬಲದಿಂದ ನನ್ನ ವೇದಮಂತ್ರರೂಪ-ವಚನಗಳಿಂದಲೇ ರಾಕ್ಷಸರ ತೇಜಸ್ಸನ್ನು ಅಡಗಿಸುತ್ತೇನೆ. ಆ ನಿನ್ನ ಬಂಧುತ್ವವು [ಅಗ್ನಿಪರಿಚರಣವು] ಅಥವಾ ವೇದವಚನವು ಗೋತಮಸದೃಶರಾದ ಅಧ್ಯಾಪಕರಿಂದ,

ತ್ವಂ ನೋ ಅಸ್ಯ ವಚಸಶ್ಚಿಕಿದ್ಧಿ ಹೋತರ್ಯವಿಷ್ಠ ಸುಕ್ರತೋ ದಮೂನಾಃ ॥ ಅಸ್ವಪ್ನಜಸ್ತರಣಯಃ ಸುಶೇವಾ ಅತಂದ್ರಾಸೋಽವೃಕಾ ಅಶ್ರಮಿಷ್ಠಾಃ ।

ತ್ವಮ್ । ನಃ । ಅಸ್ಯ । ವಚಸಃ । ಚಿಕಿದ್ಧಿ । ಹೋತಃ । ಯವಿಷ್ಠ । ಸುಕ್ರತೋ ಇತಿ ಸು-ಕ್ರತೋ । ದಮೂನಾಃ ॥ ಅಸ್ವಪ್ನಜ ಇತ್ಯಸ್ವಪ್ನ-ಜಃ । ತರಣಯಃ । ಸುಶೇವಾ ಇತಿ ಸು-ಶೇವಾಃ । ಅತಂದ್ರಾಸಃ । ಅವೃಕಾಃ । ಅಶ್ರಮಿಷ್ಠಾಃ ॥

| ಮಂತ್ರ | ವಿನಿಯೋಗ |
|---|---|
| ಅಸ್ವಪ್ನಜಃ...........ಅಮೂರ । | ಇಷ್ಟಿಯ ಹನ್ನೆರಡನೆಯ ಸಾಮಿಧೇನೀಮಂತ್ರ. |

**ಹೋತಃ** = ದೇವತೆಗಳನ್ನು ಯಾಗಕ್ಕೆ ಆಹ್ವಾನಿಸುವ; **ಯವಿಷ್ಠ** = ಯುವತಮನಾದ; **ಸುಕ್ರತೋ** = ಒಳ್ಳೆಯ ಯಾಗವುಳ್ಳ [ಯಾಗನಿಷ್ಪಾದಕನಾದ] [ಅಗ್ನಿದೇವನೇ!] **ದಮೂನಾಃ** = ದಾಂತವಾದ ಮನಸ್ಸುಳ್ಳ; **ತ್ವಂ**=ನೀನು; **ನಃ** = ನಮ್ಮ; **ಅಸ್ಯ ವಚಸಃ** = [ಅಧ್ಯಯನ ಮಾಡಿರುವ] ಈ ವೇದವಚನದ[ರಹಸ್ಯವನ್ನು] **ಚಿಕಿದ್ಧಿ** = ತಿಳಿದಿರುವೆ. +**ಅಮೂರ** = ಮೂರ್ಛಾರಹಿತನಾದ (ಮೋಹರಹಿತನಾದ) **ಅಗ್ನೇ** = ಅಗ್ನಿದೇವನೇ!; **ಅಸ್ವಪ್ನಜಃ** = ಮಿಥ್ಯಾಭೂತವಲ್ಲದ [ಸತ್ಯವಾದ]; **ತರಣಯಃ** =[ಪಾಪರೂಪವಾದ ಕತ್ತಲನ್ನು] ಹೋಗಲಾಡಿಸುವ; **ಸುಶೇವಾಃ** = ಸುಖದಿಂದ ಸೇವಿಸಬಹುದಾದ; **ಅತಂದ್ರಾಸಃ** = ಪ್ರಮಾದರಹಿತವಾದ [ಆಲಸ್ಯರಹಿತವಾದ]; **ಅವೃಕಾಃ** = ಹಿಂದೆ ಮಾಡದಿರುವ; **ಅಶ್ರಮಿಷ್ಠಾಃ** = ಶ್ರಮರಹಿತವಾದ; **ತವ** = ನಿನ್ನ;

ಪಿತೃಪಿತಾಮಹಪರಂಪರೆಯಿಂದ ನನ್ನನ್ನು ಅನುಸರಿಸಿ ಬಂದಿದೆ. ನೀನು ದೇವತೆಗಳನ್ನು ಯಾಗಕ್ಕೆ ಆಹ್ವಾನಿಸುವವನು. ಯಾವಾಗಲೂ ಅತಿ ಯುವಕನು. ಒಳ್ಳೆಯ ಯಾಗ ನಿಷ್ಪಾದಕನು. ದಮಗುಣವುಳ್ಳ ಮನಸ್ಸಿನವನು. ಇಂತಹ ನೀನೇ ನಾವು ಅಧ್ಯಯನ ಮಾಡಿರುವ ವೇದವಚನದ ರಹಸ್ಯವನ್ನು ತಿಳಿಯುತ್ತೀಯೆ.

ಮೋಹರಹಿತನಾದ ಅಗ್ನಿದೇವನೇ! ನಿನ್ನ ಆ ಕಿರಣಗಳು ರಕ್ಷಿಸತಕ್ಕವುಗಳು. ಮಿಥ್ಯಾ

ತೇ ಪ್ರಾಯವಃ ಸಧ್ರಿಯಂಚೋ ನಿಷದ್ಯಾಗ್ನೇ ತವ ನಃ ಪಾಂತ್ವಮೂರ ॥ ಯೇ ಪ್ರಾಯವೋ ಮಾಮತೇಯಂ ತೇ ಅಗ್ನೇ ಪಶ್ಯಂತೋ

---

ತೇ । ಪ್ರಾಯವಃ ಸಧ್ರಿಯಂಚಃ । ನಿಷದ್ಯೇತಿ ನಿ-ಸದ್ಯ। ಅಗ್ನೇ । ತವ । ನಃ । ಪಾಂತು। ಅಮೂರ ॥ ಯೇ । ಪ್ರಾಯವಃ । ಮಾಮತೇಯಮ್ । ತೇ । ಅಗ್ನೇ । ಪಶ್ಯಂತಃ।

---

| ಮಂತ್ರ | ವಿನಿಯೋಗ |
|---|---|
| ಯೇ ಪ್ರಾಯವಃ....ನಾ ಹ ದೇಭುಃ॥ | ಇಷ್ಟಿಯ ಹದಿಮೂರನೆಯ ಸಾಮಿಧೇನೀಮಂತ್ರ |

---

**ತೇ** = ಆ; **ಪ್ರಾಯವಃ** = ರಕ್ಷಕವಾದ [ಕಿರಣಗಳು] **ಸಧ್ರಿಯಂಚಃ** = ಜೊತೆಗೂಡಿ ಪ್ರವರ್ತಿಸುವವುಗಳಾಗಿ; **ನಿಷದ್ಯ** = [ಯಾಗಪ್ರದೇಶದಲ್ಲಿ] ಇದ್ದು; **ನಃ** = ನಮ್ಮನ್ನು; **ಪಾಂತು**= ರಕ್ಷಿಸಲಿ. +**ಅಗ್ನೇ** = ಅಗ್ನಿಯೇ! **ತೇ** = ನಿನ್ನ; **ಯೇ ಪ್ರಾಯವಃ** = ಯಾವ ರಕ್ಷಣೆ ಮಾಡುವ ರಶ್ಮಿಗಳು; **ಮಾಮತೇಯಮ್**=ಮಮತೆಯೆಂಬ ಮುನಿಪತ್ನಿಯ ಮಗನಾದ; **ಅಂಧಮ್** = ಕುರುಡನನ್ನು[ದೀರ್ಘತಮನನ್ನು] **ಪಶ್ಯಂತಃ** = ನೋಡಿದವುಗಳಾಗಿ;

---

ಭೂತಗಳಲ್ಲ. ಸತ್ಯವಾದವು. ಪಾಪವೆಂಬ ಕತ್ತಲೆಯನ್ನು ದಾಟಿಸತಕ್ಕವುಗಳು. ಶ್ರಮವಿಲ್ಲದೆ ಸುಖವಾಗಿ ಸೇವಿಸತಕ್ಕವುಗಳು. ಪ್ರಮಾದವಿಲ್ಲದವು. ಹಿಂದೆ ಮಾಡದೇ ಇರತಕ್ಕವು. ಶ್ರಮವೇ ಇಲ್ಲದವು. ಇಂತಹ ಆ ಕಿರಣಗಳು ಒಟ್ಟಿಗೆ ಕಾರ್ಯಪ್ರವೃತ್ತವಾಗಿ ನಮ್ಮನ್ನು ಕಾಪಾಡಲಿ.

ಅಗ್ನಿದೇವನೇ! ನಿನ್ನ ಕಿರಣಗಳು ಮಮತೆಯೆಂಬ ಋಷಿಪತ್ನಿಯ ಮಗನಾದ ಕುರುಡನಾದ ದೀರ್ಘತಮನನ್ನು ನೋಡಿ ಅವನನ್ನು ಕುರುಡುತನವೆಂಬ ಪಾಪದಿಂದ ಪಾರುಮಾಡಿದವು. ಎಲ್ಲವನ್ನೂ ತಿಳಿದಿರುವ ನೀನು ಒಳ್ಳೆಯ ಕೆಲಸವನ್ನು ಮಾಡಿದ ಆ ಕಿರಣಗಳನ್ನು ರಕ್ಷಿಸಿದೆ. ಶತ್ರುಗಳಾದ ರಾಕ್ಷಸರು ನಿನ್ನ ಕಿರಣಗಳನ್ನು ಸೋಲಿಸಬೇಕೆಂದು ಪ್ರಯತ್ನಿಸಿದರೂ ವಿಫಲರಾದರು. ಕಿರಣಗಳನ್ನು ಸೋಲಿಸಲು ಅಸಮರ್ಥರಾದರು.

ಅಂಧಂ ದುರಿತಾದರಕ್ಷನ್ । ರರಕ್ಷ ತಾನ್ಸುಕೃತೋ ವಿಶ್ವ ವೇದಾ ದಿಪ್ಸಂತ ಇದ್ರಿಪವೋ ನಾ ಹ [(೫) ದೇಭುಃ।] ದೇಭುಃ ॥ ತ್ವಯಾ ವಯಗ್ಂ ಸಧನ್ಯಸ್ತ್ವೋತಾಸ್ತವ ಪ್ರಣೀತ್ಯಶ್ಯಾಮ ವಾಜಾನ್ ।

---

ಅಂಧಮ್ । ದುರಿತಾದಿತಿ ದುಃ-ಇತಾತ್ । ಅರಕ್ಷನ್ ॥ ರರಕ್ಷ । ತಾನ್ । ಸುಕೃತ ಇತಿ ಸು-ಕೃತಃ । ವಿಶ್ವವೇದಾ ಇತಿ ವಿಶ್ವ-ವೇದಾಃ । ದಿಪ್ಸಂತಃ । ಇತ್ । ರಿಪವಃ। ನ । ಹ (೫)। ದೇಭುಃ ॥ ತ್ವಯಾ । ವಯಮ್ । ಸಧನ್ಯ ಇತಿ ಸಧ-ನ್ಯಃ । ತ್ವೋತಾಃ। ತವ । ಪ್ರಣೀತೀತಿ ಪ್ರ-ನೀತೀ । ಅಶ್ಯಾಮ । ವಾಜಾನ್ ॥

---

| ಮಂತ್ರ | ವಿನಿಯೋಗ |
| --- | --- |
| ತ್ವಯಾ......ಕೃಣುಹ್ಯಪ್ರಯಾಣ । | ಇಷ್ಟಿಯ ಹದಿನಾಲ್ಕನೆಯ ಸಾಮಿಧೇನೀಮಂತ್ರ. |

---

**ದುರಿತಾತ್** = [ಕುರುಡುತನವೆಂಬ] ಪಾಪದ ದೆಸೆಯಿಂದ; **ಅರಕ್ಷನ್** = ಕಾಪಾಡಿದವೋ; **ವಿಶ್ವವೇದಾಃ** = ಎಲ್ಲವನ್ನೂ ತಿಳಿದವನಾದ [ನೀನು;] **ಸುಕೃತಃ** = ಒಳ್ಳೆಯ ಕೆಲಸವನ್ನು ಮಾಡಿದ; **ತಾನ್** = ಆ ಕಿರಣಗಳನ್ನು; ***ರರಕ್ಷ** = ಕಾಪಾಡಿದೆ; **ರಿಪವಃ** = ಶತ್ರುಗಳು; **ದಿಪ್ಸಂತ ಇತ್** = (ಆ ನಿನ್ನ ಕಿರಣಗಳನ್ನು) ಅಡಗಿಸಲು ಇಚ್ಛಿಸಿ ಪ್ರಯತ್ನಿಸಿದರೂ ಕೂಡ; **ನ ಹ ದೇಭುಃ** = [ಸೋಲಿಸಲು] ಸಮರ್ಥರಾಗಲಿಲ್ಲ. +[ಅಗ್ನೇ = ಅಗ್ನಿಯೇ!] **ತ್ವಯಾ ಸಧನ್ಯಃ** = ನಿನ್ನೊಡನೆ ಸೇರಿ [ಯಜ್ಞಕರ್ಮವನ್ನು ನಿರ್ವಹಿಸುತ್ತಿರುವ] **ತ್ವೋತಾಃ** = ನಿನ್ನಿಂದ ರಕ್ಷಿಸಲ್ಪಟ್ಟಿರುವ; **ವಯಮ್** = ನಾವು; **ತವ** = ನಿನ್ನ; **ಪ್ರಣೀತೀ** = ಪ್ರೇರಣೆಯಿಂದ; **ವಾಜಾನ್** = ಅನ್ನಗಳನ್ನು; **ಅಶ್ಯಾಮ** = ಊಟಮಾಡುತ್ತೇವೆ.

---

ಎಲೈ ಅಗ್ನಿಯೇ! ನಿನ್ನೊಡನೆ ಯಜ್ಞಕರ್ಮವನ್ನು ನಿರ್ವಹಿಸುತ್ತಿರುವ ನಾವು ನಿನ್ನಿಂದ ರಕ್ಷಿತರಾಗಿದ್ದೇವೆ. ನಿನ್ನ ಪ್ರೇರಣೆಯಿಂದ ಅನ್ನಗಳನ್ನು ಭಕ್ಷಿಸುತ್ತೇವೆ. ಸತ್ಯವನ್ನು

---

* 'ಭವಾನ್' ಎಂದು ಅಧ್ಯಾಹಾರ ಮಾಡಿಕೊಂಡಾಗ ಪ್ರಥಮಪುರುಷ

ಉಭಾ ಶಗ್ಂಸಾ ಸೂದಯ ಸತ್ಯತಾತೇಽನುಷ್ಠುಯಾ ಕೃಣುಹ್ಯ ಹೃಯಾಣ ॥ ಅಯಾ ತೇ ಅಗ್ನೇ ಸಮಿಧಾ ವಿಧೇಮ ಪ್ರತಿ ಸ್ತೋಮಗ್ಂ ಶಸ್ಯಮಾನಂ ಗೃಭಾಯ । ದಹಾಶಸೋ ರಕ್ಷಸಃ

ಉಭಾ । ಶಗ್ಂಸಾ । ಸೂದಯ । ಸತ್ಯತಾತ ಇತಿ ಸತ್ಯ-ತಾತೇ । ಅನುಷ್ಠುಯಾ। ಕೃಣುಹಿ। ಅಹ್ರಯಾಣ । ಅಯಾ । ತೇ । ಅಗ್ನೇ । ಸಮಿಧೇತಿ ಸಮ್-ಇಧಾ । ವಿಧೇಮ । ಪ್ರತೀತಿ । ಸ್ತೋಮಮ್ । ಶಸ್ಯಮಾನಮ್ । ಗೃಭಾಯ ॥ ದಹ । ಅಶಸಃ । ರಕ್ಷಸಃ।

| ಮಂತ್ರ | ವಿನಿಯೋಗ |
|---|---|
| ಅಯಾ ತೇ.....ಅವದ್ಯಾತ್ । | ಈ ಇಷ್ಟಿಯ ಹದಿನೈದನೆಯ ಸಾಮಿಧೇನೀಮಂತ್ರ. |

**ಸತ್ಯತಾತೇ** = ಸತ್ಯವನ್ನು ವಿಸ್ತರಿಸುವವನೇ!; **ಉಭಾ ಶಗ್ಂಸಾ** = [ನಿನ್ನ ಎದುರಿನಲ್ಲಿ ನಮ್ಮಿಂದ] ಪ್ರಾರ್ಥಿಸಲ್ಪಡುವ ಐಹಿಕ ಆಮುಷ್ಮಿಕ ಪುರುಷಾರ್ಥಗಳೆರಡನ್ನೂ; **ಸೂದಯ** = ರಕ್ಷಿಸು; **ಅಹ್ರಯಾಣ** = ಭಕ್ತರನ್ನು ನಾಚಿಕೆಗೆ ಗುರಿಮಾಡದವನೇ! **ಅನುಷ್ಠುಯಾ** = [ಯಾಗಾದಿಸಾಧನಗಳ] ಅನುಷ್ಠಾನದಿಂದ [ಆ ಎರಡು ಪುರುಷಾರ್ಥಗಳನ್ನೂ] **ಕೃಣುಹಿ** = ಕೊಡು. [ಸಾಧಿಸಿಕೊಡು]. **+ಅಗ್ನೇ** = ಅಗ್ನಿದೇವನೇ! **ಅಯಾ ಸಮಿಧಾ** = ಈ ಸಾಮಿಧೇನಿಯಿಂದ; **ತೇ** = ನಿನ್ನನ್ನು; **ವಿಧೇಮ** = ಪರಿಚರಿಸುತ್ತೇವೆ; **ಶಸ್ಯಮಾನಂ ಸ್ತೋಮಮ್** = ನಮ್ಮಿಂದ ಹೇಳಲ್ಪಡುತ್ತಿರುವ ಸ್ತೋತ್ರವನ್ನು; **ಪ್ರತಿ ಗೃಭಾಯ** = ಪ್ರತಿಗ್ರಹಿಸು; **ಅಶಸಃ** = ಪ್ರಶಸ್ತರಲ್ಲದ; **ರಕ್ಷಸಃ** = ರಾಕ್ಷಸರನ್ನು; **ದಹ** = ಸುಡು;

ವಿಸ್ತರಿಸುವ ಅಗ್ನಿಯೇ! ನಾವು ನಿನ್ನ ಮುಂದೆ ನಿಂತು ಪ್ರಾರ್ಥಿಸುವ ಐಹಿಕಾಮುಷ್ಮಿಕ ಸುಖಗಳನ್ನು ತಂದುಕೊಡು. ರಕ್ಷಿಸು. ಭಕ್ತರನ್ನು ನಾಚಿಕೆಪಡದಂತೆ ನಡೆಸುವ ಅಗ್ನಿಯೇ! ಯಾಗಾದಿಸಾಧನಗಳ ಅನುಷ್ಠಾನದಿಂದ ಐಹಿಕಾಮುಷ್ಮಿಕ ಸುಖಗಳನ್ನು ಉಂಟುಮಾಡು.

ಅಗ್ನಿಯೇ! ನಾವು ಈ ಸಾಮಿಧೇನಿಯಿಂದ ನಿನ್ನನ್ನು ಸೇವಿಸುತ್ತೇವೆ. ನಮ್ಮ ಈ ಸ್ತೋತ್ರವನ್ನು ಪ್ರತಿಗ್ರಹಿಸು. ನಿಂದ್ಯರಾದ ರಾಕ್ಷಸರನ್ನು ದಹಿಸು. ವೈರಿಗಳ ದ್ರೋಹ

**ಪಾಹ್ಯಸ್ಮಾನ್ದ್ರುಹೋ ನಿದೋ ಮಿತ್ರಮಹೋ ಅವದ್ಯಾತ್॥ ರಕ್ಷೋಹಣಂ ವಾಜಿನಮಾಜಿಘರ್ಮಿ ಮಿತ್ರಂ ಪ್ರಥಿಷ್ಠಮುಪಯಾಮಿ ಶರ್ಮ ।**

---

ಪಾಹಿ । ಅಸ್ಮಾನ್ । ದ್ರುಹಃ । ನಿದಃ । ಮಿತ್ರಮಹ ಇತಿ ಮಿತ್ರ-ಮಹಃ । ಅವದ್ಯಾತ್॥ ರಕ್ಷೋಹಣಮಿತಿ ರಕ್ಷಃ-ಹನಮ್ । ವಾಜಿನಮ್ । ಏತಿ । ಜಿಘರ್ಮಿ । ಮಿತ್ರಮ್। ಪ್ರಥಿಷ್ಠಮ್ । ಉಪೇತಿ । ಯಾಮಿ । ಶರ್ಮ ॥

---

| ಮಂತ್ರ | ವಿನಿಯೋಗ |
|---|---|
| ರಕ್ಷೋಹಣಂ.....ಪಾತು ನಕ್ತಮ್ । | ಈ ಇಷ್ಟಿಯ ಪುರೋನುವಾಕ್ಯೆ* |

---

ಮಿತ್ರಮಹಃ = ಉಪಕಾರ ಮಾಡುವ ತೇಜಸ್ಸುಳ್ಳ ಅಗ್ನಿಯೇ! ದ್ರುಹಃ = [ಶತ್ರುಗಳ] ದ್ರೋಹದ ದೆಸೆಯಿಂದಲೂ; ನಿದಃ = ನಿಂದೆಯ ದೆಸೆಯಿಂದಲೂ; ಅವದ್ಯಾತ್ = ಅಶಾಸ್ತ್ರೀಯವಾದ ಆಚರಣೆಗಳಿಂದ ಉಂಟಾಗುವ ದೋಷಗಳ ದೆಸೆಯಿಂದಲೂ; ಅಸ್ಮಾನ್ = ನಮ್ಮನ್ನು; ಪಾಹಿ = ರಕ್ಷಿಸು. +ರಕ್ಷೋಹಣಮ್ = ರಾಕ್ಷಸರನ್ನು ಕೊಲ್ಲುವ; ವಾಜಿನಮ್ = ಅನ್ನವುಳ್ಳ; (ಅನ್ನವನ್ನು ಕೊಡುವ); (ಅಗ್ನಿಯನ್ನು), ಆ ಜಿಘರ್ಮಿ = ಎದುರಿನಲ್ಲಿ ಪ್ರಜ್ವಲಿಸುವಂತೆ ಮಾಡುತ್ತೇನೆ; ಮಿತ್ರಮ್ = ಲೋಕಕ್ಕೆ ಮಿತ್ರನಾದ; ಪ್ರಥಿಷ್ಠಮ್ = ಅತ್ಯಂತ ವಿಸ್ತೀರ್ಣನಾಗಿರುವ; ಶರ್ಮ = ರಕ್ಷಕನಾಗಿರುವ [ಅಗ್ನಿಯನ್ನು;] ಉಪಯಾಮಿ = ಸೇವಿಸುತ್ತೇನೆ; [ಶರಣು ಹೊಂದುತ್ತೇನೆ].

---

ದಿಂದಲೂ, ನಿಂದೆಯಿಂದಲೂ ನಮ್ಮನ್ನು ರಕ್ಷಿಸು. ಶಾಸ್ತ್ರೀಯವಲ್ಲದ ಆಚರಣೆಗಳಿಂದ ಸಂಭವಿಸುವ ದೋಷಗಳಿಂದಲೂ ನಮ್ಮನ್ನು ರಕ್ಷಿಸು. ❁ಅಗ್ನಿಯು ರಾಕ್ಷಸರನ್ನು ಕೊಲ್ಲ ತಕ್ಕವನು. ಅನ್ನವನ್ನು ಕೊಡತಕ್ಕವನು; ಅನ್ನವುಳ್ಳವನು. ಇಂತಹ ಅಗ್ನಿಯನ್ನು ಅಗ್ರ ಭಾಗದಲ್ಲಿ ಜ್ವಲಿಸುವಂತೆ ಮಾಡುತ್ತೇನೆ. ಲೋಕಗಳಿಗೆ ಮಿತ್ರನಾದ, ಎಲ್ಲೆಡೆಯಲ್ಲಿಯೂ

---

*ಈ ಇಷ್ಟಿಗೆ ಹದಿನೈದು ಸಾಮಿಧೇನಿಗಳು. ಇದು ವಿಕಲ್ಪವಾಗಿ ಸಾಮಿಧೇನಿಯೂ ಆಗಬಹುದೆಂದು ಕೆಲವರ ಮತವೆಂದು ಸಾಯಣಾಚಾರ್ಯರ ಅಭಿಪ್ರಾಯ.

**ಶಿಶಾನೋ ಅಗ್ನಿಃ ಕ್ರತುಭಿಃ ಸಮಿದ್ಧಸ್ಸ ನೋ ದಿವಾ ಸ ರಿಷಃ ಪಾತು ನಕ್ತಮ್ ॥ ವಿ ಜ್ಯೋತಿಷಾ ಬೃಹತಾ ಭಾತ್ಯಗ್ನಿರಾವಿರ್ವಿಶ್ವಾನಿ ಕೃಣುತೇ ಮಹಿತ್ವಾ ।**

---

ಶಿಶಾನಃ । ಅಗ್ನಿಃ । ಕ್ರತುಭಿರಿತಿ ಕ್ರತು-ಭಿಃ । ಸಮಿದ್ಧ ಇತಿ ಸಮ್-ಇದ್ಧಃ । ಸಃ । ನಃ । ದಿವಾ । ಸಃ । ರಿಷಃ । ಪಾತು । ನಕ್ತಮ್ ॥ ವೀತಿ । ಜ್ಯೋತಿಷಾ । ಬೃಹತಾ। ಭಾತಿ । ಅಗ್ನಿಃ । ಆವಿಃ । ವಿಶ್ವಾನಿ । ಕೃಣುತೇ । ಮಹಿತ್ವೇತಿ ಮಹಿ-ತ್ವಾ ॥

---

| ಮಂತ್ರ | ವಿನಿಯೋಗ |
| --- | --- |
| ವಿ ಜ್ಯೋತಿಷಾ..........ವಿನಿಕ್ಷೇ । | ರಾಕ್ಷೋಘ್ನೇಷ್ಟಿಯ ಯಾಜ್ಯ |

---

**ಕ್ರತುಭಿಃ** = ಯಾಗಗಳಿಂದ; **ಸಮಿದ್ಧಃ** = ಪ್ರಜ್ವಲಿತನಾದ; **ಶಿಶಾನಃ** = ತೀಕ್ಷ್ಣನಾದ; **ಸಃ** = ಆ; **ಅಗ್ನಿಃ** = ಅಗ್ನಿಯು; **ದಿವಾ** = ಹಗಲಿನಲ್ಲಿ; **ರಿಷಃ** = ಹಿಂಸಕನಿಂದ; **ನಃ** = ನಮ್ಮನ್ನು; **ಪಾತು** = ಕಾಪಾಡಲಿ; **ಸಃ** = ಆ ಅಗ್ನಿದೇವನೇ; **ನಕ್ತಮ್** = ರಾತ್ರಿಯಲ್ಲಿಯೂ; **ರಿಷಃ ಪಾತು** = ಹಿಂಸಕರಿಂದ ರಕ್ಷಿಸಲಿ. +**ಅಗ್ನಿಃ** = ಈ ಅಗ್ನಿದೇವನು; **ಬೃಹತಾ** = ದೊಡ್ಡದಾದ; **ಜ್ಯೋತಿಷಾ** = ತೇಜಸ್ಸಿನಿಂದ; **ವಿ ಭಾತಿ** = ಹೆಚ್ಚಾಗಿ ಪ್ರಕಾಶಿಸುತ್ತಾನೆ; **ವಿಶ್ವಾನಿ** = ಎಲ್ಲಾ [ಲೋಕಗಳನ್ನೂ]; **ಮಹಿತ್ವಾ** = [ತನ್ನ] ಮಾಹಾತ್ಮ್ಯದಿಂದ; **ಆವಿಃ ಕೃಣುತೇ** = ಉಂಟುಮಾಡುತ್ತಾನೆ. [ವ್ಯಕ್ತವಾಗುವಂತೆ ಮಾಡುತ್ತಾನೆ].

---

ವ್ಯಾಪಿಸಿಕೊಂಡಿರುವ ರಕ್ಷಕನಾದ ಆ ಅಗ್ನಿಗೆ ಶರಣಾಗತನಾಗುತ್ತೇನೆ. ಆತನನ್ನು ಆಶ್ರಯಿಸುತ್ತೇನೆ. ನಾವು ಮಾಡುವ ಯಜ್ಞಗಳಿಂದ ಪ್ರಜ್ವಲಿತನಾಗಿರುವ, ಉಗ್ರನಾದ (ರಾಕ್ಷಸರಿಗೆ) ಆ ಅಗ್ನಿಯು ಹಗಲಿನಲ್ಲಿಯೂ, ರಾತ್ರಿಯಲ್ಲಿಯೂ ಹಿಂಸಕರಿಂದ ನಮ್ಮನ್ನು ರಕ್ಷಿಸಲಿ.

ಈ ಅಗ್ನಿದೇವನು ನಮ್ಮ ಆಹುತಿಗಳನ್ನು ಸ್ವೀಕರಿಸಿ, ಮಹಾಜ್ಯೋತಿಸ್ಸಿನಿಂದ ಹೆಚ್ಚಾಗಿ ಪ್ರಕಾಶಿಸುತ್ತಿದ್ದಾನೆ. ಅಗ್ನಿದೇವನು ತನ್ನ ಮಹಿಮೆಯಿಂದ ಎಲ್ಲವನ್ನೂ ಉಂಟು ಮಾಡಬಲ್ಲನು. ಆತನು ಬೇರೆಯವರಿಂದ ಅತಿಕ್ರಮಿಸಲು ಸಾಧ್ಯವಿಲ್ಲದಂತಹ ರಾಕ್ಷಸರ

ಪ್ರಾದೇವೀರ್ಮಾಯಾಸ್ಸಹತೇ ದುರೇವಾಃ ಶಿಶೀತೇ

ಶೃಂಗೇ ರಕ್ಷಸೇ ವಿನಿಕ್ಷೇ ॥ ಉತ ಸ್ವಾನಾಸೋ ದಿವಿ

ಷಂತ್ವಗ್ನೇಸ್ತಿಗ್ಮಾಯುಧಾ ರಕ್ಷಸೇ ಹಂತವಾ ಉ ।

ಪ್ರೇತಿ । ಅದೇವೀಃ । ಮಾಯಾಃ । ಸಹತೇ । ದುರೇವಾ ಇತಿ ದುಃ-ಏವಾಃ ॥ ಶಿಶೀತೇ। ಶೃಂಗೇ ಇತಿ । ರಕ್ಷಸೇ । ವಿನಿಕ್ಷ ಇತಿ ವಿ-ನಿಕ್ಷೇ ॥ ಉತ । ಸ್ವಾನಾಸಃ । ದಿವಿ । ಸಂತು । ಅಗ್ನೇಃ । ತಿಗ್ಮಾಯುಧಾ ಇತಿ ತಿಗ್ಮ-ಆಯುಧಾಃ । ರಕ್ಷಸೇ । ಹಂತವೈ। ಉ॥

| ಮಂತ್ರ | ವಿನಿಯೋಗ |
|---|---|
| ಉತ........ಅದೇವೀಃ । | ಈ ಇಷ್ಟಿಯಲ್ಲಿ ವಿಕಲ್ಪಿತವಾದ ಯಾಜ್ಯೆ* |

ದುರೇವಾಃ =ಅತಿಕ್ರಮಿಸಲು ಅಸಾಧ್ಯವಾದ; ಅದೇವೀಃ = ಅಸುರಸಂಬಂಧವಾದ; ಮಾಯಾಃ = ಮಾಯೆಗಳನ್ನು; ಪ್ರ ಸಹತೇ=ನಾಶಪಡಿಸುತ್ತಾನೆ. ರಕ್ಷಸೇ=ರಾಕ್ಷಸರನ್ನು; ವಿನಿಕ್ಷೇ =ನಾಶಪಡಿಸುವುದಕ್ಕೆ; ಶೃಂಗೇ=ಕೊಂಬುಗಳಂತಿರುವ [ಎರಡು ಜ್ವಾಲೆಗಳನ್ನು]; ಶಿಶೀತೇ =ತೀಕ್ಷ್ಣಗೊಳಿಸುತ್ತಾನೆ. ❖ ಸ್ವಾನಾಸಃ =ಪುರೋಡಾಶಾಹುತಿಯಿಂದ ಶಬ್ದ ಮಾಡುತ್ತಿರುವ;ತಿಗ್ಮಾಯುಧಾಃ=[ಜ್ವಾಲೆಯ] ತೀವ್ರತೆಯೇ ಆಯುಧವಾಗಿರುವ; ಅಗ್ನೇಃ= ಅಗ್ನಿದೇವನ [ರಶ್ಮಿಗಳು]; ರಕ್ಷಸೇ ಹಂತವೈ ಉ = [ರಾಕ್ಷಸರನ್ನು] ಸಂಹರಿಸುವುದ ಕ್ಕಾಗಿಯೇ; ಉತ ದಿವಿ = ದೇವಲೋಕದಲ್ಲಿಯೂ; ಸಂತು = ಇರಲಿ; [ಪ್ರಸರಿಸಲಿ]

ಮಾಯೆಗಳನ್ನು ನಾಶಪಡಿಸುತ್ತಾನೆ. ವೃಷಭವು ತನ್ನ ಕೊಂಬುಗಳನ್ನು ಚೂಪು ಮಾಡು

* ಉಪಹೋಮಕ್ಕಾಗಿರುವ ಋಕ್ ಎಂದೂ ಹೇಳಬಹುದೆಂದು ಮಿಶ್ರರ ಅಭಿಪ್ರಾಯ.
* ಇದೂ,ಇದರ ಹಿಂದಿನದು ಈ ಎರಡೂ ಯಾಜ್ಯಾನುವಾಕ್ಯೆಗಳೆಂದು ಕೆಲವರ ಮತ. (ಸಾಯಣ)

ಮದೇ ಚಿದಸ್ಯ ಪ್ರರುಜಂತಿ ಭಾಮಾ ನ ವರಂತೇ

ಪರಿಬಾಧೋ ಅದೇವೀಃ ॥ ೧೪-34 ॥

[ಅಘಶಗ್ಂಸಸ್ಸ ತೇ ಜರತಾಗ್ಂ ರುಜಾಮಿ ಹ ದಿವ್ಯೆಕ

ಚತ್ವಾರಿಗ್ಂಶಚ್ಚ।]

---

ಮದೇ । ಚಿತ್ । ಅಸ್ಯ । ಪ್ರೇತಿ । ರುಜಂತಿ । ಭಾಮಾಃ । ನ । ವರಂತೇ । ಪರಿಬಾಧ ಇತಿ ಪರಿ-ಬಾಧಃ । ಅದೇವೀಃ ॥ ೧೪ ॥

---

**ಮದೇ ಚಿತ್** = ನಮ್ಮ ಸಂತೋಷಕ್ಕಾಗಿಯೇ; **ಅಸ್ಯ** = ಈ ಅಗ್ನಿಯ; **ಭಾಮಾಃ** = ಜ್ವಾಲೆಗಳು; **ಪ್ರರುಜಂತಿ** = [ನಮ್ಮ ಶತ್ರುಗಳನ್ನು] ಭಗ್ನರನ್ನಾಗಿ ಮಾಡುತ್ತವೆ; **ಅದೇವೀಃ** = ಅಸುರಸಂಬಂಧವಾದ; **ಪರಿಬಾಧಃ** = ಸುತ್ತಲೂ ಉಂಟುಮಾಡಿದ ಬಾಧೆಗಳು; **ನ ವರಂತೇ** = [ನಿನ್ನ ಅನುಗ್ರಹದಿಂದ] ನಮ್ಮನ್ನು ಆವರಿಸಲಾರವು.

---

ವಂತೆ, ಅಗ್ನಿದೇವನು ಕೋಡಿನಂತಿರುವ ತನ್ನ ಎರಡು ಜ್ವಾಲೆಗಳನ್ನು ರಾಕ್ಷಸರ ನಾಶಕ್ಕಾಗಿ ತೀಕ್ಷ್ಣವಾಗುವಂತೆ ಮಾಡುತ್ತಾನೆ.

ಪುರೋಡಾಶವೇ ಮುಂತಾದ ಆಹುತಿಗಳನ್ನು ಕೊಟ್ಟಾಗ ಅಗ್ನಿಯ ರಶ್ಮಿಗಳು ಶಬ್ದ ಮಾಡುತ್ತವೆ. ಆ ರಶ್ಮಿಗಳ ತೀವ್ರತೆಯೇ ಶತ್ರುಗಳನ್ನು ನಾಶಪಡಿಸುವ ಆಯುಧವಾಗಿದೆ. ಇಂತಹ ಅಗ್ನಿದೇವನ ರಶ್ಮಿಗಳು ರಾಕ್ಷಸನಾಶಕ್ಕಾಗಿ ದೇವಲೋಕದಲ್ಲಿಯೂ ಹರಡಿಕೊಳ್ಳಲಿ. ಅಗ್ನಿದೇವನ ರಶ್ಮಿಗಳು ನಮ್ಮ ಸಂತೋಷಕ್ಕಾಗಿಯೇ ಶತ್ರುಗಳನ್ನು ನಾಶಪಡಿಸುತ್ತವೆ. ಅಗ್ನಿಯ ಅನುಗ್ರಹದಿಂದಲೇ ರಾಕ್ಷಸರು ಸುತ್ತಲೂ ಉಂಟುಮಾಡಬಹುದಾದ ಬಾಧೆಗಳು ನಮ್ಮನ್ನು ಆವರಿಸಲಾರವು. ನಮ್ಮ ಸಮೀಪಕ್ಕೆ ಬರಲಾರವು.

[ಆಪ ಉಂದಂತ್ವಾಕೊತ್ತ್ಯೈ ದೈವೀಮಿಯಂ ತೇ ವಸ್ಸ್ಯಸ್ಯಗ್ಂಶುನಾ

ತೇ ಸೋಮಂ ತ ಉದಾಯುಷಾ ಪ್ರಚ್ಯವಸ್ವಾಗ್ನೇರಾತಿಥ್ಯಮಗ್ಂ

-ಶುರಗ್ಂಶುರ್ವಿತ್ತಾಯನೀ ಮೇಽಸಿ ಯುಂಜತೇ ಕೃಣುಷ್ವ

ಪಾಜಶ್ಚತುರ್ದಶ ॥ ೧೪ ॥

ಆಪೋ ವಸ್ಸ್ಯಸಿ ಯಾ ತವೇಯಂ ಗೀಶ್ಚತುಸ್ತ್ರಿಗ್ಂಶತ್ ॥ 34 ॥

॥ ಆಪ ಉಂದಂತ್ವದೇವೀಃ ॥



ಹರಿಃ ಓಂ। ಶ್ರೀಕೃಷ್ಣಾರ್ಪಣಮಸ್ತು

ಇತಿ ಪ್ರಥಮಕಾಂಡೇ ದ್ವಿತೀಯಃ ಪ್ರಶ್ನಃ

---

## ವಿನಿಯೋಗಸಂಗ್ರಹ

ಕೃಣು ರಾಕ್ಷೋಘ್ನಕೇ ಯಾಗೇ ಸಾಮಿಧೇನ್ಯಸ್ತು ಷೋಡಶ ।
ಯಾಜ್ಯಾನುವಾಕ್ಯೇ ದ್ವೇ ಅಷ್ಟಾದಶ ಮಂತ್ರಾ ಇಹೇರಿತಾಃ ॥

ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ ಸಾಮಿಧೇನೀಗಳು 16
ಯಾಜ್ಯಾನುವಾಕ್ಯೆಗಳು 2
18

## ಅನುವಾಕದ ವಿಶೇಷ ವಿಷಯಗಳು

### ಅ) ಭ.ಭಾ. ಭಾಷ್ಯ

ಮಂತ್ರ ಸಂಖ್ಯೆ

೧) ಕೃಣುಷ್ವ...........ತಪಿಷ್ಠೈಃ । ಪ್ರಸಿತಿಃ = ಹಲವು ದಾರಗಳಿಂದ ಮಾಡಿದ ಮೃಗಗಳನ್ನು ಹಿಡಿಯಲು ಉಪಯೋಗಿಸುವ ಬಲೆ, ಮೀನುಗಳನ್ನು ಹಿಡಿಯುವ ಬಲೆ, ಹಕ್ಕಿಗಳನ್ನು ಹಿಡಿಯಲು ಬಳಸುವ ವಿಸರ- ಇವೆಲ್ಲವೂ ಪ್ರಸಿತಿಗಳಾಗುತ್ತವೆ.

*ಅಮವಾನ್ = ಆಯುಧವಾನ್ । ಶತ್ರುಗಳ ಮನಸ್ಸು, ದೇಹಾದಿಗಳನ್ನು ಭಗ್ನಗೊಳಿಸುವ ಆಯುಧಗಳುಳ್ಳವನು.

ರಕ್ಷಸ್ ಶಬ್ದವು ಪುಲ್ಲಿಂಗ ಮತ್ತು ನಪುಂಸಕಲಿಂಗದಲ್ಲಿ ಇರುತ್ತದೆ. ಪುಲ್ಲಿಂಗದಲ್ಲಿರುವಾಗ ಅಂತೋದಾತ್ತವಾಗಿರುತ್ತದೆ.

ರಕ್ಷಸಃ ಪಾಹ್ಯಸ್ಮಾನ್ । ರಕ್ಷಸ್ + ಅಸ್ = ರಕ್ಷಸಸ್-ರಕ್ಷಸರ್-ರಕ್ಷಸಃ

'ಕ್ಷ' ಎಂಬಲ್ಲಿ ಅಕಾರವು ಉದಾತ್ತ. ಆದುದರಿಂದ ಪ್ರಾತಿಪದಿಕವು ಅಂತೋದಾತ್ತವಾಯಿತು.

ನಪುಂಸಕದಲ್ಲಿರುವಾಗ ಆದ್ಯುದಾತ್ತ.

ರಕ್ಷಸಾಮಪಹತ್ಯೈ । ರಕ್ಷಸ್ + ಆಮ್ - ರಕ್ಷಸಾಮ್ + ಅಪಹತ್ಯೈ ।

'ರ' ಎಂಬಲ್ಲಿ ಅಕಾರವು ಉದಾತ್ತ. ಆದುದರಿಂದ ಪ್ರಾತಿಪದಿಕವು ಆದ್ಯುದಾತ್ತವಾಯಿತು.

೨) ತವ.........ವಿಷ್ವಗುಲ್ಕಾಃ ॥ ಜುಹ್ವಾ ಅಸಂದಿತಃ = ಜುಹುವಿನಲ್ಲಿರುವ ಆಜ್ಯದಿಂದ ಯಂತ್ರಿತನಾಗದೆ/ಬದ್ಧನಾದಂತಿರದೆ.

೩) ಪ್ರತಿ...........ದಧರ್ಷೀತ್ ॥ ಸ್ಪಶಃ= ಬಾಧಕಾನ್ಯಾಯುಧಾನಿ = ಶತ್ರುಗಳನ್ನು ಬಾಧಿಸುವ ಆಯುಧಗಳು.

೪) ಉದಗ್ನೇ.........ಶುಷ್ಕಮ್ ॥ ಸಮಿಧಾನ = ಸಾಮಿಧೇನೀಸಮಿತ್ತುಗಳಿಂದ ಪ್ರಜ್ವಲಿಸುವ;

೫) ಸ ತೇ..........ದ್ಯೌತ್ ॥ 1) ವಿಶ್ವಾನಿ ಅಪಿ ಸುದಿನಾನಿ ಅಸ್ಮೈ[ಭವಂತಿ] 2) ದ್ಯುಮ್ನಾನಿ = ಯಶಾಂಸಿ[ಚ ಭವಂತಿ] 3) ರಾಯಃ = ಧನಸ್ಯ; ಅರ್ಯಃ = ಸ್ವಾಮೀ [ಭವತಿ] 4) ದುರಃ ಅಭಿ ವಿ ದ್ಯೌತ್ = ಗೃಹಾನ್ ಅಭಿ ವಿದ್ಯೋತತೇ = ಗೃಹಸ್ಥಶ್ಚ ಭವತಿ ಎಂಬುದಾಗಿ ನಾಲ್ಕು ವಾಕ್ಯಗಳನ್ನಾಗಿ ವಾಕ್ಯಭೇದದಿಂದ ವ್ಯಾಖ್ಯಾನ ಮಾಡಿರುತ್ತಾರೆ. ನಾಲ್ಕನ್ನೂ ಏಕವಾಕ್ಯತೆಯಿಂದಲೂ ವ್ಯಾಖ್ಯಾನಿಸಿರುತ್ತಾರೆ.

೮) ಅರ್ಚಾಮಿ........ದ್ಯೂನ್ ॥ ಇಯಂ = ಮದೀಯಾ; ಗೀಃ ಚ; ತೇ = ತ್ವಾಮ್ ಸಂ ಜರತಾಮ್ = ಸಮ್ಯಕ್ ಸ್ತೌತು = ಚೆನ್ನಾಗಿ ಸ್ತುತಿಸಲಿ.

೧೧) ಮಹೋ...........ದಮೂರಾಃ ॥ ಮಹಃ = ಮಹತಃ ಅಸುರಾನ್ = ಮಹಾರಾಕ್ಷಸರನ್ನು.

೧೪) ತ್ವಯಾ........ಅಪ್ರಯಾಣ ॥ ಅನುಷ್ಠುಯಾ = ಅನುಕ್ರಮೇಣ ಸ್ಥಿತೌ ಕುರು = ಐಹಿಕಾಮುಷ್ಮಿಕಾರ್ಥಗಳನ್ನು ಕ್ರಮವಾಗಿ ನೆಲಸಿರುವಂತೆ ಮಾಡು.

೧೭)ವಿ ಜ್ಯೋತಿಷಾ..........ವಿನಿಕ್ತೇ ॥ ಮಹಿತ್ವಾ = [ವಿಶ್ವಾನಿ] ಮಾಹಾತ್ಮ್ಯಾನಿ ಆವಿಷ್ಕುರುತೇ = ಅಗ್ನಿಯು ತನ್ನ ಎಲ್ಲ ಮಹಿಮೆಗಳನ್ನೂ ಪ್ರಕಾಶಪಡಿಸುತ್ತಾನೆ.

೧೮) ಉತ........ಅದೇವೀಃ ॥ ಅಗ್ನಿಮ್ ಅಸ್ಮದರ್ಥೇ ಪ್ರವರ್ತಮಾನಮ್ ಅದೇವೀಃ = ಅದೇವ್ಯಃ = ಆಸುರ್ಯಃ; ಪರಿಬಾಧಃ = ಪೀಡಾಃ; ನ ವರಂತೇ = ನ ವೃಣ್ವಂತು = ನ ಪ್ರಾಪ್ನುವಂತು । ನಮಗಾಗಿ ತೊಡಗುವ ಅಗ್ನಿಯನ್ನು ಆಸುರೀಪೀಡೆಗಳು ಆವರಿಸದಿರಲಿ. [ನಮ್ಮನ್ನು ಆವರಿಸದಿರಲಿ ಎಂದು ಸಾಯಣರ ವಿವರಣೆ.]

## ಆ) ಮೀಮಾಂಸಾ

ಒಂದನೆಯ ಪ್ರಪಾಠಕದ ಕಡೆಯದಾದ 'ಉಭಾ ವಾಮಿಂದ್ರಾಗ್ನೀ' ಎಂದು ಆರಂಭಗೊಳ್ಳುವ ಅನುವಾಕದಲ್ಲಿನ ಮೀಮಾಂಸಾನಿರ್ಣಯಗಳನ್ನು ಯಾಜ್ಯಾಕಾಂಡದಲ್ಲಿ ಅನ್ವಯಿಸಿಕೊಳ್ಳಬೇಕೆಂದು ಸಾಯಣರು ತಿಳಿಸಿರುತ್ತಾರೆ. ಆದುದರಿಂದ ಇಲ್ಲಿಯೂ ಅದರಂತೆಯೇ.

## ಇ) ಛಂದಸ್ಸು

ಅನುವಾಕದ ಎಲ್ಲ ಮಂತ್ರಗಳೂ ತ್ರಿಷ್ಟುಪ್ ಛಂದಸ್ಸಿನಲ್ಲಿಯೇ ಇವೆ. ವಿಶ್ವೇದೇವ ಋಷಿಗಳು.



# ಅನುಬಂಧ - ೧

## ತೈತ್ತಿರೀಯಸಂಹಿತಾ

### ಪ್ರಥಮಃ ಕಾಂಡಃ   ಪ್ರಥಮಃ ಪ್ರಶ್ನಃ

| ಅನು-ವಾಕ | ಋಙ್ಮಂತ್ರಗಳು | ಅಕ್ಷರಗಳ ಸಂಖ್ಯೆ | ಛಂದಸ್ಸಿನ ಹೆಸರು# | ಸಾಯಣರು | ಮಿಶ್ರರು |
|---|---|---|---|---|---|
| 1 | ದೇವೋ ವಃ............ಕರ್ಮಣೇ । | ೧೮ [೧೦+೮] | ದ್ವಿಪದಾ ವಿರಾಡ್ ಗಾಯತ್ರೀ* | — | — |
| | ಆಪ್ಯಾಯಧ್ವಂ..........ಶಗ್ಂಸಃ । | ೧೧+೮+೧೧ +೧೧=೪೧ | ಮಧ್ಯೇಜ್ಯೋತಿಸ್ತ್ರಿಷ್ಟುಪ್ | — | — |
| | ರುದ್ರಸ್ಯ...........ವೃಣಕ್ತು । | ೧೧ | ಏಕಪದಾ ತ್ರಿಷ್ಟುಪ್ | — | — |
| | ಧ್ರುವಾ.............ಬಹ್ವೀಃ । | ೧೧ | ಏಕಪದಾ ತ್ರಿಷ್ಟುಪ್ | — | — |
| | ಯಜಮಾನಸ್ಯ........ಪಾಹಿ। | ೬ | — | ಯಜುಃ | ಏಕಪದಾ ಭುರಿಜ್ ಗಾಯತ್ರೀ* |

| | | | | | |
|---|---|---|---|---|---|
| 2 | ಪ್ರತ್ಯುಷ್ಟಗ್ಂ.......ಅರಾತಯಃ । | ಯಜುಃ+೭ | — | ಯಜುಃ | ಕೇಚಿತ್ ಯಜುರಾದಿಕಾ ಏಕಪದಾ ಗಾಯತ್ರೀ |
| | ಪ್ರೇಯಮ್..........ಆಸದೇ । | ೪೪ | ತ್ರಿಷ್ಟುಪ್ [ಆಪಸ್ತಂಬ ಮತದಂತೆ] | — | — |
| | ಸಹಸ್ರ.....ರುಹೇಮ । | ೧೧ | ಏಕಪದಾ ತ್ರಿಷ್ಟುಪ್ | — | — |
| | ಉರ್ವಂತರಿಕ್ಷಮನ್ವಿಹಿ। | ೮ | *ಏಕಪದಾ ಗಾಯತ್ರೀ | — | — |
| 3 | ಸಂಪೃಚ್ಯಧ್ವಂ............ಸಾತಯೇ । | ೨೪ | ಗಾಯತ್ರೀ | — | — |
| 5 | ದೇವೋ............ರಶ್ಮಿಭಿಃ । | ೨೪ | ಗಾಯತ್ರೀ | — | — |

#ಕೆಳಗಿನ ಹೆಸರುಗಳು ಉಭಯಭಾಷ್ಯ ಸಮ್ಮತವಾದವುಗಳು.

*ಜಾಗತಗಾಯತ್ರಪಾದಗಳಿರುವುದರಿಂದ ಮತ್ತು ಜಗತಿಗೆ ಎರಡು ಅಕ್ಷರಗಳು ಕಡಿಮೆಯಾಗಿ ಪ್ರಥಮಪಾದದಲ್ಲಿ ಹತ್ತು ಅಕ್ಷರಗಳಿರುವುದರಿಂದ.

*ಮಿಶ್ರರು ಮಾತ್ರ ಛಂದಸ್ಸಿನ ಹೆಸರನ್ನು ಹೇಳಿದ್ದರೆ ಸಾಯಣರ ಮತದಲ್ಲಿ ಅದು ಯಜುಸ್ಸೆಂದು ಕೆಲವೆಡೆ ತಿಳಿಯಬೇಕು.

| ಅನು-ವಾಕ | ಋಙ್ಮಂತ್ರಗಳು | ಅಕ್ಷರಗಳ ಸಂಖ್ಯೆ | ಛಂದಸ್ಸಿನ ಹೆಸರು | ಸಾಯಣರು | ಮಿಶ್ರರು |
|---|---|---|---|---|---|
| | ಅವಧೂತಗ್ಂ.........ಅರಾತಯಃ । | ೧೩ | — | ಏಕಪದಾ ಗಾಯತ್ರೀ | ಯಜುರಾದಿಕಾ ಏಕಪದಾ ಗಾಯತ್ರೀ |
| | ಪರಾಪೂತಗ್ಂ.......ಅರಾತಯಃ । | ೧೪ | — | ಏಕಪದಾ ಗಾಯತ್ರೀ | ಯಜುರಾದಿಕಾ ಏಕಪದಾ ಗಾಯತ್ರೀ |
| 6 | ದೀರ್ಘಾಂ.......ಧಾಮ್ । | ೧೧ | ಏಕಪದಾ ತ್ರಿಷ್ಟುಪ್ | — | — |
| 7 | ಯಾನಿ........ವಿಮುಂಚತಾಮ್। | ೩೨ | ಅನುಷ್ಟುಪ್ | — | — |
| 8 | ಸಮಾಪೋ.......ಸೃಜ್ಯಧ್ವಮ್ । | ೩೬ | ಉಪರಿಷ್ಟಾದ್ಬೃಹತೀ | — | — |
| | ಅದ್ಭ್ಯಃ.......ಪೃಚ್ಯಧ್ವಮ್ । | ೧೪ | — | ಏಕಪದಾ ಗಾಯತ್ರೀ | ಯಜುರಂತಾ ಏಕಪದಾ ಗಾಯತ್ರೀ |

| | | | | | |
|---|---|---|---|---|---|
| | ಅಂತರಿತಗ್ಂ.......ಅರಾತಯಃ । | ೧೪ | — | ಏಕಪದಾ ಗಾಯತ್ರೀ | ಯಜುರಾದಿಕಾ ಏಕಪದಾ ಗಾಯತ್ರೀ |
| 9 | ಬಧಾನ.........ಮಾ ಮೌಕ್ । | ೨೬ | — | — | ಯಜುರಂತಾ ದ್ವಿಪದಾ ಗಾಯತ್ರೀ |
| | ದೇವಸ್ಯ.............ವೇಧಸಃ । | ೧೮ | ದ್ವಿಪದಾ ಗಾಯತ್ರೀ | — | — |
| | ಧಾ ಅಸಿ..........ಯಜಂತೇ । | ೫೪ | — | — | ಯಜುರಾದಿಕಾ ಚತುಷ್ಪದಾ ತ್ರಿಷ್ಟುಪ್ [ಬೌಧಾಯನ ಮತದಂತೆ ವಿನಿಯೋಗ] |
| | ಧಾ ಅಸಿ...ಪುರಾ ಕ್ರೂರಸ್ಯ...ವಿರಪ್ಶಿನ್। | ೨೫ | — | ಏಕಪದಾ ತ್ರಿಷ್ಟುಪ್ (ಆಪಸ್ತಂಬಮತದಂತೆ ವಿನಿಯೋಗ)* | — |

* ವಿನಿಯೋಗದಲ್ಲಿ ಋಙ್ಮಂತ್ರಗಳೊಡನೆ ಯಜುಸ್ಸುಗಳು ಸೇರಿದ್ದರೂ ಸಾಯಣರು ಅವುಗಳಲ್ಲಿರುವ ಋಕ್‌ಗಳನ್ನು ಮಾತ್ರ ಹೆಸರಿಸಿದ್ದಾರೆ. ಯಜುಸ್ಸುಗಳಿಗೆ ಛಂದಸ್ಸು ಇಲ್ಲವೆಂದು ಸಾಯಣರ ಮತ.

| ಅನು-ವಾಕ | ಋಙ್ಮಂತ್ರಗಳು | ಅಕ್ಷರಗಳ ಸಂಖ್ಯೆ | ಛಂದಸ್ಸಿನ ಹೆಸರು | ಸಾಯಣರು | ಮಿಶ್ರರು |
|---|---|---|---|---|---|
| | ಉದಾದಾಯ......ಯಜಂತೇ । | ೩೩ | — | ತ್ರಿಪದಾ ತ್ರಿಷ್ಟುಪ್ (ಆಪಸ್ತಂಬಮತ) | — |
| 10 | ಆಶಾಸಾನಾ........ಕಮ್ । | ೩೨ | ಚತುಷ್ಪದಾ ಅನುಷ್ಟುಪ್ | — | — |
| | ಸುಪ್ರಜಸಸ್ತ್ವಾ..........ಅದಾಭ್ಯಮ್ । | ೩೨ | ಚತುಷ್ಪದಾ ಅನುಷ್ಟುಪ್ | — | — |
| | ಇಮಂ.........ಕರೋಮಿ । | ೪೪ | ಚತುಷ್ಪದಾ ತ್ರಿಷ್ಟುಪ್ | — | — |
| | ಸಮಾಯುಷಾ.........ಮಮ । | ೩೨ | ಚತುಷ್ಪದಾ ಅನುಷ್ಟುಪ್ | — | — |
| | ದೇವೋ ವಃ..........ರಶ್ಮಿಭಿಃ । | ೨೪ | ತ್ರಿಪದಾ ಗಾಯತ್ರೀ | — | — |
| 11 | ವೀತಿಹೋತ್ರಂ.......ಅಧ್ವರೇ। | ೨೪ | ತ್ರಿಪದಾ ಗಾಯತ್ರೀ | — | — |

| | | | | | |
|---|---|---|---|---|---|
| | ಏತಾ ಅಸದನ್......ಯಜ್ಞನಿಯಮ್। | ೩೩ | — | ಏಕಪದಾ ತ್ರಿಷ್ಟುಪ್ | ಯಜುರಂತಾ ಏಕಪದಾ ತ್ರಿಷ್ಟುಪ್ |
| 12 | ಭುವನಮಸಿ......ಅಗ್ನೇ.....ನಮಃ। | ೧೭ | — | ಏಕಪದಾ ಗಾಯತ್ರೀ | ಯಜುರಾದಿಕಾ ಏಕಪದಾ ಗಾಯತ್ರೀ |
| | ಪಾಹಿ ಮಾಗ್ನೇ......ಭಜ। | ೧೭ | ದ್ವಿಪದಾ ಗಾಯತ್ರೀ | — | — |
| 13 | ವಾಜಸ್ಯ.......ಅಕಃ। | ೩೨ | ಚತುಷ್ಪದಾ ಅನುಷ್ಟುಪ್ | — | — |
| | ಉದ್ಗ್ರಾಭಂ ಚ.....ವ್ಯಸ್ಯತಾಮ್। | ೩೨ | ಚತುಷ್ಪದಾ ಅನುಷ್ಟುಪ್ | — | — |
| | ಅಕ್ತಂ.......ನಿರ್ಮೃಕ್ಷಮ್। | ೧೮(೫+೫+೮) | — | — | ಪರೋಷ್ಣಿಹಾ * (ಬೌಧಾಯನಮತ - ದಂತೆ ವಿನಿಯೋಗ) |

| ಅನು-ವಾಕ | ಋಙ್ಮಂತ್ರಗಳು | ಅಕ್ಷರಗಳ ಸಂಖ್ಯೆ | ಛಂದಸ್ಸಿನ ಹೆಸರು | ಸಾಯಣರು | ಮಿಶ್ರರು |
|---|---|---|---|---|---|
| | [ಆಪ್ಯಾಯಂತಾಂ.... ಓಷಧಯಃ । | ೩೦ | — | — | [ಯಜುಃ |
| | ಮರುತಾಂ......ಗಚ್ಛ । | (೧೦+೧೨+೮) | | | ಏಕಪದಾ ಜಗತೀ |
| | ತತೋ......ಮೇರಯ ॥] | | | | ಏಕಪದಾ ಗಾಯತ್ರೀ] [ಬೌಧಾಯನ ಮತದಂತೆ] |
| | ಯಂ ಪರಿಧಿಂ.....ಚೇತಯಾತ್ಯೆ । | ೪೧ ೮+೧೧+ ೧೧+೧೧ | ಪುರಸ್ತಾಜ್ಜ್ಯೋತಿಸ್ತ್ರಿಷ್ಟುಪ್ | — | — |
| | ಸಗ್ಂಸ್ರಾವಭಾಗಾಃ..ಮಾದಯಧ್ವಮ್ । | ೪೪ | ಚತುಷ್ಪದಾ ತ್ರಿಷ್ಟುಪ್ | — | — |

* 8+8+12 ಈ ರೀತಿ ಮೂರು ಪಾದಗಳಲ್ಲಿ ಅಕ್ಷರಗಳಿದ್ದರೆ 'ಪರೋಷ್ಣಿಹಾ'. ಮೊದಲೆರಡರಲ್ಲಿ ಕನಿಷ್ಠ ನಾಲ್ಕರವರೆಗೂ, ಕಡೆಯ ಪಾದದಲ್ಲಿ ಕನಿಷ್ಠ ಎಂಟರವರೆಗೂ ಅಕ್ಷರಗಳು ಕಡಿಮೆ ಇದ್ದರೂ 'ಪರೋಷ್ಣಿಹಾ'ವೇ.(ಪಿಂಗಲಸೂತ್ರ 3.21)

* ಹದಿನಾಲ್ಕನೆಯ ಅನುವಾಕದ ಋಕ್‌ಗಳ ವಿವರಣೆಯು ೨೩೪ನೇ ಪುಟದಲ್ಲಿದೆ.

# ಪ್ರಥಮಃ ಕಾಂಡಃ ದ್ವಿತೀಯಃ ಪ್ರಶ್ನಃ

| ಅನು-ವಾಕ | ಋಙ್ಮಂತ್ರಗಳು | ಅಕ್ಷರಗಳ ಸಂಖ್ಯೆ | ಛಂದಸ್ಸಿನ ಹೆಸರು | ಸಾಯಣರು | ಮಿಶ್ರರು |
|---|---|---|---|---|---|
| 1 | ಆಪ........ವರ್ಚಸೇ | ೧೬ [೮+೮] | ದ್ವಿಪದಾ ಗಾಯತ್ರೀ | — | — |
| | ಆಪೋ.......ಪುನಂತು । [ಚೌ] | ೨೧[೧೦+೧೧] | ದ್ವಿಪದಾ ವಿರಾಟ್ | — | — |
| | ವಿಶ್ವ.........ರಿಪ್ರಮ್ [ಚೌ] | ೧೦ | ಏಕಪದಾ ವಿರಾಟ್ | — | — |
| | ಉದಾಭ್ಯಃ......ಏಮಿ । | ೧೦ | ಏಕಪದಾ ವಿರಾಟ್ | — | — |
| | ಚಿತ್ಪತಿಃ..........ರಶ್ಮಿಭಿಃ ।* | ೨೪ | ತ್ರಿಪದಾ ಗಾಯತ್ರೀ | — | — |
| | ವಾಕ್ಪತಿಃ.......ರಶ್ಮಿಭಿಃ ।* | ೨೪ | ತ್ರಿಪದಾ ಗಾಯತ್ರೀ | — | — |
| | ದೇವಸ್ತ್ವಾ.....ರಶ್ಮಿಭಿಃ ।* | ೨೪ | ತ್ರಿಪದಾ ಗಾಯತ್ರೀ | — | — |

*ಅನುಷಂಗದಿಂದ ಮೂರು ಋಕ್‌ಗಳು.

| ಅನು-ವಾಕ | ಋಙ್ಮಂತ್ರಗಳು | ಅಕ್ಷರಗಳ ಸಂಖ್ಯೆ | ಛಂದಸ್ಸಿನ ಹೆಸರು | ಸಾಯಣರು | ಮಿಶ್ರರು |
|---|---|---|---|---|---|
| | ಆ ವೋ..........ಹವಾಮಹೇ । | ೩೨ | ಚತುಷ್ಪದಾ ಅನುಷ್ಟುಪ್ | — | — |
| 2 | ಆಪೋ.........ಸ್ವಾಹಾ । | ೩೫[೩೩+೨] | ತ್ರಿಪದಾ ವಿರಾಟ್ | — | — |
| | ವಿಶ್ವೇ.......ಸ್ವಾಹಾ । | ೩೨ | ಅನುಷ್ಟುಪ್ | — | ಯಜುರಂತಾ ಅನುಷ್ಟುಪ್ |
| | ಇಮಾಂ.......ರುಹೇಮ । | ೪೪ | ಚತುಷ್ಪದಾ ತ್ರಿಷ್ಟುಪ್ | — | — |
| 3 | ದೈವೀಂ......ಅಸದ್ವಶೇ ॥ | ೩೨ | ಅನುಷ್ಟುಪ್ | — | — |
| | ಅಗ್ನೇ.....ದದಃ ॥ | ೩೨ | ಅನುಷ್ಟುಪ್ | — | — |
| | ತ್ವಂ.......ಯಜ್ಞೇಷ್ವೀಡ್ಯಃ ॥ | ೮+೭+೬ | ಗಾಯತ್ರೀ | — | ಪ್ರತಿಷ್ಠಾಗಾಯತ್ರೀ |

| | | | | | |
|---|---|---|---|---|---|
| | ವಿಶ್ವೇ......ವೃತ್ರನ್ । | ೧೧ | ಏಕಪದಾ ತ್ರಿಷ್ಟುಪ್ | — | ಯಜುರಂತಾ |
| | ದೇವೀ......ಗೇಷಮ್ । | ೩೩+೮<br>೩೨+ಯಜುಃ | — | — | ಉಪರಿಷ್ಟಾತ್ ಜ್ಯೋತಿಸ್ತ್ರಿಷ್ಟುಪ್-ಅಷ್ಟಾಕ್ಷರಚತುರ್ಥಾ ಅಥವಾ ಯಜುರಂತಾ ಅನುಷ್ಟುಪ್. |
| | ಭದ್ರಾತ್..........ಏತಾ ತೇ ॥ | ೮+೧೦ | — | — | ವಿರಾಟ್ ಗಾಯತ್ರೀ |
| | ಅಥೇಮವ........ಪೃಥಿವ್ಯಾಃ । | ೧೧ | — | — | ಏಕಪದಾ ತ್ರಿಷ್ಟುಪ್ |
| | ಆರೇ.....ವೀರಃ । | ೧೧ | — | — | ಏಕಪದಾ ತ್ರಿಷ್ಟುಪ್ |
| | ಏದ......ಮದೇಮ । | ೪೪ | ತ್ರಿಷ್ಟುಪ್ | — | — |
| 4 | ಸೂರ್ಯಸ್ಯ.......ವಿಪಶ್ಚಿತಾ । | ೩೨ | ಅನುಷ್ಟುಪ್ | — | — |
| 5 | ತ್ವಷ್ಟೀಮತೀ.....ಯೋಷಮ್ । | ೩೬[೮+೮+<br>೧೦+೧೦] | — | — | ಆಸ್ತಾರಬೃಹತೀ |

| ಅನು-ವಾಕ | ಋಙ್ಮಂತ್ರಗಳು | ಅಕ್ಷರಗಳ ಸಂಖ್ಯೆ | ಛಂದಸ್ಸಿನ ಹೆಸರು | ಸಾಯಣರು | ಮಿಶ್ರರು |
|---|---|---|---|---|---|
| 6 | ಅಗ್ನೇ........ಸುವಃ । | ೬೪ | ಅತಿಚ್ಛಂದಸ್ಸು[ಅತ್ಯಷ್ಟಿ] | — | — |
| ೮ | ಉದಾಯುಷಾ....ಅನು । | ೩೨ | ಅನುಷ್ಟುಪ್ | — | — |
| | ಉರ್ವಂತರಿಕ್ಷಮನ್ವಿಹಿ । | ೮ | ಏಕಪದಾ ಗಾಯತ್ರೀ | — | — |
| | ಅಸ್ತಭ್ನಾತ್.......ವ್ರತಾನಿ । | ೪೪ | ತ್ರಿಷ್ಟುಪ್ | — | — |
| | ವನೇಷು......ಮದ್ರೌ । | ೪೪ | ತ್ರಿಷ್ಟುಪ್ | — | — |
| | ಉದು.....ಸೂರ್ಯಮ್ । | ೨೪ | ಗಾಯತ್ರೀ | — | — |
| | ಉಸ್ರಾವೇತಂ......ಚೋದನಾ । | ೧೦+ಯಜುಃ | — | — | ಏಕಪದಾ ವಿರಾಟ್ ಯಜುರಂತಾ |

| | | | | | |
|---|---|---|---|---|---|
| 9 | ಪ್ರಚ್ಯವಸ್ವ......ದಘುತ್ । | ೫೨ | ಷಟ್ಪದಾ ಅತಿಜಗತೀ | — | — |
| | ಶ್ಯೇನೋ..........ಅಸಿ । | ೩೨ | ಅನುಷ್ಟುಪ್ | — | — |
| | ಅಪಿ.......ವಸು । | ೩೨ | ಅನುಷ್ಟುಪ್ | — | — |
| | ನಮೋ.......ಶಗ್ಂಸತ । | ೪೮ | ಜಗತೀ | — | — |
| | ಪ್ರಚ್ಯವಸ್ವ.....ಸಗ್ಗ್ಸ್ಪುತಮ್ । | ೭೨ | — | — | ನವಪದಾ ಧೃತಿಃ |
| | ಯಜಮಾನಸ್ಯ....ವಸು । | ೪೦ | — | — | ಪಂಚಪದಾ ಪಂಕ್ತಿಃ |
| 10 | ಯಾ ತೇ.....ದುರ್ಯಾನ್ । | ೪೪ | ತ್ರಿಷ್ಟುಪ್ | — | — |
| | ವರುಣೋಽಸಿ.....ವಾರುಣಮಸಿ । | ೮+ಯಜುಃ | — | — | ಏಕಪದಾ ಗಾಯತ್ರೀ ಯಜುರಂತಾ |

| ಅನು-ವಾಕ | ಋಙ್ಮಂತ್ರಗಳು | ಅಕ್ಷರಗಳ ಸಂಖ್ಯೆ | ಛಂದಸ್ಸಿನ ಹೆಸರು | ಸಾಯಣರು | ಮಿಶ್ರರು |
|---|---|---|---|---|---|
| 11 | ಯಾ ತೇ......ಅಯಾಶಯಾ....ಸ್ವಾಹಾ । | ೩೨* | — | — | ಅನುಷ್ಟುಪ್ |
| | ಯಾ ತೇ...ರಜಾಶಯಾ...ಸ್ವಾಹಾ । | ೩೨* | — | — | ಅನುಷ್ಟುಪ್ |
| | ಯಾ ತೇ.....ಹರಾಶಯಾ....ಸ್ವಾಹಾ । | ೩೨* | — | — | ಅನುಷ್ಟುಪ್ |
| 13 | ಯುಂಜತೇ......ಪರಿಷ್ಕೃತಿಃ । | ೪೮ | ಜಗತೀ | — | — |
| | ಆ ನೋ.......ಮಸದ್ವಶೀ । | ೨೫ | ವಿರಾಡ್ಗಾಯತ್ರೀ | — | ಪುರ ಉಷ್ಣಿಕ್, ವಿರಾಡುಷ್ಣಿಕ್ ವಾ |
| | ಇದಂ......ಸುರೇ । | ೨೪ | ಗಾಯತ್ರೀ | — | — |
| | ಇರಾವತೀ...ಮಯೂಖೈಃ । | ೪೪ | ತ್ರಿಷ್ಟುಪ್ | — | — |
| | ಪ್ರಾಚೀ......ಜೀಹ್ವರತಮ್ । | ೨೨ | ದ್ವಿಪದಾ ತ್ರಿಷ್ಟುಪ್ | — | ದ್ವಿಪದಾ ಜಗತೀ |

| | | | | |
|---|---|---|---|---|
| ಅತ್ರ.......ಪೃಥಿವ್ಯಾಃ । | ೧೦ | ಏಕಪದಾ ವಿರಾಟ್ | — | — |
| ದಿವೋ......ಸವ್ಯಾತ್ । | ೪೪ | ತ್ರಿಷ್ಟುಪ್ | — | —* |
| ವಿಷ್ಣೋರ್ನುಕಂ......ಗಾಯಃ । | ೪೪ | ತ್ರಿಷ್ಟುಪ್ | — | — |

* ಅನುಷಂಗದಿಂದ.

ಹದಿನಾಲ್ಕನೆಯ ಅನುವಾಕದ ಎಲ್ಲ ಋಕ್‌ಗಳೂ ತ್ರಿಷ್ಟುಪ್ ಛಂದಸ್ಸಿನಲ್ಲಿವೆ.

# ಅನುಬಂಧ — ೨

# ತೈತ್ತಿರೀಯ ಸಂಹಿತಾ

## ಪ್ರಥಮಕಾಂಡಃ ಪ್ರಥಮಪ್ರಶ್ನಃ

| ಅನುವಾಕ | ಹನಸ್ಸುಗಳು | ಪದಗಳು | ಮಂತ್ರಗಳು | | |
|---|---|---|---|---|---|
| | | | *ಋಕ್ | ಯಜುಃ | ಒಟ್ಟು* |
| ೧ | ೧ | ೪೩ | ೫ | ೩ | ೮ |
| ೨ | ೨ | ೮೮ | ೩ | ೧೬ | ೧೯ |
| ೩ | ೧ | ೫೮ | ೧ | ೯ | ೧೦ |
| ೪ | ೨ | ೯೬ | — | ೧೯ | ೧೯ |
| ೫ | ೨ | ೧೧೧ | ೩ | ೧೪ | ೧೭ |
| ೬ | ೧ | ೬೫ | ೧ | ೧೦ | ೧೧ |
| ೭ | ೨ | ೯೮ | ೧ | ೧೧ | ೧೨ |
| ೮ | ೧ | ೭೨ | ೩ | ೧೪ | ೧೭ |
| ೯ | ೩ | ೧೬೧ | ೩ | ೨೨ | ೨೫ |
| ೧೦ | ೩ | ೧೬೬ | ೫ | ೧೮ | ೨೩ |
| ೧೧ | ೨ | ೧೧೫ | ೨ | ೧೮ | ೨೦ |
| ೧೨ | ೧ | ೭೧ | ೨ | ೭ | ೯ |
| ೧೩ | ೩ | ೧೬೩ | ೪ | ೧೬ | ೨೦ |
| ೧೪ | ೪ | ೧೭೩ | ೧೪ | — | ೧೪ |
| ೧೪ | ೨೮ | ೧೪೮೦ | ೪೭ | ೧೭೭ | ೨೨೪ |

*ಕೋಷ್ಟಕದಲ್ಲಿ ಸಾಯಣರು 'ಋಕ್' ಎಂದು ಪರಿಗಣಿಸಿರುವುದರ ಸಂಖ್ಯೆಯನ್ನು ನೀಡಿದೆ.

*ಒಟ್ಟು ಮಂತ್ರಗಳ ಸಂಖ್ಯೆಯು ಆಪಸ್ತಂಬಮತವನ್ನನುಸರಿಸಿದೆ.

# ತೈತ್ತಿರೀಯ ಸಂಹಿತಾ

## ಪ್ರಥಮಕಾಂಡಃ ದ್ವಿತೀಯಪ್ರಶ್ನಃ

| ಅನುವಾಕ | ಹನಸ್ಸುಗಳು | ಪದಗಳು | ಮಂತ್ರಗಳು | | |
|---|---|---|---|---|---|
| | | | *ಋಕ್ | ಯಜುಃ | ಒಟ್ಟು* |
| ೧ | ೨ | ೧೦೮ | ೮ | ೧೦ | ೧೮ |
| ೨ | ೩ | ೧೩೦ | ೩ | ೧೭ | ೨೦ |
| ೩ | ೩ | ೧೭೫ | ೫ | ೧೬ | ೨೧ |
| ೪ | ೨ | ೧೦೫ | ೧ | ೭ | ೮ |
| ೫ | ೨ | ೭೯ | — | ೧೫ | ೧೫ |
| ೬ | ೧ | ೫೭ | ೧ | ೫ | ೬ |
| ೭ | ೧ | ೭೨ | — | ೯ | ೯ |
| ೮ | ೨ | ೮೫ | ೫ | ೫ | ೧೦ |
| ೯ | ೧ | ೭೩ | ೪ | ೩ | ೭ |
| ೧೦ | ೨ | ೧೦೧ | ೧ | ೧೬ | ೧೭ |
| ೧೧ | ೨ | ೯೦ | — | ೭ | ೭ |
| ೧೨ | ೩ | ೧೩೫ | — | ೨೬ | ೨೬ |
| ೧೩ | ೩ | ೧೩೯ | ೮ | ೭ | ೧೫ |
| ೧೪ | ೭ | ೩೪೧ | ೧೮ | — | ೧೮ |
| ೧೪ | ೩೪ | ೧೬೯೦ | ೫೪ | ೧೪೩ | ೧೯೭ |

